# ಚೆನ್ನವೀರ ಕಣವಿಯವರ

# ಆಯ್ದ ಕವಿತೆಗಳ

# ಅನುಸಂಧಾನ


ಸಂಪಾದಕರು

ಡಾ. ಗುರುಲಿಂಗ ಕಾಪಸೆ

ಡಾ. ಜೆ. ಎಂ. ಹೆಗಡೆ


ಸಪ್ನ



ಚೆನ್ನವೀರ ಕಣವಿಯವರ

# ಆಯ್ದ ಕವಿತೆಗಳ ಅನುಸಂಧಾನ

ಸಂಪಾದಕರು

ಡಾ. ಗುರುಲಿಂಗ ಕಾಪಸೆ

ಡಾ. ಜಿ. ಎಂ. ಹೆಗಡೆ




ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009

ದೂರವಾಣಿ : 40114455

Chennaveera Kanaviyavara Ayda Kavitegala Anusandana- Selected works of Chennaveera Kanavi : Edited by Dr. Gurulinga Kapase & Dr. G. M. Hegade, published by Sapna Book House (P) Ltd., R.O. # 11, 3rd Main Road, Gandhinagar, Bangalore-9. Tel. : 40114455. [K.B. 2045]

ISBN : 978-81-280-2214-2



ಪ್ರಥಮ ಮುದ್ರಣ : ನವೆಂಬರ್ 2013

| | |
|---|---|
| ಪುಟಗಳು : xviii+495=513 | ಪ್ರತಿಗಳ ಸಂಖ್ಯೆ : 1000 |
| ಬೆಲೆ : ₹ 300/- | Paper Used : 18.6 Kg (70 gsm) N.S. L.W. Maplitho |
| | Book Size : 1/8th Demi |

ಹಂಚಿಕೆದಾರರು : ಸಪ್ನ ಎಂಟರ್‌ಪ್ರೈಸಸ್
ಸದ್ಗುರು ಕಾಂಪ್ಲೆಕ್ಸ್, ನಂ. 14, 27ನೇ ಅಡ್ಡರಸ್ತೆ
4ನೇ ಬ್ಲಾಕ್ (ಪಶ್ಚಿಮ), ಜಯನಗರ
ಬೆಂಗಳೂರು – 11, ದೂರವಾಣಿ : 49066700

ಅಕ್ಷರ ಜೋಡಣೆ : ವಚನ ಗ್ರಾಫಿಕ್ಸ್, ಧಾರವಾಡ

ಮುಖಪುಟ ವಿನ್ಯಾಸ : ಶ್ರೀಪಾದ, ಬೆಂಗಳೂರು

ಮುದ್ರಣ : ಪ್ರಿಂಟ್ ಫಾಸ್ಟ್, ಬೆಂಗಳೂರು

# ಪ್ರಸ್ತಾವನೆ

**(ಮೊದಲ ಆವೃತ್ತಿಗಾಗಿ)**

'ಕಣವಿಯವರ ಕವಿತೆ : ಹೊಸ ಓದು' ಎಂಬ ಈ ಸಂಪುಟವು ಎಂಬತ್ತಕ್ಕೂ ಹೆಚ್ಚು ಸಂಖ್ಯೆಯ ಲೇಖಕರು ಅಥವಾ ಕಾವ್ಯಾಸಕ್ತರು ಕಣವಿಯವರ ಸಮಗ್ರ ಕಾವ್ಯ ಕಣಜದಿಂದ ಆಯ್ದ ನೂರಾ ಆರು ಕವಿತೆಗಳೊಂದಿಗೆ ನಡೆಯಿಸಿದ ಸಂವಾದಗಳ ನಿರೂಪಣೆಯ ದಾಖಲೆಯಾಗಿದೆ. ಹೀಗೆ ಬಿಡಿ ಬಿಡಿ ಕವಿತೆಗಳೊಂದಿಗೆ ವಿವಿಧ ಮನಸ್ಸುಗಳು ಮುಖಾಮುಖಿಯಾಗುತ್ತ, ಹಲವು ನಿಟ್ಟುಗಳಿಂದ ಕವಿತೆಯೊಂದರ ಅರ್ಥಸಾಧ್ಯತೆಯ ಅನ್ವೇಷಣೆಗೆ ತೊಡಗುವ ವಿಮರ್ಶಾ ವಿಧಾನವನ್ನು ಪ್ರಾಯೋಗಿಕ ವಿಮರ್ಶೆ ಎಂದು ಕರೆಯಲಾಗಿದೆ. ಇಂಗ್ಲಿಷಿನಲ್ಲಿ 'ಪ್ರಾಕ್ಟಿಕಲ್ ಕ್ರಿಟಿಸಿಜಂ' ಎಂದು ಹೆಸರಾಗಿರುವ ಈ ವಿಮರ್ಶಾ ಕ್ರಮವು ಕನ್ನಡದಲ್ಲಿ 'ಪ್ರಾಯೋಗಿಕ ವಿಮರ್ಶೆ' ಎಂದು ಅನುವಾದಿತವಾಗಿ ಕನ್ನಡ ಸಾಹಿತ್ಯ ವಿಮರ್ಶೆಯೊಳಕ್ಕೆ ಪ್ರವೇಶಿಸಿದ್ದು ಬಹುಶಃ ಕನ್ನಡ ನವ್ಯ ಸಾಹಿತ್ಯ ಸಂದರ್ಭದಲ್ಲಿ ಎಂದು ಕಾಣುತ್ತದೆ. ಇದು ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯ, ಇಪ್ಪತ್ತನೇ ಶತಮಾನದ ಎರಡು ಮತ್ತು ಮೂರನೆಯ ದಶಕಗಳಲ್ಲಿ ಪ್ರಸಿದ್ಧಿಗೆ ಬಂದ ರೂಪನಿಷ್ಠ ವಿಮರ್ಶೆಯ ಪ್ರಮುಖ ಪ್ರತಿಪಾದಕರಲ್ಲಿ ಒಬ್ಬನಾದ ಐ. ಎ. ರಿಚರ್ಡ್ಸ್, ಅಂದಿನ ಶೈಕ್ಷಣಿಕ ವಲಯದಲ್ಲಿ ಅನೇಕ ವರ್ಷಗಳ ಕಾಲ ನಡೆಯಿಸಿದ ಪ್ರಯೋಗಗಳಿಂದ ನಿಷ್ಪನ್ನವಾದದ್ದು. ಅವನು ಮಾಡಿದ ಪ್ರಯೋಗವೆಂದರೆ : ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ತನ್ನ ವಿದ್ಯಾರ್ಥಿಗಳಿಗೆ ಕೆಲವು ಕವಿತೆಗಳನ್ನು- ಅವುಗಳನ್ನು ಬರೆದ ಕವಿ ಯಾರು, ಅವರು ಯಾವ ಕಾಲದವರು ಎಂಬ ಯಾವ ಸುಳಿವನ್ನೂ ನೀಡದೆ - ವಿಮರ್ಶೆ ಬರೆಯಲು ಹೇಳಿ, ಅನಂತರ ವಿದ್ಯಾರ್ಥಿಗಳಿಂದ ಬಂದ ಕೃತಿ ಸ್ಪಂದನೆಗಳನ್ನು ಅಥವಾ ವಿಮರ್ಶಾತ್ಮಕ ಪ್ರತಿಕ್ರಿಯೆಗಳನ್ನು ಪರಿಶೀಲಿಸಿ ವ್ಯಾಖ್ಯಾನಿಸುತ್ತಾನೆ. ಈ ವ್ಯಾಖ್ಯಾನಗಳ ಮೂಲಕ ಅವನು ನಮ್ಮ ಗಮನಕ್ಕೆ ತರುವ ವಿಶೇಷ ಸಂಗತಿಯೆಂದರೆ; ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ನಾವು ವಿಮರ್ಶೆಯ ತತ್ವಗಳನ್ನು ಅತ್ಯಂತ ಎಚ್ಚರಿಕೆಯಿಂದ ಬಳಸಬೇಕು. ದುರದೃಷ್ಟದ ವಿಷಯವೆಂದರೆ, ಅತ್ಯಂತ ಶ್ರೇಷ್ಠವೆಂದು ನಾವು ಭಾವಿಸಿದ ವಿಮರ್ಶೆಯ ವಿಧಿ ವಿಧಾನಗಳೂ ಎಷ್ಟೋ ವೇಳೆ ಕೃತಿಯೊಂದನ್ನು ಕುರಿತು ನಾವು ತಲುಪುವ ತೀರ್ಮಾನಗಳನ್ನು ದಿಕ್ಕು ತಪ್ಪಿಸುತ್ತವೆ. ಹೀಗಾಗಲು ನಾವು ಕೃತಿಯೊಂದಕ್ಕೆ ಸ್ಪಂದಿಸುವಾಗ ನಮ್ಮ ಪೂರ್ವಗ್ರಹಗಳೂ, ಸಾಹಿತ್ಯವನ್ನು ಕುರಿತ ರೂಢಿಗತ ಸಿದ್ಧಪ್ರತಿಕ್ರಿಯೆಗಳ ಪ್ರವೇಶವೂ ಕಾರಣವಾಗಿವೆ. ಈ ಪರಿಸ್ಥಿತಿಯಲ್ಲಿ ಕಾವ್ಯಾಸಕ್ತವಾದ ಮನಸ್ಸುಗಳಿಗೆ ಕೃತಿಯೊಂದನ್ನು ಪ್ರವೇಶಿಸುವುದು ಹೇಗೆ, ಗ್ರಹಿಸುವುದು ಹೇಗೆ

ಎನ್ನುವುದನ್ನು ಕುರಿತು ಒಂದು ವ್ಯವಸ್ಥಿತವಾದ ರೀತಿಯಲ್ಲಿ ತರಬೇತಿ ನೀಡುವುದರ ಮೂಲಕ ಅವರ ಸಂವೇದನೆಯನ್ನು ಚುರುಕುಗೊಳಿಸುವುದು ಅಗತ್ಯವಾಗಿದೆ.

ತನ್ನ ನಿರಂತರ ಪ್ರಯೋಗಗಳ ಮೂಲಕ ಐ.ಎ. ರಿಚರ್ಡ್ಸ್ ಮಂಡಿಸುವ ಈ ಅಭಿಪ್ರಾಯಗಳ ಹಿನ್ನೆಲೆಯಿಂದ ಹೇಳುವುದಾದರೆ, ಪ್ರಾಯೋಗಿಕ ವಿಮರ್ಶೆ ಎನ್ನುವುದು ಶೈಕ್ಷಣಿಕ ಸಂದರ್ಭದ ತುರ್ತಿನಿಂದ ಹುಟ್ಟಿಕೊಂಡ ವಿಮರ್ಶೆಯ ಒಂದು ವ್ಯವಸ್ಥಿತವಾದ ತರಬೇತಿಯ ಪರಿಣಾಮ ಎನ್ನುವ ಸಂಗತಿ ಸ್ಪಷ್ಟವಾಗುತ್ತದೆ. ಈ ಮಾತು ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭಕ್ಕೂ ಯಥಾವತ್ತಾಗಿ ಅನ್ವಯಿಸುತ್ತದೆ. ಯಾಕೆಂದರೆ, ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶೆ ಮತ್ತು ಭಾರತೀಯ ಕಾವ್ಯಮೀಮಾಂಸೆಯ ತಿಳಿವಳಿಕೆಯಿಂದ ಪರಿಷ್ಕೃತವಾದ ಕನ್ನಡ ಮನಸ್ಸುಗಳು, ಶೈಕ್ಷಣಿಕ ಹಾಗೂ ಸಾಹಿತ್ಯಕ ವಲಯಗಳಲ್ಲಿ ನಿಂತು ವಿಮರ್ಶೆಗೆ ತೊಡಗಿದ ನವ್ಯಸಾಹಿತ್ಯ ಸಂದರ್ಭದಲ್ಲಿ ಈ ಪ್ರಾಯೋಗಿಕ ವಿಮರ್ಶೆ ತನ್ನ ಉತ್ಕರ್ಷವನ್ನು ಪಡೆದುಕೊಂಡಿತೆಂಬುದು ಗಮನಕ್ಕೆ ತೆಗೆದುಕೊಳ್ಳಬೇಕಾದ ಸಂಗತಿಯಾಗಿದೆ.

ಸಾಹಿತ್ಯದ ಅಧ್ಯಯನವನ್ನು ಶಿಕ್ಷಣದ ವ್ಯಾಪ್ತಿಗೆ ಒಳಪಡಿಸಿದಾಗ, ತರಗತಿಗಳಲ್ಲಿನ ಬೋಧನ ಕ್ರಮವು ಪ್ರಾಯೋಗಿಕ ವಿಮರ್ಶೆಯ ಸ್ವರೂಪವನ್ನು ಪಡೆದುಕೊಂಡ ನವೋದಯ ಮತ್ತು ನವ್ಯ ಕಾಲಘಟ್ಟಗಳಲ್ಲಿ, ಕನ್ನಡ ಸಾಹಿತ್ಯ ವಿಮರ್ಶೆಗೆ ಪ್ರಾಪ್ತವಾದ ಆಯಾಮಗಳು ಗಣನೀಯವಾಗಿವೆ. ಕುವೆಂಪು, ತೀನಂ.ಶ್ರೀ, ಯು.ಆರ್. ಅನಂತಮೂರ್ತಿ, ಎಂ.ಜಿ.ಕೆ., ಕೀರ್ತಿನಾಥ ಕುರ್ತಕೋಟಿ, ಜಿ.ಎಚ್. ನಾಯಕ, ಹೆಚ್.ಎಂ. ಚನ್ನಯ್ಯ ಇಂಥವರು ತಮಗೆ ಇಷ್ಟವಾದ ಕಾವ್ಯ ಅಥವಾ ಕಾವ್ಯ ಸಂದರ್ಭಗಳನ್ನು ಕುರಿತು ಬರೆದ ವಿಮರ್ಶೆಯ ಬರಹಗಳು, ನಾವು ಯಾವುದನ್ನು ಪ್ರಾಯೋಗಿಕ ವಿಮರ್ಶೆ ಎಂದು ಗುರುತಿಸುತ್ತೇವೋ ಅದರ ಲಕ್ಷಣಗಳನ್ನು ಸಮೃದ್ಧವಾಗಿ ಒಳಗೊಂಡು, ಅದನ್ನೂ ಮೀರಿದ ಆಯಾಮಗಳನ್ನು ಪ್ರವೇಶಿಸುತ್ತವೆ. ಒಂದು ವಿಶೇಷದ ಸಂಗತಿಯೆಂದರೆ, ಸಾಹಿತ್ಯ ಹೌದೋ ಅಲ್ಲವೋ ಎಂಬ ಅನುಮಾನದ ನೆಲೆಗಳಲ್ಲಿ ತೂಗಾಡುತ್ತಿದ್ದ ಬಹು ಸಂಖ್ಯೆಯ ಶಿವಶರಣರ ವಚನಗಳು ಉತ್ಸಾಹಪೂರ್ಣವಾದ ಪ್ರಾಯೋಗಿಕ ವಿಮರ್ಶೆಗೆ ಒಳಪಟ್ಟು ವಚನಗಳನ್ನು ಅರಿಯುವ ಹೊಸ ಬಗೆಯೊಂದು ರೂಪುಗೊಂಡದ್ದು ಈ ಕಾಲದಲ್ಲಿಯೇ.

ಪ್ರಾಯೋಗಿಕ ವಿಮರ್ಶೆಯ ಸ್ವರೂಪವನ್ನು ಪ್ರತಿನಿಧಿಸುವುದರಲ್ಲಿ ನನ್ನ ಗಮನಕ್ಕೆ ಬಂದಂತೆ, ಪ್ರಸ್ತುತ ಸಂಪುಟವನ್ನೂ ಒಳಗೊಂಡಂತೆ ಈವರೆಗೆ ನಾಲ್ಕು ಕೃತಿಗಳು ಬಂದಿವೆ. ಮೊದಲನೆಯದು, ೧೯೭೭ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿದ 'ಪ್ರಾಯೋಗಿಕ ವಿಮರ್ಶೆ' (ಸಂಪಾದಕರು : ಡಾ. ಜಿ.ಎಸ್. ಶಿವರುದ್ರಪ್ಪ ಮತ್ತು ಡಾ. ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ). ಈ ಸಂಪುಟವು ಪಂಪನಿಂದ ಮೊದಲುಗೊಂಡು ಎ.ಕೆ. ರಾಮಾನುಜನ್‌ವರೆಗೆ ಇಡೀ ಕನ್ನಡ ಸಾಹಿತ್ಯ ಪರಂಪರೆಯ ಹತ್ತೊಂಬತ್ತು ಮುಖ್ಯ ಕವಿಗಳ ಕಾವ್ಯಾಭಿವ್ಯಕ್ತಿಯನ್ನು ವಿವಿಧ ವಿಮರ್ಶಕರು ಪ್ರಾಯೋಗಿಕ ವಿಮರ್ಶೆಗೆ ಗುರಿಪಡಿಸಿದ ಬರಹಗಳನ್ನು ಒಳಗೊಳ್ಳುತ್ತದೆ. 'ವಸ್ತು, ರೀತಿ, ದೃಷ್ಟಿ, ರಸ, ಛಂದಸ್ಸು, ಲಯ, ಪದ ಪ್ರಯೋಗ, ಕವಿಯ ವೈಯಕ್ತಿಕ ಹಾಗೂ ಪಾರಂಪರಿಕ ಹಿನ್ನೆಲೆ ಹೀಗೆ ಎಷ್ಟೆಷ್ಟು ರೀತಿಯಲ್ಲಿ ಕವಿ ಕೃತಿಯೊಂದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬಹುದೆನ್ನುವ ಸಾಧ್ಯತೆಗಳನ್ನು ಈ ಲೇಖನಗಳಲ್ಲಿ ಓದುಗರು ಗುರುತಿಸಬಹುದು' ಎಂದು ಸಂಪಾದಕರು ಈ ಕೃತಿಯ ಮುನ್ನುಡಿಯಲ್ಲಿ ಹೇಳುತ್ತಾರೆ. ಬಹುಶಃ

'ಪ್ರಾಯೋಗಿಕ ವಿಮರ್ಶೆ'ಯನ್ನು ಕುರಿತು ಕನ್ನಡದಲ್ಲಿ ಬಂದ ಮೊದಲ ಸಂಕಲನ ಇದು. ಇದೇ ಮಾದರಿಯನ್ನು ಇನ್ನಷ್ಟು ವಿಸ್ತಾರದಲ್ಲಿ ಮುಂದುವರಿಸಿದ ಕೃತಿ ಎಂದರೆ, ೧೯೯೭ರಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದ 'ನಮ್ಮ ಕನ್ನಡ ಕಾವ್ಯ' ಎಂಬ ಸಂಪುಟ. (ಸಂಪಾದಕರು:ಪ್ರೊ. ಓ.ಎಲ್. ನಾಗಭೂಷಣಸ್ವಾಮಿ). ಇದು ಕಾವ್ಯದ ಪರಿಕಲ್ಪನೆಯನ್ನು ಕೇವಲ 'ಪದ್ಯ'ಕ್ಕಷ್ಟೆ ಸೀಮಿತಗೊಳಿಸದೆ, ಯಕ್ಷಗಾನ, ತತ್ವಪದ, ಗದ್ಯಕಾವ್ಯ, ಜಾನಪದ ಮೊದಲಾದವುಗಳನ್ನು ಒಳಗೊಂಡಂತೆ, ಒಟ್ಟು ತೊಂಭತ್ತೈದು ಸಾಹಿತ್ಯಾಭಿವ್ಯಕ್ತಿಗಳನ್ನು ಕುರಿತು ವಿವಿಧ ಲೇಖಕರು ಬರೆದ ಕಿರು ಲೇಖನಗಳ ಸಂಕಲನವಾಗಿದೆ. ಮಾನ್ಯ ಸಂಪಾದಕರು ಇದು ಪ್ರಾಯೋಗಿಕ ವಿಮರ್ಶೆಯ ಕೃತಿ ಎಂದು ಎಲ್ಲೂ ಹೇಳದೆ 'ಕನ್ನಡ ಕವಿತೆಗಳೊಂದಿಗೆ ನಮ್ಮ ಕಾಲದ ಹಲವು ಓದುಗರು, ತಾವು ಕವಿತೆಯನ್ನು ಸ್ವೀಕರಿಸಿದ' ಬಗೆಯನ್ನು ಕುರಿತು ಬರೆದ ವ್ಯಾಖ್ಯಾನ ರೂಪದ ಟಿಪ್ಪಣಿಗಳು ಎನ್ನುತ್ತಾರೆ. ಇಲ್ಲಿ ನಡೆದಿರುವುದು ಕವಿತೆಯೊಂದಿಗೆ ಓದುಗರು ನಡೆಯಿಸಿದ ಸಂವಾದ ಎಂದೂ ಹೇಳುತ್ತಾರೆ. ಒಟ್ಟಾರೆಯಾಗಿ ಸಂವಾದ, ಟಿಪ್ಪಣಿ, ವ್ಯಾಖ್ಯಾನ, ಪ್ರತಿಕ್ರಿಯೆ ಈ ಎಲ್ಲವೂ ಪ್ರಾಯೋಗಿಕ ವಿಮರ್ಶೆಯ ನೆಲೆಯಲ್ಲಿ ನಡೆಯುವ ಕ್ರಿಯೆಗಳೇ. ಅಷ್ಟೇ ಅಲ್ಲ, ಈ ಸಂಪುಟವು 'ಶಾಲೆ ಕಾಲೇಜುಗಳಲ್ಲಿ ಸಾಹಿತ್ಯವನ್ನು ಅಭ್ಯಾಸ ಮಾಡುವ ವಿದ್ಯಾರ್ಥಿಗಳನ್ನು ಮತ್ತು ಬೋಧಿಸುವ ಅಧ್ಯಾಪಕರನ್ನು ಉದ್ದೇಶಿಸಿದ್ದಾಗಿದೆ' ಎಂದು ಸ್ಪಷ್ಟಪಡಿಸುವುದರ ಮೂಲಕ 'ಪ್ರಾಯೋಗಿಕ ವಿಮರ್ಶೆ' ಎಂಬುದು ಮೂಲತಃ ಸಾಹಿತ್ಯದ ಅಧ್ಯಯನವು ನಮ್ಮ ಶಿಕ್ಷಣದ ಒಂದು ಭಾಗವಾದಾಗ ಬೋಧನೆಯ ಸ್ವರೂಪವು ತಾಳಿದ ವಿಮರ್ಶೆಯ ಒಂದು ವಿಧಾನ ಎಂಬ ಸಂಗತಿಯನ್ನು ಈ ಸಂಪುಟದ ಸಂಪಾದಕರು ದೃಢಪಡಿಸುತ್ತಾರೆ. ಈ ಪರಂಪರೆಯ ಮುಂದುವರಿಕೆಯಾಗಿ ಈ ವರ್ಷ (೨೦೦೮) ಇನ್ನೂ ಎರಡು ಸಂಪುಟಗಳು ಪ್ರಕಟವಾಗಿವೆ. 'ಜಿ.ಎಸ್ಸೆಸ್ ಕಾವ್ಯಾಂತರಂಗ' (ಸಂಪಾದಕರು :ಡಾ. ಎಚ್.ಎಸ್. ವೆಂಕಟೇಶ ಮೂರ್ತಿ ಮತ್ತು ಡಾ. ಲೋಕೇಶ ಅಗಸನಕಟ್ಟೆ ಪ್ರ: ಸಾಹಿತ್ಯ ಸಿರಿ ತರಳಬಾಳು ಜಗದ್ಗುರು ಬೃಹನ್‌ಮಠ, ಸಿರಿಗೆರೆ) ಮತ್ತೊಂದು 'ಕಣವಿಯವರ ಕವಿತೆ : ಹೊಸ ಓದು' (ಸಂಪಾದಕರು : ಡಾ. ಜಿ.ಎಸ್. ಕಾಪಸೆ ಮತ್ತು ಡಾ. ಜಿ.ಎಂ. ಹೆಗಡೆ, ಪ್ರ:ಸುಮುಖ ಪ್ರಕಾಶನ, ಬೆಂಗಳೂರು-೨೪). 'ಜಿ.ಎಸ್ಸೆಸ್ ಕಾವ್ಯಾಂತರಂಗ' ಎನ್ನುವುದು. ಜಿ.ಎಸ್. ಶಿವರುದ್ರಪ್ಪನವರ ಅರುವತ್ತೊಮ್ರು ಕವಿತೆಗಳನ್ನು ಕುರಿತ ಪ್ರಾಯೋಗಿಕ ವಿಮರ್ಶೆಯ ಲೇಖನಗಳ ಸಂಕಲನವಾದರೆ, ಕಣವಿಯವರನ್ನು ಕುರಿತ ಸಂಪುಟವು, ಅವರ ಒಂದು ನೂರಾ ಐದು ಕವಿತೆಗಳನ್ನು ಕುರಿತ 'ಪ್ರಾಯೋಗಿಕ ವಿಮರ್ಶೆ'ಯ ಬರಹಗಳ ಸಂಕಲನವಾಗಿದೆ. 'ಜಿ. ಎಸ್ಸೆಸ್ ಕಾವ್ಯಾಂತರಂಗ'ದ ಸಂಪಾದಕರು, ಆ ಸಂಪುಟದೊಳಗಿನ ಬರಹಗಳನ್ನು 'ಪ್ರಾಯೋಗಿಕ ವಿಮರ್ಶೆ ಎಂದು ಕರೆಯದೆ, ಅವು ಕವಿಯ ಕಾವ್ಯದ ಗ್ರಹಿಕೆಗೆ ನೆರವಾಗಬಲ್ಲ ಪ್ರವೇಶಿಕೆಗಳು ಎಂದು ಕರೆಯುತ್ತಾರೆ. ಈ ನಾಲ್ಕು ಸಂಪುಟಗಳಲ್ಲಿ ಮೊದಲ ಎರಡು, ಇಡೀ ಕನ್ನಡ ಸಾಹಿತ್ಯ ಪರಂಪರೆಯ ಕೆಲವು ಮುಖ್ಯ ಕವಿಗಳ ಕೃತಿ ಅಥವಾ ಕೃತಿ ಸಂದರ್ಭವನ್ನು ವಿವಿಧ ವಿಮರ್ಶಕರು ಪ್ರಾಯೋಗಿಕ ವಿಮರ್ಶೆಯ ದೃಷ್ಟಿಯಿಂದ ವ್ಯಾಖ್ಯಾನಿಸಿದ ಲೇಖನಗಳ ಸಂಪುಟ ಎನ್ನಬಹುದಾದರೆ, ಇನ್ನೆರಡು ಒಬ್ಬನೇ ಕವಿಯ ಆಯ್ದ ಕವಿತೆಗಳ ಪ್ರಾಯೋಗಿಕ ವಿಮರ್ಶೆಗೆ ಸಂಬಂಧಪಟ್ಟವುಗಳು. ಈ ನಾಲ್ಕೂ ಸಂಪುಟಗಳ ಸಮಾನ ಲಕ್ಷಣವೆಂದರೆ, ಪ್ರಾಯೋಗಿಕ ವಿಮರ್ಶೆಗಾಗಿ ಆಯ್ದ ಕವಿತೆಯನ್ನು ಮತ್ತು ಅದನ್ನು ಕುರಿತ ವಿಮರ್ಶಾತ್ಮಕ ಪ್ರತಿಕ್ರಿಯೆಯನ್ನು ಜತೆಜತೆಗೆ ಇರುವಂತೆ ಅಚ್ಚು ಮಾಡಿರುವುದು.

ಭಾವಜೀವಿ, ಮಣ್ಣಿನ ಮೆರವಣಿಗೆ, ಕಾಲ ನಿಲ್ಲುವುದಿಲ್ಲ, ನಂಬಿಕೆ, ಎರಡು ದಡ, ಹುಲ್ಲು, ಧ್ವನಿ- ದನಿ, ಜೇನಿಯಾ ಇಂಥ ಕವಿತೆಗಳ ಪ್ರಾಯೋಗಿಕ ವಿಮರ್ಶೆಗಳು, ಆಯಾ ಕವಿತೆಯ ಬಗ್ಗೆ ಹೊಸ ಬೆಳಕನ್ನು ಚೆಲ್ಲುತ್ತ, ಓದುಗರ ಅರಿವಿನ ಪರಿಧಿಯನ್ನು ವಿಸ್ತರಿಸುತ್ತ, ಕವಿತೆಯ ಮರು ಓದಿಗೆ ನಮ್ಮನ್ನು ತೊಡಗಿಸುತ್ತವೆ.

ಇಲ್ಲಿರುವ ಲೇಖನಗಳಲ್ಲಿ ಸಾಕಷ್ಟು ಏರಿಳಿತಗಳಿವೆ. ಕವಿತೆಯೊಂದನ್ನು ಗ್ರಹಿಸುವ ಯತ್ನದಲ್ಲಿ ಒಂದೊಂದೇ ಪದ್ಯದ ಅರ್ಥವನ್ನು ಮಕ್ಕಳಿಗೆ ಪಾಠ ಹೇಳುವ ಧಾಟಿಯಲ್ಲಿ ವಿವರಿಸುವ ಬರಹಗಳಿಂದ ಮೊದಲುಗೊಂಡು, ಕವಿತೆಯಲ್ಲಿ ಇಲ್ಲದ ಅರ್ಥಗಳನ್ನು ಹುಡುಕುವ, ಸಲ್ಲದ ಅರ್ಥಗಳನ್ನು ಆರೋಪಿಸುವ, ಗ್ರಹಿಸಬೇಕಾದ ಅರ್ಥವನ್ನು ಗ್ರಹಿಸದೆ ವ್ಯರ್ಥವಾದ ವಾಗ್ವಿಲಾಸದಲ್ಲಿ ತೊಡಗುವ ಬರಹಗಳೂ ಇವೆ. ಮತ್ತೆ ಕೆಲವೆಡೆ ಪ್ರಾಮಾಣಿಕವಾದ ಸಂಶಯಗಳೂ ಪ್ರಶ್ನೆಗಳೂ ಮಂಡಿತವಾಗಿವೆ.

ಸಾಹಿತ್ಯ ನಿರ್ಮಿತಿ ಎನ್ನುವುದು ಸಮಕಾಲೀನತೆಯನ್ನೂ ಒಳಗೊಂಡ ಒಂದು ಸುದೀರ್ಘವಾದ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ನಡೆಯುವ ಕ್ರಿಯೆಯಾದುದರಿಂದ, ಕವಿ ತನ್ನ ಕೃತಿಗಳ ಸಂದರ್ಭದಲ್ಲಿ ಪರಂಪರೆಯೊಂದಿಗೆ ಯಾವ ಬಗೆಯ ಸಂವಾದವನ್ನು ನಡೆಯಿಸಿದ್ದಾನೆ ಎನ್ನುವುದನ್ನು ಗುರುತಿಸುವುದು ಸಾಹಿತ್ಯ ವಿಮರ್ಶೆಯಲ್ಲಿ ಒಂದು ಚೇತೋಹಾರಿಯಾದ ಅನುಭವವಾಗಿದೆ. ಕಣವಿಯವರ ಕವಿತೆಯೊಂದನ್ನು ಆಯ್ದುಕೊಂಡು, ಯಾವ ಯಾವ ಕಾರಣಗಳಿಂದ ಅದು ತಮಗೆ ಇಷ್ಟವಾಯಿತು ಎನ್ನುವುದನ್ನು ಕಣವಿಯವರ ಇಡೀ ಕಾವ್ಯದ ಅಧ್ಯಯನದ ಹಿನ್ನೆಲೆಯಿಂದ ವ್ಯಾಖ್ಯಾನಿಸುವುದರ ಜತೆಗೆ, ಅದು ಕನ್ನಡ ಸಾಹಿತ್ಯ ಪರಂಪರೆಯ ಯಾವ ಯಾವ ನೆನಪುಗಳೊಂದಿಗೆ ಮುಖಾಮುಖಿಯಾಗುತ್ತದೆ ಅಥವಾ ನೆನಪುಗಳನ್ನು ಎಚ್ಚರಿಸುತ್ತದೆ ಎನ್ನುವುದನ್ನು ಗುರುತಿಸುವ ಕ್ರಮ ಇಂಥ ವಿಮರ್ಶೆಯಲ್ಲಿ ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಈ ಬಗೆಯಾದ ವಿಮರ್ಶೆ ಸಾಹಿತ್ಯ ಪರಂಪರೆಯ ತಿಳುವಳಿಕೆಯನ್ನು ಆಳವಾದ ಅಧ್ಯಯನದಿಂದ ಮೈಗೂಡಿಸಿಕೊಂಡ ಪರಿಣತರಿಂದ ಮಾತ್ರ ಸಾಧ್ಯ. ಈ ಹೊತ್ತಿನ ದಿನಗಳಲ್ಲಿ ಇಂಥವರು ವಿರಳ. ಅಂಥ ಕೆಲವು ಪ್ರಯತ್ನಗಳು ಈ ಸಂಪುಟದಲ್ಲಿ ಇವೆ ಎನ್ನುವುದನ್ನು ನಾನು ಗುರುತಿಸಿದ್ದೇನೆ. ಆದರೂ ಕಾರಣಾಂತರಗಳಿಂದ ಕೆಲವು ನ್ಯೂನತೆಗಳಾಗುವುದುಂಟು. 'ಬಿಸ್ಮಿಲ್ಲಾರ ಶಹನಾಯಿ ವಾದನವನ್ನು ಕೇಳಿ' ಎಂಬ ಸಾನೆಟ್ ಅನ್ನು ಕುರಿತ ಎರಡು ಪ್ರಾಯೋಗಿಕ ವಿಮರ್ಶೆಯ ಬರಹಗಳಿವೆ. ಆ ಎರಡೂ ಚೆನ್ನಾಗಿವೆ. ಆ ಮಾತು ಬೇರೆ. ಆದರೆ ಇದೇ ವಸ್ತುವನ್ನು ಕುರಿತು ಪು.ತಿ.ನ. ಬರೆದ 'ಬಿಸಮಿಲ್ಲರ ಸುನಾಯಿಯನ್ನು ಕೇಳಿ' ಎಂಬ ಇನ್ನೊಂದು ಸಾನೆಟ್ ಈ ಇಬ್ಬರು ವಿಮರ್ಶಕರ ಗಮನಕ್ಕೆ ಬಂದೇ ಇಲ್ಲ. ಒಂದೇ ವಸ್ತುವನ್ನು ಕುರಿತು ಕನ್ನಡದ ಇಬ್ಬರು ಮಹತ್ವದ ಕವಿಗಳು ಬರೆದ ಸಾನೆಟ್ಟುಗಳನ್ನು ಒಂದರ ಜೊತೆಗೆ ಮತ್ತೊಂದನ್ನಿರಿಸಿ ನಡೆಯಿಸುವ ತೌಲನಿಕ ವಿಮರ್ಶೆ ಅತ್ಯಂತ ಕುತೂಹಲಕಾರಿಯಾಗಬಹುದಾಗಿತ್ತು. ಹಲವು ವೇಳೆ ಕವಿತೆಯೊಳಗೆ ಇಲ್ಲದ ಅರ್ಥವನ್ನು ಇದೆ ಎಂಬಂತೆ ವ್ಯಾಖ್ಯಾನಿಸಿದಾಗ ಮತ್ತು ನಿಜವಾಗಿಯೂ ಇರುವ ಅನುಭವ ವಿಶೇಷವನ್ನು ಇಲ್ಲವೆಂಬಂತೆ ತಿಳಿದಾಗಲೂ, ಕಾವ್ಯದೊಂದಿಗೆ ವಿಮರ್ಶಕರು ನಡೆಯಿಸುವ ಸಂವಾದ ವ್ಯರ್ಥವಾಗುತ್ತದೆ. ಅಂಥ ಪ್ರಸಂಗಗಳು ಇಲ್ಲಿ ತೀರ ಕಡಿಮೆ.

ದೈನಂದಿನ ಸರಳ ಸಾಧಾರಣ ಸಂಗತಿಗಳನ್ನು ಕುರಿತು ಕಣವಿಯವರು ಬರೆದ ಬಹುಸಂಖ್ಯೆಯ

ಕವಿತೆಗಳು ಇಲ್ಲಿ ತುಂಬ ಉತ್ಸಾಹದ ಚರ್ಚೆಗೆ ಒಳಗಾಗಿವೆ ಎನ್ನುವುದು ಈ ಸಂಕಲನದ ಇನ್ನೊಂದು ವಿಶೇಷ. ಕೀಟಕ, ಇರುವೆ, ಗುಬ್ಬಿ, ಹಲ್ಲಿ, ನಾಯಿ, ಹಕ್ಕಿಗಳು ಹೀಗೆ ಪ್ರಾಣಿ ಪ್ರಪಂಚವನ್ನು ಕುರಿತ ಕವಿತೆಗಳು, ಬೇಲಿಯ ಮೇಲಿನ ನೀಲಿಯ ಹೂ, ಜೀನಿಯಾ, ಜರ್ಬರಾ ಹೀಗೆ ನಿಸರ್ಗದ ವಿಸ್ಮಯಗಳನ್ನು ಕುರಿತ ಕವಿತೆಗಳು, ಕೃಷಿ ಪ್ರಧಾನ ನಿಸರ್ಗವೆಂದು ಕರೆಯಬಹುದಾದ ಹೊಲ ಗದ್ದೆ, ಕೆರೆ, ಅವಕ್ಕೆ ಸಂಬಂಧಿಸಿದ ದನ ಕರು ಮತ್ತು ಕೃಷಿಕರು ಹಾಗೂ ಅವರ ಹಬ್ಬಗಳು, ದೇಗುಲಗಳು, ಉತ್ಸವಗಳು ಇತ್ಯಾದಿ ಜಾನಪದೀಯ ಸಂಗತಿಗಳ ವರ್ಣನೆಗಳು ಕಣವಿಯವರ ಕಾವ್ಯದ ಮತ್ತೊಂದು ಮುಖವನ್ನು ಅನಾವರಣಗೊಳಿಸುತ್ತವೆ. ಕಣವಿಯವರಿಗೆ ಜೀವ ಸೃಷ್ಟಿಯ ಬಗೆಗೆ ಇರುವ ಅಪರಿಮಿತ ಕುತೂಹಲವನ್ನೂ, ಪ್ರತಿಯೊಂದು ಸಣ್ಣಪುಟ್ಟ ವಸ್ತುಗಳನ್ನು ಅತ್ಯಂತ ಸೂಕ್ಷ್ಮವಾಗಿ ವೀಕ್ಷಿಸುವ ಜೀವನ ಪ್ರೀತಿಯನ್ನೂ ಈ ಕವಿತೆಗಳಲ್ಲಿ ಕಾಣಬಹುದೆಂಬ ಸಂಗತಿಯನ್ನು ವಿವಿಧ ವಿಮರ್ಶಕರು ಈ ಕೃತಿಯಲ್ಲಿ ತೋರಿಸಿಕೊಟ್ಟಿದ್ದಾರೆ. ಇಂಥ ದೈನಂದಿನ ಸರಳ ಸಾಧಾರಣ ಸಂಗತಿಗಳು ಕಡೆಗೆ ನೋಡಲು ಪುರುಸತ್ತಿಲ್ಲದ ಕವಿಗಳ ನಡುವೆ, ಕಣವಿಯವರ ಮನಸ್ಸು ಕೀಟಕಗಳನ್ನು, ಪ್ರಾಣಿಗಳನ್ನು, ಹೂವುಗಳನ್ನು ಕುರಿತು ಪರಿಭಾವಿಸುವ ಏಕಾಂತವನ್ನು ಉದ್ದಕ್ಕೂ ಕಾಯ್ದುಕೊಂಡು ಬಂದಿದೆ ಎನ್ನುವುದು ಸಾಮಾನ್ಯದ ಸಂಗತಿಯಲ್ಲ.

'ಕಣವಿಯವರ ಕವಿತೆ: ಹೊಸ ಓದು' ಎಂಬ ಈ ಸಂಪುಟವು, ಕಣವಿಯವರ ಕಾವ್ಯವನ್ನು ಸಾಹಿತ್ಯಾಸಕ್ತರು ಗ್ರಹಿಸುವುದು ಹೇಗೆ ಎನ್ನುವುದರ ದಿಗ್ದರ್ಶನ ಮಾಡುವುದಲ್ಲದೆ, ಈಗಾಗಲೆ ಅವರ ಕಾವ್ಯವನ್ನು ಕುರಿತು ಗೃಹೀತವಾದ ತಿಳುವಳಿಕೆಯನ್ನು ಪರಿಷ್ಕರಿಸುತ್ತ, ಹೊಸ ಓದುವಿಕೆಗೆ ಮನಸ್ಸನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಕೈದೀವಿಗೆಯಂತೆ ವರ್ತಿಸುತ್ತದೆ. ಜಾಗತೀಕರಣದ ಇಂದಿನ ಪ್ರಾಯೋಜನಿಕ ಪ್ರಪಂಚದ ನಡುವೆ ಕಾವ್ಯಕ್ಕೂ ನಮಗೂ ದೊಡ್ಡದೊಂದು ಕಂದಕ ಏರ್ಪಡುತ್ತಿರುವ ಹೊತ್ತಿನಲ್ಲಿ, ಕಣವಿಯವರಂಥ ಮುಖ್ಯ ಕವಿಗಳ ಕವಿತೆಗಳನ್ನು, ಅವುಗಳನ್ನು ಕುರಿತ ಪ್ರಾಯೋಗಿಕ ವಿಮರ್ಶೆಯ ಸಮೇತ ಕಾವ್ಯಾಸಕ್ತ ಸಹೃದಯರ ಹತ್ತಿರಕ್ಕೆ ತೆಗೆದುಕೊಂಡು ಹೋಗುವ ಈ ಪ್ರಯತ್ನ ಸಾಹಿತ್ಯಕವಾಗಿ ಮಾತ್ರವಲ್ಲ, ಸಾಂಸ್ಕೃತಿಕವಾಗಿಯೂ ಎಷ್ಟು ಮಹತ್ವದ್ದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಸಂಪುಟದ ಪ್ರಕಟನೆಯ ಸಂದರ್ಭಕ್ಕೆ ಇನ್ನೂ ಒಂದು ವಿಶೇಷವಿದೆ. ಅದೆಂದರೆ, ಕನ್ನಡ ಜನತೆಯ ಪ್ರೀತಿಯ ಕವಿ ಚೆನ್ನವೀರ ಕಣವಿಯವರಿಗೆ ಎಂಬತ್ತು ತುಂಬುತ್ತಿರುವ ಹೊತ್ತಿನಲ್ಲಿ ಸಿದ್ಧವಾಗಿರುವ ಈ ಸಂಪುಟವು ಕನ್ನಡ ಕಾವ್ಯಾಸಕ್ತರು ಅವರಿಗೆ ಗೌರವಪೂರ್ವಕವಾಗಿ ಸಲ್ಲಿಸುತ್ತಿರುವ ಅಭಿನಂದನೆಯ ಸಂಕೇತವೆಂದೇ ನಾನು ಭಾವಿಸುತ್ತೇನೆ.

ಈ ಸಂಪುಟವನ್ನು ಅತ್ಯಂತ ಶ್ರಮ ಹಾಗೂ ಶ್ರದ್ಧೆಯಿಂದ ಸಿದ್ಧಪಡಿಸಿದ ಸಂಪಾದಕರಾದ ಡಾ. ಗುರುಲಿಂಗ ಕಾಪಸೆ ಮತ್ತು ಡಾ. ಜಿ.ಎಂ. ಹೆಗಡೆ ಅವರಿಗೆ, ಇದರ ಪ್ರಕಟಣೆಯ ಹೊರೆ ಹೊತ್ತ ಸುಮುಖ ಪ್ರಕಾಶನದ ಶ್ರೀ ನಾರಾಯಣ ಮಾಳ್ಕೋಡ್ ಅವರಿಗೆ ನನ್ನ ಹಾರ್ದಿಕವಾದ ಅಭಿನಂದನೆಗಳು. ಈ ಸಂಪುಟಕ್ಕೆ ಮುನ್ನುಡಿಯನ್ನು ಬರೆಯುವ ನೆಪದಲ್ಲಿ ಈ ಕೃತಿಯ ಮೊದಲ ಓದುಗನಾಗುವ ಅವಕಾಶವನ್ನು ನನಗೆ ಕಲ್ಪಿಸಿದ ಇದರ ಸಂಪಾದಕರಿಗೆ ನನ್ನ ವಂದನೆಗಳು.

ಜೂನ್ ೨೦೦೮ — ಜಿ.ಎಸ್. ಶಿವರುದ್ರಪ್ಪ

# ಸಂಪಾದಕರ ನುಡಿ

ನಾಡೋಜ ಡಾ. ಚೆನ್ನವೀರ ಕಣವಿಯವರಿಗೆ ೨೮ ಜೂನ್ ೨೦೧೩ಕ್ಕೆ ೮೫ ತುಂಬುತ್ತವೆ. ಕನ್ನಡದ ಕಾವ್ಯಪ್ರೇಮಿಗಳು, ಕಾವ್ಯಾಭ್ಯಾಸಿಗಳು ಡಾ. ಕಣವಿ ಅವರ ಆಯುರ್ಮಾನದ ಮಹತ್ವದ ಘಟ್ಟಗಳನ್ನು ಗುರುತಿಸುತ್ತ, 'ಚೆಂಬೆಳಕು', 'ಮುಗಿಯದ ಹಾಡು', 'ಬೆಳ್ಳಿ ತೇರಿನ ದಾರಿ' 'ಕಣವಿಯವರ ಕವಿತೆ ; ಹೊಸ ಓದು' ಹೀಗೆ ಅಭಿನಂದನ ಪರ ಗ್ರಂಥಗಳನ್ನು ಅರ್ಪಿಸುತ್ತ, ಅವರ ಸಾಧನೆಯನ್ನು ಸ್ಮರಿಸುತ್ತ ಬಂದಿದೆ. ಡಾ. ಚೆನ್ನವೀರ ಕಣವಿಯವರು ಕಾವ್ಯ ಸೃಷ್ಟಿ ಮಾಡುತ್ತ, ಕನ್ನಡ ಭಾಷೆ ಮತ್ತು ಸಂಸ್ಕೃತಿಗಳಿಗೆ ಸದಾ ಸ್ಪಂದಿಸುತ್ತ, ಈ ಅಪರ ವಯಸ್ಸಿನಲ್ಲಿಯೂ ಕ್ರಿಯಾಶೀಲರಾಗಿರುವುದು ಕನ್ನಡದ ಭಾಗ್ಯವಿಶೇಷ. ಡಾ. ಕಣವಿಯವರು ತಮ್ಮ ನಂತರದ ತಲೆಮಾರಿನವರಿಗೆ, ಈ ಇಪ್ಪತ್ತೊಂದನೆಯ ಶತಮಾನದ ಕಿರಿಯರಿಗೆ ಒಂದು ದೀಪಸ್ತಂಭದಂತೆ ಇದ್ದಾರೆ. ಅವರು ಕನ್ನಡ ಕಾವ್ಯಕ್ಷೇತ್ರಕ್ಕೆ, ಗಾಢವಾದ ಸಾಂಸ್ಕೃತಿಕ ಪ್ರಜ್ಞೆಗೆ ಒಂದು ಮಾದರಿ, ಮಾನವೀಯ ಸಹೃದಯತ್ವಕ್ಕೆ, ಸ್ನೇಹ ಸಂಬಂಧಕ್ಕೆ ಕೂಡ ಅವರೊಂದು ಮಾದರಿಯೇ. 'ವಿನಯ' ಧಾರವಾಡದ ತತ್ತ್ವ ಎಂದು ನಮ್ಮ ವರಕವಿ ದ.ರಾ. ಬೇಂದ್ರೆಯವರು ಹೇಳಿದ್ದಾರೆ. ಆ ತತ್ತ್ವದ ಪ್ರತೀಕ ಕೂಡ ಡಾ. ಕಣವಿಯವರು ಅಹುದು.

೨೦೦೮ರಲ್ಲಿ ಅವರಿಗೆ ಎಂಬತ್ತು ಪೂರೈಸಿದಾಗ "ಕಣವಿಯವರ ಕವಿತೆ: ಹೊಸ ಓದು" ಎಂಬ ಗ್ರಂಥವನ್ನು ಪ್ರೀತಿಯ ಕಾಣಿಕೆಯಾಗಿ ಹೊರತರಲಾಗಿತ್ತು. ಅನೇಕ ಸಹೃದಯ ವಿಮರ್ಶಕರು, ವಿದ್ವಾಂಸರು ಅವರ ಬಿಡಿಕವಿತೆಗಳನ್ನು ಕುರಿತು ಪ್ರಾಯೋಗಿಕ ವಿಮರ್ಶೆ ಮಾಡಿರುವ ವಿಶಿಷ್ಟ ಗ್ರಂಥವದು. ಈಗ ಈ ಆವೃತ್ತಿಗೆ ಅಲ್ಲಿಂದಲೇ ಎಂಬತ್ತು ಕವಿತೆಗಳ ವಿಮರ್ಶೆಗಳನ್ನು ಆಯ್ದುಕೊಳ್ಳಲಾಗಿದೆ. ಗ್ರಂಥಕ್ಕೆ 'ಚೆನ್ನವೀರ ಕಣವಿಯವರ ಆಯ್ದ ಕವಿತೆಗಳ ಅನುಸಂಧಾನ' ಎಂಬ ನವೀನ ಶೀರ್ಷಿಕೆಯನ್ನು ಕೊಡಲಾಗಿದೆ. ಎಂದಿನಂತೆ ಈ ಗ್ರಂಥಕ್ಕೆ ಹೆಸರು ಸೂಚಿಸಿದವರು ನಮ್ಮ ಹಿರಿಯ ವಿಮರ್ಶಕರಾದ ಡಾ. ಜಿ.ಎಸ್. ಆಮೂರ ಅವರು. ಅವರ ಸೂಕ್ತ ಸಲಹೆಗಳು ಮಾರ್ಗದರ್ಶಕ ಸೂತ್ರಗಳಂತಿರುತ್ತವೆ. ಅವರಿಗೆ ಗೌರವಪೂರ್ವಕವಾದ ಕೃತಜ್ಞತೆಗಳು.

ಡಾ. ಚೆನ್ನವೀರ ಕಣವಿಯವರ ಸಮಗ್ರ ಸಾಹಿತ್ಯದ ಅಧ್ಯಯನ ಮಾಡುವದು ಈಗ ಕಷ್ಟದಾಯಕವಾಗಿಲ್ಲ. ಯಾಕೆಂದರೆ ಕರ್ನಾಟಕ ರಾಜ್ಯದ ಮತ್ತು ಸಂಸ್ಕೃತಿ ಇಲಾಖೆ ಡಾ. ಕಣವಿಯವರ 'ಕಾವ್ಯ ಭಂಡಾರ' ಸಂಪುಟ ೧ -೨ (೨೦೦೯) ಮತ್ತು 'ಸಮಗ್ರ ಗದ್ಯ' ಸಂಪುಟ ೧ -೨ (೨೦೧೦) ಪ್ರಕಟಿಸಿ, ಕಾವ್ಯಾಭ್ಯಾಸಿಗಳಿಗೆ ಅವರ ಸಾಹಿತ್ಯಿಕವಾದ ಸಮಗ್ರ ಕೊಡುಗೆಯ ಉಪಲಬ್ಧವಾಗುವಂತೆ ಮಾಡಿದೆ. ಹಾಗಿದ್ದರೂ ಡಾ. ಕಣವಿಯವರು ಈಗಲೂ ಕಾವ್ಯ ರಚನೆಯಲ್ಲಿ, ಗದ್ಯದ

ಬರವಣಿಗೆಯಲ್ಲಿ ಕ್ರಿಯಾಶೀಲರಾಗಿಯೇ ಇರುವುದರಿಂದ ಆ ನಂತರದ ಬರವಣಿಗೆಯನ್ನು ಸ್ವಲ್ಪ ಶ್ರಮವಹಿಸಿ ತಿಳಿದುಕೊಳ್ಳಬೇಕಾಗುವುದು. ಉದಾ:೨೦೧೨ರಲ್ಲಿ ಪ್ರಕಟವಾದ 'ಭೂಮಿಬದುಕು' (ಕವನ ಸಂಕಲನ) ಕಾವ್ಯ ರಚನೆಯ ಉದ್ದಕ್ಕೂ ('ಕಾವ್ಯಾಕ್ಷಿ'ಯಿಂದಲೂ)ತಮ್ಮ ಪ್ರೌಢಿಮೆಯನ್ನು ಸಾಬೀತುಪಡಿಸುತ್ತ ಬಂದ ಕಣವಿಯವರು ಈಗ ಹೆಚ್ಚು ಮಾಗಿದ್ದಾರೆ. ಅವರ 'ನೀವೇ ಪ್ರಮಾಣು' (೨೦೦೭) ಸಂಕಲನದಿಂದ ಅವರ ಶ್ರುತಿ, ಧ್ವನಿಶಕ್ತಿ ಭಿನ್ನವಾಗಿರುವುದನ್ನು ಕಾಣಬಹುದು. 'ಭೂಮಿ ಬದುಕು' (೨೦೧೨) ಈ ಸಂಗ್ರಹದಲ್ಲಿರುವ ಕೆಲವು ಕವಿತೆಗಳಿಗೆ ತತ್ತ್ವಜಿಜ್ಞಾಸೆಯ ಲೇಪನವಿರುವುದು, ಆಧ್ಯಾತ್ಮಿಕ ಸ್ಪರ್ಶವಿರುವುದು ಗಮನಾರ್ಹವೆನಿಸುತ್ತವೆ. ಇದೇ ('ಭೂಮಿ-ಬದುಕು') ಸಂಕಲನದಲ್ಲಿರುವ 'ವಿವೇಕ ಚಿಂತಾಮಣಿ' (ಸ್ವಾಮಿ ವಿವೇಕಾನಂದರ ಸೂಕ್ತಿಗಳನ್ನಾಧರಿಸಿದ್ದು) ಓದುಗನನ್ನು ಗಕ್ಕನೆ ನಿಲ್ಲಿಸಿ, ಅಂತರ್ಮುಖಿಯನ್ನಾಗಿ ಮಾಡುತ್ತದೆ.

ಜೀವನದ ಗುರಿ 'ಅರಿವೇ ಗುರು ನುಡಿ ಜ್ಯೋತಿರ್ಲಿಂಗ' ಎಂಬುದನ್ನು ಬಲ್ಲರು ಕಣವಿಯವರು. ಅವರ ಕಾವ್ಯೋಪಾಸನೆಗೂ ಇರುವ ಗುರಿಗಳು ಅರಿವು, ಆನಂದಗಳೆಂಬುದನ್ನು ಕಂಡುಕೊಂಡಾಗ ಅವರ ಅಂತರಂಗದಲ್ಲಿ ಆಧ್ಯಾತ್ಮಿಕ ಸ್ಪಂದನವಿರುವುದು ಗಮನಕ್ಕೆ ಬರುತ್ತದೆ. ಈ ಸ್ಪಂದನದ ಸುಳುಹು ಹೊಳಹುಗಳು ಅವರ 'ಮಾನಸಪೂಜೆ' (೨೦೦೬)ಸಂಕಲನದಲ್ಲಿರುವುದನ್ನು ಕಾವ್ಯಾಭ್ಯಾಸಿಗಳು ಗುರುತಿಸಬಹುದು, ಪರೋಕ್ಷವಾಗಿಯೋ ಅಪರೋಕ್ಷವಾಗಿಯೋ ಡಾ. ಕಣವಿಯವರು ಪ್ರಕೃತಿ ಚಿತ್ರಣದಿಂದ ಪ್ರಾರಂಭಿಸಿ ಪರತತ್ತ್ವ ಚಿತ್ರಣದ ಕಡೆಗೆ ತಮ್ಮ ಕಾವ್ಯದ ಹರಹನ್ನು ಬೆಳೆಸಿರುವುದು ಗಮನಿಸತಕ್ಕ ಸಂಗತಿಯಾಗಿದೆ.

ಡಾ. ಕಣವಿಯವರು ೮೫ ಪೂರೈಸುವ ಹಂತದಲ್ಲಿ ನೀಡುವ ಈ ಕಾಣಿಕೆ 'ಕಣವಿಯವರ ಆಯ್ದ ಕವಿತೆಗಳ ಅನುಸಂಧಾನ' ಕಾವ್ಯಾಭ್ಯಾಸಿಗಳ ಚಿಂತನೆಯನ್ನು ನವೀಕರಿಸಬಹುದು ಎನಿಸುತ್ತದೆ. ಈ ಮೊದಲೇ ಹೇಳಿದಂತೆ ಈ ಸಂಪುಟ ಎಂಬತ್ತು ಕವಿತೆಗಳ ಪ್ರಾಯೋಗಿಕ ವಿಮರ್ಶೆಯನ್ನು ಒಳಗೊಂಡಿದೆ. ಇಲ್ಲಿಯ ಎಲ್ಲ ಲೇಖಕರೂ ಸಂಪಾದಕರ ಕೃತಜ್ಞತೆಗೆ ಪಾತ್ರರು.

ಪ್ರಾಯೋಗಿಕ ವಿಮರ್ಶೆಯ ಐತಿಹಾಸಿಕ ಪಕ್ಷಿ ನೋಟವುಳ್ಳ ಪ್ರಸ್ತುತ ಬಿಡಿ ಪದ್ಯಗಳ ವಿಮರ್ಶೆಯ ವಿಶೇಷತೆಯನ್ನು ಗುರುತಿಸುವ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರಸ್ತಾವನೆ ಈ ಸಂಪುಟದ ಮಹತ್ವವನ್ನು ಹೆಚ್ಚಿಸಿದೆ. ಅವರ ವಿದ್ವತ್ತು ಮತ್ತು ಸ್ನೇಹಪರತೆಯನ್ನು ಹೃತ್ಪೂರ್ವಕವಾಗಿ ನಾವು ನೆನೆಯದಿರಲಾರೆವು.

ಈ ಮೊದಲಿನ 'ಕಣವಿಯವರ ಕವಿತೆ : ಹೊಸ ಓದು' ಸಂಪುಟವನ್ನು ಪ್ರೀತಿಯಿಂದ ಪ್ರಕಟಿಸಿದ 'ಸುಮುಖ ಪ್ರಕಾಶನ'ದ ಶ್ರೀ ನಾರಾಯಣ ಮಾಳ್ಕೋಡ ಅವರನ್ನು ಕೃತಜ್ಞತೆಯಿಂದ ನೆನೆದುಕೊಳ್ಳುತ್ತ, ಪ್ರಸ್ತುತ ಸಂಪುಟದ ಪ್ರಕಾಶಕರಾದ 'ಸಪ್ನಾಬುಕ್‌ಹೌಸ್'ದ ಒಡೆಯರಾದ ಶ್ರೀ ನಿತಿನ್ ಶಾ ಅವರಿಗೆ, ವ್ಯವಸ್ಥಾಪಕರಾದ ಶ್ರೀ ದೊಡ್ಡೇಗೌಡ ಅವರಿಗೆ ಅಕ್ಷರ ಜೋಡಣೆ ಮಾಡಿದ ಧಾರವಾಡದ ವಚನ ಗ್ರಾಫಿಕ್ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಎಂದಿನಂತೆ ಆತ್ಮೀಯತೆಯಿಂದ ಸಹಕರಿಸುತ್ತಿರುವ ಸಹಸಂಪಾದಕ ಮಿತ್ರರಾದ ಡಾ. ಜಿ.ಎಂ. ಹೆಗಡೆ ಅವರಿಗೆ ಕೃತಜ್ಞತಾಪೂರ್ವಕ ನಮನಗಳು.

ಧಾರವಾಡ ಗುರುಲಿಂಗ ಕಾಪಸೆ

೧೪-೬-೨೦೧೩

# ಪರಿವಿಡಿ

# ೧. ಕೋಗಿಲೆ

೧

ಈಗ ತಾನೆ
ಬಂದಿತೇನೆ
ಮಧುರ ಕಂಠ ಕೋಗಿಲೆ ?
ಜಗದ ಬಿನದ
ನಿನ್ನ ಮುದದ
ಗಾನವಾಯ್ತು ಒಮ್ಮೆಲೆ!

೨

ಕೆಂಪು ತಳಿರು
ಕಂಪಿನಲರು
ಸೂಸುತಿಹುದು ಮಾಮರಾ
ಅಲ್ಲಿ ಕುಳಿತು
ಎಲ್ಲ ಮರೆತು
ಉಲಿಯುತಿರುವೆ ಸುಮಧುರಾ

೩

ಗಾನ ಕೇಳಿ
ಮೌನ ತಾಳಿ
ಮೂಕವಾಯ್ತು ಭಾವನಾ ;
ಮನುಜಲೋಕ
ದಿವಿಜನಾಕ
ಗೈದ ಕುಹೂ ಕೂಜನಾ.

೪
ಎದೆಯು ಮಿಡಿದು
ತಾಳ ಹಿಡಿದು
ಕುಣಿಯುತಿಹುದು ಈ ಚಣಾ ;
ರಸದ ಕಡಲು
ಹಿಗ್ಗಿನೊಡಲು
ತರತರಂಗ ಬಾಜನಾ.

೫
ರಸದ ಚಿಲುಮೆ
ಹರಿಸಿ, ಒಲುಮೆ
ಸುಧೆಯ ನೀಡು ಕೋಗಿಲೆ
ಮೌನ ಧ್ಯಾನ
ನಿನಗೆ ಊನ
ಕುಕಿಲು ಜಾಣ ಕೋಗಿಲೆ

ಕನ್ನಡ ಕಾವ್ಯ ಪರಂಪರೆಯನ್ನು ಜೀರ್ಣಿಸಿಕೊಂಡ ಕಣವಿಯವರ ಅನನ್ಯತೆಯ ಶೋಧ ಅವರ ಮೊದಲ ಸಂಕಲನ 'ಕಾವ್ಯಾಕ್ಷಿ' (೧೯೪೯)ಯಲ್ಲಿಯೇ ಪ್ರಕಟಗೊಳ್ಳುವುದು ಕೋಗಿಲೆಯಂತಹ ಕವಿತೆಯ ಮೂಲಕ. ಈ ಕವಿತೆ ಹಲವು ಸೃಷ್ಟಿಶೀಲ ರಹಸ್ಯಗಳನ್ನು ವಿವರಿಸಿಕೊಳ್ಳುತ್ತ ಮುಖ್ಯವಾಗುತ್ತದೆ.

ಮಧುರ ಕಂಠದ ಕೋಗಿಲೆಯೊಂದಿಗೆ ಕವಿ ನಡೆಸುವ ಅನುಸಂಧಾನವಿದು.
ಈಗ ತಾನೆ
ಬಂದಿತೇನೆ
ಮಧುರ ಕಂಠ ಕೋಗಿಲೆ ?

ಎಂಬ ಪ್ರಶ್ನೆಯೊಂದಿಗೇ ಕೋಗಿಲೆಯ ಹಾಡು ಸೃಜನಶೀಲ ಸಂಕೇತವಾಗಿ, ಆ ಸಂಕೇತದ ಚಲನಶೀಲತೆಯ ಮೂಲಕ ಸೃಜನಶೀಲ ಸತ್ವದ ಅನಾವರಣವಾಗುವುದು ವಿಸ್ಮಯದ್ದಾಗಿದೆ. ಕೋಗಿಲೆಗೆ ಹಾಡು ಒದಗುವುದು ಅಯಾಚಿತವಾದ ಗಳಿಗೆಯಲ್ಲಿ. ಆದರೆ ಈ ಬೆರಗಿನ ಹಿಂದೆ ಅನಾದಿ ಮೌನದ ಚರಿತ್ರೆಯಿದೆ. ಅದು ಸಂವೇದನೆ ಗರ್ಭಕಟ್ಟುವ ಧ್ಯಾನದ ಸ್ಥಿತಿ. ಮೊಗ್ಗು ಹೂವಾಗುವಂತೆ ಹಾಡು ಹುಟ್ಟುವ ಗಳಿಗೆ ಪೂರ್ವ ಯೋಜಿತವಲ್ಲ. ಅದೊಂದು ಕಾಲ-ಭಾವಗಳ

ಸಮಾಗಮ. ಅದು ಈಗ ಅಷ್ಟೇ ಸತ್ಯ, ಮಧುರ ಕಂಠ ಈಗಷ್ಟೇ ಬಂದಿದೆ. ಮತ್ತು ತಾನೇ ತಾನಾಗಿ ಬಂದಿದೆ. ಸೃಜನಶೀಲತೆ ಮೊಳಕೆಯೊಡೆಯುವ ಅವ್ಯಕ್ತಕ್ಕೆ ಕವಿ ಭಾಷೆ ಕೊಡುತ್ತಾರೆ. ಇಂತಹ ಹಾಡು ತನ್ನಿಂದ ತಾನೇ ಹುಟ್ಟಿಕೊಳ್ಳುತ್ತದೆ. ಜಗದ ಸಂತಸವೇ ನಿನ್ನ ಸಂತಸವಾಗಿದೆಯೇ? ಎಂದು ಪ್ರಶ್ನಿಸುವಲ್ಲಿ ಈ ಸೃಜನಶೀಲ ರಹಸ್ಯದ ಮೊದಲ ಮುಗುಳು ಒಡೆಯುತ್ತದೆ.

ಮುಂದಿನ ಸಾಲುಗಳಲ್ಲಿ ಹಾಡಿಗೂ ಅದು ಹುಟ್ಟುವ ಪರಿಸರಕ್ಕೂ ಇರುವ ಕರುಳ ಸಂಬಂಧವನ್ನು ವಿವೇಚಿಸಲಾಗಿದೆ.

**ಕೆಂಪು ತಳಿರು**
**ಕಂಪಿನಲರು**
**ಸೂಸುತಿಹುದು ಮಾಮರಾ**
**ಅಲ್ಲಿ ಕುಳಿತು**
**ಎಲ್ಲ ಮರೆತು**
**ಉಲಿಯುತಿರುವೆ ಸುಮಧುರಾ**

ಮಾಮರದ ಕಂಪು, ಕೆಂಪುಗಳು ಮನವನ್ನು ಹದಗೊಳಿಸಿದಾಗ, ಆ ಸುಂದರ ಪರಿಸರದಲ್ಲಿ 'ಎಲ್ಲ ಮರೆತು' ಉಲಿಯುವುದು ಸಾಧ್ಯ. ಇದು ಸೃಷ್ಟಿ ಕರ್ಮದ ಮತ್ತೊಂದು ಗುಟ್ಟನ್ನು ಹೇಳುತ್ತದೆ. ಲೋಕ ನಿಯತಿಯ ಎಲ್ಲ ವ್ಯಕ್ತಿ-ವಸ್ತು ಸಂಬಂಧಗಳನ್ನು ಮರೆತು ಮತ್ತೊಂದೇ ಸಂಗತಿಯಲ್ಲಿ ಸಂಪೂರ್ಣ ತಲ್ಲೀನವಾದ ಸ್ಥಿತಿಯಲ್ಲಿ ಅಭಿವ್ಯಕ್ತಿ ಸಾಧಿತವಾಗುತ್ತದೆ. ಅದು ಕಲೆ ನೀಡುವ ಅನುಭೂತಿ. ಕಾವ್ಯ ಮೀಮಾಂಸೆಯ ಪರಿಭಾಷೆಯಲ್ಲಿ ರಸಾನಂದ. ಕಾವ್ಯ ನಿರ್ಮಿತಿಯಲ್ಲಿ ಕವಿ ಹೊಂದುವ ಈ ಅನುಭವವನ್ನು ಸರಳವಾಗಿ ನಿರೂಪಿಸಲಾಗಿದೆ.

ಮುಂದಿನ ಸಾಲುಗಳಲ್ಲಿ ಸೃಜನಶೀಲ ಮೀಮಾಂಸೆ ಸಹೃದಯನ ನೆಲೆಯನ್ನು ಪ್ರವೇಶಿಸುತ್ತದೆ. ಕಲೆಯ ಪರಿಣಾಮವನ್ನು ಕವಿ ಕೋಗಿಲೆಯ ಹಾಡಿನ ಫಲಿತಗಳ ಮೂಲಕ ಧ್ವನಿಸುತ್ತಾರೆ. ಹಾಡು ಮೌನದಲ್ಲಿ ತಲ್ಲೀನಗೊಳಿಸಿ ಭಾವನೆಗಳನ್ನು ಮೂಕವಾಗಿಸಿದೆ. ಈ ಮೌನ ಬಾಹ್ಯ ನಿಶ್ಶಬ್ದವಲ್ಲ. ಮನುಷ್ಯ ಬದುಕನ್ನು ದೇವತೆಗಳ ಸ್ವರ್ಗವನ್ನಾಗಿಸುವ ಸಾಮರ್ಥ್ಯ ಕೋಗಿಲೆಯ ಹಾಡಿಗಿದೆ, ಅಂದರೆ ಕಲೆಗಿದೆ. ಇದು ಸೃಜನಶೀಲತೆಯ ಧಾರಣ ಶಕ್ತಿ. ನಿಂತ ನೆಲವನ್ನು ನಾಕವನ್ನಾಗಿಸಿಕೊಳ್ಳುವ ಅನಾದಿ ಹುಡುಕಾಟ. ಇಂತಹ ಹಾಡು ಮನಸ್ಸಿನ ಮಿಡಿತದಲ್ಲಿ ಮೀಟಿ ಒಡಲನ್ನು ಹಿಗ್ಗಿನಿಂದ ತುಂಬುತ್ತದೆ. ಹೀಗೆ ಸಹೃದಯನಿಗೂ ಕಲೆಗೂ ಇರುವ ಸಂಬಂಧವನ್ನು ನಿಖರವಾಗಿ ವಿವೇಚಿಸುತ್ತದೆ.

ಕೋಗಿಲೆ ತನ್ನ ಹಾಡಿನಿಂದ ರಸದ ಚಿಲುಮೆಯನ್ನು ಹರಿಸಿ, ಒಲುಮೆಯ ಸುಧೆಯನ್ನು ನೀಡಬೇಕು.

ಮೌನ ಧ್ಯಾನ
ನಿನಗೆ ಊನ
ಕುಕಿಲು ಜಾಣ ಕೋಗಿಲೆ

ಇಲ್ಲಿ ಕೋಗಿಲೆಯ ಹಾಡಿನ ಉಪಾಧಿಯ ಮೂಲಕ ಸೃಜನಶೀಲತೆಯೆ ಮಹತಿಯನ್ನು ಕವಿ ಸಾಬೀತುಪಡಿಸುತ್ತಾರೆ. ಕಲೆ ಎಂಬುದೊಂದು ಅಸ್ಮಿತೆ. ಅದನ್ನು ನಿರ್ಲಕ್ಷಿಸುವುದಾಗಲಿ, ಕೀಳರಿಮೆಯಿಂದ ಅವಜ್ಞೆಗೆ ತಳ್ಳುವುದಾಗಲಿ ಸರಿಯಲ್ಲ. ಕೋಗಿಲೆಗೆ ಹಾಡು ಅದರ ಧರ್ಮ ಮತ್ತು ಕರ್ಮ. ಹಾಡಿಲ್ಲದೆ ಕೋಗಿಲೆಯೇ ಇಲ್ಲ. 'ಕಾವ್ಯಾಕ್ಷಿ' ಸಂಗ್ರಹದ 'ಆ ಗಿಡಾ ಈ ಗಿಡಾ' ಎಲ್ಲವೂ ಸಮಾನ ಸೌಂದರ್ಯವನ್ನು ಪ್ರತಿನಿಧಿಸುವಂತೆ ಇಲ್ಲಿ 'ಎಲ್ಲ ಹಾಡಿಗೂ' ಮಹತ್ವ ಇದೆ. ಎಲ್ಲ ಧ್ವನಿಯೂ ದೀರ್ಘ ಹಾಡಾಗಲೇಬೇಕಿಲ್ಲ. ಎಲ್ಲ 'ಕುಕಿಲುವಿಕೆ'ಗೂ ಅದೇ ಆದ್ಯತೆಯಿದೆ - ಕವಿತೆಯ ಕೊನೆಯಲ್ಲಿ ಕವಿಗೂ ಪರಿಸರಕ್ಕೂ ಇರುವ ಅನ್ಯೋನ್ಯತೆ ಸೂಚಿತವಾಗುತ್ತದೆ. ಕಲೆಯ ಜಗತ್ತಿಗೆ ಕಾಲಿಡುವ ಮನಸ್ಸು ತನ್ನ ಸ್ಥಾನವನ್ನು ಶೋಧಿಸಿಕೊಳ್ಳುವ ಹುಡುಕಾಟವಾಗಿಯೂ, ತನ್ನ ಅಸ್ತಿತ್ವವನ್ನು ತಾನೇ ಶೋಧಿಸಿಕೊಳ್ಳುವ ಕ್ರಮವಾಗಿಯೂ ಬೆಳೆಯುತ್ತದೆ.

ಕಣವಿಯವರ ಸಂವೇದನೆಯಲ್ಲಿ 'ಕೋಗಿಲೆ' ಸೃಜನಶೀಲ ಶಕ್ತಿಯಾಗಿಯೇ ಬೆಳೆದು ಬಂದಿದ್ದನ್ನು ಕಾಣುತ್ತೇವೆ. ಅವರ 'ಶಿಶಿರದಲ್ಲಿ ಬಂದ ಸ್ನೇಹಿತ' ಸಂಕಲನದ (೧೯೬೪) 'ಒಂದು ಬೆಳಗು' ಕವಿತೆಯಲ್ಲಿ ನಾಗರಿಕತೆಯ ಬಂಧನದಿಂದ ಸೃಜನಶೀಲ ಸಾಮರ್ಥ್ಯ ಆಚೆಯೇ ಉಳಿದುಬಿಡುವ ವಿಸ್ಮಯವನ್ನು ದಾಖಲಿಸುತ್ತಾರೆ. "ಕೋಗಿಲೆ ಯಾರ ಕೈಗೂ ಸಿಗದೆ ಸ್ವಚ್ಛಂದ ಹಾಡಿ ಬದುಕುತ್ತಿರುವ ಆಶ್ಚರ್ಯ" ಕವಿಗೆ ಸೃಜನಶೀಲ ಸಾಮರ್ಥ್ಯದ ಬಗೆಗಿರುವ ಅಪಾರ ಗೌರವ ಮತ್ತು ಬೆರಗನ್ನು ಹೇಳುತ್ತದೆ. ಕಾವ್ಯ ನಿರ್ಮಿತಿಯ ಆರಂಭದ ದಿನಗಳಲ್ಲಿಯೇ 'ಕಾವ್ಯಶಕ್ತಿ'ಯನ್ನು ಕುರಿತು ಕವಿ ರೂಪಿಸಿಕೊಂಡ ಅಭಿಪ್ರಾಯ ಅವರ ಕಾವ್ಯ ಕಲ್ಪನೆಯನ್ನು ವಿವರಿಸುತ್ತದೆ. 'ಕೋಗಿಲೆ'ಸೃಜನಶೀಲ ಸಂಕೇತವಾಗಿ ಕಣವಿ ಕಾವ್ಯದಲ್ಲಿ ಮತ್ತೆ ಮತ್ತೆ ಅನುರಣನಗೊಳ್ಳುತ್ತದೆ.

ವಿನಯಾ ಒಕ್ಕುಂದ

"ಈಗ ತಾನೆ ಬಂದಿದ್ದೇನೆ" ಎಂದೂ ಓದಿಕೊಳ್ಳಲು ಸಾಧ್ಯವಿರುವ ಈ ಪದ್ಯ, ಕವಿ ತಾನು ಕನ್ನಡ ಕಾವ್ಯವನಕ್ಕೆ ಆಗಮಿಸಿರುವುದನ್ನು ವಿನಯದಿಂದ, ಆದರೆ ಅಷ್ಟೇ ಆತ್ಮವಿಶ್ವಾಸದಿಂದ ಘೋಷಿಸುತ್ತಿರುವುದನ್ನು ಧ್ವನಿಸುತ್ತದೆ ಎಂಬುದಾಗಿಯೂ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಅಭಿಪ್ರಾಯ ಪಟ್ಟಿದ್ದಾರೆ. - ಸಂ

# ೨. "ಗೆಲುವೆನೆಂಬುವ ಭಾಷೆ"

ಸಂಸಾರ ದಂದುಗದ ಹುರಿಹಂಚಿನಲಿ ಬೆಂದು
ಹುರುಪಳಿಸಿ ತಡಬಡಿಸಿ ನಾಣುಗೊಟ್ಟೋಡುತಿಹ
ಅಳಿಮನದಿ ತಲ್ಲಣಿಸಿ, ನಂಬದಿಹ ನಚ್ಚದಿಹ
ಡಾಂಭಿಕದಲಂಕಾರ ತೊಟ್ಟ ಜೀವವೆ, ಎಂದು

ಎಂದು ನಿನ್ನಯ ಬಾಳಿಗೊಂದು ನಿಲುಗಡೆ ಸಂದು
ಕಲ್ಯಾಣಮಾದಪುದು, ಶಾಂತಿ ನೆಲೆಗೊಳ್ಳುವುದು ?
ಭಾವಶುದ್ಧಿಯ ಪಡೆದು, ಮಿಥ್ಯತೆಯ ಕನಸೊಡೆದು
ಸತ್ಯಶಿವ ಸೌಂದರ್ಯಗಳನರಿತು ಹಾಡುವುದು ?

ಶರಣ ಸಂದೇಶದಪರಂಪಾರ ಜಲಧಿಯಲಿ
ಮುಳುಗಿ ಕಾಣಲ್ಲಿಹುದು ವಚನ ರತ್ನದ ರಾಶಿ ;
ಬೆಳಗಿನೊಳಗಿನ ಮಹಾ ಬೆಳಗಿನಿಂದುದ್ಭವಿಸಿ
ಘೋಷಿಸುವದೊಂದು ನುಡಿ ನವಖಂಡ ಪೃಥ್ವಿಯಲಿ;

"ಎಲೆ ದೇವ ನಿನ್ನದಿದೆ ಕೊಲುವೆನೆಂಬುವ ಭಾಷೆ
ಆದರಿದೊ ಭಕ್ತನದು ಗೆಲುವೆನೆಂಬುವ ಭಾಷೆ"

ಚೆನ್ನವೀರ ಕಣವಿಯವರು ನವೋದಯದ ಎರಡನೆಯ ತಲೆಮಾರಿನ ಕವಿಗಳಲ್ಲಿ ಭಿನ್ನ ಮಾರ್ಗ ತುಳಿದವರು. ಜನಸಾಮಾನ್ಯರ ಸಾಮಾನ್ಯಾನುಭವಕ್ಕೆ ತಮ್ಮ ಬದುಕಿನ ಸ್ವಾನುಭವದ ಕಾವ್ಯ ಸಂವೇದನೆಯನ್ನು ಶ್ರುತಿಯಿಟ್ಟು ಪ್ರಕೃತಿ, ಮಾನವ ಹಾಗೂ ದಿವ್ಯ ಚೆಲುವನ್ನು ಕಂಡು ಕಾವ್ಯದಲ್ಲಿ ಕಂಡರಿಸಿದವರು. ದೇಸೀಯ ಸೊಗಡಿನಲ್ಲಿ ಬೇರು ಬಿಟ್ಟ ಅವರ ಅಸಲಿ ಕಾವ್ಯ

ಚಿಂತನೆಗಳು, ಯಾವ ತೊಡಕಿಲ್ಲದೆ ಓದುಗನಿಗೆ ಸಂವಹನವಾಗುವುದೇ ಅಲ್ಲದೆ, ಅವನನ್ನು ಮತ್ತೆ ಮತ್ತೆ ಪರಿಭಾವನೆಗೆ ಹಚ್ಚುತ್ತವೆ. ಅಬ್ಬರ ಮತ್ತು ಅದ್ದೂರಿ ಬಣ್ಣಗಾರಿಕೆಯ ಕಸರತ್ತು ಕಣವಿಯವರ ಕಾವ್ಯಗುಣವಲ್ಲ. ಅವರ ಅನೇಕ ಅತ್ಯಂತ ಸರಳ ಮತ್ತು ಸಹಜ ಕವನಗಳೇ ಧ್ವನಿ ಸ್ವರೂಪ ಪಡೆಯುತ್ತವೆ. ಅವರ ಕವನಗಳಲ್ಲಿ ಚಿತ್ರಕತ್ವ ಮತ್ತೂ ರೂಪಕ ಶಕ್ತಿ ಇದೆ. ಸುನೀತಗಳಲ್ಲಿ ಕಣವಿಯವರ ಅಡಕವಾಗಿ ಹೇಳುವ ಗುಣ ಎದ್ದು ಕಾಣುತ್ತದೆ; ಕಿರಿದರಲ್ಲಿ ಹಿರಿದಾದ ಅರ್ಥ ತುಂಬಿಕೊಡುವ ಶಕ್ತಿಯೂ ಇದೆ. ಅವರ ಆದರ್ಶದ ಕನಸುಗಳಿಗೂ ಮಣ್ಣಿನಲ್ಲಿಯೇ ಸಹಜ ನೆಲೆ ಇದೆ. ನವೋದಯ ಕವಿಗಳ ಆದರ್ಶಕ್ಕಿಂತ, ವಾಸ್ತವಿಕತೆಯೇ ಅವರ ಮೆಚ್ಚಿಗೆ. ಅದೇ ಸಾಹಿತ್ಯ ಚಳುವಳಿಗಳಲ್ಲಿ ಸ್ಥಾಯಿಯಾದ ಮೂಲ ಕಾವ್ಯ ಧಾತು. ಶರಣ ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ಅವರ ಕಾವ್ಯ ವ್ಯವಸಾಯ ಸಾಗಿದೆ.

ನಿರ್ವಯಲು ಶಿವರೂಪಿ ಅಲ್ಲಮ, ದಿಟ ಭಕುತಿ ಪುಟಗೊಂಡ ಬಸವಣ್ಣ, ಕತ್ತಲು-ಬೆಳಕು ಬೆತ್ತಲೆಗೊಳಿಸಿದ ಅಕ್ಕಮಹಾದೇವಿ - ಈ ಮೂವರೂ ಜ್ಞಾನ, ಭಕ್ತಿ, ವೈರಾಗ್ಯಗಳ ಹಾದಿ ಹಿಡಿದ ಅನುಭಾವಿಗಳು. ಅಂಥ'ವರ ಅನುಭಾವವನ್ನು ಸೌಂದರ್ಯಾನುಭವವನ್ನಾಗಿಸುವ ಕಾವ್ಯ ಸಾಧಕರಾಗಿ ಗೆಲುವನ್ನು ಕಂಡ ಕಣವಿಯವರು, ಶರಣರ ನಿರ್ವಯಲಿಗೆ ಕಾವ್ಯ ಬಯಲನ್ನು ತೊಡಿಸುವುದೇ, ಅವರ ಕಾವ್ಯ ಪ್ರಕ್ರಿಯೆಯ ಗುಟ್ಟು.

ಕಣವಿಯವರು ಸುನೀತಗಳಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿ ವ್ಯಕ್ತಿ ಚಿತ್ರಗಳನ್ನು ಕಟ್ಟಿಕೊಡುವಲ್ಲಿ ಸಿದ್ಧಿ ಸಾಧಿಸಿದ್ದಾರೆ. 'ಕಾವ್ಯಾಕ್ಷಿ' ಸಂಗ್ರಹದ 'ಗೆಲುವೆನೆಂಬುವ ಭಾಷೆ' - ಸುನೀತದಲ್ಲಿ, ಶರಣ ಸಾಧಕನ ಆತ್ಮ ನಿರೀಕ್ಷಣೆಯಲ್ಲಿ, ಕಣವಿಯವರ ಗುರಿ ಮತ್ತು ದಾರಿಗಳ ವ್ಯಕ್ತಿ ಚಿತ್ರಣವೆ ಅನಾವರಣಗೊಂಡಿದೆ.

ಸಂಸಾರವೆಂಬ ಸುಡುವ ಹೆಂಚಿನಲ್ಲಿ ಜೀವ ಬೆಂದು, ಹುಮ್ಮಸ್ಸು ಕುಗ್ಗಿ, ಹೆದರಿ ಹೇಡಿಯಾಗಿ, ನಾಚಿಕೆ ಬಿಟ್ಟು ಹಿಮ್ಮೆಟ್ಟುತ್ತಿದೆ. ಚಡಪಡಿಸುವ ಹೀನ ಮನಸ್ಸು ನಂಬಿಕೆ, ವಿಶ್ವಾಸ ಕಳೆದುಕೊಂಡು, ಡಾಂಭಿಕ ಮುಖವಾಡ ತೊಟ್ಟಿದೆ. ಇಂಥ ನೆಲೆ ಇಲ್ಲದ ಬದುಕಿಗೆ ನೆಲೆ ಸಿಕ್ಕುವುದು ಯಾವಾಗ? ಶಾಂತಿಯಾದರೂ ಎಂದು? ಭಾವ ಶುದ್ಧಿಯಿಂದ ಸತ್ಯ ಶಿವ ಸುಂದರ ಹಾಡನ್ನು ಹಾಡುವುದು ಯಾವಾಗ? ಭರವಸೆ ಇಲ್ಲದ ಜೀವ ಶರಣರ ಸಂದೇಶದ ವಚನ ರತ್ನರಾಶಿಯ ಸಮುದ್ರದಲ್ಲಿ ಮುಳುಗಿದರೆ, ಅಲ್ಲಿ ಬೆಳಕಿನಲ್ಲಿ ಮಹಾ ಬೆಳಕೊಂದು ಗೋಚರಿಸಿ, ಅದರಿಂದ ಹುಟ್ಟಿದ ನುಡಿಯೊಂದು 'ಕೊಲುವುದು ದೇವನ ಭಾಷೆ, ಗೆಲುವುದು ಭಕ್ತನ ಭಾಷೆ' ಎಂದು ಪೃಥ್ವಿಯ ನವಖಂಡಗಳಿಗೆ ಕೂಗಿ ಸಾರುವುದು ಕೇಳಿಸುತ್ತದೆ. ಇದು ಈ ಸುನೀತದ ಸಾರಾಂಶ.

ಈ ಸುನೀತ ಸರಳವಾಗಿದೆ. ಭಾಷೆ ಎಂದರೆ ಆಣೆ, ಪ್ರತಿಜ್ಞೆ ಎಂದು ಅರ್ಥ. ಸಂಸಾರ ಬಂಧಿತ ಜೀವಿಯ ಒಳತೋಟಿ ಮತ್ತು ಅದರ ಊರ್ಧ್ವ ಮುಖಿ ಸಾಧನೆಯ ಅನುಭಾವದ ಹಂತಗಳು ಧ್ವನ್ಯಾತ್ಮಕವಾಗಿ ಚಿತ್ರಿತವಾಗಿದೆ. ಇದು ಶರಣರ ಸಂದೇಶದ ಸಮುದಾಯ ಪ್ರಜ್ಞೆಯೂ

ಮತ್ತು ವೀರವ್ರತವೂ ಆಗಿದೆ. ಕೊಲುವೆನೆಂಬುದು ದೇವನ ಭಾಷೆ, ಗೆಲುವೆನೆಂಬುದು ಭಕ್ತನ ಭಾಷೆ, ಇದು ಎರಡಾಳಿನ ಪರಸ್ಪರ ಸವಾಲಿನ ಭಾಷೆ. ಭಗವಂತ ಸಾಧಕ ಭಕ್ತನಿಗೆ ಒಡ್ಡುವ ಪರೀಕ್ಷೆಗೆ, ಭಕ್ತನ ಶರೀರ, ಅರ್ಥ ಮತ್ತು ಪ್ರಾಣಗಳನ್ನು ಗುರಿ ಮಾಡಿ, ಕಠಿಣವಾದ ಸ್ವಾತ್ಮ ದಂಡನೆಗಳನ್ನು (Self torture) ವಿಧಿಸುತ್ತಾನೆ. ಭಕ್ತ ಭಗವಂತನಿಂದ ಒದಗುವ ಎಲ್ಲಾ ಹಿಂಸೆಗಳನ್ನೂ. ಸಹಿಸಿಕೊಂಡು 'ಎಷ್ಟು ಕಾಡುತೀಯ ಕಾಡಪ್ಪ, ನೀ ಕಾಡಿದಷ್ಟೂ ನನಗೆ ಪಾಡಪ್ಪ' ಎಂದು ಭಗವಂತನಿಗೆ ಮರು ಸವಾಲು ಒಡ್ಡುವ ಸಾಮರ್ಥ್ಯವನ್ನು, ಹಂತ ಹಂತಗಳಲ್ಲಿ ಗಳಿಸಿ ಗಟ್ಟಿಗೊಳ್ಳಬೇಕು. ಆಗ ಭಗವಂತನೇ ತಗ್ಗಿ ಬಗ್ಗಿ ಬಂದು ಭಕ್ತನನ್ನು ಬಾಚಿ ತಬ್ಬಿಕೊಳ್ಳುತ್ತಾನೆ. ಆಗ ಭಗವಂತನ ಕೊಲ್ಲುವ ಮಾತು ಕೊಲ್ಲುವ ಭಾಷೆಯಾಗಿಯೇ ಉಳಿಯುವುದಿಲ್ಲ. ಭಕ್ತನ ಗೆಲುವ ಮಾತೂ ಗೆಲುವಿನ ಭಾಷೆಯಾಗಿಯೆ ಉಳಿಯುವದಿಲ್ಲ. ಇದು ಕೊಲಬಾರದ ಅರಿಗಳ ಗೆಲುವಿನ ಶರಣರ ಕಲಿಗಳ ಭಾಷೆಯಾಗುತ್ತದೆ. ಅದರ ಅನುಭವ ರಿಪುಗಳ ಕೊಳಗುಳ (ರಣರಂಗ)ದ ಅನುಭವವಾಗುತ್ತದೆ. ಇಲ್ಲಿ ರಣರಂಗ ಯಾವುದು ? ರಿಪುಗಳು ಯಾರು ? ಎಂಬ ಪ್ರಶ್ನೆ ಹುಟ್ಟುತ್ತದೆ. ಕಾಳಗ ನಡೆಯುವುದು ಕರಣಗಳಲ್ಲಿ ಕೂಟದ ಕೀಲು ಇರುವುದು ಕುಂಡಲಿಯಲ್ಲಿ. ತೃಪ್ತಿಯ ದಾಳಿ ಗಗನದಲ್ಲಿ ನಡೆಯುತ್ತದೆ. ಅಂದರೆ ಭಕ್ತನಿಗೆ ಶತ್ರುಗಳು ಹೊರಗಿನವರಲ್ಲ, ಭವಿಗಳಲ್ಲ. ತನ್ನ ಒಳಗಿನವರು, ತನಗೆ ತಾನೇ ಶತ್ರು. ಹೋರಾಟ ತನ್ನ ವಿರುದ್ಧವಾಗಿಯೇ. ತನ್ನ ಅಂತರಂಗ ಮತ್ತು ಬಹಿರಂಗವೇ ರಣರಂಗ. ಹೆಣ್ಣು ಹೊನ್ನು ಮಣ್ಣು ಬಹಿರಂಗ ಶತ್ರುಗಳು. ಮನಸ್ಸು, ಬುದ್ಧಿ ಮತ್ತು ಅಹಂಕಾರ ತನ್ನ ಅಂತರಂಗದ ಶತ್ರುಗಳು. ಈ ಎರಡಾಳಿನ ಸಂಘರ್ಷ ಸಾಧಕನಿಗೆ ಆಧ್ಯಾತ್ಮಿಕ ಸಂಘರ್ಷವಾಗಿ, ದ್ವೈತ ಭಾವ ತೊಲಗಿ, ಅದ್ವೈತಾನುಭವವಾಗುತ್ತದೆ. ಶಿವಯೋಗ ಸಿದ್ಧಿಯಾಗಿ ಶಿವ, ಸತ್ಯ ಮತ್ತು ಸೌಂದರ್ಯ ದರ್ಶನವಾಗುತ್ತದೆ. ದೇಹ ದೇವಾಲಯವಾಗಿ, ಆತ್ಮ ಪರಮಾತ್ಮನಾಗಿ, ಪಿಂಡದಲ್ಲಿ ಬ್ರಹ್ಮಾಂಡದ ಅನುಭವವಾಗುತ್ತದೆ. ಇಂಥ ಅನುಭಾವ ವಚನ ರತ್ನರಾಶಿಯ ಅನುಭಾವದಿಂದ ಮಾತ್ರ ಸಾಧ್ಯವಾಗುತ್ತದೆ. ವಚನ ಸಾಹಿತ್ಯದಲ್ಲಿ ಇಂಥ ರೂಪಕಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ.

**ಕೆ.ಜಿ. ನಾಗರಾಜಪ್ಪ.**

# ೩. ಭಾವಜೀವಿ

೧

ಚೆನ್ನವೀರ ಕಣವಿ ಅವರ ಕಾವ್ಯಜೀವಿತದ ಆರಂಭ ಕಾಲದಲ್ಲಿ ಸೃಷ್ಟಿಯಾದ 'ಭಾವಜೀವಿ' (೧೯೫೦) ಈವತ್ತಿಗೂ ನನಗೆ ಪ್ರಿಯವಾದ ಕವಿತೆಗಳಲ್ಲಿ ಒಂದು. ನವೋದಯವು ತನ್ನ ಸಮೃದ್ಧ ಫಸಲಿನಿಂದ ತಣಿದಿದ್ದ ಕಾಲವದು. ಹಾಗೇನೇ ನವ್ಯವು ಉನ್ಮುಖಗೊಳ್ಳುತ್ತಿದ್ದ ಹೊಸ ತಿರುವಿನ ಬೆರಗು ಮತ್ತು ನಿರೀಕ್ಷೆಗಳ ಕಾಲವೂ ಹೌದು. ಕಣವಿಯವರು ನವೋದಯದ ಮಹತ್ವದ ಕೇಂದ್ರಗಳಲ್ಲಿ ಒಂದಾಗಿದ್ದ ಧಾರವಾಡದಲ್ಲಿ ತಮ್ಮ ಕಾವ್ಯಾಕ್ಷಿಯನ್ನು ತೆರೆದವರು. ಗೆಳೆಯರ ಗುಂಪಿನ ಎತ್ತರದ ಗೋಪುರದ ಪಾರದರ್ಶಕ ನೆರಳು ಅವರ ತಲೆಯ ಮೇಲೆ ಇನ್ನೂ ತಂಪು ಸುರಿಯುತ್ತಿದೆ. ಬೇಂದ್ರೆ, ಆನಂದಕಂದ, ಮಧುರಚೆನ್ನರ ಕಾವ್ಯದ ಅಭಯಹಸ್ತ ಅವರ ನೆತ್ತಿಯ ಮೇಲೆ ಇದೆ. ಜೊತೆಗೆ ಗೋಕಾಕರ ಸಾನ್ನಿಧ್ಯ, ಕೀರ್ತಿನಾಥ ಕುರ್ತಕೋಟಿ ಅಂಥವರ ಸ್ನೇಹ.

ಈ ಸಾಹಿತ್ಯಕ ಜಗತ್ತಿನ ಸಮ್ಮರ್ದದ ಸುಖವನ್ನು ಅನುಭವಿಸಿಯೂ ಕಣವಿಯವರು ಏಕಾಂತಪ್ರಿಯರಾದ ಕವಿಯಾಗಿದ್ದಾರೆ. ಅಬ್ಬರ, ಸ್ಪರ್ಧೆಯ ಓಟ ಅವರಿಗೆ ಪ್ರಿಯವಾದವುಗಳಲ್ಲ. ಅವರು ಹೊಸದಾಗಿ ನಗರವನ್ನು ಪ್ರವೇಶಿಸಿದವರು. ಹಿಂದೆ ತಣ್ಣನೆಯ ಹಳ್ಳಿಯ ಬದುಕನ್ನು ಬಿಟ್ಟು ಬಂದಿದ್ದಾರೆ. ಬಾಲ್ಯ ಕಾಲದಲ್ಲಿ ಆ ಹಳ್ಳಿಯ ಜೀವನ ಅವರ ಮೇಲೆ ಗಾಢವಾದ ಪ್ರಭಾವ ಬೀರಿದೆ. ಹಳ್ಳಿಯ ಮುಗ್ಧತೆ, ಪ್ರಾಕೃತಿಕ ಚೆಲುವು, ಜಾನಪದ ಆಚರಣೆಗಳ ಸಂಸ್ಕೃತಿ, ಸಿರಿವಂತಿಕೆ-ಬಡತನ, ಮೇಲು-ಕೀಳಿನ ವಿಷಮತೆ, ದೀನ ದಲಿತರ ಶೋಷಣೆ - ಹೀಗೆ ಪರಸ್ಪರ ಸಂಘರ್ಷಿಸುವ ಗ್ರಾಮ್ಯ ಜೀವನದ ಒಟ್ಟಾರೆ ಬದುಕು ಅವರ ಮೇಲೆ ಗಾಢವಾದ ಮುದ್ರೆಯೊತ್ತಿದೆ. ಆ ವೇಳೆಗೆ ನಾನಾ ಬಗೆಯ ಮಾಯಕ ರೂಪಗಳಲ್ಲಿ ಕಾವ್ಯವೂ ಅವರ ಅಂತರಂಗವನ್ನು ಪ್ರವೇಸಿಸಿ, ಹೊಸ ಹೊಸ ಅಲೆಗಳನ್ನು ಎಬ್ಬಿಸಿದೆ. 'ಭಾವಜೀವಿ' ಎಂಬ ನೀಳ್ಗವಿತೆಯಲ್ಲಿ ಈ ಎಲ್ಲ ವಿವರಗಳೂ ಸಹಜವಾದ ಕಾವ್ಯಲಯದಲ್ಲಿ ಭಾಷೆಯೊಂದಿಗೆ ನಾದಮಯವಾಗಿ ತಳುಕು ಹಾಕಿಕೊಳ್ಳುತ್ತಾ ಪ್ರಕಟವಾಗಿವೆ. ಬೇಂದ್ರೆಯವರ 'ಸಖೀಗೀತ' ಮತ್ತು ಮಧುರ ಚೆನ್ನರ 'ನನ್ನ ನಲ್ಲ' ಕವಿತೆಗಳನ್ನು ಈ ಹೊಸ ಕವಿ ಆಳವಾಗಿ ಅಧ್ಯಯನ ಮಾಡಿರುವುದಕ್ಕೆ ಸಾಕ್ಷ್ಯಗಳೂ ಕವಿತೆಯಲ್ಲಿ ಕಾಣಸುತ್ತವೆ. ಜೊತೆಗೆ ನವ್ಯ ಕವಿ ಗೋಪಾಲಕೃಷ್ಣ ಅಡಿಗರ ಧೂಮಲೀಲೆಯ ಫಾಟೂ ನರನಾಡಿಯಲ್ಲಿ ಪ್ರವಹಿಸಲಿಕ್ಕೆ ಶುರುವಾಗಿದೆ.

ಧಾರವಾಡಕ್ಕೆ ಬಂದ ಮೇಲೂ, ಅನೇಕ ಸಾಹಿತ್ಯ ಮಿತ್ರರು, ಗುರುಗಳೂ ದೊರೆತ ಮೇಲೂ ಕಣವಿಯವರ ಅಂತರಂಗ ಏಕಾಂತಮುಖಿಯಾಗಿಯೇ ಉಳಿದಿದೆ. ಮಾತಿಗಿಂತ ಮೌನವೇ ಅವರಿಗೆ ಪ್ರಿಯವಾಗಿದೆ. 'ಭಾವಜೀವಿ' ಕವಿತೆ, ತೋರಿಸುವದು ಇಂಥ ಪ್ರಾಕೃತಿಕ ಹಿನ್ನೆಲೆಯಲ್ಲಿ.

ಪ್ರಕೃತಿ ಮಾತೆಯ ಮಡಿಲ ಹಸುರು ಕುಸುರಿನ ಮೃದುಲ
ತಲ್ಪದಲಿ ಹಾಯಾಗಿ ಮೈಚಾಚಿರೆ
ಪಡುವಣದ ಬಾನ ದೇಗುಲದೆದುರು ಕಿರುಮೋಡ
ಮೌನದಲಿ ತಲೆಬಾಗಿ ಕೈ ಮುಗಿದಿರೆ

ಪೊಂಜೊಡರು ತೂಗಿದೊಲು ನೆಲ ಬಾನ ತಕ್ಕೆಯಲಿ
ನೇಸರನು ಬಿಡುಗಣ್ಣನಾಗುತಿರಲು
ಸಿಂಗರದ ಬಂಗಾರದಂಗಾರ ಹರಡಿದೊಲು
ಹೊಂಬೆಳಕು ಹೊಡಕರಿಸಿ ಹೊಮ್ಮುತಿರಲು

ಮನಸಿನೇಕಾಂತದಲಿ ಹಗಲುಗನಸಿನ ಸ್ವರ್ಣ
ಮಂದಿರದ ಛಾಯೆಯೊಲು ಚೆಟ್ಟು ಕಾನು
ಗಂಭೀರಗುಂಭದಲಿ ಮೈದುಂಬಿ ನಿಂದಿಹವು
ಎನಿತಲ್ಪ ಜೀವಿಗಳೊ ನೀನು -ನಾನು !

ಕವಿತೆಯ ಆರಂಭದಲ್ಲಿಯೇ ಮುದ್ರಿತವಾಗುವ ಕವಿಯ ನಿಲುವು ಅಹಂಕಾರವನ್ನು ಮರ್ದಿಸಿಕೊಂಡ ಒಂದು ಸಹಜವಾದ ವಿನೀತಭಾವ, ಪ್ರಕೃತಿಯ ಅಗಾಧತೆಯೇ ಈ ವಿನೀತಭಾವದ ಪ್ರಾದುರ್ಭಾವಕ್ಕೆ ಹಿನ್ನೆಲೆಯ ಪ್ರೇರಕ ಶಕ್ತಿಯಾಗಿ ಒದಗುತ್ತದೆ.

ಹಕ್ಕಿಗಳ ಸ್ವಚ್ಛಂದ ಹಾರಾಟ, ಸಂಜೆಯ ವರ್ಣರಂಜಿತ ಆಕಾಶ, ತಂಗಾಳಿಯ ಪ್ರೀತಿಯ ಸ್ಪರ್ಶ ಇವೆಲ್ಲಾ, ಸಂತೆ ಗದ್ದಲದಲ್ಲಿ ಬಳಲಿ ಬೆಂಡಾಗಿದ್ದ ಕವಿಯ ಮನಸ್ಸಿಗೆ ರಸಸೇಚನೆಯನ್ನು ಒದಗಿಸಿವೆ. ಬಾನ ದೇಗುಲ, ಕಿರುಮೋಡ ಮೌನವಾಗಿ ತಲೆ ಬಾಗಿ ನಿಂತಿರುವ ಭಂಗಿ, ಬಳ್ಳಿಗಳಂತೆ ಹಾರುತ್ತಿರುವ ಗಿಳಿವಿಂಡು (ಗೋವಿಂದ ಪೈ ಅವರ ಕವಿತಾ ಸಂಗ್ರಹವೊಂದರ ಹೆಸರು ಕೂಡಾ ಹೌದು), ತಂಗಾಳಿಯ ನಲ್ಮೆಗೈ ಹರಕೆ, ತಿರೆಯ ಆನಂದ ಸಾರುವಂತೆ ಹಕ್ಕಿಗಳ ಹಾರಾಟ- ಇವೆಲ್ಲಾ ಪ್ರಕೃತಿಯ ಸೌಂದರ್ಯವನ್ನು ಮಾತ್ರವಲ್ಲ ದೈವಿಕತೆಯನ್ನೂ ಸೂಚಿಸುವಂತಿವೆ. ಇಂಥ ತಾವಿಗೆ ಶಾಂತಿ ಮತ್ತು ಏಕಾಂತಕ್ಕಾಗಿ ಆಗಮಿಸಿರುವ ಕವಿ 'ತನ್ನ ತಾನೇ ತಿಳಿಯುವ' ಅನುಸಂಧಾನದಲ್ಲಿ ನಿರಹಂಕಾರೀ ನೆಲೆಯಲ್ಲಿ ತೊಡಗಿಕೊಂಡಿದ್ದಾರೆ.

ಚಿಕ್ಕಂದಿನಿಂದಲೂ ಈ ಕವಿ ಭಾವಜೀವಿಯೇ, ಏಕಾಂತ ಪ್ರಿಯರೇ ಊರ ಹೊರಗಿನ ತೋಟ, ಬೇಲಿ, ಪಾತರಗಿತ್ತಿ, ಕಾಡಗಿಡಗಂಟಿಗಳ ಸಂಗ ಬಾಲ್ಯದಲ್ಲೂ ಅವರಿಗೆ ಪ್ರಿಯವಾದುದು. ಬಯಲಾಟ, ಕೋಲಾಟ, ಬೀಸುವ ಕಲ್ಲಿನ ಹಾಡುಗಳು, ಲಂಬಾಣಿ ಜನಾಂಗದ ಕುಣಿತ, ಬಂಡಿಯೋಡಿಸುವ ಆಳುಮಗನ ಲಾವಣಿ, ನಾನಾ ಬಗೆಯ ಜಾನಪದ ಕಥೆಗಳು, ಕವಿಯ ಮಾನಸಿಕ ಸಿರಿವಂತಿಕೆಯನ್ನು ಹೆಚ್ಚಿಸಿವೆ. ಆದರೆ ಕೇವಲ ಈ ಸುಕುಮಾರಲೋಕಕ್ಕೆ ಮಾತ್ರ ಮನಸ್ಸು ತೆರೆದವರಲ್ಲ ಈ ಕವಿ. ಹಳ್ಳಿಯ ಆನೇಕ ಬಗೆಯ ಕೈಕಸುಬುಗಾರರು, ಕಸಿವಿಸಿ ತರುವ ಮಡಿ ಮೈಲಿಗೆಯ ಕಲ್ಪನೆ, ಮಾಸ್ತಿ-ವೀರಗಲ್ಲುಗಳ ಗುಂಭತೆ- ಇವುಗಳೆಲ್ಲಾ ಕವಿಯ ಬಾಲ್ಯದ ಅನುಭವವನ್ನು ವೃದ್ಧಿಗೊಳಿಸಿವೆ. ಆವತ್ತೂ ಮೂರ್ತಿ ಪೂಜೆಯ ಮಾತು ಇವರಿಗೆ ಅಷ್ಟಕ್ಕಷ್ಟೆ. ಭೂಮಾತೆಯಲ್ಲಿ ದೇವರಕಲ್ಪನೆಯಲ್ಲಿ ಉಜ್ಜೀವಿಸುವ ಮನಸ್ಸು ಅವರದು. ಭಾವಜೀವಿಯ ಆರಂಭದ ಭಾಗ ಅಂತಹ ಬಾನ ದೇಗುಲದ ನಿರ್ಮಾಣವನ್ನು ಕಲ್ಪಿಸಿದೆ.

ನಗರ ಜೀವನದ ಇಕ್ಕಟ್ಟು ಅವರನ್ನು ಬಾಲ್ಯಾನುಭವದ ಮರುಕಳಿಗೆ ಮತ್ತೆ ಮತ್ತೆ ಆಹ್ವಾನಿಸುತ್ತದೆ. ಅವರ ಪಾಲಿಗೆ-

**ಬಾಳಸಂಪುಟದಲ್ಲಿ ಬಾಲ್ಯವೆಂಬುವದೊಂದು**
**ಅಳಿಸಲಾರದ ಮಧುರ ಭಾವಗೀತ**
**ಮುಂದೆ ಬಹ ಅನುಭವದ ಕಹಿ ಫಲವನುಣ್ಣುತಿರೆ**
**ಮರುಕಳಿಸಿ ನೆನೆಯುವುದೆ ನಮ್ಮ ಸ್ವಾರ್ಥ.**

ಅನುಭವದ ಕಟುತ್ವದ ಮಾತು ಹಾಗಿರಲಿ. ಧಾರವಾಡ ಜೀವನ ಅವರ ಮನಸ್ಸಿನ ಕ್ಷೇತ್ರಕ್ಕೆ ಅನೇಕ ಹೊಸವಲಯಗಳನ್ನು ಲಗತ್ತಿಸಿದ್ದಂತೂ ಖರೆ. ನಗರದಲ್ಲಿ ಢಾಳಾಗಿ ಕಾಣುವ ಸಿರಿತನ-ಬಡತನದ ಅಂತರ ಮತ್ತು ವಿಷಮತೆ ಅವರನ್ನು ಉದ್ವಿಗ್ನಗೊಳಿಸಿದೆ. ಸಾಂಸ್ಕೃತಿಕ ಜಾತ್ರೆಗಳ (!) ಆಕರ್ಷಣೆ ಅವರಿಗೆ ಉಂಟು. ಆದರೆ ನೂಕು ನುಗ್ಗಲಿನಿಂದ ಸ್ವಲ್ಪ ದೂರವೇ ನಿಂತು ಕೈಮುಗಿಯುವ ಮನಸ್ಸು ಅವರದ್ದು. ಕನ್ನಡ ಸರಸ್ವತಿಯ ಚೆಲುವಾದ ರಥೋತ್ಸವ ಅವರ ಮನಸ್ಸಿನಲ್ಲಿ ಹೊಸ ಕಲ್ಪನೆಯ ಬೀಸುಗಳನ್ನು ಉತ್ಪಾದಿಸಿದೆ. ಅವರ ಸೌಂದರ್ಯಪ್ರಜ್ಞೆ ಈ ವಾತಾವರಣದಲ್ಲಿ ಜಾಗ್ರತವಾಗಿದೆ. ಮನಸ್ಸು ಸಹಜವಾಗಿಯೇ ಪ್ರಕೃತಿಯ ಉಪಾಸನೆಯಲ್ಲಿ ತೊಡಗಿಕೊಂಡಿದೆ. ದೈವದ ಅಭಿವ್ಯಕ್ತಿ ಪ್ರಕೃತಿಯ ಮೂಲಕ ಆಗುತ್ತಿದೆ. ಅವರ ಮನಸ್ಸು ಆ ಅಭಿವ್ಯಕ್ತಿಗೆ 'ನಮೋಸ್ತು' ಎನ್ನುತ್ತದೆ. ಈ ಉಪಾಸನೆಯೇ ಅಂತರಂಗದ ಶುದ್ಧಿಗೆ ಕಾರಣವಾಗಿ, ಬೌದ್ಧಿಕತೆಯನ್ನು ಕವಿಯಲ್ಲಿ ಜಾಗರಿಸಿದೆ. ಅಂತಹ ಬೌದ್ಧಿಕತೆ ಮೌಢ್ಯ ಜಾಡ್ಯಗಳನ್ನು ಪ್ರಶ್ನಿಸಿ, ವೈಚಾರಿಕತೆಯನ್ನು ಸಾಧಿಸುತ್ತದೆ. ಈಗ ಈ ಭಾವಜೀವಿಯ ಅಂತರಂಗ, ವೈಚಾರಿಕತೆಯಿಂದ ಹೊಸ ಧೀಮಂತಿಕೆಯನ್ನು ಸಾಧಿಸುತ್ತದೆ. ಈ ಧೀಮಂತಿಕೆ ಸೃಷ್ಟಿಯ ಇನ್ನೊಂದು ಮುಖವನ್ನು ಕವಿಯೆದುರು ಅನಾವರಣಗೊಳಿಸುತ್ತದೆ.

ಉಳ್ಳವರ ನಿರ್ದಯದ ಕಲ್ಲು ಗಾಣದ ಹೀನ
ಕೃತ್ಯದಲಿ ನಿರಿನಿಟಿಲು ಬಡವರೆದೆಯು ;
ಕ್ಷಾಮಡಾಮರ ಭೀಮಗದೆಯನಪ್ಪಳಿಸುತಿರೆ
ನಿತ್ರಾಣವಾಗುತಿದೆ ದಲಿತ ಜನವು.

ಅನ್ನದನ್ಯಾಯದಲಿ ಕರುಳು ಕುದಿದೇಳುತಿರೆ
ಸದೆಬಡಿಯಲುದ್ವೇಗ ಕೆರಳುತಿಹುದು;
ವಿಧಿ ನಿಷೇಧದ ಕಟ್ಟು ಕಟ್ಟಳೆಯ ಹುಟ್ಟಳಿಸಿ
ಹೊಸ ಸಮಾಜವ ಕಟ್ಟ ತೋರಬಹುದು.

ಸಮಾಜ ಮತ್ತು ಜನರಹಿತ ಪ್ರಕೃತಿ ಈ ಎರಡರ ಮಧ್ಯೆ ಎಡತಾಕುತ್ತಾ ಕವಿಯ ಮನಸ್ಸು ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುತ್ತಾ ಇದೆ. ಸಮಾಜ ಸೇವೆಯಲ್ಲಿ ಕೃತಾರ್ಥರಾದ ಹಿರಿಯರ ಬಗ್ಗೆ ಗೌರವ; ಡಾಂಭಿಕರ ವಿರುದ್ಧ ಪುಟಿದೇಳುವ ಕ್ರೋಧ ಇದು ಆವತ್ತಿನ ಕವಿಯ ಮನಃಸ್ಥಿತಿ.

ಕನ್ನಡ ಕಾವ್ಯದ ಜೊತೆ ಜೊತೆಗೇ ಈಗ ಇಂಗ್ಲೀಷ್ ಕಾವ್ಯದ ಅಧ್ಯಯನವೂ ನಡೆದಿದೆ. ಷೆಲ್ಲಿ ಆ ದಿನಗಳಲ್ಲಿ ಅವರ ಅಂತರಂಗದ ಕವಿಯಾಗುತ್ತಾನೆ. ಸ್ವಾರ್ಥವಿರದ ಪ್ರೇಮವನ್ನು ಷೆಲ್ಲಿ ಮತ್ತು ಬೇಂದ್ರೆಯಂತೆ, ಕಣವಿಯವರೂ ಒಂದು ಶ್ರೇಷ್ಠ ಜೀವನಮೌಲ್ಯವಾಗಿ ಸ್ವೀಕರಿಸುತ್ತಾರೆ. ದರ್ಶನವಿಶುದ್ಧಿಯೊಂದಿಗೆ ಚೆಲುವಿನ ಆರಾಧನೆಯನ್ನು ನಡೆಸಬೇಕೆಂದು ಸಂಕಲ್ಪಿಸುತ್ತಾರೆ. ಭಾವನೆ ಮೊದಲು ; ಬುದ್ಧಿ ಅದರಡಿಯಾಳು ಎನ್ನುವುದು ಕವಿಯ ನಿಲುವು.

ಈ ಹೊತ್ತಿನಲ್ಲೇ ಚೆಲುವಿನ ಪ್ರತಿನಿಧಿಯಾಗಿ ಒಬ್ಬ ಚೆಲುವೆಯೂ ಕವಿಯ ಜೀವಿತದಲ್ಲಿ ಪ್ರವೇಶ ಪಡೆಯುತ್ತಾಳೆ. ಅವಳ ಚೆಲುವಿನ ವರ್ಣನೆ ಉದ್ದಕ್ಕೂ ಆಧ್ಯಾತ್ಮಿಕ ಪರಿಭಾಷೆಯನ್ನೇ ಅವಲಂಬಿಸುತ್ತದೆ! ಚೈತ್ಯಾಕ್ಷಿ, ಅರುಣೋದಯ, ಆನಂದದೂರ್ಮಿ, ಚಿನ್ಮಾತೃಕೆ ಮೊದಲಾದ ಪದಗಳು ಧಾರಾಳವಾಗಿ ಪ್ರಯೋಗಗೊಳ್ಳುತ್ತವೆ. ರೂಢಿ ರಾಕ್ಷಸ ಈ ಸಂಬಂಧವನ್ನು ಭಗ್ನಗೊಳಿಸುತ್ತಾನೆ. ಈ ಸಮಾಜವೊ ನಿಂತ ನೀರು ಕೊಳಚೆ ಎಂದು ಕವಿ ಆಕ್ರೋಶ ವ್ಯಕ್ತಪಡಿಸುತ್ತಾರೆ. ಸಮಾಜದ ಕರಾಳತೆಯ ಸ್ವರೂಪ ಸ್ಪಷ್ಟವಾಗಿ ಕವಿಯ ಅರಿವಿಗೆ ಬರುವುದು ಅವರ ಖಾಸಗಿ ಬದುಕಿನ ದುರಂತ ಒಂದರಿಂದ ಎಂಬುದು ಗಮನಿಸಬೇಕಾದ ಅಂಶ.

ಕವಿಯ ಖಾಲಿಯಾದ ಭಾವಕೋಶವನ್ನು ಈಗ ತುಂಬುವವರು ಆಪ್ತ ಗೆಳೆಯರು. ಪ್ರೇಮಯೋಗಿ ಈಗ ಸ್ನೇಹಯೋಗಿಯಾಗುತ್ತಾರೆ. ಸಖ್ಯವಿಲ್ಲದ ಜೀವ ಲಕ್ಷ್ಯವಿಲ್ಲದ ಬಾಣ - ಎನ್ನುವಂತಹ ಹೇಳಿಕೆಗಳು ಮಾತನ್ನು ತಬ್ಬಿಕೊಂಡು ಬರುವ ಕಾವ್ಯ ಪಕ್ವತೆ ಬೆರಗು ಹುಟ್ಟಿಸುತ್ತದೆ. ನಾನಾ ಬಗೆಯ ಚಿಂತೆಗಳಲ್ಲಿ ಬೆಂದ ಮನಸ್ಸು ಹಣ್ಣಾಗತೊಡಗುತ್ತದೆ. ಆಗ ಆ ನೋವಿನ

ಅಭಿವ್ಯಕ್ತಿಗೆ ಏಕತಾರಿಯಂತೆ ಕಾವ್ಯ ಕವಿಗೆ ಒದಗಿಬರುತ್ತದೆ. ಹೆಣ್ಣಿನೊಂದಿಗೆ ಬೇರೆ ಬಗೆಯ ಸಂಬಂಧದ ಅನುಸಂಧಾನವೂ ಕವಿಗೆ ಸಾಧ್ಯವಾಗುತ್ತದೆ.

ತಂಗಿಯೋರ್ವಳು ಪರಮ ಕಾರುಣ್ಯದಾಯಿನಿಯು
ಒಡಹುಟ್ಟಿಗಿಂತಲೂ ಮಿಗಿಲಾಗಿಸಿ
ನಿರ್ಮಲಾಂತಃಕರಣಕೆನ್ನಮತಿಯನುಗೊಳಿಸಿ
ಸಂತವಿಸೆ, ಶ್ರದ್ಧೆಯಲಿ ತಲೆ ಬಾಗಿದೆ.
ಭಾವಶುದ್ಧಿಯ ಪಡೆದು ಬಳಗಬಳ್ಳಿಯ ತೆರದಿ
ಹಬ್ಬುತಿರೆ ನೂರೆಂಟು ನೋವ ಮರೆತೆ.

ಮುಂದಿನ ದಿನಗಳೆಂದರೆ ಕವಿ, ಕಾವ್ಯರಚನೆಯಲ್ಲಿ ಗಂಭೀರವಾಗಿ ತೊಡಗಿಕೊಂಡ ದಿನಗಳು, ಒಬ್ಬಾಳಿನ ಹಿರಿಮೆಯನ್ನು ಕವಿ ಕಂಡುಕೊಂಡಿದ್ದಾರೆ. ನಿಧಾನವಾಗಿ ಅದೇ ಅವರ ಜೀವನದರ್ಶನವೂ ಆಗಿ ರೂಪುಗೊಳ್ಳುತ್ತಿದೆ.

ದುಃಖ ದುಗುಡಗಳನ್ನು ಮಿಕ್ಕು ಮೀರಲುಬಹುದು
ದರ್ಪಸರ್ಪದ ವಿಷವ ಹಿಳಿಯಬಹುದು
ಬಂಧುಭಾವದೊಳಿಂತು ಒಂದುಗೂಡುತ ಬಾಳ
ಆನಂದದರಮನೆಯ ಗೈಯಬಹುದು.

ಮನಸ್ಸಿನ ಒಂದು ಶಮಸ್ಥಿತಿಯಲ್ಲಿ ಧಾರವಾಡದ ನೆಲ ಅವರಿಗೆ ತಾಯಿಯ ಪ್ರೀತಿಯನ್ನು ಒದಗಿಸುತ್ತಿರುವ ಅನುಭೂತಿ ಉಂಟಾಗುತ್ತಿದೆ. ಹಳ್ಳಿಯಿಂದ ಈ ಧಾರವಾಡ ನಗರಕ್ಕೆ ಬರುವಾಗಿದ್ದ ಅತಂತ್ರ ಸ್ಥಿತಿ ಈಗ ಮಾಯವಾಗಿದೆ. ಧಾರವಾಡದ ಪ್ರಕೃತಿ ಮತ್ತು ಸಮಾಜ ಅವರಿಗೆ ಪ್ರಿಯವಾಗುತ್ತದೆ. 'ದತ್ತ'ವಾಣಿಗೆ ಎದೆಯು ಕೋಡುತಿಹುದು ಎಂದು ಬರೆಯುತ್ತಲೇ ನೆಲದಾಯ ಕರುಣೆಯ ಹಸುರು ಸಾಮ್ರಾಜ್ಯದ ಬಗ್ಗೆಯೂ ಬರೆಯುತ್ತಾರೆ.

ಸುಖದ ಮಿಂಚಿನ ಹಿಂದೆ ದುಃಖ ಗುಡುಗಾಡುತ್ತಿರುವ ಅನುಭವ ಕವಿಯನ್ನು ಕಾಡುತ್ತದೆ. ಒಳಿತಿನ ಶಕ್ತಿಯನ್ನು ಮೈಗೂಡಿಸಿಕೊಳ್ಳುವ ಮೂಲಕ ಸಾರ್ಥಕ ಬದುಕಿನ ಅನುಸಂಧಾನ ಸಾಧ್ಯ ಎಂಬ ನಿಲುವಿಗೆಬರುತ್ತಾರೆ. ನಮ್ರತೆಯ ಜಿಜ್ಞಾಸೆಯೇ ಅವರ ಕಾವ್ಯಮಾರ್ಗವಾಗುತ್ತದೆ. ಈ ನಮ್ರತೆ ಎನ್ನುವ ಮಾತಿನ ಪ್ರಯೋಗದ ನಂತರ ಕವಿಗೆ ಮಾತ್ರ ಸಾಧ್ಯವಾಗುವ ವಿನಯದ ಅದ್ಭುತ ಕಾವ್ಯಾನುಸಂಧಾನದ ನಾಲ್ಕು ಪದ್ಯಗಳಿವೆ.

ಲೆಕ್ಕವಿಲ್ಲದ ಜನರ ಹೊತ್ತು ತಿರುಗುತ್ತಿರುವ
ನೆಲದ ಹುಡಿಯಲ್ಲಿ ನಾನೊಂದು ಕಣವು
ಬಾನ್ನೆಲವ ಸುತ್ತಿ ನೆರೆಮುತ್ತಿ ಘೂರ್ಮಿಸುತಿರುವ
ಬೆಂಗಾಡ ಬಿರುಗಾಳಿಯೊಂದು ಅಣುವು.

ಭುಲ್ಲವಿಸಿ ಬಲ್ದೆರೆಗಳೆದ್ದು ಹೊಯ್ದಾಡುತಿಹ
ಕಡಲಾಳದಲ್ಲಿ ನಾನೊಂದು ಹನಿಯು
ಇಕ್ಕೆಲದಿ ಎಕ್ಕೆಕ್ಕಿ ಗಜರಿ ಗರ್ಜಿಸುತಿರುವ
ನೀರ್ ಬೀಳಿನಲಿ ಸಿಡಿವ ಜಿನುಗು ಹನಿಯು.

ದಟ್ಟೈಸಿ ಹಳುಬೆಳೆದ ಕಟ್ಟರಣ್ಯದ ನಡುವೆ
ತರುಗುಲ್ಮಗಳಲಿ ನಾನೊಂದು ಎಲೆಯು,
ಅಂತವಿಲ್ಲದ ಗಗನ ವಿಸ್ತೀರ್ಣದಲಿ ತೇಲಿ
ಲೀನವಾಗುವ ಮೋಡದೊಂದು ಎಳೆಯು.

ಜಗದೆಲ್ಲ ಜನರ ಮಿಗ ಹಕ್ಕಿಗಳ ಕೀಟಗಳ
ಗಜಬಜೆಯ ಗದ್ದಲದಲೊಂದು ದನಿಯು,
ಮದಮೋಹ ಮಾತ್ಸರ್ಯ ಕೋಪ ತಾಪಂಗಳಿಗೆ
ಹತಿಗೊಂಡ ಖತಿಗೊಂಡ ಸೀಳು ತಲೆಯು.

ಕವಿತೆಯ ಆರಂಭದಲ್ಲಿ ಇದೇ ಪ್ರಕೃತಿಯ ಪಂಚಮತ್ತ್ವ ಕವಿಗೆ ದ್ವೈತದ ನೆಲೆಯ ಆರಾಧನೆಯ ವಸ್ತುವಾಗಿತ್ತು. ಕವಿತೆಯ ಕೊನೆಯಲ್ಲದು ಅದ್ವೈತದ, ಏಕೀಭವಿಸುವ ಸಂಗಮದ ನೆಲೆಯಾಗಿ ಪರಿವರ್ತಿತವಾಗಿದೆ. ಆ ಏಕೀಕರಣದಲ್ಲೂ, ತನ್ನ ಅಣುತ್ವವನ್ನು ಪ್ರಜ್ಞೆಯಿಂದ ರೂಢಿಸಿಕೊಳ್ಳುವ ಅಸ್ಮಿತೆಯ ಅನುಸಂಧಾನವನ್ನು ಕವಿ ಬಿಟ್ಟುಕೊಟ್ಟಿಲ್ಲ.

'ಭಾವಜೀವಿಯು ನಾನು' - ಎಂದು ಘೋಷಿಸುವುದಕ್ಕೆ ಕವಿ ಈಗ ಹಿಂಜರಿಯುವುದಿಲ್ಲ. ಅವರ ಎದೆಯಲ್ಲಿ ಹೊಸಕನಸುಗಳ ಕಲ್ಪವೃಕ್ಷವೇ ಮೈದಾಳಿದೆ. ಇದೊಂದು ಅಂತರಂಗದ ನೀಲಿನಕ್ಷೆ. ಇದನ್ನು ಆಧರಿಸಿ ಹೊಸ ಸಮಾಜ ಮತ್ತು ಮಾನವೀಯ ಸಂಬಂಧವನ್ನು ಕಟ್ಟಲು ಕವಿಯ ಮನಸ್ಸು ಸಂಕಲ್ಪಿಸುತ್ತಿದೆ.

ನನ್ನ ಬಗೆಯನೆ ಬಗಿದು ಹೊಗುವ ಭರದಲ್ಲಿರಲು
ಬಗೆಬಗೆಯ ಅನುಭವವು ಬಂದುದುಂಟು.
ಅದರ ತಿಳಿಯೊಂದಿನಿತು ನನ್ನ ನುಡಿಯೊಳಗಿಳಿದು
ಬಂದಿರಲು ಜೀವಕ್ಕೆ ಹರುಷವುಂಟು !

ಹೀಗೆ ಆರಂಭದಲ್ಲೇ ಸ್ವಂತಿಕೆಯ ಶೋಧ ಮತ್ತು ಒಳಬಾಳಿನ ದರ್ಶನಕ್ಕೆ ಕವಿ ಕಣವಿಯವರು ಸಿದ್ಧರಾಗಿದ್ದಾರೆ. ಬೇಂದ್ರೆ, ಕುವೆಂಪು, ಪುತಿನ, ಅಡಿಗ ಮೊದಲಾದ ಘನವಾದ

ಕಾವ್ಯ ವ್ಯಕ್ತಿತ್ವಗಳಿಗೆ ಮುಖಾಮುಖಿಯಾಗಿಯೂ ಕಣವಿಯವರ ಸಾತ್ವಿಕ ತೇಜಸ್ಸು ಸ್ವಲ್ಪವೂ ಮಂಕಾಗಿಲ್ಲ. ಕಾರಣ, ಹಿರಿಯರಿಗೆ ವಂದನೆ ಹೇಳಿ, ತನ್ನ ದಾರಿಯಲ್ಲಿ ತಾನು ಮುನ್ನುಗ್ಗುವ ತಂತ್ರ ಕಣವಿಯವರಿಗೆ ಯಾವತ್ತಿನಿಂದಲೂ ಕೈವಶವಾಗಿದೆ.

ಕಣವಿ ಈವತ್ತು ನಮ್ಮ ನಾಡಿನ ಮಹತ್ವದ ಕವಿಗಳಾಗಿ, ನಮ್ಮಂಥ ಅನೇಕ ಕಿರಿಯರಿಗೆ ಆದರ್ಶರಾಗಿರುವ ಹಿನ್ನೆಲೆಯಲ್ಲಿ, 'ಭಾವಜೀವಿ'ಯಂಥ ಆರಂಭಿಕ ಕವಿತೆಯಲ್ಲೇ ಕಂಡುಬರುವ ಆತ್ಮಪ್ರಜ್ಞೆಯ ಎಚ್ಚರ, ಹಿರಿದಾದುದರ ಬಗ್ಗೆ ಗೌರವ, ಒಬ್ಬಾಳಿನಲ್ಲಿ ಒಂದಾಗಿ ನವನಿರ್ಮಾಣದ ಅನುಸಂಧಾನ ಮಾಡಬೇಕೆನ್ನುವ ವಿನಯಮೂಲವಾದ ಅನುಸಂಧಾನ ಸಕಾರಾತ್ಮಕ ನಿಲುವುಗಳಿಗೆ. ಅದು ಅಸ್ತಿವಾರದಿಂದಲೇ ಕಟ್ಟಿಕೊಂಡು ಬಂದ ಸಂಸ್ಕಾರ. ಕಾಲಕ್ಕೆ ತಕ್ಕಂತೆ ತಾಳ ಹಾಕುವ ತತ್ಕಾಲೀನ ತುರ್ತುಗಳ ಪರಾಂಬರಿಕೆಯಲ್ಲ.

**ಎಚ್.ಎಸ್. ವೆಂಕಟೇಶ ಮೂರ್ತಿ**

# ೪. ಆಕಾಶಬುಟ್ಟಿ

೧

ಹೊಗೆ ತುಂಬಿ
ನಗೆ ತುಂಬಿ
ಬಣ್ಣಬಣ್ಣದ ನವಿರು ಕಾಗದದ ಬುಟ್ಟಿಯಲಿ
ಜೀವತುಂಬಿ,
ದೂರ ಹಾರುವುದೆಂಬ ಭರವಸೆಯು ನಂಬಿ,
ನಮ್ಮ ಹಿರಿಯಾಸೆಗಳ ಉರಿವ ಕಕ್ಕಡವಿಟ್ಟು
ಉತ್ಸಾಹ ಸಾಹಸಕೆ ರೂಪುಗೊಟ್ಟು
ಮೇಲುನಾಡಿಗೆ ತೇಲಿಬಿಟ್ಟೆವಿದೊ ಚೈತನ್ಯದಾಕಾಶ ಬುಟ್ಟಿ !
ಏರುವುದೋ
ಇಳಿಯುವುದೋ
ಗಾಳಿಯಾಘಾತದಲಿ ಜೋಲಿ ಹೊಡೆದುರುಳುವುದೋ?
ಮೈ ಸುಟ್ಟುಕೊಳ್ಳುವದೋ,
ಕಾಣಲಾರದ ಕೊಳ್ಳದಾಳದಲಿ ಬೀಳುವುದೋ
ಆರು ಕಂಡಿಹರಿದನು?
ತಿಳಿಯಲಾರದ ಹದನು!
ಆದರೂ ಆದರೂ ಹಾರಿಸಿದೆವಿದನು!
ಹುಡುಗತನದುತ್ಸಾಹ ಕೊನೆಬಲ್ಲುದೇನು?

೨

ಆಕಾಶದ ಪ್ರಕಾಶದಲಿ ಎದೆಯ ತೆರೆದು
ಇಳೆಯ ಬಾಳಿನ ಹಂಗು ನೂಲು ಹರಿದು
ಮೇಲೆ ತೇಲಾಡುವುದ ಕಣ್ಣಾರೆ ಕಂಡು
ನನ್ನ ಬಗೆಯಾಶೆಗಳು ರೆಕ್ಕೆಗೊಂಡು

ಅಂಧಂ ತಮಸ್ಸಿನಲು ಬೆಳಕನುಂಡು
ಮುಗಿಲಲ್ಲಿ ಬಿತ್ತಿರುವ ಮುತ್ತುಗಳ ಬೆಳೆಯು
ಹಾಲುಗಾಳನು ಬಯಸಿ ಹಾರುತಿವೆ ಗೆಳೆಯ!
ಅದೋ ! ನೋಡು ನೋಡು
ಚಿಕ್ಕೆಗುರಿ ಬೆಂಬತ್ತಿ ಸಾಗಿರುವ ಕಿರುದೀಪಕಾವ ಕೇಡು?
ಇಳೆಯ ಬಾಳರಳಿ ಬಂಗಾರ ಬರಣಿಯು ತೇಲಿ
ಬೆಳ್ಳಿ ಚಿಕ್ಕೆಗೆ ತೆಕ್ಕೆ ಹಾಕಿಹುದು ನೋಡು!
ಬೆಳಕು ಬೆಳಕಿಗೆ ಮುತ್ತು ಕೊಟ್ಟಿಹುದು
ಆ ಪ್ರೀತಿ ಸೌರಭವೆ ತೋಳಬಂದಿ!
ಸೌಂದರ್ಯದಾನಂದವಿಲ್ಲಿ ಬಂಧಿ.

೩
ದೀನ ಮಾನವ ರಚಿತ ಆಕಾಶಬುಟ್ಟಿ
ದಾನವರ ಬಿರುಗಾಳಿ ದಾಳಿಯನು ಮೆಟ್ಟಿ
ಬಾವನರನಪ್ಪಿ ಒಂದಾಗಿಹುದು ನೋಡು!
ನೋಡಿದೆಯ ಕವಿಯೆ?
ಊರ್ಧ್ವಮುಖಿಗಲ್ಲದಿದು ಉಳಿದವರಿಗಳವೆ?
ಆತ್ಮಬಲದೆದುರು ಮೇಣುಳಿದ ಬಲವೆ?
ಆಕಾಶಬುಟ್ಟಿಯೊಲು ಏಕಾಕಿಯಾದರೂ
ಎದೆಗೆದೆಯ ಹೊಂದೀಪ ಉದ್ದೀಪನಂಗೊಂಡು
ಬಾಳದ್ವೀಪವ ಬೆಳಗುವಂತೆ ಹಾಡು
ಎಂದೆಂದು ನೀನಿಂಥ ಹಾಡ ಹಾಡು!

ಕಣವಿಯವರ ಮೂರನೆಯ ಸಂಗ್ರಹ 'ಆಕಾಶಬುಟ್ಟಿ' (೧೯೫೩)ಯಿಂದ ಇದನ್ನು ಆಯ್ದುಕೊಳ್ಳಲಾಗಿದೆ.

ಮೇಲುನೋಟಕ್ಕೆ ತೋರುವಂತೆ ಈ ಕವಿತೆ 'ಆಕಾಶಬುಟ್ಟಿ' ಅಥವಾ 'ಗೂಡುದೀಪ'ವೆಂದೋ ಕರೆಯಿಸಿಕೊಳ್ಳುವ ಒಂದು ವಸ್ತು ವಿಶೇಷವನ್ನು ಕುರಿತದ್ದು. ದೀಪಾವಳಿ ನರಕಚತುರ್ದಶಿಯಿಂದ ಮೊದಲ್ಗೊಂಡು ಉತ್ಥಾನ ದ್ವಾದಶಿಯವರೆಗೆ ಸಂಜೆಯ ಹೊತ್ತು ಮನೆ ಮನೆಗಳ ಮುಂದೆ ಎತ್ತರೆತ್ತರಗಳಲ್ಲಿ ಆಕಾಶಬುಟ್ಟಿ ಅಥವಾ ಗೂಡುದೀಪಗಳನ್ನು ತೂಗಾಡಿಸುವ ಸಂಪ್ರದಾಯ ನಮ್ಮಲ್ಲಿದೆ. ಅವುಗಳ ವಿನ್ಯಾಸ ಗಾತ್ರಗಳಲ್ಲೂ ವರ್ಣಮಯತೆಯಲ್ಲೂ ವೈವಿಧ್ಯವಿರುತ್ತದೆ. ಒಂದು ಕಾಲದಲ್ಲಿ ಮನೆ ಮಂದಿಯೇ ಹೆಚ್ಚಾಗಿ ಉತ್ಸಾಹಿ ಬಾಲಕರು - ಗೂಡುದೀಪಗಳನ್ನು ಕೈಯಾರೆ

ಸಿದ್ಧಪಡಿಸುತ್ತಿದ್ದರು. ನಾನಾ ಆಕಾರಗಳಲ್ಲಿ ಬಿದಿರಿನ ಕಡ್ಡಿಗಳನ್ನು ಕಟ್ಟಿ, ಬಣ್ಣದ ಕಾಗದಗಳನ್ನು ಹಚ್ಚಿ ತಯಾರಿಸಿದ ಗೂಡುಗಳ ಒಳಗೆ ಹಣತೆಯನ್ನು ಹಚ್ಚಿರಿಸಿ ಆಕಾಶಕ್ಕೆ ಏರಿಸುವ ಹುಡುಗರ ಉಲ್ಲಾಸ ಅಸೀಮ ವರ್ಣನಾತೀತ.

ಕಣವಿಯವರಿಗೆ ಕವಿತೆ, ಆಕಾಶಬುಟ್ಟಿಯನ್ನು ಕುರಿತದ್ದು ನಿಜ ; ಆದರೆ ಅದೊಂದೇ ಅವರ ಲಕ್ಷ್ಯವಲ್ಲ. ಅವರಿಗೆ ಅದೊಂದು ಸಂಕೇತ; ಮನುಷ್ಯನ ಆಶೋತ್ತರಗಳನ್ನು ಉದ್ದೇಶಿಸಿದ್ದು, ಅದನ್ನು ಉದ್ದೀಪಿಸತಕ್ಕದ್ದು. ಅಷ್ಟೇ ಅಲ್ಲ, ಅದು ಕಣವಿಯರ ಜೀವನಾದರ್ಶಗಳಿಗೂ ಕುಶಲತೆಗೂ ಒಂದು ನಿದರ್ಶನವೂ ಆಗಿದೆ. ಇಂಗ್ಲೀಷಿನಲ್ಲಿ Sky rocetting ಎಂಬ ವಾಗ್ರೂಢಿಯಿದೆ. 'ಆಕಾಶಬುಟ್ಟಿ' ಕಣವಿಯವರನ್ನು ತನ್ನಡ ಕಾವ್ಯಾಕಾಶದಲ್ಲಿ ಎತ್ತರಕ್ಕೆ ಹಾರಿಸಿದ, ಅದರ ಬಿತ್ತರದಲ್ಲಿ ಅವರನ್ನು ಮೆರೆಯಿಸಿದ ಕವಿತೆಯೆಂದು ನನ್ನ ಭಾವನೆ.

'ಆಕಾಶಬುಟ್ಟಿ' ಸಂಪೂರ್ಣ ಮುಕ್ತವಲ್ಲದ, ಮಿಶ್ರಛಂದದಲ್ಲಿರುವ ಕವಿತೆ. ಕವಿತೆಯ ಆರಂಭದೊಂದಿಗೇ ಕವಿ ಸಹೃದಯನನ್ನು ತೆಕ್ಕನೆ ಮೇಲಕ್ಕೆತ್ತಿ ತನ್ನೊಂದಿಗೇ ಭಾವಲೋಕದ ವಿಹಾರಕ್ಕೆ ಕರೆದೊಯ್ಯುತ್ತಾನೆ:

**ಹೊಗೆ ತುಂಬಿ,**
**ನಗೆ ತುಂಬಿ**
**ಬಣ್ಣಬಣ್ಣದ ನವಿರು ಕಾಗದದ ಬುಟ್ಟಿಯಲಿ**
**ಜೀವ ತುಂಬಿ**
**ದಾರ ಹಾರುವುದೆಂಬ ಭರವಸೆಯ ನಂಬಿ**
**ನಮ್ಮ ಹಿರಿಯಾಸೆಗಳ ಉರಿವ ಕಕ್ಕಡವಿಟ್ಟು**
**ಉತ್ಸಾಹ ಸಾಹಸಕೆ ರೂಪುಗೊಟ್ಟು**
**ಮೇಲು ನಾಡಿಗೆ ತೇಲಬಿಟ್ಟೆವಿದೊ ಚೈತನ್ಯಾದಾಕಾಶ ಬುಟ್ಟಿ!**

ಎಂಬ ಆರಂಭದ ಪಂಕ್ತಿಗಳೇ ಕವಿಯ ಉನ್ಮುಖಿ ಪ್ರತಿಭೆಯನ್ನು ಊರ್ಧ್ವಗಾಮಿ ಪ್ರವೃತ್ತಿಯನ್ನು ಪ್ರತಿಮಿಸುತ್ತದೆ. ವೈಜ್ಞಾನಿಕ ವಿಶ್ವದಲ್ಲಿ ವ್ಯೋಮನೌಕೆಗಳನ್ನು ಯಶಸ್ವಿಯಾಗಿ ಉಡಾಯಿಸುವುದಿಲ್ಲವೇ ಹಾಗೆ 'ಆಕಾಶಬುಟ್ಟಿ'ಯ ಮೊದಲ ಪದ್ಯ ಒಂದು ಉಲ್ಲಂಘನ ಚಿತ್ರಣ. ಉಪಗ್ರಹ ತನ್ನ ಕಕ್ಷೆಯನ್ನು ಸುಗಮವಾಗಿ ಸೇರಿದಾಗ ಭೌತವಿಜ್ಞಾನಿಗಳಿಗೆ ನಿರಾತಂಕ. ಕವಿ ಕಣವಿ ಹೇಳುತ್ತಾರೆ.

**ಏರುವದೊ**
**ಇಳಿಯುವುದೋ**
**ಗಾಳಿಯಾಘಾತದಲಿ ಜೋಲಿ ಹೊಡೆದುರುಳುವುದೋ ?**
**ಮೈಸುಟ್ಟುಕೊಳ್ಳುವುದೋ,**

**ಕಾಣಲಾರದ ಕೊಳ್ಳದಾಳದಲಿ ಬೀಳುವದೊ**
**ಆರು ಕಂಡಿಹರಿದನು?**
**ತಿಳಿಯಲಾರದ ಹದನು!**
**ಆದರೂ ಆದರೂ ಹಾರಿಸಿದೆವಿದನು!**
**ಹುಡುಗತನದುತ್ಸಾಹ ಕೊನೆಬಲ್ಲುದೇನು?**

'ನೇಗಿಲಕಲಿ' ಬೀಜ ಬಿತ್ತುವಾಗಲೂ ತೋಟಿಗ ಗಿಡ ನೆಡುವಾಗಲೂ 'ಇದು ಮೊಳಕೆಯೊಡೆಯದು', 'ಇದು ಬೆಳೆದು ಹೂ ಬಿಡಲಾರದು.', ಎಂಬ ಆಶಂಕೆಗೆ ಅವಕಾಶವೇ ಇರುವುದಿಲ್ಲ. ಎಲ್ಲ ಉದ್ಯಮ, ಎಲ್ಲ ಪ್ರಯತ್ನ ಎಲ್ಲ ಸಾಹಸಗಳ ಹಿಂದೆಯೂ ಭರವಸೆ -ಫಲ ನಿರೀಕ್ಷೆ ಇದ್ದೇ ಇರುತ್ತದೆ. 'ಆಕಾಶಬುಟ್ಟಿ'ಯ ಮೊದಲ ಪದ್ಯದ ಉತ್ತರಾರ್ಧ ಅಂತಹ ಭರವಸೆಯನ್ನು, ನಿರೀಕ್ಷೆಯನ್ನು ನಿರೂಪಿಸುತ್ತದೆ.

ಎರಡನೆಯ ಪದ್ಯ :

**ಆಕಾಶದ ಪ್ರಕಾಶದಲಿ ಎದೆಯ ತೆರೆದು**
**ಇಳೆಯ ಬಾಳಿನ ಹಂಗು ನೂಲು ಹರಿದು**
..........................................
**ಆ ಪ್ರೀತಿ ಸೌರಭವ ತೋಳಬಂದಿ!**
**ಸೌಂದರ್ಯದಾನಂದವಿಲ್ಲಿ ಬಂದಿ.**

-ಆಕಾಶಬುಟ್ಟಿ ಮೇಲಕ್ಕೇರಿದೆ; ಆಗಸದ ಅಗಲದಲ್ಲಿ ತನ್ನ ಎದೆ ತೆರೆದು ತೊನೆದಾಡುತ್ತಿದೆ. ಈಗ ಅದಕ್ಕೆ ನೆಲದ ಹಂಗಿಲ್ಲ. ಬಿಡುಗಡೆಯ ಸಡಗರ. ರಸ ಋಷಿ ಕುವೆಂಪು 'ಮಹಾಶ್ವೇತೆಯ ತಪಸ್ಸು" ಎಂಬ ತಮ್ಮ ಗದ್ಯ ಪ್ರಬಂಧವನ್ನು ' ಮನುಷ್ಯನ ಮನಸ್ಸು ಊರ್ಧ್ವಮುಖಿ" ಎಂದು ಪ್ರಾರಂಭಿಸುತ್ತಾರೆ. 'ನಯದ ಪತಾಕೆ' ವಿ.ಸೀ. ಯವರು 'ವಿಶ್ವಾಸ'ವೆಂಬ ಕವಿತೆಯಲ್ಲಿ -

**ಮಾನವನೆತ್ತರ ಆಗಸದೇರಿಗೆ**
**ಏರುವವರೆಗೂ ಏರೇವು ;**
**ಮಾನವ ಹೃದಯಕೆ ವಿಶ್ವವಿಶಾಲತೆ**
**ಹಾಯುವವರೆಗೂ ಹಾದೇವು**

ಎಂದು ಉದ್ಘೋಷಿಸುತ್ತಾರೆ. ಕಣವಿಯವರ ಆಶೆ ಆಕಾಂಕ್ಷೆಗಳು ಆಕಾಶಬುಟ್ಟಿಯ ಜತೆಯಲ್ಲಿ ಆಕಾಶಬುಟ್ಟಿಯ ಹಾಗೆಯೇ ಅಸೀಮವಾದುವು. ಕವಿಯ ಕಣ್ಣು ಕಡುಗತ್ತಲಲ್ಲಿ ಬೆಳಕಿನ ಹೊಳೆಯುನ್ನು ಕಾಣುತ್ತದೆ. ಕವಿ ಮನಸ್ಸು ನಕ್ಷತ್ರಗಳ ಮುತ್ತಿನ ಬೆಳೆಯ ಹಾಲೂಡಲು ಹಾತೊರೆಯುತ್ತದೆ. ಅದೂ ಸಾಲದು; ಮತ್ತೂ ಮೇಲಕ್ಕೆ, ಇನ್ನೂ ದೂರಕ್ಕೆ ನೆಗೆಯುತ್ತದೆ - ಅಂಕೆಯಿಲ್ಲದ ಮನಸ್ಸಿನ

ಕುದುರೆ ! ಬಾನೆತ್ತರದಲ್ಲಿ ನಿಂತು ನೋಡುವವನಿಗೆ ನೆಲದ ಮೇಲಿನ ಹಳ್ಳ ತಿಟ್ಟುಗಳಾಗಲೀ, ಓರೆಕೋರೆಗಳಾಗಲಿ ಕಾಣುವುದಿಲ್ಲ -ಎಲ್ಲವೂ ಸಮತಲವಾಗಿ, ಸುವಿಶಾಲ ಸುಂದರವಾಗಿ ಗೋಚರಿಸುತ್ತವೆ. ಕಣವಿಯವರದೂ ಅದೇ ಎತ್ತರದ ನೋಟ. ಆ ಎತ್ತರದಲ್ಲಿ ಪ್ರೀತಿಯ ಸೌರಭ ಎದೆಯರಳಿಸುತ್ತದೆ. ಸೊಗಸಿನ ಸೊದೆ ಎದೆಯನ್ನು ಮಿದುಗೊಳಿಸುತ್ತದೆ.

ನೋಬೆಲ್ ಪ್ರಶಸ್ತಿ ಪುರಸ್ಕೃತ ಅಮೇರಿಕನ್ ಸಾಹಿತಿ ಅರ್ನೆಸ್ಟ್ ಹೆಮಿಂಗ್ವೇ ಹೇಳುತ್ತಾನೆ. Man is not made for death. A man can be destroyed but not defeated.

ಆಕಾಶಬುಟ್ಟಿಯ ಮೂರನೆಯ - ಕೊನೆಯದು ಕೂಡ - ಪದ್ಯ ಹೆಮಿಂಗ್ವೆಯ ಗದ್ಯ ಪಂಕ್ತಿಗಳಿಗೆ ಪದ್ಯರೂಪದ ವ್ಯಾಖ್ಯಾನದಂತಿದೆ. ಆಧುನಿಕ ವಿಜ್ಞಾನದ ಆವಿಷ್ಕಾರಗಳಾದ ವಿವಿಧಾಕೃತಿಯ ವ್ಯೋಮನೌಕೆಗಳಿಗೆ ಹೋಲಿಸಿದರೆ ಆಕಾಶಬುಟ್ಟಿ ಸಣ್ಣದು, ತೀರ ಸಣ್ಣದು. ಆ ಬುಟ್ಟಿಯನ್ನು ಕಟ್ಟುವವನೂ ಯಂತ್ರ ವಿಜ್ಞಾನಿಯಲ್ಲ. ಒಬ್ಬ 'ದೀನಮಾನವ'. ಆದರೇನಂತೆ? ಅದು ವಿಯಚ್ಚರರಾದ ದುರುಳ ದಾನವರು ಎಬ್ಬಿಸುವ ಬಿರುಗಾಳಿಗೆ ಎದೆಯೊಡ್ಡುತ್ತದೆ. ಬಾನ ಬರ್ದಿಲರನಲ್ಲಿ ಎದೆಗಪ್ಪಿಕೊಳ್ಳುತ್ತದೆ. ಆದುದರಿಂದಲೇ ಹಿಂದಣ ಕಾಲದ ಹಿರಿಯರು ಹೇಳಿದ್ದು; 'ಸತ್ವೇ ಭವತಿಮಹತಾಂ ನೋಪಕರಣಮೇ'. ಮುಖ್ಯವಾದದ್ದು ಉನ್ನತಕಾಯವಲ್ಲ - ಊರ್ಧ್ವಮುಖ, ಆತ್ಮ ಶಕ್ತಿ. ಆತ್ಮಬಲಕ್ಕೆ ತಂತ್ರ, ಮಂತ್ರ, ಯಂತ್ರ ಯಾವುದೂ ಸಾಟಿಯಲ್ಲ. ಕಣವಿಯವರ ಎದೆಯ ಹಾಡೂ ನಡೆಯ ಜಾಡೂ ಇದೇ ಬಗೆಯದು; ಬಾನಿಗೆ ಏರುವಾಗಲೀ, ಅದರ ಅಂಗಳದಲ್ಲಿ ಹಾರಾಟವಾಗಲೀ-

ಊರ್ಧ್ವಮುಖಿಗಲ್ಲದಿದು ಉಳಿದವರಿಗಳವೆ ?
ಆತ್ಮಬಲದೆದುರು ಮೇಣುಳಿದ ಬಲವೆ ?
ಆಕಾಶಬುಟ್ಟಿಯೊಲು ಏಕಾಕಿಯಾದರೂ
ಎದೆಗೆದೆಯ ಹೊಂದೀಪ ಉದ್ದೀಪನಂಗೊಂಡು
ಬಾಳ ದ್ವೀಪವ ಬೆಳಗುವಂತೆ ಹಾಡು
ಎಂದೆಂದು ನೀನಿಂಥ ಹಾಡ ಹಾಡು !

ಈ ಹರಕೆ-ಹಾರೈಕೆಗಳೊಂದಿಗೆ ಕವಿ ಮತ್ತೊಂದು ಹುರುಳು ನುಡಿಯನ್ನು ಅರುಹುತ್ತಾನೆ, ಅದೆಂದರೆ - 'ಎಣಿಕೆಗೆ ಆಕಾಶಬುಟ್ಟಿ ಏಕಾಕಿ' ನಿಜ. ಆದರೆ ಬದುಕಿಗೆ ಬೆಳಕು ತಿರುಳು, ಚೆಲುವು ಸವಿಗಳನ್ನು ತರುವುದೆಲ್ಲ ಅಂತಹ ಒಂಟಿಗಳೇ ವಿನಾ ಸಂತೆಯಲ್ಲಿ ಹುಯಿಲಿಡುವ ಗುಂಪುಗಳಲ್ಲ. ಆದುದರಿಂದ ಒಂಟಿಯೆಂದು ಜಗ್ಗದಿರು, ಕುಗ್ಗದಿರು, ಬಾಗದಿರು. ಅಡಿಯನೆತ್ತಿ ಇಡು, ಮೊಗವನೆತ್ತಿ ನಡೆ. ದಾರಿಯಲ್ಲಿರುವ ಮುಳ್ಳು ತಂತಿಗಳನ್ನು ಮುರಿದು, ಕಲ್ಲುಬಂಡೆಗಳನ್ನು ಬಗೆದು ಮುಂದೆ ಸಾಗು. ನಿನ್ನ ಜತೆ, ನಿನ್ನ ಹಿಂದೆ ನಿನ್ನಂತಹವರು ಒಂಟೊಂಟಿಯಾಗಿಯೇ ಒಂದು ಗುಂಪುಗಳಾಗುತ್ತೀರಿ.

ನಿಮ್ಮಂತಹವರೇ ಕತ್ತಲ ಬಾಳ ದ್ವೀಪಗಳಿಗೆ ದೀಪಗಳಾಗುತ್ತೀರಿ', ಇದೇ ಆತ್ಮ ವಿಶ್ವಾಸದ ಪರಮಫಲ. ವಿಲಿಯಂ ಹೆನ್ಲಿಯೆಂಬ ಆಂಗ್ಲಕವಿಯ 'Song of Soul' ಎಂಬ ಕವಿತೆಯ ಆಶಯವೂ ಇದೇ ಬಗೆಯದು!

ಕಣವಿಯವರ 'ಆಕಾಶಬುಟ್ಟಿ'ಯನ್ನು ಓದುವಾಗಲೆಲ್ಲ ನನಗೆ ಬೇಂದ್ರೆಯವರ 'ಗರಿ'ಯಲ್ಲಿರುವ 'ಹಕ್ಕಿ ಹಾರುತಿದೆ...' ಎಂಬ ಕವಿತೆಯೂ ಅದೇ ಸಂಗ್ರಹದ ಕೊನೆಯಲ್ಲಿ ಅದೇ ಶೀರ್ಷಿಕೆಯಲ್ಲಿರುವ 'ಗರಿ'ಯೆಂಬ ಪದ್ಯವೂ ನೆನಪಿಗೆ ಬಂದು ಆ ಹಕ್ಕಿ'ಯನ್ನು 'ಗರಿ'ಯನ್ನು ಈ 'ಬುಟ್ಟಿ'ಯ ಹತ್ತಿರ ಇರಿಸಿ ನೋಡುವ ಆಸೆಯಾಗುತ್ತದೆ. ಈ ಆಸೆ ಮೂರನ್ನೂ ಹತ್ತಿರ ಹತ್ತಿರ ಇರಿಸಿ ಅವುಗಳ ಸೊಗಸನ್ನು ನೋಡುವುದಕ್ಕಷ್ಟೇ ಸೀಮಿತ ವಿನಾ ಒರೆಗೆ ಹಚ್ಚುವುದಾಗಲೀ ತೂಗಿ ನೋಡುವುದಾಗಲೀ ಅಲ್ಲ. 'ಗರಿ'ಯಲ್ಲಿ ಬೇಂದ್ರೆ -

**ಎಲ್ಲೆ ಕಟ್ಟು ಇಲ್ಲದಾ**
**ಬಾನ ಬಟ್ಟೆಯಲ್ಲಿದೊ**
**ಎಂದೆಂದು ಹಾರುವೀ**
**ಹಕ್ಕಿ ಗಾಳಿ ಸಾಗಿದೆ**

ಎಂದು ಮೊದಲಾಗಿ ಹಾಡಿದರೆ, ಕಣವಿಯವರು 'ಬುಟ್ಟಿ'ಯನ್ನು -

**ದೂರ ಹಾರುವುದೆಂಬ ಭರವಸೆಯ ನಂಬಿ**
**ನಮ್ಮ ಹಿರಿಯಾಸೆಗಳ ಉರಿವ ಕಕ್ಕಡವಿಟ್ಟು**
**ಉತ್ಸಾಹ ಸಾಹಸಕೆ ರೂಪುಗೊಟ್ಟು**
**ಮೇಲುನಾಡಿಗೆ ತೇಲಿಬಿಟ್ಟೆವಿದೋ...**

ಎಂದು ಆಡುತ್ತಾರೆ.

ಹಾಗೆಯೇ ಬೇಂದ್ರೆಯವರ 'ಗರಿಗೆದರಿ ಹಾರುತ್ತಾ -

**ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ**
**ತಿಂಗಳಿನೂರಿನ ನೀರನು ಹೀರಿ**
**......................................**
**ಮಂಗಳ ಲೋಕದ ಅಂಗಳಕೇರಿ**

'ದಿಂಙ್ಮಂಡಲಗಳ ಅಂಚನ್ನು ಮುಟ್ಟಿ ಅದರಾಚೆಗೆ ತನ್ನ ಚುಂಚನ್ನು ಚಾಚಿದರೆ ಕಣವಿಯವರ 'ಬುಟ್ಟಿ' ಏರುತ್ತ ಹಾರುತ್ತಾ

ಆಕಾಶದ ಪ್ರಕಾಶದಲಿ
ಎದೆಯ ತೆರೆದು
ಇಳೆಯ ಬಾಳಿನ ಹಂಗು ನೂಲು ಹರಿದು
..................................................
ಮುಗಿಲಲ್ಲಿ ಬಿತ್ತಿರುವ ಮುತ್ತುಗಳ ಬೆಳೆಯ
ಹಾಲುಗಳನು ಬಯಸಿ...

ಹಾರುವುದನ್ನು 'ಅದೋ ! ನೋದು ನೋಡು' ಎಂದು ಕರೆ ಕರೆದು ತೋರಿಸುತ್ತಾರೆ.

ಮೂರೂ ಕವಿತೆಗಳ ಬಂಧ-ಭಾಷೆ ಬೇರೆ, ಬೇರೆ; ಆದರೆ ಭಾವಗಳು ಅಲ್ಲಲ್ಲಿ ಸೊಗಸಾಗಿ ಹದವಾಗಿ ಹೊಂದಿಕೊಳ್ಳುತ್ತವೆ.

ಎಂ. ರಾಮಚಂದ್ರ

# ೫. ಕೊನೆಯ ಎಚ್ಚರಿಕೆ !

೧

ಏಸುಕ್ರಿಸ್ತ, ಏಸು ಬುದ್ಧ
ಏಸು ಬಸವ ಬಂದರೂ,
ತಮ್ಮ ಅಂತರಂಗವನ್ನೆ
ಲೋಕದೆದುರು ತೆರೆದರೂ,
ನಶ್ವರದಲಿ ಈಶ್ವರನನು
ಕಂಡು ಜಗದ ಕಲ್ಯಾಣಕೆ
ಎದೆಯ ಪ್ರಣತಿ ಜ್ಯೋತಿಯಲ್ಲಿ
ದಯೆಯ ತೈಲವೆರೆದರೂ,
ಪುಣ್ಯ ಪುರುಷ ಗಾಂಧಿ ತಂದೆ
ನೆತ್ತರಲ್ಲಿ ನಾಂದರೂ
ನೀನು ಮಾತ್ರ ಬೋರ್ಕಲ್ಲೆಲೆ ಪೆಡಂಭೂತನಂತಿಹೆ !
ಮತ್ತೆ ಹೊಲಸು ಕೆಸರಿನಲ್ಲೆ ಮತ್ತನಂತೆ ಬಿದ್ದಿಹೆ;
ತೊಳೆದು ಹೋಗಲಿಲ್ಲವಿನ್ನು ನಿನ್ನ ಮನದ ಮೈಲಿಗೆ
ಬರುವುದಿಲ್ಲೆ ನಾಚಿಗೆ ?
ಮೇಲೆ ಆಹಾ! ಥಳಕು ಬೆಳಕು
ಒಳಗಸಹ್ಯ ಕೊಳಚೆ ಕೊಳಕು
ದುರಾಚಾರ ದುರುದ್ದೇಶ
ದುರ್ನೀತಿಯ ಹೊಲೆಯಿದೆ ;
ಡಾಂಭಿಕತೆಯ ಮುಸುಗಿನಲ್ಲಿ
ಬೂಟಾಟಿಕೆಯಾಟವಲ್ಲಿ;
ನೀತಿಯೆಂಬ ಹೆಸರಿನಲ್ಲಿ

ಹುಚ್ಚು ಹೊಳೆಯ ಹಸುರಿನಲ್ಲಿ
ಅಹಂಕಾರ ಹೂಂಕಾರವ -
ಗೈವ ದುರುಳ ಕರುಳಿನಲ್ಲಿ
ಮೋಸವಲ್ಲಿ ನೆಲಸಿದೆ!
ಬಲ್ಮೆ ಸುಲಿಗೆ ನಡೆಸಿದೆ.
ಗುಣವಿಹೀನ ನಿನ್ನ ರೂಪ
ಬಿಸಿಲ ತಾಪ, ವಿಷದ ಕೂಪ,
ರೊಚ್ಚಿಗೆದ್ದು ಕೊಡಲು ಸಾಪ
ಅಯ್ಯೋ ಪಾಪ ಎನಿಸಿದೆ.
ನಗುವ ಹೂವ ಹೊದರಿನಲ್ಲಿ ಹಾವು ಹುತ್ತ ಕಟ್ಟಿದೆ
ವಿಷದ ಹೊಗೆಗೆ ದೀನ ಜನರ ಉಸಿರು ಕಟ್ಟಿ ಬಿಟ್ಟಿದೆ
ಎತ್ತ ನೋಡಿದತ್ತ, ಕುತ್ತು ಕಾಲು ಕೆದರಿ ನಿಂತಿದೆ
ಕರುಣೆಯೊಡಲು ಕುಸಿದುಬಿದ್ದ ಜ್ವಾಲಾಮುಖಿಯುಂತಿದೆ!

೩

ದೊಡ್ಡ ಜನರ ದೊಡ್ಡಸ್ತಿಕೆ
ಹೊಗಳು ಭಟರ ಡಬಡ್ಡಳಿಕೆ
ಅನ್ಯಾಯದ ದಬ್ಬಾಳಿಕೆ
ಹೇಳು ಕ್ರೂರಿ ಏತಕೆ ?
(ಸ್ವಲ್ಪ ಜನರ ಸಂತೋಷಕೆ)
ನರಗೆ ನರನ ರಕ್ತ ರುಚಿಯೆ ?
ಶೋಷಣೆಯಿದು ನಿನಗೆ ಶುಚಿಯೆ ?
ಹೇ! ಸಮಾಜಪಾತಕಿ
ಕಪಟ ವೇಷ ನರ್ತಕಿ !
ನಿನ್ನ ಲಾಸ್ಯ ಹಾಸ್ಯದಲ್ಲಿ
ಕುಡಿತ ಮೆರೆತ ಕೇಕೆಯಲ್ಲಿ
ಉದರಭರಣಕಾಗಿ ಹರಣ
ಕೊಡುವ ಈ ದುರಂತ ಮರಣ
ಚರಮ ಗೀತ ಕೇಳದೆ ?
ಅಂಜುಬುರುಕರೆಂದು ಕಪ್ಪ ಚೆಲ್ಲಿ ಮೋಜು ನೋಡುವೆ
ಮುಗ್ಧ ಕುಸುಮಕೋಮಲೆಯರ ರುಂಡಮಾಲೆ ಸೂಡುವೆ !

ನಿಷ್ಕಲ್ಮಷ ಎದೆಗಳನ್ನೆ ಹತ್ತಿ ತುಳಿದು ಹಿಂಡುವೆ
ಧೀರರೆಂದು ಕಂಡುಬರುವ ಮೊದಲೆ ಜೀವ ಹೀರುವೆ !
ಕೈಯ ತುತ್ತು ಕಸಿಯುವೆ
ಮತ್ತೆ ಹಲ್ಲು ಮಸೆಯುವೆ
ಪದೇ ಪದೇ ಅದೇ ರೀತಿ
ಅದೇ ನೀತಿ ಎನ್ನುವೆ,
ಹಳಸಿ ಹೋದ ತತ್ವಗಳನೆ
ಮೆದುಳಿನಲ್ಲಿ ತುರುಕುವೆ,
ಎಂದಿನಂತೆ ನಿನ್ನ ಭೂಮ
ಹೊಟ್ಟೆ ಹೊರೆದುಕೊಳ್ಳುವೆ !

೪

ಹಗಲು ಇರುಳು ಅರಳು-ಮರಳು
ಇದ್ದು ಬಿದ್ದ ಜೀವಕುರುಲು !
ನಿನಗೆ ಹಿಡಿದ ಒಳರೋಗಕೆ
ಸೂಜಿ ಮದ್ದು ಸಾಲದು !
ಬೇಕು ಅದಕೆ ಮಾಚಿಕಿತ್ಸೆ
ಒಲ್ಲೆನೆಂದರಾಗದು
ಉಸ್ಸೆನ್ನುವ ಜನದುಸಿರಿಗೆ
ಬುಸ್ಸೆನ್ನುತ ಹೆಡೆಯನೆತ್ತಿ
ಕಚ್ಚಿ ವಿಷವ ಕಾರುವೆ !
ಹಾಲನುಣಿಸಿ ಹಿತದ ಮಾತ
ಹೇಳಿದವರ ಮರೆಯುವೆ.
ಧರ್ಮಾಂಧರ ಹಣವಂತರ
ಬೆನ್ನು ಕಟ್ಟಿ ಗುಣವಂತರ ಬಡಿವ ಭೂತ ಬೆಂತರ !
ರಕ್ತ ಕೋಡಿ ಹರಿಸಿದೆ
ಮಂತ್ರದರ್ಥವರಿಯದಯ್ಯೊ
ಮೂಢ ಸಂತೆ ನೆರೆದಿದೆ!
ಮಡಿಯ ಮಾಡಿ ಉಡುವೆನೆಂದು

ಬೊಗಸೆ ನೀರು ಸುರುವಿ ಕೊಳಕು
ಪಂಚೆ ತೊಳೆದ ಮಾತ್ರಕೆ
ಅಚ್ಚ ಹಸನುಗೊಳಿಸದಿರಲು
ಮನಕೆ ಶುಭ್ರವೆನಿಸದಿರಲು
ಮಡಿಯಾಯಿತೆ ಪೂಜೆಗೆ ?
ಅದರೊಳುಳಿದ ಜಿಡ್ಡಿನಂತೆ
ನೀನು ಕೂಡ, ಮಡ್ಡನಂತೆ,
ತಿಳಿಯೊ ಮೊದಲು ತತ್ವದ
ಅದರ ಮೂಲ ಸತ್ವವ !

೫

ಅಧಿಕಾರದ ಅಮಲಿನಲ್ಲಿ
ಮೂಢ ಜನರ ಬೆಂಬಲದಲಿ
ಹೆಸರು ಪಡೆವ ಹಂಬಲದಲಿ
ಅರಿಯದಂಥ ಕುನ್ನಿಗಳನು
ನುಂಗಿ ನೀರು ಕುಡಿದಿಹೆ !
ತೀರಲಿಲ್ಲ ಆ ಪಿಪಾಸೆ
ಟೊಣೆಯುತಿರುವ ಈ ದುರಾಸೆ
ವಿಶ್ವಪ್ರೇಮ ದಿವದ ಬಯಕೆ-
ಗೆಲ್ಲ ಕೀಲಿ ಜಡಿದಿಹೆ!

ನೊಂದರೂನು ಕರುಣೆ ಬಂದು
ಪರಿಪರಿಯಲಿ ಹೇಳುವೆ;
ಕೇಳಲಾರೆಯಾದರಿನ್ನು
ಭೀಮ ಗದೆಯನೆತ್ತುವೆ!
ನೂರು ದೂರು ಕೇಳುತಿರುವೆ
ನಿತ್ಯ ನಾನೆ ನೋಡುತಿರುವೆ-
ಇನ್ನು ಬರಿದೆ ತಾಳಬಹುದೆ ಇಂಥ ನರಕ ಯಾತನೆ
ಕಣ್ಣ ಮುಂದೆ ನಡೆಯುತಿರಲು ಋತದ ಶಿವದ ಭರ್ತ್ಸನೆ!
ಎನಿಸು ಕಾಲ ನಡೆಸಬಹುದು ಘೋರ ಆತ್ಮವಂಚನೆ ?

ಅದಕೆ ಕೊಡುವೆನೆಂದು ಕೊನೆಯ ಎಚ್ಚರಿಕೆಯ ಸೂಚನೆ :

ಹರೆಯದೇರು ಗರುವದಲ್ಲಿ
ಉದ್ರೇಕದ ಮಬ್ಬಿನಲ್ಲಿ
ಕೈಲಾಗದ ಕನಸನುಂಡು
ಮೈಯನೆಲ್ಲ ಪರಚುತಿರುವ
ಕನಲಿ ಕೆಂಡವಾಗುತಿರುವ
ಅಪ್ರಬುದ್ಧ, ಬುದ್ಧಿಹೀನ -
ನೆಂದು ಹಳಿಯಬಹುದು, ತುಳಿಯಬಹುದು, ಆದರೆ-
ಅರಿವು ಮರವೆಯಾದರೂ
ನಾವು ನೀವು ಅಳಿದರೂ
ಉಳಿದೆವೆಂದು ತಿಳಿದರೂ

ಸತ್ಯವೊಂದು ನಿತ್ಯವಾಗಿ ಗೆಲ್ಲುವುದೊ ಬಾಳನು !
ಪಂಜು ಹಿಡಿದು ಹೊರದೆಗೆವುದು ಕೆಟ್ಟ, ಕೀಳು ಕಿಲುಬನು !
ಪಾಳ್ಮಸಗಿದ ನೆಲದೊಳಂದು ಮಾಮಾಸಕವೆ ನಡೆವುದು
ಭೂತ ವರ್ತಮಾನ ನಡೆದ ಕಥೆಯನೆಲ್ಲ ಪೇಳ್ವುದು.

ಹೊಸತು ಬಾಳ ಹೊಸತಿಲಲ್ಲಿ ಅದೋ ಯುವಕವೃಂದವು
ಕೋಟಿ ಹೃದಯ ನಾಟಿ ತಂತ್ರಿ ಮೀಟಿ ಬರುವ ಬಯಕೆಯು
ಒಳಗೆ ಕುದ್ದು ಕುದ್ದು ಅದನೆ ಮೆದ್ದ ಉಗಿಯ ಶಕ್ತಿಯು

ಬೆಂಕಿಯಾಗಿ ಚಿಮ್ಮಿ ನಿನ್ನ
ಜ್ವಾಲೆಯಾಗಿ ಸುಡುವ ಮುನ್ನ
ಒಳಗು- ಹೊರಗೆನೆಲ್ಲವಿಂದೆ
ತೊಳೆದುಕೋ ಸಮಾಜವೆ !
ಧ್ಯೇಯವಾದಿಗಳನು ತುಳಿಯೆ
ನಿನ್ನ ನೀನೆ ಕೊಂದು ಕೊಳುವೆ
ಸುಟ್ಟು ಬೂದಿಯಾಗುವೆ !

ಕೆಲವು ಕಾಲ ಮರೆಯಬಹುದು ನಿನ್ನ ಉಬ್ಬದಬ್ಬರ
ಇಂದು ಕಟ್ಟುಕಟ್ಟಳೆಗಳ ನಿಗಳ ಕಳಚು ಚಚ್ಚರ
ಮಸೆದ ಗಂಡುಗೊಡಲಿ ಕೆರಳಿ ಕೊಟ್ಟ ಕೊಎಯ ಎಚ್ಚರ!
ಎನಿತೊ ಕಾಲ ಮೆಣಸನರೆದ ತಲೆಯ ತಿಂದ ಬೆಂತರ!

'ಆಕಾಶ ಬುಟ್ಟಿ' (೧೯೫೩) ಕವನ ಸಂಕಲನದಲ್ಲಿ ಪ್ರಕಟವಾದ ಕವಿತೆ 'ಕೊನೆಯ ಎಚ್ಚರಿಕೆ' ಕವಿ ಚೆನ್ನವೀರ ಕಣವಿಯವರ ಉತ್ತಮ ಕವಿತೆಗಳಲ್ಲೊಂದಾಗಿದ್ದು ೧೯೫೦ರ ದಶಕದಲ್ಲಿ ಪ್ರಕಟವಾದ ಈ ಕವಿತೆ ತನ್ನ ಪ್ರಗತಿಪರ ಆಶಯಗಳಿಂದ ಕಾವ್ಯಪ್ರಿಯರ ಮೆಚ್ಚುಗೆಗೆ ಪಾತ್ರವಾಗಿದೆ. ನಿಸರ್ಗ, ಕುಟುಂಬ, ಸಮಾಜ ಹಾಗೂ ಉದಾತ್ತ ಜೀವನ ಮೌಲ್ಯಗಳನ್ನು ಅಪಾರವಾಗಿ ಪ್ರೀತಿಸುವ ಕವಿ ಕಣವಿಯವರ ಈ ಕವಿತೆಯ ಮೂಲ ಆಶಯಗಳು ಅವರ ಒಟ್ಟಾರೆ ಕಾವ್ಯದ ಆಶಯಗಳಾಗಿಯೇ ಉಳಿದಿವೆ. ಅವರ ಸಮಗ್ರಕಾವ್ಯವನ್ನು ಓದಿದವರಿಗೆ ಈ ಮಾತು ಮನದಟ್ಟಾಗುತ್ತದೆ. ಪ್ರತಿಗಾಮಿತನ ಅವರ ಬಳಿಯಲ್ಲಿ ಸುಳಿಯಲಾರದು. ಈ ಕವಿತೆ ಪ್ರಕಟವಾದ ಸಂದರ್ಭದಲ್ಲಿ ನವೋದಯ ಕಾವ್ಯ ಪ್ರಗತಿಶೀಲತೆಯತ್ತ ಹೊರಳಿದ್ದು ಐತಿಹಾಸಿಕ ದಾಖಲೆಯಾಗಿದೆ. ಕನ್ನಡದ ಹಿರಿಯ ಕವಿಗಳಲ್ಲಿ ಅನೇಕರು ಆಗ ಈ ಆಶಯದ ಹಲವಾರು ಅತ್ಯುತ್ತಮ ಕವಿತೆಗಳನ್ನು ರಚಿಸಿ ಕಾವ್ಯಕ್ಕೆ ಜನಪರ ಧ್ವನಿ ನೀಡಿದರು.

ಸ್ವಾತಂತ್ರ್ಯ ದೊರೆತು ಕೆಲವೇ ವರ್ಷಗಳು ಗತಿಸಿದ್ದು ಆಗಲೇ ಸ್ವಾತಂತ್ರ್ಯ ಚಳುವಳಿಯ ಕಾವು ಆರಿ ರಾಜಕೀಯ ಅಧಿಕಾರಕ್ಕಾಗಿ ಸಮಯಸಾಧಕ ವ್ಯಕ್ತಿಗಳು ಪೈಪೋಟಿ ನಡೆಸುತ್ತಿದ್ದರು. ದೇಶ ವಿಭಜನೆಗೊಂಡು ಕೋಮು ದಳ್ಳುರಿಯಿಂದ ಗಾಸಿಗೊಂಡಿತ್ತು. ಜೊತೆಗೆ ಕಿತ್ತು ತಿನ್ನುವ ಬಡತನ, ನಿರುದ್ಯೋಗ ಹಾಗೂ ಶ್ರೀಮಂತ ವರ್ಗದವರಿಂದ ನಿರಂತರ ಶೋಷಣೆಯಿಂದಾಗಿ ಜನ ಕಂಗಾಲಾಗಿದ್ದರು. ಜನರಲ್ಲಿ ಉದಾತ್ತ ಮೌಲ್ಯಗಳನ್ನು ಬಿತ್ತಬೇಕಾದ ಧರ್ಮ ಕೂಡ ತನ್ನ ಡಾಂಭಿಕತೆಯಿಂದಾಗಿ ದಿಕ್ಕಿಲ್ಲದವರನ್ನು, ದಲಿತರನ್ನು ಕಡೆಗಣಿಸುತ್ತ ಉಳ್ಳವರ ಪರವಾಗಿತ್ತು. (ಈಗಲೂ ಅದರ ಸ್ವರೂಪ ಬದಲಾಗಿಲ್ಲ). ಈ ಕಾಲದಲ್ಲಿ ಸ್ವಾತಂತ್ರ್ಯದ ಫಲ ಶ್ರೀಮಂತರ ಪಾಲಾಗದೆ ದೇಶದ ತುಳಿತಕ್ಕೊಳಗಾದ ಜನರಿಗೂ ದಕ್ಕುವಂತಾಗಬೇಕೆಂಬ ಆಶಯದ ಪ್ರಗತಿಪರ ಚಳುವಳಿಗಳು ಅವ್ಯಾಹತವಾಗಿ ನಡೆಯುತ್ತಲೇ ಇದ್ದವು. ಸಾಮಾಜಿಕ ಬದುಕು ಜಿಡ್ಡುಗಟ್ಟಿತ್ತು. ಒಂದು ರೀತಿಯ ಜಡವಾದ ಕ್ರೂರ ಅವಸ್ಥೆಯನ್ನು ತಾಳಿತ್ತು. ಕನ್ನಡ ಕಾವ್ಯ ಕಂಡ ಅತ್ಯಂತ ಸುಸಂಸ್ಕೃತ ಕವಿಗಳಲ್ಲೊಬ್ಬರಾದ ಚೆನ್ನವೀರ ಕಣವಿಯವರು ಸಹಜವಾಗಿಯೇ ಇಂಥ ಸ್ಥಿತಿಯ ವಿರುದ್ಧ ಕ್ರೋಧಗೊಂಡಿದ್ದರು. ಹಾಗೂ ಅದು ತನ್ನ ಎಲ್ಲ ಅವಗುಣಗಳನ್ನು ಕಳೆದುಕೊಂಡು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದು ಉತ್ತಮ ಬದುಕಿನತ್ತ ಮುನ್ನಡೆಯಬೇಕೆಂಬುದು ಅವರ ತುಡಿತವಾಗಿತ್ತು. 'ಕೊನೆಯ ಎಚ್ಚರಿಕೆ' ಕವಿತೆ ಅವರ ಈ ಆಶಯಗಳನ್ನು ರೂಪಿಸಿದ ಅತ್ಯಂತ ಸಮರ್ಥ ನುಡಿಚಿತ್ರವಾಗಿ ಮೂಡಿ ಬಂದಿದೆ.

ಭಾವಕ್ಕೆ ತಕ್ಕ ಹಾಗೆ ಹೆಣೆದುಕೊಂಡ ಛಂದ ಲಯಗಳಿಂದಾಗಿ ಈ ಕವಿತೆ ರಭಸದಿಂದ ಹರಿಯುವ ಹೊಳೆಯ ಪ್ರವಾಹದಂತೆ ತೋರುತ್ತದೆ. ಎಲ್ಲ ಕೆಸರು, ಕೊಳಚೆ, ಕಲ್ಮಷಗಳನ್ನು ಕೊಚ್ಚಿಕೊಂಡೊಯ್ದು ಭೂಮಿಯನ್ನು ಸ್ವಚ್ಛಗೊಳಿಸುವ ಬಯಕೆ ಈ ಪ್ರವಾಹಕ್ಕಿದೆ. ಕವಿತೆಯ ನಾಲ್ಕು ಭಾಗಗಳಲ್ಲಿಯೂ ಈ ರಭಸ ಮೊರೆತ ತನ್ನ ಗತಿಯನ್ನು ಕಾಯ್ದುಕೊಂಡು ಮಾನವೀಯ ಅಂತಃಕರಣದ ಬೆಳಕನ್ನು ಓದುಗರ ಹೃದಯದಲ್ಲಿ ಮೂಡಿಸುತ್ತದೆ. ಮೊದಲ ಭಾಗದಲ್ಲಿ ಜಿಡ್ಡುಗಟ್ಟಿದ ಡಾಂಭಿಕ ಚಿತ್ರಣವಿದ್ದರೆ ಉಳಿದ ಭಾಗಗಳಲ್ಲಿ ಈ ವ್ಯವಸ್ಥೆಯ ಪ್ರೇರಕ ಪೋಷಕ ಶಕ್ತಿಗಳ

ಚಿತ್ರಣವಿದ್ದು ಅವರ ಜನವಿರೋಧಿ ನಡತೆಯ ಬಗ್ಗೆ ಮೂದಲಿಕೆ, ವಿಡಂಬನೆಗಳು ರೂಪ ತಾಳಿವೆ. ಕೊನೆಯ ಭಾಗದಲ್ಲಿ ಈ ಜಡವ್ಯವಸ್ಥೆಯ ವಿರುದ್ಧ ಧ್ವನಿಯೆತ್ತಿರುವ ಶಕ್ತಿಗಳ ಯುವಶಕ್ತಿಯ ಅತ್ಯಂತ ವಂದನೀಯವಾದ ಸ್ಪಷ್ಟ ನಿಷ್ಠುರ ಧ್ವನಿಯೊಂದು ಮುಂದೆ ಬರುತ್ತದೆ. ಅತ್ಯಂತ ಸಾರ್ಥಕ ಮುಕ್ತಾಯವನ್ನು ಕವಿತೆಗೊದಗಿಸುತ್ತದೆ.

ಬುದ್ಧ, ಏಸು, ಬಸವರಂಥ ಮಹಾಪುರುಷರು ದಾರಿದೀಪವಾಗಿ ಈ ಸಮಾಜಕ್ಕೆ ಸಮಾನತೆ, ದಯೆ, ಅಂತಃಕರಣ ಹಾಗೂ ಮಾನವೀಯತೆಯ ಬಗ್ಗೆ ತಮ್ಮ ಬೋಧನೆಗಳನ್ನು ನೀಡಿದ್ದರೂ ಅದೆಲ್ಲ ವ್ಯರ್ಥವಾಗುವ ಹಾಗೆ ಆಳುವ ಶ್ರೀಮಂತ ವರ್ಗ, ಪುರೋಹಿತಶಾಹಿ ಸಮಾಜವನ್ನು ಅಸಹ್ಯವಾಗಿಸಿವೆ. ಈ ಚಿತ್ರಣವನ್ನು ನೀಡುವ ಕವಿತೆಯ ಮೊದಲು ಸಾಲುಗಳು ದಟ್ಟ ವಿಷಾದದಿಂದ ಕೂಡಿವೆ.

ಮತ್ತೆ ಹೊಲಸು ಕೆಸರಿನಲ್ಲೆ ಮತ್ತನಂತೆ ಬಿದ್ದಿಹೆ
ತೊಳೆದು ಹೋಗಲಿಲ್ಲವಿನ್ನು ನಿನ್ನ ಮನದ ಮೈಲಿಗೆ
ಬರುವದಿಲ್ಲ ನಾಚಿಕೆ ?

ಈ ಶೋಷಕ ಶಕ್ತಿಗಳು ಕಟ್ಟಿದ ವ್ಯವಸ್ಥೆ ಅಸಹ್ಯ ವಾಗಿದೆ.

ಮೇಲೆ ಆಹಾ! ಥಳಕು ಬೆಳಕು
ಒಳಗಸಹ್ಯ ಕೊಳಚೆ ಕೊಳಕು
.....................................
...................................
ಅಹಂಕಾರ ಹೂಂಕಾರವ
ಗೈವ ದುರುಳ ಕರುಳಿನಲ್ಲಿ
ಮೋಸವಲ್ಲಿ ನೆಲೆಸಿದೆ!
ಬಲ್ಮೆ ಸುಲಿಗೆ ನಡೆಸಿದೆ!

ಕವಿತೆಯ ಈ ಭಾಗ ಸಂಪನ್ನತೆಯ ಡಾಂಭಿಕ ಮುಖವಾಡದೊಳಗಡೆ ಶೋಷಕ ಶಕ್ತಿಗಳು ನಡೆಸುವ ಮೋಸ, ಸುಲಿಗೆ, ಕಾಪಟ್ಯ, ಕ್ರೌರ್ಯಗಳ ಸಮರ್ಥ ಚಿತ್ರಣವಿದೆ. ಈ ವಿಷಮ ಬದುಕಿನ ರೂಪ ಗುಣವಿಹೀನವಾಗಿವೆ. ಹಾಗಾಗಿ ಅದು ವಿಷದ ಕೂಪವಾಗಿದೆ. ಅದರ ಇಡಿಯಾದ ದರ್ಶನ ಸಿಗುವುದು ಈ ಕೆಳಗಿನ ಸಾಲುಗಳಲ್ಲಿ:

ನಗುವ ಹೂವ ಹೊದರಿನಲ್ಲಿ ಹಾವು ಹುತ್ತ ಕಟ್ಟಿದೆ
ವಿಷದ ಹೊಗೆಗೆ ದೀನ ಜನರ ಉಸಿರು ಕಟ್ಟಿ ಬಿಟ್ಟಿದೆ
ಎತ್ತ ನೋಡಿದತ್ತ ಕುತ್ತು ಕಾಲು ಕೆದರಿ ನಿಂತಿದೆ
ಕರುಣೆಯೊಡಲು ಕುಸಿದು ಬಿದ್ದ ಜ್ವಾಲಾಮುಖಿಯಂತಿದೆ!

ಎರಡನೆಯ ಭಾಗದಲ್ಲಿ ಈ ಅನ್ಯಾಯ ಶೋಷಣೆ ಯಾತಕ್ಕಾಗಿ ಎಂದು ಕವಿ ಪ್ರಶ್ನಿಸುತ್ತಾರೆ. ಉತ್ತರ ಸ್ಪಷ್ಟವಿದೆ. ಅದು 'ಸ್ವಲ್ಪ ಜನರ ಸಂತೋಷಕೆ' ಮಾತ್ರ. ಆದುದರಿಂದಲೇ ಕವಿ ಕೇಳುತ್ತಾರೆ. 'ನರಗೆ ನರನ ರಕ್ತ ರುಚಿಯೇ?' ಇಲ್ಲಿ ಬರುವ ಶೋಷಣೆಯ ಕ್ರೌರ್ಯದ ಚಿತ್ರಣ ಎದೆ ಕಲಕುವಂಥದು.

ಅಂಜುಬುರುಕರೆಂದು ಕಪ್ಪ ಚೆಲ್ಲಿ ಮೋಜು ನೋಡುವೆ
ಮುಗ್ಧ ಕುಸುಮಕೋಮಲೆಯರ ರುಂಡಮಾಲೆ ಸೂಡುವೆ
ನಿಷ್ಕಲ್ಮಷ ಎದೆಗಳನ್ನೆ ಹತ್ತಿ ತುಳಿದು ಹಿಂಡುವೆ

ವ್ಯವಸ್ಥೆಯ ಅದ್ಭುತ ಸಮರ್ಥ ಚಿತ್ರಣಗಳಾಗಿ ಈ ಸಾಲುಗಳು ಮನದಾಳವನ್ನು ಕಲಕುವ ಶಕ್ತಿ ಪಡೆದಿವೆ.

ಮೂರನೆಯ ಭಾಗದಲ್ಲಿ ಶುಷ್ಕವಾದ ಕಂದಾಚರಣೆಯ ಕುರುಡು ಧರ್ಮ ಹಾಗೂ ಅದನ್ನು ಪೋಷಿಸುವ ಶಕ್ತಿಗಳನ್ನು ಮೂದಲಿಸುತ್ತಾರೆ. ಅದು 'ಹಗಲು ಇರುಳು ಅರಳು ಮರಳು'. ಇದ್ದುಬಿದ್ದ ಜೀವಕುರುಲಿನಂತಿದೆ. ಈ ಧರ್ಮ ಕೂಡ ಡಾಂಭಿಕವಾಗಿದೆ. ಕೇವಲ ಕಂದಾಚಾರವಾಗಿದೆ. ಇದು ಧರ್ಮಾಂಧರ, ಸಿರಿವಂತರ ಪಾಲಾಗಿ ಮುಗ್ಧ ಜನರ, ಬಡವರ, ಗುಣವಂತರ ರಕ್ತದ ಕೋಡಿ ಹರಿಸಿದೆ. ಬೆಳಕು ಬೀರಬೇಕಾದ ಅದು ಜನರ ಗೋಳಿಗೆ ಕಾರಣವಾಗಿದೆ.

ಉಸ್ಸೆನ್ನುವ ಜನದುಸಿರಿಗೆ
ಬುಸ್ಸೆನ್ನುತ ಹೆಡೆಯನೆತ್ತು
ಕಚ್ಚಿ ವಿಷವ ಕಾರಿದೆ!

ಅಂತರಂಗದ ಕಲ್ಮಷ ತೊಳೆಯದೆ ಕೇವಲ ಬಹಿರಂಗದ ಅದೂ ನೇಮ ಮಾತ್ರದ ಮಡಿಯನ್ನು ನೆಚ್ಚಿ ಶುಷ್ಕವಾಗಿದೆ. ಕವಿಯ ಪ್ರಕಾರ ಇದಕ್ಕೆ ಕೇವಲ ಸೂಜಿಮದ್ದಿನ ಚಿಕಿತ್ಸೆ ಸಾಲದು. ಅದಕ್ಕೆ ಮಹಾಚಿಕಿತ್ಸೆ ಅವಶ್ಯವಾಗಿದೆ. ಆದುದರಿಂದ ಇದು ರಕ್ತ ಪಿಪಾಸು ಧರ್ಮವಾಗಿದೆ. ಅದರ ಪಿಪಾಸೆ ಮರಳಿ ಮರಳಿ ಟೋಣೆಯುತ್ತಿದೆ. ಹಲವಾರು ಶತಮಾನಗಳ ಕಾಲ ಧರ್ಮದ ಹೆಸರಿನಲ್ಲಿ ನಡೆದ ದಳ್ಳುರಿ ಕವಿಯ ಹೃದಯವನ್ನು ಕಲಕಿರುವುದನ್ನು ಈ ಮೇಲಿನ ಸಾಲುಗಳ ಗಟ್ಟಿಗೊಳಿಸುತ್ತವೆ. ಕವಿ ಪುರೋಹಿತಶಾಹಿಗೆ ಸವಾಲೆಸೆಯುತ್ತಾರೆ:

ಮನಕೆ ಶುಭ್ರವೆನಿಸದಿರಲು
ಮಡಿಯಾಯಿತೆ ಪೂಜೆಗೆ ?
...............................
.............................

**ತಿಳಿಯೊ ಮೊದಲು ತತ್ವವ**
**ಅದರ ಮೂಲ ಸತ್ವವ.**

ನಾಲ್ಕನೆಯ ಭಾಗದಲ್ಲಿ ಕವಿ ಒಟ್ಟಾರೆಯಾಗಿ ಈ ಅಧಿಕಾರಶಾಹಿ ಶ್ರೀಮಂತವರ್ಗ ಹಾಗೂ ಕುರುಡು ಧರ್ಮಗಳು ನಡೆಸುತ್ತಿರುವ ಅಟ್ಟಹಾಸದ ದಬ್ಬಾಳಿಕೆಯಡಿ ಸಿಕ್ಕಿ ನರಳುವ ತುಳಿತಕ್ಕೊಳಗಾದ ಜನದ ಧ್ವನಿಯಾಗುತ್ತಾರೆ.

**ಇನ್ನು ಬರಿದೆ ತಾಳಬಹುದೆ ಇಂಥ ನರಕ ಯಾತನೆ**
**ಕಣ್ಣ ಮುಂದೆ ನಡೆಯುತಿರಲು ಋತದ ಶಿವದ ಭರ್ತ್ಸನೆ!**
**ಎನಿಸು ಕಾಲ ನಡೆಸಬಹುದು ಘೋರ ಆತ್ಮವಂಚನೆ**
**ಅದಕೆ ಕೊಡುವೆನಿಂದು ಕೊನೆಯ ಎಚ್ಚರಿಕೆಯ ಸೂಚನೆ.**

'ವಿಶ್ವ ಪ್ರೇಮ ದಿವದ ಬಯಕೆ'ಗಳಿಗೆ ಕೀಲಿ ಜಡಿದು ನಿರಂತರ ರಕ್ತಪಿಪಾಸುವಾಗಿರುವ ಈ ವ್ಯವಸ್ಥೆಯ ವಿರುದ್ಧ ಧ್ವನಿಯೆತ್ತಿರುವ ಯುವಶಕ್ತಿಗಳ ಪರವಾಗಿ ಕವಿ ನಿಲ್ಲುತ್ತಾರೆ. ಅದರ ಕೊರಳದನಿಯಾಗಿ ಶೋಷಿತ ಶಕ್ತಿಗಳಿಗೆ ವಿಷಮ ಅವಸ್ಥೆಯನ್ನು ರಾಕ್ಷಸ ರೂಪವನ್ನು ತ್ಯಜಿಸಲು ಕರೆ ಕೊಡುತ್ತಾರೆ. ಜೀವ ಪರವಾಗಲು ತಿಳಿ ಹೇಳುತ್ತಾರೆ.

**ಸತ್ಯವೊಂದೆ ನಿತ್ಯವಾಗಿ ಗೆಲ್ಲುವುದೋ ಬಾಳನು!**
**ಪಂಜುಹಿಡಿದು ಹೊರದೆಗೆವುದು ಕೆಟ್ಟ ಕೀಳು ಕಿಲುಬನು**

ಕವಿಗೆ ಯುವಶಕ್ತಿಯಲ್ಲಿ ಅಪಾರವಾದ ವಿಶ್ವಾಸವಿದೆ. ಅದೂ ಹೊಸಬಾಳಿನ ಹೊಸತಿಲಲ್ಲಿ ನಿಂತಿರುವ, ಪ್ರಬಲವಾದ, ಹಸನಾದ ಬದುಕಿನ ಕನಸು ನನಸಾಗಿಸಲು ನಿಂತಿರುವ ಶಕ್ತಿ ಅದು:

**ಒಳಗೆ ಕುದ್ದು ಕುದ್ದು ಆದನೆ ಮದ್ದ ಉಗಿಯ ಶಕ್ತಿಯು**

ಈ ಯುವ ಶಕ್ತಿಯನ್ನು ಶೋಷಕ ವರ್ಗ ದಡ್ಡ, ಬುದ್ಧಿವಿಹೀನ, ಅಪ್ರಬುದ್ಧ ಎಂದೆಲ್ಲ ಜರಿಯಬಹುದು. ಆದರೆ ವಾಸ್ತವದಲ್ಲಿ ಸ್ವತಃ ಈ ಶೋಷಕ ಶಕ್ತಿಗಳೇ 'ನಿಜವಾದ ಬುದ್ಧಿಹೀನ, ಅಪ್ರಬುದ್ಧವಾಗಿವೆ. ಈ ಯುವಶಕ್ತಿಯ ಪರವಾಗಿ ಕವಿ ಕೊನೆಯ ಎಚ್ಚರಿಕೆ ನೀಡುತ್ತಾರೆ:

**ಧ್ಯೇಯವಾದಿಗಳನು ತುಳಿಯೆ**
**ನಿನ್ನ ನೀನೆ ಕೊಂದುಕೊಳುವೆ**
**ಸುಟ್ಟು ಬೂದಿಯಾಗುವೆ**

..........................................

**ಇಂದು ಕಟ್ಟು ಕಟ್ಟಳೆಗಳ ನಿಗಳ ಕಳಚು ಚಚ್ಚರ!**
**ಮಸೆದ ಗಂಡುಗೊಡಲಿ ಕೆರಳಿ ಕೊಟ್ಟ ಕೊನೆಯ ಎಚ್ಚರ!**
**ಎನಿತೊ ಕಾಲ ಮಣಸನರೆದ ತಲೆಯ ತಿಂದ ಬೆಂತರ!**

ಈ ಸಾಲುಗಳು ಸಮಸ್ತ ಮಾನವೀಯತೆಯ, ಅಂತೆಯೆ ಕವಿಯ ಆಶಯವನ್ನು ಸ್ಪಷ್ಟಗೊಳಿಸುತ್ತವೆ.

ಶೋಷಕ ಶಕ್ತಿಗಳು, ಪುರೋಹಿತಶಾಹಿಗಳು ಈಗಲಾದರೂ ಎಚ್ಚತ್ತು ನಿಜವಾದ ಮಾನವೀಯ ಸಮಾಜವನ್ನು, ಸತ್ಯಪರವಾದ ಧರ್ಮವನ್ನು ಕಟ್ಟಲು ಮುಂದಾಗಬೇಕು. ಇಲ್ಲವಾದರೆ ಅದನ್ನು ಕಟ್ಟ ಬಯಸುವ ಯುವ, ಪ್ರಗತಿಪರ ಶಕ್ತಿಗಳು ಅವರನ್ನು ದೂರಸರಿಸಿ ಅಂಥ ಸುಂದರ ಬದುಕನ್ನು ಕಟ್ಟುತ್ತಾರೆ.

ಇಲ್ಲಿ ಮುಖ್ಯವಾಗಿ ಗಮನಿಸುವ ಅಂಶವೆಂದರೆ ಕವಿ ಸಮಾಜದಲ್ಲಿ ಆಮೂಲಾಗ್ರವಾದ ಬದಲಾವಣೆಗಳನ್ನು ಕಾಣಬಯಸುತ್ತಾರೆ. ಅವರು ವಿಧ್ವಂಸಕ ಧ್ವನಿಯಾಗುವುದಿಲ್ಲ. ತನ್ನ ವಿನಾಶದಿಂದ ತಪ್ಪಿಸಿಕೊಳ್ಳಲು ಆಳುವ ವರ್ಗ, ಶೋಷಕ ವರ್ಗ ತನ್ನ ಪ್ರವೃತ್ತಿ, ಧೋರಣೆಗಳನ್ನು ತ್ಯಜಿಸಿ ಮಾನವೀಯವಾಗಬೇಕೆಂಬ ಸುಧಾರಣಾವಾದಿ ಧ್ವನಿ ಇದಾಗಿದೆ.

ಶೋಷಕ ವರ್ಗವನ್ನು ಸಂಪೂರ್ಣವಾಗಿ ಇಲ್ಲವಾಗಿಸಿ ಅದರ ಸ್ಥಳದಲ್ಲಿ ದುಡಿಯುವ ವರ್ಗದ ಪ್ರಭುತ್ವ ಸ್ಥಾಪಿಸುವ ಕ್ರಾಂತಿಕಾರಿ ಆಶಯ ಇಲ್ಲಿ ಕಾಣುವುದಿಲ್ಲ. ರಶ್ಯನ್ ಕ್ರಾಂತಿಯ ಸಮಯದಲ್ಲಿನ ಮಹತ್ವದ ಕ್ರಾಂತಿಕಾರಿ ಕವಿಗಳಲ್ಲೊಬ್ಬರಾದ ಮೈಕೊವಸ್ಕಿ ತಮ್ಮ ಕವನವೊಂದರಲ್ಲಿ ರೂಪಿಸಿರುವ ಆಶಯಗಳನ್ನು ಪಕ್ಕದಲ್ಲಿರಿಸಿಕೊಂಡು ಚೆನ್ನವೀರ ಕಣವಿಯವರ ಕಾವ್ಯದ ಕೊನೆಯ ಸಾಲುಗಳನ್ನು ಪರಿಶೀಲಿಸಿದಾಗ ಅದು ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ.

ನಾಡಿನ ಎಲ್ಲ ಜನರ ಶ್ರಮ, ಬೆವರಿನ ಫಲವನ್ನು ಕಬಳಿಸುತ್ತಾ ಸಂಪತ್ತು ದೋಚಿರುವ ಬಂಡವಾಳಶಾಹಿಯನ್ನು ಮೈಕೊವಸ್ಕಿ ಮಿತಿ ಮೀರಿದ ಬೆಳೆದ ಕೊಬ್ಬಿನ ದೇಹದ, ಚಲಿಸಲೂ ಆಗದ ಆದರೆ ಕಬಳಿಸುವುದನ್ನು ಮುಂದುವರೆಸಿರುವ ರಾಕ್ಷಸ ವ್ಯಕ್ತಿಯಾಗಿ ಕಾಣುತ್ತಾನೆ. ಜಗದೆಲ್ಲ ಜನರ ರಕ್ತವನ್ನು ಅವನ ನರಗಳು ನಿರಂತರ ಸೆಳೆದುಕೊಳ್ಳುತ್ತಿವೆ. ಆದರೂ ಅವನ ಹಸಿವು ದಾಹ ಇಂಗಿಲ್ಲ. ಇಂಗುವಂತೆಯೂ ಇಲ್ಲ. ಆ ಮೈಕೊವಸ್ಕಿ ನೀಡುವ ತೀರ್ಮಾನವನ್ನು ಗಮನಿಸಬೇಕು: 'ಇರುವ ದಾರಿಯೆಂದರೆ ಅವನನ್ನು ಸ್ಫೋಟಿಸುವುದೊಂದೆ'. ಕವಿ ಕಣವಿಯವರು ಇಂಥ ತೀರ್ಮಾನಕ್ಕೆ ಬರುವುದಿಲ್ಲ. ಶೋಷಕವರ್ಗ ತಮ್ಮ ಧೋರಣೆಗಳನ್ನು, ಪ್ರವೃತ್ತಿಯನ್ನು ತಿದ್ದಿಕೊಂಡು ಮಾನವೀಯವಾಗಿ ಬದಲಾಗಬೇಕು. ಇದು ಅವರ ಹಂಬಲವಾಗಿದೆ. ಅವರ ಕವನದ ಕೊನೆಯಲ್ಲಿ ಕಾಣುವ 'ಮಸೆದ ಗಂಡುಗೊಡಲಿ' ಕೂಡ ಎಚ್ಚರಿಕೆಯ ಸಂಕೇತವಾಗಿದೆ. ಕವಿತೆಯ ಆರಂಭದ ಸಾಲುಗಳನ್ನು ಗಮನಿಸಿದಾಗ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ. ಕವಿ ಕಣವಿಯವರಿಗೆ ಪ್ರೇರಣೆ ನೀಡಿರುವವರು ಯುಗಪ್ರವರ್ತಕ ಮಹಾಚೇತನಗಳಾದ ಬುದ್ಧ, ಏಸು, ಬಸವ, ಗಾಂಧೀಜಿಯವರು. ಹೀಗಾಗಿ ಅವರು ಯಾವುದೇ ಆಧುನಿಕ ಕ್ರಾಂತಿಕಾರಿ ಸಿದ್ಧಾಂತಗಳಿಗೆ ಸಂಪೂರ್ಣವಾಗಿ ಆವರಿಸಿಕೊಂಡವರಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಎಲ್ಲೆಡೆಯಿಂದ ಒಳ್ಳೆಯದನ್ನು ಹೀರಿಕೊಂಡು ಜೀವಪರ, ಜನಪರ ವ್ಯವಸ್ಥೆಗಾಗಿ ಮೊರೆಯುವ ಆಶಯ ಈ ಕವಿಯದು. ಇಂಥ

ಆರೋಗ್ಯಪೂರ್ಣ ಹಂಬಲದಿಂದ ಅವರು ಇಂದಿಗೂ ವಿಮುಖರಾಗಿಲ್ಲ. ಪ್ರಗತಿಶೀಲ ಚಳುವಳಿಯಲ್ಲಿ ಭಾಗಿಯಾದ ಕೆಲ ದೊಡ್ಡ ಕವಿಗಳು ನಂತರ ತಮ್ಮ ಅಂದಿನ ಆಶಯಗಳಿಗೆ ವಿರುದ್ಧವಾದ ಧೋರಣೆಗಳಿಗೆ ಸರಿದರು ಎಂಬ ಮಾತನ್ನು ನೆನಪಿಸಿಕೊಂಡಾಗ ಕವಿ ಕಣವಿಯವರ ಕಾವ್ಯದ ಅನನ್ಯತೆಯ ಮೂಲ ಸೆಲೆ ಗೋಚರಿಸುತ್ತದೆ.

'ಕೊನೆಯ ಎಚ್ಚರಿಕೆ' ಕಣವಿಯವರ ಅತ್ಯಂತ ತೀವ್ರ ಸಂವೇದನೆಯ ಕವಿತೆಗಳಲ್ಲೊಂದು. ಸಮಾಜಮುಖಿಯಾದ ಕವನಗಳಲ್ಲಿ ಕಂಡುಬರುವ, ಸ್ವಲ್ಪ ಹೆಚ್ಚಾಯಿತೇನೋ ಎನಿಸುವ ಮಾತುಗಾರಿಕೆ, ವಿಷಯದ ಪುನರುಕ್ತಿಗಳೂ ಇಲ್ಲಿ ಕಾಣುತ್ತವೆ. ಅಂದಿನ ಕಾವ್ಯದ ಸ್ವರೂಪ ಹಾಗೂ ಕವಿತೆಯನ್ನು ಬರೆದಾಗಿನ ಕವಿಯ ವಯೋಮಾನವನ್ನು ಇಲ್ಲಿ ಗಮನಿಸಬೇಕು. ಆದರೆ ಕವನದ ತೀವ್ರತೆ ಈ ಸಣ್ಣ ದೋಷಗಳನ್ನು ಇಟ್ಟುಕೊಂಡೂ ಒಂದು ಒಳ್ಳೆಯ ಕವನವಾಗಿ ಈಗಲೂ ಓದುಗರ ಹೃದಯ ಗೆಲ್ಲುತ್ತದೆ.

ಕಾವ್ಯದ ಶಿಲ್ಪ, ಲಯಗಳ ವಿಷಯಗಳಲ್ಲಿ ಎಂದೂ ರಾಜಿ ಮಾಡಿಕೊಳ್ಳದ ಚೆನ್ನವೀರ ಕಣವಿಯವರು ಕೇವಲ ಧ್ಯಾನದ ಗವಿಗೆ ಸೀಮಿತವಾದವರಲ್ಲ. ಧ್ಯಾನದ ಗವಿಯ ಜೊತೆಗೆ ಬೀದಿ ಸಮಾಜವನ್ನು ಕೂಡ ಅವರ ಸೂಕ್ಷ್ಮ ಪ್ರಜ್ಞೆ ಒಗ್ಗಿಸಿಕೊಳ್ಳುತ್ತದೆ.

ಜಗದೀಶ ಮಂಗಳೂರುಮಠ

# ೬. ಪ್ರಜಾಪ್ರಭುತ್ವ

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು
ತನ್ನ ಸರ್ವಾಧಿಕಾರಿತ್ವ ಕೊನೆಗೊಳ್ಳುತಿರೆ
ಲೋಗರೆಡೆ ಕೆಕ್ಕರಿಸಿ ನೋಡುತಿಹನು!

ಸಂಜೆ ಕಕ್ಕರಮಬ್ಬು ಗಗನ ಸಿಂಹಾಸನದಿ
ಕಪ್ಪು ಬಾವುಟವೆತ್ತಿ ತೋರಿಸಿಹುದು
ಪಕ್ಷಿಸಂಕುಲ ಕೆಲೆದು ಬಿಡುಗಡೆಯ ಹಿಗ್ಗಿನಲಿ
ಹಾಡಿ ಜಯಜಯಕಾರ ಗೈಯುತಿಹುದು.

ಹಗಲ ಉರಿವಿಸಿಲ ಸಾಮ್ರಾಜ್ಯಶಾಹಿಯು ಉರುಳಿ
ಪಡುವ ಕಡಲಿನ ಹಡಗವೇರುತಿರಲು
ಸಂಧ್ಯಾ ಸಮೀರನದೊ ಸ್ವಾತಂತ್ರ್ಯ ಸಂದೇಶ
ಹೊತ್ತು ನಾಲ್ದೆಸೆಗಳಲಿ ಹರಡುತಿಹನು.

ಚಿತ್ತರದ ಬಾನಿನಲಿ ಮತ್ತೆ ಜನತಾ ರಾಜ್ಯ
ಮೆರೆಯುತಿದೆ ಚುಕ್ಕಿಯ ಪ್ರಜಾಪ್ರಭುತ್ವ,
ವ್ಯಕ್ತಿ-ಶಕ್ತಿಯ ಗುಣವಿಕಾಸ ಪ್ರಕಾಶದಲಿ
ಜಗವ ಬೆಳಗುವುದದರ ಮೂಲತತ್ವ.

ಆಕಾಶಗಂಗೆ ಶಾಸನ ಸಭೆಯನೇರ್ಪಡಿಸಿ
ಮಂತ್ರಿಮಂಡಲವನ್ನು ನಿರ್ಮಿಸಿಹುದು

ಬುಧ ಬೃಹಸ್ಪತಿ ಶುಕ್ರ ಶನಿ ಮಂಗಳಾದ್ಯರನು
ವಿವಿಧ ಮಂತ್ರಿಗಳಾಗಿ ನೇಮಿಸಿಹುದು.

ಕೃತ್ತಿಕೆಯು ಮೃಗಶಿರವು ಸಪ್ತರ್ಷಿ ಮಂಡಲವು
ರಾಜಕೀಯದ ಪಕ್ಷ ಪಂಗಡವೆನೆ
ದಕ್ಷಿಣೋತ್ತರ ಧ್ರುವದ ರಾಯಭಾರಿತ್ವದಲಿ
ಮುಖ್ಯಮಂತ್ರಿಯು ಚಂದ್ರನಾಗಿರುವನೆ?

ಬಿಡುಗಡೆಯ ಸೌಭಾಗ್ಯ ಪಡೆದ ಬಾನಿನೊಳಿಂತು
ಶಾಂತಿ ಸಮದರ್ಶಿತ್ವ ತಂಪಿನಿರುಳು.
ಬಡವ ಬಲ್ಲಿದರೆನದೆ ಸಮತೆಯಲಿ ತಣಿಸಿಹುದು
ಸರ್ವರಿಗು ಸಮಪಾಲು ಬೆಳದಿಂಗಳು!

ಸೂರ್ಯ ಎಂದ ಕೂಡಲೆ ಏನು ನೆಪಿಗೆ ಬರುತ್ತದೆ? ಆಸ್ತಿಕರ ಪಾಲಿಗಾದರೆ ಸೂರ್ಯ ಪರಮಾತ್ಮ. ಜ್ಞಾನಿಗಳ ಪಾಲಿಗೆ ಜ್ಞಾನದ ಸಂಕೇತ; ಕತ್ತಲನ್ನು ಕಳೆದು ಜಗತ್ತಿನ ಸಕಲ ಜೀವರಾಶಿಗಳಲ್ಲಿ ಚೈತನ್ಯವನ್ನು ಮೂಡಿಸುವ ಜೀವ ಸೆಲೆ. ರೈತಾಪಿ ಮಕ್ಕಳ ಪಾಲಿಗೆ ಮುಗಿಲಲ್ಲಿ ನೇತು ಹಾಕಿದ ಗಡಿಯಾರ. ಕವಿಗಳ ಪಾಲಿಗೆ ಸೌಂದರ್ಯದ ರೂಪಕ; ಚೈತನ್ಯದ ಪ್ರೇರಕ. ಒಟ್ಟಾರೆ, ಸೂರ್ಯನೆಂದ ಕೂಡಲೆ ಪ್ರಭಾಪುಂಜ ಹಾಗೂ ಜೀವನೋತ್ಸಾಹದ ಚಿತ್ರವೊಂದು ಕಣ್ಣೆದುರು ಸುಳಿಯುತ್ತದೆ. ಆದರೆ ಕವಿ ಚೆನ್ನವೀರ ಕಣವಿ ಅವರಿಗೆ 'ಪ್ರಜಾಪ್ರಭುತ್ವ' ಕವಿತೆಯಲ್ಲಿ ಸೂರ್ಯ ಜೀವನೋತ್ಸಾಹದ ಚಿಲುಮೆಯಾಗಿ ಕಾಣುತ್ತಿಲ್ಲ. ಬದಲಿಗೆ ಅಟ್ಟಹಾಸದಿ ಮೆರೆದು ನೆಲಕಚ್ಚಿದ ಸರ್ವಾಧಿಕಾರಿಯಂತೆ ಕಾಣುತ್ತಿದ್ದಾನೆ. (ಸೂರ್ಯನನ್ನು ಸರ್ವಾಧಿಕಾರಿ ಎಂದವರಲ್ಲಿ ಬಹುಶಃ ಕಣವಿ ಅವರೇ ಮೊದಲಿಗರಿರಬೇಕು). ಇಂಥ ವಿಭಿನ್ನ ನೋಟದಿಂದಲೇ 'ಆಕಾಶಬುಟ್ಟಿ' (೧೯೫೩) ಸಂಕಲನದಲ್ಲಿನ 'ಪ್ರಜಾಪ್ರಭುತ್ವ' ಕವಿತೆ ಮೊದಲ ಓದಿಗೇ ಇಷ್ಟವಾಗಿಬಿಡುತ್ತದೆ.

ಕವಿತೆ ಆರಂಭವಾಗುವುದೇ ಸೂರ್ಯಾಸ್ತಮಾನದ ಕಕ್ಕರುಮಬ್ಬಿನೊಂದಿಗೆ. ಈ ಸೂರ್ಯಾಸ್ತ ಕವಿಯ ಕಣ್ಣಿಗೆ ಸೌಂದರ್ಯದ ರೂಪದಲ್ಲಿ ಕಾಣುತ್ತಿಲ್ಲ. ಬದಲಿಗೆ ಸೂರ್ಯನ ಸೋಲಾಗಿ ಕಾಣುತ್ತಿದೆ. ಮುಳುಗುತಿಹ ನೇಸರ ಮುದಿಸಿಂಹದಂತಾಗಿ ಪಶ್ಚಿಮದಲ್ಲಿನ ತನ್ನ ಗವಿಯ ಸೇರುತ್ತಿದ್ದಾನೆ ಎಂದು ಕವಿ ಬಣ್ಣಿಸುತ್ತಾರೆ. ಇಲ್ಲಿನ 'ಗವಿ' ಪದವನ್ನು ಗಮನಿಸಿ ಸಾಮಾನ್ಯವಾಗಿ ಗವಿ ಎಂದರೆ ಕತ್ತಲೆಯ ಕೂಪ. ಈ ಕೂಪದಲ್ಲಿ ಸೂರ್ಯ ಸೇರುತ್ತಿದ್ದಾನೆ. ಸೂರ್ಯನ ಅರ್ಥಾತ್ ಸರ್ವಾಧಿಕಾರತ್ವದ ಅವನತಿಯನ್ನು 'ಗವಿ' ಪದಪ್ರಯೋಗ ಇನ್ನಷ್ಟು ಪರಿಣಾಮಕಾರಿಯಾಗಿಸುತ್ತದೆ.

ಮುದಿಸಿಂಹದಂತೆ ಮೆತ್ತಗಾಗಿದ್ದರೂ, ಪದಚ್ಯುತಗೊಂಡು ಗವಿಯಲ್ಲಿ ಮುಳುಗುತ್ತಿದ್ದರೂ ಸೂರ್ಯನ ಅಹಂ ಅಳಿದಿಲ್ಲ. ತನ್ನ ಸರ್ವಾಧಿಕಾರತ್ವದ ಕೊನೆಯ ಕ್ಷಣಗಳಲ್ಲೂ ಉರಿಗಣ್ಣಿನ ನೋಟ ನಯಗೊಂಡಿಲ್ಲ. ಬದಲಿಗೆ ಜನರತ್ತ ಕೆಕ್ಕರಿಸಿ ನೋಡುತ್ತಿದ್ದಾನೆ.

ಒಂದೆಡೆ ಸೂರ್ಯನ ನಿರ್ಗಮನ; ಇನ್ನೊಂದೆಡೆ ಸ್ವಾತಂತ್ರ್ಯದ ಉದಯ. ನಿರ್ಗಮಿಸಿದ್ದು ಸಾಧಾರಣ ಸಾಮ್ರಾಜ್ಯವಲ್ಲ. ಅದು ಹಗಲಿನ, ಅದರಲ್ಲೂ ಉರಿ ಬಿಸಿಲಿನ ಸಾಮ್ರಾಜ್ಯ. ಪತನಗೊಂಡ ಈ ಸಾಮ್ರಾಜ್ಯ ಪಶ್ಚಿಮದ ಸಮುದ್ರದಲ್ಲಿನ ಹಡಗನ್ನೇರುತ್ತಿದೆ. ಈ ನಿರ್ಗಮನದ ಸಂದರ್ಭದಲ್ಲಿ ಮಬ್ಬು ಬೆಳಕು ಸಿಂಹಾಸನದಲ್ಲಿ ಕಪ್ಪು ಬಾವುಟವನ್ನು ಹಾರಿಸುತ್ತಿದೆ. ಹಕ್ಕಿಗಳಿಗೆ ಬಿಡುಗಡೆಯ ಸಂಭ್ರಮ. ಸ್ವಾತಂತ್ರ್ಯದ ಆ ಹಿಗ್ಗಿನಲ್ಲಿ ಅವುಗಳು ಜಯಕಾರ ಮೊಳಗಿಸುತ್ತಿವೆ. ಸಂಧ್ಯಾ ಸಮೀರನದು ಚಾರನ ಪಾತ್ರ. ಇಡೀ ಪ್ರಕೃತಿಯೇ ಬಿಡುಗಡೆಯ ಸಂಭ್ರಮಕ್ಕೆ ಒಂದಲ್ಲಾ ಒಂದು ರೀತಿಯಲ್ಲಿ ಸ್ಪಂದಿಸುತ್ತಿದೆ.

ಸರಿ, ಸರ್ವಾಧಿಕಾರಿ ಸೂರ್ಯ ಪದಚ್ಯುತಗೊಂಡು ಗಂಟುಮೂಟೆ ಕಟ್ಟಿದ್ದಾಯಿತು. ಮುಂದೇನು? ಮುಂದಿನದು ಜನತಾ ರಾಜ್ಯದ ಉದಯ; ಅಗಣಿತ ಚುಕ್ಕಿಗಳ ಪ್ರಜಾಪ್ರಭುತ್ವ. ಈ ಪ್ರಜಾ ಸಾಮ್ರಾಜ್ಯದಲ್ಲಿ ಸರ್ವಾಧಿಕಾರಿಗಳಿಗೆ ಸ್ಥಾನವಿಲ್ಲ. ಇಲ್ಲಿ ಸರ್ವರಿಗೂ ಸಮಪಾಲು. ಪ್ರತಿ ವ್ಯಕ್ತಿಯ ಶಕ್ತಿಗೂ ಇಲ್ಲಿದೆ ಮನ್ನಣೆ.

ಚುಕ್ಕಿಗಳ ಪ್ರಜಾಪ್ರಭುತ್ವದ ಸಾಮ್ರಾಜ್ಯದಲ್ಲಿ ಆಕಾಶಗಂಗೆ ಶಾಸನಸಭೆಯನ್ನು ನಡೆಸಿ, ಮಂತ್ರಿಮಂಡಲವನ್ನು ರಚಿಸಿದೆ. ಬುಧ, ಬೃಹಸ್ಪತಿ, ಶುಕ್ರ, ಶನಿ ಮಂಗಳನಂಥ ಮಹಿಮಾನ್ವಿತರು ಮಂತ್ರಿಗಳಾಗಿ ಅಧಿಕಾರ ಸೂತ್ರ ಹಿಡಿದಿದ್ದಾರೆ. ಇಂಥ ಅಪರೂಪದ ಆಡಳಿತ ವ್ಯವಸ್ಥೆಯಲ್ಲಿ ಮುಖ್ಯಮಂತ್ರಿ ಯಾರು ? ಇನ್ನಾರು, ಹಾಲಿನಂಥ ಬೆಳದಿಂಗಳ ಚೆಲ್ಲುವ ಚಂದಿರನಲ್ಲವೆ ?

ಸರ್ವಾಧಿಕಾರಿ ಆಡಳಿತ ಈಗ ಇತಿಹಾಸಕ್ಕೆ ಸಂದ ಪುಟ. ವರ್ತಮಾನದ ಪ್ರಜಾಪ್ರಭುತ್ವ ವ್ಯವಸ್ಥೆಯ ಬಾನಿನಲ್ಲಿ ಶಾಂತಿ ಸಮದರ್ಶಿತ್ವ ನೆಲೆಸಿದೆ. ಇಲ್ಲಿ ಬಡವ ಬಲ್ಲಿದ ಎನ್ನುವ ಭೇದವೇ ಇಲ್ಲ. ಚಂದ್ರನ ಆಡಳಿತದಲ್ಲಿ ಸರ್ವರಿಗೂ ಸಮಪಾಲು ಬೆಳದಿಂಗಳು.

ಪ್ರಜಾಪ್ರಭುತ್ವದ ಮಹತ್ವವನ್ನು ಎತ್ತಿ ಹಿಡಿಯುವುದರೊಂದಿಗೆ ಕವಿ ತಮ್ಮ ಕವಿತೆಯನ್ನು ಮುಗಿಸುತ್ತಾರೆ. ಇಪ್ಪತ್ತೆಂಟು ಸಾಲುಗಳ ಪುಟ್ಟಶರೀರದ ಈ ಕವಿತೆ ಸೂರ್ಯಚಂದ್ರರ ಮೂಲಕ ಲೋಕವ್ಯಾಪಾರವನ್ನು ಅದ್ಭುತವಾಗಿ ಹೇಳುತ್ತದೆ. ವರ್ತಮಾನಕ್ಕೆ, ರಾಜಕಾರಣಕ್ಕೆ ಕಣವಿ ಸ್ಪಂದಿಸಿರುವ ಅಪರೂಪದ ಉದಾಹರಣೆಯಾಗಿ ಈ ಕವಿತೆ ಮುಖ್ಯವಾಗುತ್ತದೆ. ಅಂದ ಹಾಗೆ, ಈ ಕವಿತೆಯ ಮೂಲಕ ಕವಿ ಹೇಳಲು ಹೊರಟಿರುವ ಪ್ರಜಾಪ್ರಭುತ್ವದ ಕುರಿತು ಮಾತ್ರವಾ ?

ಮೇಲ್ನೋಟಕ್ಕೆ ಸ್ಪಷ್ಟವಾಗುವ ಪ್ರಜಾಪ್ರಭುತ್ವದ ಅರ್ಥವನ್ನು ಮರೆತು ಇನ್ನೊಂದು ನಿಟ್ಟಿನಲ್ಲಿ ಕವಿತೆಯನ್ನು ಓದಿಕೊಳ್ಳಲಿಕ್ಕೂ ಸಾಧ್ಯವಿದೆ. ಭಾರತದ ಸ್ವಾತಂತ್ರ್ಯೋದಯದ ಹರ್ಷಗೀತೆಯೂ 'ಪ್ರಜಾಪ್ರಭುತ್ವ' ಕವಿತೆ ಕಾಣಿಸುತ್ತದಲ್ಲವೆ ?

ಕವಿತೆಯಲ್ಲಿನ ಪಶ್ಚಿಮಾದ್ರಿಯ ಗವಿ, ಪಡುವ ಕಡಲು ಇವೆಲ್ಲ ಸೂಚಿಸುವುದು ಪಶ್ಚಿಮ ದೇಶವನ್ನು ಇಂಗ್ಲೆಂಡನ್ನು - ಅಲ್ಲವೆ? 'ಹಗಲ ಉರಿವಿಸಿಲ ಸಾಮ್ರಾಜ್ಯಶಾಹಿ' ಎನ್ನುವ ಪದ ಇಂಗ್ಲೆಂಡ್‌ನ "ಸೂರ್ಯ ಮುಳುಗದ ಸಾಮ್ರಾಜ್ಯ" ಎನ್ನುವ ಖ್ಯಾತಿ ಮುಕ್ಕುಗೊಳ್ಳುತ್ತಿದೆ.

ನವೋದಯದ ಸೌಂದರ್ಯೋಪಾಸನೆಯ ಹಾದಿಯಲ್ಲಿ ನಡೆದುಬಂದ ಕಣವಿಯಂಥ ಕವಿ ಸೂರ್ಯನನ್ನು ಸರ್ವಾಧಿಕಾರಿಯನ್ನಾಗಿ ಕಾಣುವುದನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಈ ಕವಿತೆಯಲ್ಲಿ ಕೂಡ ಕಣವಿ ಸೂರ್ಯನ ಕುರಿತು ಮಾಡನಾಡುತ್ತಿದ್ದಾರೆ ಎಂದು ಭಾವಿಸಬೇಕಿಲ್ಲ. ಅವರು ಸೂರ್ಯನ ಮೂಲಕ ಸಾಮ್ರಾಜ್ಯಶಾಹಿಗಳ ನಿರ್ಗಮನದ ಕುರಿತು ಹೇಳುತ್ತಿದ್ದಾರೆ. "ಸೂರ್ಯ ಮುಳುಗದ ಸಾಮ್ರಾಜ್ಯ' ಎನ್ನುವ ಇಂಗ್ಲೆಂಡ್‌ನ ಗರ್ವವನ್ನು ಅಣಕಿಸಲು ಸೂರ್ಯ ಕವಿಗೆ ರೂಪಕವಾಗಿ ಒದಗಿದ್ದಾನೆ.

ಸ್ವಾತಂತ್ರ್ಯ ಚಳುವಳಿಯ ಸಫಲತೆಯೊಂದಿಗೆ ಕವಿತೆಯನ್ನು ನೆನಪಿಸಿಕೊಂಡಾಗ, ಕವಿತೆಯ ಒಡಲಲ್ಲಿನ ವ್ಯಂಗ್ಯ ಗಮನಿಸಿ. ಇಲ್ಲಿನ ಪ್ರಜಾಪ್ರಭುತ್ವ ಇಂಗ್ಲೆಂಡ್‌ನಲ್ಲೂ ಇದೆ. ಪ್ರಜಾಪ್ರಭುತ್ವ ವ್ಯವಸ್ಥೆ ಹೊಂದಿರುವ ವಿಶ್ವದ ಎರಡು ದೊಡ್ಡ ದೇಶಗಳು ಭಾರತ-ಇಂಗ್ಲೆಂಡ್ . ಹೀಗಿದ್ದೂ ಒಂದು ಪ್ರಜಾಪ್ರಭುತ್ವ ಆಡಳಿತದ ದೇಶವೊಂದು ಮತ್ತೊಂದು ದೇಶದ ಮೇಲೆ ಪ್ರಭುತ್ವ ಸಾಧಿಸಿದ ವೈಪರೀತ್ಯ. ಈ ಮೂಲಕ ನಡೆದ ಪ್ರಜಾಪ್ರಭುತ್ವದ ಅಣಕವನ್ನು ಕವಿತೆ ಹೇಳುತ್ತದೆ. ಅಂತಿಮವಾಗಿ ಈ ವಿಪರೀತಗಳ ನಡುವೆಯೇ ನಿಜವಾದ ಪ್ರಜಾಪ್ರಭುತ್ವ ಸ್ವಾತಂತ್ರ್ಯ ರೂಪದಲ್ಲಿ ಉದಯಿಸುತ್ತದೆ. ಇಂಥ ಅಪೂರ್ವ ಧ್ವನಿಗಳಿಂದ 'ಪ್ರಜಾಪ್ರಭುತ್ವ' ಕವಿತೆ ಓದುಗನಿಗೆ ಇಷ್ಟವಾಗುತ್ತದೆ ; ಮತ್ತು ಕಾಡುತ್ತದೆ.

**ಚ.ಹ. ರಘುನಾಥ**

# ೭. ತೀರ್ಪು

“ ”

ಒಂದು ಸಂಜೆ ಪಿಂಜರಿತ ಮೇಘ ಪಡುವಣದ ಬಾನಿನಲ್ಲಿ
ಶ್ರೀ ಸ್ವಯಂಭು ಸ್ವಚ್ಛಂದ ಮನದಿ ಕುಳಿತಂತೆ ಲೀಲೆಯಲ್ಲಿ
ಶೋಭಿಸಿರಲು, ಕಣ್ಣಟ್ಟ ಹರಿವವರ ಹಬ್ಬಿದಂಥ ಕಡಲು
ತೆರೆಯನಟ್ಟ ತೆರೆ ತೂರುತಿತ್ತು ಹುಡಿ ಚಿನ್ನದಂಥ ಮಳಲು.

ಕಡಲಿನಂಚಿನಲಿ ಸೂರ್ಯಬಿಂಬವಿನ್ನೇನು ಮುಳುಗುತಿತ್ತು
ಕಿರಣರಹಿತ ಕೆಂದಳಿರ ಹಾಸಿದೊಲು ನೀರು ಮಿರುಗುತಿತ್ತು
ಮಂದಗಾಮಿ ತಂಗಾಳಿ ರಯ್ಯನೊಯ್ಯಾರದಿಂದ ಬಂದು
ಮುಟ್ಟಿ ಮುಟ್ಟದೊಲು ತೀಡುತಿತ್ತು ತೆರೆ-ಚುಂಬನಕ್ಕೆ ಸಂದು.

ಯೇಸುಕ್ರಿಸ್ತ ಅಸ್ವಸ್ಥ ಮನದಿ ಕುಳಿತಿದ್ದ ಮಳಲ ತಡಿಗೆ
ಕೆನ್ನೆಗೈಯು, ಅರೆದೆರೆದ ಕಣ್ಣು, ನಸುಬಾಗು ಮೊಗದ ಬಗೆಗೆ;
ನೂರು ಯೋಚನೆಯ ಗಾಣದಲ್ಲಿ ಮನ ಸಿಕ್ಕು ಗಾಸಿಗೊಂಡು
ಲೋಕಹಿತದ ಚಿಂತನೆಗೆ ತೊಡಗೆ ತನ್ನಲ್ಲಿ ನಿಜವ ಕಂಡು ;

ಮತದ ಮೌಢ್ಯ ಕಟ್ಟಳೆಯ ನಿಗಳ ದ್ವೇಷಗಳ ಕಳೆವುದೆಂತು
ಫರಿಸಾಯರವರ ದುರ್ನಡತೆ ನೀಗಿ ಜನ ನೇರಿತಾಗಲೆಂತು ?
ಲೋಕದಿಚ್ಛೆ ನಾ ನುಡಿದು ಸತ್ಯ ಧ್ವಜವೆತ್ತಿ ಹಿಡಿಯಲೆಂತು ?
ಒಬ್ಬರೊಬ್ಬರನು ಅರ್ಥ ಮಾಡಿಕೊಳ್ಳದಿರೆ ಏನು ಬಂತು ?

ಇಂತು ಚಿಂತೆಯಲಿ ಮುಳುಗಿ ಯೇಸು ಪ್ರಾರ್ಥಿಸಿದನಾಗ ಮನದಿ;
"ತಂದೆ ತಂದೆಯೇ ಜನರಿಗೊಳ್ಳೆಯದ ತಿಳಿವ ಬುದ್ಧಿ ಭರದಿ
ಬೆಳೆದು, ಸತ್ಯ ಧರ್ಮಾನುಚರಣೆ ಬೇರೂರಿ ಕರುಣೆಯಲ್ಲಿ
ಕೊನೆಗೆ ಎಲ್ಲ ಲಯ ಹೊಂದಲಲ್ಲಿ ವಿಶ್ವಾತ್ಮ ಪ್ರೇಮದಲ್ಲಿ".

ಅದೇ ಸಮಯ ಫರಿಸಾಯರೇಸುಗವಮಾನ ಮಾಡಲೆಂದು
ಹೊತ್ತು ಕಾದು ನವಯುವತಿ ಮುಡಿಯ ನಿಡುಗೂದಲನ್ನು ಹಿಡಿದು
ಹುಲಿಯು ಚಿಗರೆಯನು ಎಳೆವ ತೆರದಿ ದರದರನೆ ಎಳೆದು ತಂದು
ಕಲ್ಲು ಮುಳ್ಳಿನಲಿ ಹಾಸಿಬೀಸಿ ಯೇಸುವಿನ ಮುಂದೆ ಬರಲು -

ಊರು ಮಗ್ದಲಾ, ಹೆಸರು ಮೇರಿ, ಏನೆಂತ ರೂಪರಾಶಿ!
ಕಪಟರಹಿತೆ ದೀನಾಸ್ಯೆಯಾಗಿ ಪಾಷಂಡಿಗಳಿಗೆ ರೋಸಿ
ಚಿಂದಿ ಬಟ್ಟೆ, ಮೈಯೆಲ್ಲ ಘಾಯ, ಚೀರಿಡುವ ಗೋಳು ಕೇಳಿ
ಕರಗಲಿಲ್ಲ ಎದೆ ಮರುಗಲಿಲ್ಲ ಮನ ಅವರಿಗದುವೆ ಹೋಳಿ.

ಪ್ರಾಣ ಸಂಕಟದಿ ಕೆಡೆದು ಬಿದ್ದ ಮಗ್ದಲದ ಕುವರಿ ಮೇರಿ
ಹಿಂದೆಯೊಮ್ಮೆ ಕಂಡಿದ್ದಳವನ ಆ ಸ್ವಾಮಿ ಗುಡ್ಡವೇರಿ
ಜನರ ಗುಂಪಿಗುಪದೇಶಗೈವ ದಿನ ತಾನು ನಿಂತು ಕೇಳಿ
ತೃಪ್ತಿ ಹೊಂದಿ ಹೋಗಿದ್ದಳಂದು ಇಂದೂನು ಧೈರ್ಯ ತಾಳಿ.

ಇಂಥ ಸಮಯದಲಿ ಮತ್ತೆ ಅವನಿಗೆಯೆ ಶರಣು ಹೊಗುವೆನೆಂದು
ರಕ್ತಸಿಕ್ತ ದೇಹವನು ಎಳೆದು ಶ್ರೀಪಾದದೆಡೆಗೆ ಬಂದು
ತಲೆಯನಿರಿಸುತಿರೆ ಸುತ್ತು ನಿಂತ ಮತಿಗೆಟ್ಟ ಜನರ ಗುಂಪು
ಮರುಳರಂತೆ ಹೋಯೆಂದು ನಕ್ಕು ಮೂದಲಿಸಿ ನುಡಿದರಿಂತು :

"ದೇವಸುತನು ನಾನೆಂದು ನುಡಿಯುತಿಹ ಎಲವೊ ಮೂರ್ಖ ಮರಿಯೆ
ನ್ಯಾಯ ಮತ್ತೆ ಅನ್ಯಾಯಗಳು ಪರಿಕಿಸುವೆನೆಂಬ ಕುರಿಯೆ
ಸತ್ಯಪ್ರೇಮಗಳ ಬಿತ್ತಲಿಹೆಯ ಉನ್ಮತ್ತ ಮತಿಗಳೊಡೆಯ
ಈಗ ಹೇಳು ಈ ಯುವತಿ ನಡತೆಯಲಿ ಇಹುದು ಯಾವ ನ್ಯಾಯ ?"

"ಇವಳು ಪಾಪಿ ವ್ಯಭಿಚಾರಿಯೆಂದು ಇದೊ ನುಡಿವರೆಲ್ಲ ಸಾಕ್ಷಿ
ಕಣ್ಣಾರೆ ಕಂಡು ಆರೋಪ ಹೊರಿಸಿ ಎಳೆದಿಹರು ಇಲ್ಲಿ ನೂಕಿ
ಹೇಳು ನಿನ್ನ ತೀರ್ಪೇನು ಇಲ್ಲಿಯೇ ನಿಂತ ಕಾಲ ಮೇಲೆ
ಮೂರ್ಖ ಮಂದಿ ನೀನೊಬ್ಬ ಶ್ರೇಷ್ಠ ಗುರು ಎಂದು ಸಾರಲಿಲ್ಲೆ?"

ಚುಚ್ಚುಮಾತುಗಳನೆಸೆಯುತಿರಲು ಪುಂಖಾನುಪುಂಖವಾಗಿ
ಶಾಂತ ಚಿತ್ತದಲಿ ಸೌಮ್ಯಭಾವದಲಿ ಕೇಳುತಿದ್ದ ಯೋಗಿ
ತಲೆಯ ಬಾಗಿ ನಿಟ್ಟುಸಿರನಿಟ್ಟು ಸೈತಿಟ್ಟು ಕ್ರಿಸ್ತಸ್ವಾಮಿ
ತನ್ನ ಕಾಲಬಳಿ ಬಿದ್ದ ಮುಗ್ಧೆಯನು ಕಂಡ ವಿಶ್ವಪ್ರೇಮಿ.

ಕತ್ತನೆತ್ತಿ ಯೇಸುವಿನ ಮೊಗವ ನೋಡಿದಳು ಮೇರಿ ತಣಿಯೆ
ಎದೆಯ ದೈನ್ಯ ಕಣ್ಣನಲಿ ಬಂದು ಕಂಬನಿಗಳಾಗಿ ಹರಿಯೆ
ತನ್ನ ದುಃಖವನು ತೋಡಿಕೊಳ್ಳುವರೆ ಮಾತು ಬಾರದಿತ್ತು
ಮೂಕ ಶೋಕದಲಿ ಒಡಲ ಭಾಂಡ ಒಳಗೊಳಗೆ ಕುದಿಯುತಿತ್ತು!

ಆದರವಳ ಜೀವಾತ್ಮ ಶೋಕ ಪರಮಾತ್ಮನೆದೆಯ ಸೇರಿ
ಮೌನ ವೀಣೆ ಮಿಡಿದಂತೆ ತಂತಿ ಸಿಡಿದಂತೆ ದನಿಯ ಬೀರಿ;
"ನನ್ನ ಸ್ವಾಮಿ ಓ ಯೇಸುಕ್ರಿಸ್ತ ಪ್ರಭು, ಕರುಣೆಸೆನ್ನ ತಂದೆ
ನಾನು ಮಾತ್ರ ಅರಿಯದೆಯೆ ಗೈದ ಅಪರಾಧ ಮನ್ನಿಸೆಂದೆ"

ಎಂದು ನೊಂದು ಪರಿತಪಿಸಿ ಆತ್ಮನೈವೇದ್ಯ ನೀಡಲಾಗಿ
ಅವನ ಕಣ್ಣನಲಿ ಕ್ಷಮೆಯು ರಮಿಸಿ ಬರೆ ಶಾಂತಚಿತ್ತಳಾಗಿ
ಮತ್ತೆ ಮತ್ತೆ ಆ ದಿವ್ಯ ಮೊಗದ ಸಂಪದವ ನೋಡಿ ನಂಬಿ
ಕಣ್ಣುತುಂಬಿ ಎದೆ ತುಂಬಿ ತಲೆಯ ಬಾಗಿದಳು ಜೀವ ತುಂಬಿ.

ತಲೆಯನೆತ್ತಿ ಕಣ್ತೆರೆದು ಯೇಸು ನೋಡಿದನು ನೆರೆದ ಜನವ
ಧೈರ್ಯವಾಗಿ ಗಂಭೀರವಾಗಿ ಪ್ರಶ್ನಿಸಿದನವರ ಮನವ;
ನಿಮ್ಮ ಧರ್ಮಶಾಸ್ತ್ರದಲಿ ಇದಕೆ ಪ್ರತಿಶಿಕ್ಷೆಯಾವುದೆನಲು
ಕಲ್ಲು ಹೊಡೆದು ಸಾಯಿಸುವುದೆಂಬ ಉತ್ತರವು ಕೇಳಿ ಬರಲು

"ನಿಮ್ಮ ಧರ್ಮಶಾಸನಕೆ ನಾನು ಪ್ರತಿ ಮಾತನಾಡುತಿಲ್ಲ
ಹೆಣ್ಣಿನಂತೆ ಗಂಡಸಿಗು ಶಿಕ್ಷೆ ಕಟ್ಟಳೆಯದೇಕೆ ಇಲ್ಲ-
ಎಂಬ ಯೋಚನೆಯ ಮಾಡುತಿದ್ದೆ ಸರಿ, ನಿಮ್ಮ ಶಾಸ್ತ್ರಕೋತು
ನೀವು ನಡೆಯುತಿರೆ ನಿಮ್ಮ ಇಷ್ಟವದು, ಆದರೊಂದು ಮಾತು;

"ಇಲ್ಲಿ ನೆರೆದ ಜನರಲ್ಲಿ ಯಾರು ಈ ಮೊದಲು ಒಂದು ಕೂಡ
ಪಾಪಗೈಯದಿಹರವರು ಮೊದಲು ಕಲು ಹೊಡೆಯಬೇಕು ನೋಡ;
ದುಷ್ಟ ಕೃತಿಯ ಮುಚ್ಚಿಟ್ಟುಕೊಂಡು ಉತ್ತಮಿಕೆಯನ್ನು ನಟಿಸಿ
ಕೊಂದ ಪಾಪ ಅವರನ್ನೆ ತಿಂದು ತೇಗುವುದು ಪೀಡೆಗೊಳಿಸಿ"

ಎಂದು ನುಡಿಯೆ ನೆರೆದಿದ್ದ ಜನತೆ ತಳಮಳಿಸಿ ತಮ್ಮ ತಮಗೆ
ಅವರು ಇವರ ಮುಖ ನೋಡಿ ಆತ್ಮವಂಚಕರು ತೆಪ್ಪಗಾಗೆ
ಒಬ್ಬರೊಬ್ಬರೂ ಕಲ್ಲನೆತ್ತಿ ಹೊಡೆಯಲಿಕೆ ಧೈರ್ಯವಿರದೆ
ಬಂದ ದಾರಿಯನು ಹಿಡಿದು ಸಾಗಿದರು ನಿಲ್ಲಲಿಷ್ಟಪಡದೆ.

ಮೇರಿ ಯೇಸುವಿನ ಚರಣ ತೊಳೆಯುತಿರೆ ಕಣ್ಣಧಾರೆಯಿಂದ
ಪಾದ ಪದ್ಮಗಳ ತಬ್ಬಿ ಹಿಡಿದು ತನ್ನೆರಡು ಕೈಗಳಿಂದ:
"ಪಾಪವೆಂಬ ತಿಳುವಳಿಕೆ ಆಗ ನನಗಾಗಲಿಲ್ಲ ತಂದೆ
ಇದಕೆ ಅವರು ಅಪರಾಧವೆನಲು ನಾನರಿಯದೇನೆ ಗೈದೆ.

"ನನ್ನ ಊರಿನೆಡೆ ಇನ್ನು ಹೋಗೆ ನನಗಾರು ಇಲ್ಲವಲ್ಲಿ
ನಿನ್ನ ಮಗಳು ನಾ ನಿನ್ನ ತಂಗಿ ತಾಯಿಯೊಲು ಇರುವೆನಿಲ್ಲಿ.
ಅನುಗ್ರಹಿಸು ಓ ಗುರುವೆ ನಿನ್ನ ಆಜನ್ಮ ಸೇವೆಯೊಂದು"
ಎಂದು ದುಃಖ ತಾಪದಲಿ ಕರುಣಕಥೆ ತೋಡಿಕೊಂಡಳಂದು.

ಪವಿತ್ರಾತ್ಮ ಪರಮಾತ್ಮ ವರದ ಕರ ಚಾಚಿ ಕರುಣೆ ಹೊನಲು
ಹರಿದು ಘಾಯಗಳ ಸವರಿ ಮೆಲ್ಲಿನಲಿ ಯೇಸು ಸಂತವಿಡಲು
ಮೈಯನೋವಿನುರಿ ಮಾಯವಾಗಿ ತಂಪಾಗಿ ಸೌಖ್ಯವೊದಗಿ
ಆತ್ಮಶಾಂತಿಯಮೃತದಲಿ ತೇಲೆ ಆನಂದಲೋಲೆಯಾಗಿ.

ತಂಪು ಗಾಳಿ ನಿಷ್ಕಂಪಮಾದ ಸಾಗರದಿ ತೀಡುತಿರಲು
ಕ್ರಿಸ್ತನಮರಸಂದೇಶ ಪೊತ್ತು ಸಮತೆಯಲಿ ಹಂಚುತಿರಲು
ಅಮೃತ ಕಿರಣನುದಯಿಸಿದ ಇಳೆಯ ಬೆಳದಿಂಗಳಲ್ಲಿ ತೊಳೆದು
ತೇನೆ ಹಕ್ಕಿ ಮಂಗಲವ ಪಾಡಿ ಹಾರಿತ್ತು ನಭವನಳೆದು.

"

"

'ತೀರ್ಪು' - ಶ್ರೀ ಚೆನ್ನವೀರ ಕಣವಿಯವರ ಮೂರನೆಯ ಸಂಕಲನವಾದ 'ಆಕಾಶಬುಟ್ಟಿ' ಕೃತಿಯಲ್ಲಿ ಮೂಡಿಬಂದಿರುವ ಕಥನಕವನ. ನವೋದಯದ ಕಾಲದ ಗೀತ ಪರಂಪರೆಯ ಶಬ್ದ-ನಾದ-ಲಯಗಳ ಮಟ್ಟು ಇಪ್ಪತ್ತಮೂರು ನುಡಿಗಳ ಈ ಕಥನಗೀತದಲ್ಲಿ ಸುಂದರವಾಗಿ ಚಿತ್ರಿತವಾಗಿದೆ.

ಪರಮಪ್ರೇಮದ ಮೂರ್ತಿಯಾದ ಏಸುಕ್ರಿಸ್ತನು, ಮಹಿಳೆಯೊಬ್ಬಳನ್ನು ಕೊಲ್ಲಲು ಎಳೆತಂದ ಮಂದಿಗೆ ಬುದ್ಧಿ ಹೇಳಿ ನೀಡಿದ ತೀರ್ಪು. ಆ ಮೂಲಕ ಇಡೀ ಜಗತ್ತಿಗೆ ಸಾರಿದ ಉಪದೇಶ. ಈ ಕವಿತೆಯ ಮೂಲದ್ರವ್ಯ.

ಶ್ರೀ ಸ್ವಯಂಭುವೇ ತನ್ನ ಅದ್ಭುತ ಮನದ ದಿವ್ಯಲೀಲೆಯಲ್ಲಿ ಲೀನವಾಗಿ ಕುಳಿತಂತೆ ಪಶ್ಚಿಮದ ಬಾನಬಟ್ಟೆಯಲ್ಲಿ ಕಂಗೊಳಿಸುತ್ತಿರುವ ಮೋಡ; ಒಂದಾದ ಮೇಲೊಂದರಂತೆ ಅಲೆಗಳನ್ನೆಬ್ಬಿಸುತ, ತಡಿಗೆ ಹೊಂಬಣ್ಣದ ಮಳಲ ಹಾಸುವ ; ದಿಗಂತದವರೆಗೂ ಕಾಣುವ ಅಸದೃಶವಾದ ಜಲನಿಧಿ. ಕಡಲ ನೀರಿಗೆ ಕೆಂದಳಿರ ವರ್ಣ ಸಿಂಚನಗೈದು, ಕಡಲಾಚೆ ಮರೆಯಾಗುತ್ತಿರುವ ಸೂರ್ಯಬಿಂಬ, ತೆರೆಗಳನ್ನಿನಿತಿನಿತೇ ಚುಂಬಿಸುತ ಮೃದು ಮಧುರಗಾಮಿಯಾಗಿ ಸಾಗುತ್ತಿರುವ ತಂಗಾಳಿ- ಹೀಗೆ ಬಾನ್ಭುವಿಗಳ ರಮ್ಯ ವರ್ಣನೆಯೊಡನೆ ಆರಂಭವಾಗುವ ಕವನ ಬದುಕಿನ ದ್ವಂದ್ವತೆಯ ಸಂಕೇತದಂತಿದೆ. ಬಾಳಿನ ಒಳಿತು-ಕೆಡುಕುಗಳ ದ್ವಂದ್ವವು ದೇವನ ಕರುಣೆಯಿಂದ ಕೊನೆಗೆ ಒಳಿತಿಗಾಗಿ ಹರಸಲ್ಪಡುವಂತೆ, ಈ ಕವನದಲ್ಲಿಯೂ ಒಳಿತು-ಕೆಡುಕುಗಳ ನಡುವಣ ಸಂಘರ್ಷ, ದೇವಮಾನವನ ಕಾರುಣ್ಯದ ಸಂಸ್ಪರ್ಶ, ಅಮೃತೋಪಮ ಶಾಂತಿಸುಖದಲ್ಲಿ ಮಿಂದು ಪಾವನಳಾದ ದಗ್ಧ ಹೃದಯಿ ಮುಗ್ಧೆ ಮೇರಿಯ ಚಿತ್ರ ಅತ್ಯಂತ ಕಲಾತ್ಮಕ ಶೈಲಿಯಲ್ಲಿ ಪಡಿಮೂಡಿದೆ.

ಪುತಿನ ಅವರು ಹೇಳುವಂತೆ ಕಾವ್ಯಗೀತಾತ್ಮಕ ಶೈಲಿಯ ಸಾಪೇಕ್ಷ ಕಾವ್ಯ ಪರಂಪರೆಯನ್ನು ಮುನ್ನಡೆಸಿದ ಕವಿ ಶ್ರೀ ಕಣವಿಯವರು. ಲೋಕ ಹಿತಚಿಂತನೆಯಲ್ಲಿ ತೊಡಗಿದ್ದ 'ಕೆನ್ನಗೈ ಅರೆದೆರೆದ ಕಣ್ಣು, ನಸುಬಾಗುಮೊಗದ' ಏಸುವಿನ ಮನಸ್ಸು ಅಂದು, - ಮತದ ಮೌಢ್ಯ ಕಟ್ಟಲೆಗಳಿಂದಾಗಿರುವ

ದ್ವೇಷದ ಸರಪಳಿಯನ್ನು ಕಡಿಯುವುದೆಂತು? ದುರ್ಜಡತೆಯ ಫರಿಸಾಯರಿಗೆ ಸದ್ಬುದ್ಧಿ ಬರುವುದೆಂದಿಗೆ? ಜಗದಲ್ಲಿ ಸತ್ಯ ಧ್ವಜವನ್ನೆತ್ತಿ ನಿಲ್ಲಿಸುವುದೆಂತು?- ಎಂಬ ನೂರಾರು 'ಯೋಚನೆಗಳ ಗಾಣ'ಕ್ಕೆ ಸಿಕ್ಕಿ ನಲುಗಿದೆ. ಏಸುವಿನ ಮಾನವ ಪ್ರೀತಿಯ ಕಾಳಜಿಯನ್ನು ಇಲ್ಲಿನ ರೂಪಕವು ಎತ್ತಿ ಹಿಡಿಯುತ್ತದೆ. ತನ್ನ ತಂದೆಯಲ್ಲಿ ಏಸುವು ನಿರಂತರವಾಗಿ ಜಗದ ಜನರಿಗಾಗಿ ಸತ್ಯ-ಸದ್ಬುದ್ಧಿ-ಕರುಣೆ-ವಿಶ್ವಾತ್ಮಪ್ರೇಮಕ್ಕಾಗಿ ಕೋರಿದ್ದಾನೆ. ಆದರೆ ಏಸುವಿನ ಜನಾನುರಾಗ, ಲೋಕಪ್ರೀತಿಗೆ ಅಸೂಯೆಗೊಂಡಿದ್ದ ಫರಿಸಾಯರ ಆಲೋಚನೆಯೇ ಬೇರೆಯದಾಗಿತ್ತು. ಎಂದಾದರೊಮ್ಮೆ ಏಸುವನ್ನು ಅವಮಾನಿಸಲು ಹೊಂಚು ಹಾಕಿದ್ದ ಅವರು, ನವಯುವತಿಯೊಬ್ಬಳ ನಿಡುಗೂದಲು ಹಿಡಿದು ಏಸುವಿನ ಜಂಜಡಗಳಿಗೆ ರೋಸಿಹೋಗಿ ದೈನ್ಯತೆಯೇ ಮೂರ್ತಿವೆತ್ತಂತಿದ್ದ ಆಕೆಯನ್ನು ಕಣವಿಯವರು ವರ್ಣಿಸಿರುವುದು ಹೀಗೆ -

**ಊರು ಮಗ್ದಲಾ, ಹೆಸರು ಮೇರಿ, ಏನೆಂಥ ರೂಪರಾಶಿ**
**ಕಪಟರಹಿತೆ ದೀನಾಸ್ಯೆಯಾಗಿ ಪಾಷಂಡಿಗಳಿಗೆ ರೋಸಿ**
**ಚಿಂದಿಬಟ್ಟೆ ಮೈಯೆಲ್ಲ ಘಾಯ ಚೀರಿಡುವ ಗೋಳು ಕೇಳಿ**
**ಕರಗಲಿಲ್ಲ ಎದೆ, ಮರುಗಲಿಲ್ಲ ಮನ, ಅವರಿಗದುವೆ ಹೋಳಿ**

ಆ ನಿಷ್ಕಪಟ ಹೃದಯಿಯ ಆಕ್ರಂದನಕ್ಕೆ ಕರಗುವ ಹೃದಯವಂತರು ಅಲ್ಲಿರಲಿಲ್ಲ. ಬದಲಾಗಿ- 'ದೇವಸುತನೆಂದು ಕರೆಸಿಕೊಳ್ಳುವ, ನ್ಯಾಯ-ಅನ್ಯಾಯಗಳನ್ನು ಪರೀಕ್ಷಿಸುವ ನೀನು, ಈ ಅನಾಚಾರದಲ್ಲಿ ತೊಡಗಿದವಳಿಗೆ ನೀಡುವ ತೀರ್ಪೇನು ಈ ಕೂಡಲೇ ತಿಳಿಸು' ಎಂದು ಏಸುವಿಗೆ ಚುಚ್ಚು ಮಾತುಗಳ ಸವಾಲು ಹಾಕಿದರು.

**ಸತ್ಯ ಪ್ರೇಮಗಳ ಬಿತ್ತಲಿಹೆಯ ಉನ್ಮತ್ತ ಮತಿಗಳೊಡೆಯ**
**ಈಗ ಹೇಳು ಈ ಯುವತಿ ನಡತೆಯಲಿ ಇಹುದು ಯಾವ ನ್ಯಾಯ**

ಎಂದು ಕೊಂಕಿಸಿ ನುಡಿದರು ಪಾಷಾಣ ಹೃದಯಿಗಳಾದ ಫರಿಸಾಯರು. ಹಿಂದೆ ತಾನೊಮ್ಮೆ ಏಸುವಿನ ಉಪದೇಶಾಮೃತದ ಸವಿಯನ್ನು ದೂರದಿಂದಲೇ ಸವಿದಿದ್ದ ಮೇರಿ. ಈಗ ತನ್ನ ರಕ್ತಸಿಕ್ತ ದೇಹವನ್ನು ಎಳೆಯುತ್ತ ಏಸುವಿನ ಸಿರಿಪಾದಗಳಿಗೆ ಮಣಿದು ತನ್ನ ಕಣ್ಣೀರಿನ ಅಭಿಷೇಕ ಮಾಡುತ್ತಿದ್ದಾಳೆ. ಮತಿಗೆಟ್ಟ ಜನರ ಮೂದಲಿಕೆ ಒಂದೆಡೆಯಾದರೆ, ಒಡಲ ನೋವನ್ನೆಲ್ಲ ಕಂಬನಿಯಾಗಿ ಹರಿಸುತ್ತಿರುವ ಆ ಮುಗ್ಧೆಯ ಕರುಳಿರಿಯುವ ದೈನ್ಯ ನೋಟ ಮತ್ತೊಂದೆಡೆ. ಕಣವಿಯವರು ಚಿತ್ರಿಸಿರುವ ಮಗ್ದಲರ ಮುಗ್ಧೆ ವಿದಗ್ಧ ಹೃದಯದ ಮೇರಿಯ ಆ ದೀನ ನೋಟದ ಶಬ್ದ ಚಿತ್ರ ಮನ ಮಿಡಿಯುವಂಥಾದ್ದು.

**ಕತ್ತನೆತ್ತಿ ಯೇಸುವಿನ ಮೊಗವ ನೋಡಿದಳು ಮೇರಿ ತಣಿಯೆ**
**ಎದೆಯ ದೈನ್ಯ ಕಣ್ಣನಲಿ ಬಂದು ಕಂಬನಿಗಳಾಗಿ ಹರಿಯೆ**
**ತನ್ನ ದುಃಖವನು ತೋಡಿಕೊಳ್ಳುವರೆ ಮಾತು ಬಾರದಿತ್ತು**

ಮೂಕ ಶೋಕದಲಿ ಒಡಲ ಭಾಂಡ ಒಳಗೊಳಗೆ ಕುದಿಯುತಿತ್ತು!

-'ಒಡಲ ಭಾಂಡದ ಮೂಕ ಶೋಕದ ಕುದಿತ' ಎಂಬ ಸಾಲು ಆಕೆಯ ಅಸಹಾಯ ಬದುಕಿನ ಚಿತ್ರವನ್ನು ಅನಾವರಣಗೊಳಿಸುತ್ತದೆ.

ಆದರವಳ ಜೀವಾತ್ಮ ಶೋಕ, ಪರಮಾತ್ಮನೆದೆಯ ಸೇರಿ
ಮೌನವೀಣೆ ಮಿಡಿದಂತೆ, ತಂತಿ ಸಿಡಿದಂತೆ ದನಿಯ ಬೀರಿ

ಸಾಂಕೇತಿಕತೆಯೇ ವಾಚ್ಯವಾಗುವ 'ಮೌನ'ಕ್ಕೆ ಇರಬಹುದಾದ ದೈನ್ಯ-ಪ್ರಕರ್ಷ ಗುಣಗಳು ಇಲ್ಲಿನ ಉಪಮೆಗಳ ಮೂಲಕ ದಟ್ಟವಾಗಿ ಮೂಡಿವೆ. ಮೌನವೇ ಆಕೆಯ ಅಂತರ್ನಿವೇದನೆಗೆ ಮಾಧ್ಯಮವಾಗಿದೆ.

-ನನ್ನ ಸ್ವಾಮಿ ಓ ಯೇಸುಕ್ರಿಸ್ತ ಪ್ರಭು, ಕರುಣೆಸೆನ್ನ ತಂದೆ,
ನಾನು ಮಾತ್ರ ಅರಿಯದೆಯೆ ಗೈದ ಅಪರಾಧ ಮನ್ನಿಸೆಂದೆ

-ಎಂದು ಆತ್ಮನೈವೇದ್ಯಗೈದ ಆಕೆಗೆ, ಏಸುವಿನ ದಿವ್ಯ-ಸುಪ್ರಸನ್ನ ನೋಟವೇ ಆಕೆಯ ಎಲ್ಲ ನೋವ ಕಳೆವ ಮರುಜೀವಣಿಗೆಯಾಯಿತು. ಅಲ್ಲಿ ನೆರೆದ ಮಂದಿಯನ್ನುದ್ದೇಶಿಸಿ ಏಸುವು, ಈ ತಪ್ಪಿಗೆ ನಿಮ್ಮ ಧರ್ಮ ಶಾಸನದಲ್ಲಿರುವ ಶಿಕ್ಷೆ ಯಾವುದೆಂದು ಪ್ರಶ್ನಿಸಲು, ಕಲ್ಲು ಹೊಡೆದು ಸಾಯಿಸುವುದೇ ಈ ತಪ್ಪಿಗೆ ಪ್ರತಿಶಿಕ್ಷೆ - ಎಂಬ ಉತ್ತರ ಕೇಳಿ ಬಂದಿತು. ಆಗ ಏಸುವು ನಿಮ್ಮ ಧರ್ಮಶಾಸನಕ್ಕೆ ಪ್ರತಿಯಾಗಿ ನಾನು ಮಾತನಾಡುವುದಿಲ್ಲ. ಆದರೆ ಹೆಣ್ಣಿನಂತೆ ಗಂಡಸಿಗೂ ಶಿಕ್ಷೆ-ಕಟ್ಟಳೆ ನಿಮ್ಮ ಧರ್ಮ ಶಾಸನಗಳಲ್ಲೇಕಿಲ್ಲ? - ಎಂದು ಏಸು ಕೇಳುವ ಪ್ರಶ್ನೆ ಸ್ವಾರ್ಥ ಪ್ರಜ್ಞೆಯ ಇಡೀ ಪುರುಷ ಪ್ರಪಂಚವನ್ನು ಪ್ರಶ್ನಿಸುವಂತಿದೆ. ತಾವು ಯಾವ ತಪ್ಪನ್ನೂ ಮಾಡದವರೆಂಬ ಧೋರಣೆಯಲ್ಲಿದ್ದ ನೆರೆದ ಮಂದಿಗೆ,

ಇಲ್ಲಿ ನೆರೆದ ಜನರಲ್ಲಿ ಯಾರು ಈ ಮೊದಲು ಒಂದು ಕೂಡ
ಪಾಪ ಗೈಯದಿಹರವರು ಮೊದಲು ಕಲು ಹೊಡೆಯಬೇಕು ನೋಡ

-ಎಂದು ಏಸು ನೀಡಿದ ತೀರ್ಪಿಗೆ ಅದುವರೆಗೂ ಅಸಹನೀಯ ನಿಂದನೆಗೈಯುತ್ತಿದ್ದ ಆ ಆತ್ಮವಂಚಕರು ಮಾತಿಲ್ಲದಂತಾಗಿ ಕಲ್ಲು ಎತ್ತಿ ಹೊಡೆಯಲು ಧೈರ್ಯ ಸಾಲದೆ ಅಲ್ಲಿ ನಿಲ್ಲಲೂ ಆಗದೆ ಕಾಲ್ತೆಗೆಯುವಂತಾಯ್ತು. ತನ್ನನ್ನು ಉದ್ಧರಿಸಿದ ತಂದೆಯಾದ ಏಸುವಿನಲ್ಲಿ, ಆತನ ಸೇವೆಯಲ್ಲಿಯೇ ತನ್ನ ಜೀವನದ ಸಾರ್ಥಕ್ಯ ಪಡೆಯುವ ಇಚ್ಛೆಯನ್ನು ಮೇರಿಯು ವ್ಯಕ್ತಪಡಿಸಿದಳು. ದೇವಮಾನವನೂ ಪವಿತ್ರಾತ್ಮನೂ ಆದ ಏಸುವಿನ ಕಾರುಣ್ಯಪೂರ್ಣ ಸಂಸ್ಪರ್ಶವೇ ಆಕೆಯ ಮೈಯ ಎಲ್ಲ ನೋವಿನುರಿಗಳನ್ನು, ಗಾಯಗಳನ್ನು ಮಾಯವಾಗಿಸಿತು. ಆಕೆಯು ಅಪೂರ್ವವಾದ ಆತ್ಮಶಾಂತಿಯ ಸುಧೆಯಲ್ಲಿ ಮಿಂದು ಪಾವನಳಾದಳು.

ಕವನದ ಕೊನೆಯಲ್ಲಿ ಇಡೀ ಮಾನವ ಕುಲಕ್ಕೆ ಒಳಿತನ್ನು ಹಾರೈಸುವ ದೈವೀ ಕರುಣೆಯ

ಸಂಕೇತದಲ್ಲಿ, ಏಸುವಿನ ಅಮರ ಸಂದೇಶ ಹೊತ್ತು ಸಮತೆಯಲ್ಲಿ ಬೀಸುತ್ತಿದ್ದ ತಂಗಾಳಿಯ ಚಿತ್ರ ಹೃದ್ಯವಾಗಿದೆ. ಏಸುವು ತನ್ನ ನಿಷ್ಪಕ್ಷಪಾತವಾದ ತೀರ್ಪಿನಿಂದ ಮಗ್ದಲದ ಮೇರಿಯನ್ನು ಹರಸಿ ಆಕೆಯ ಬಾಳಿಗೆ ಬೆಳಕನ್ನು ಹರಿಸಿದುದರ ಪ್ರತಿಸ್ಪಂದಿ ಎಂಬಂತೆ ಗಗನದಲ್ಲಿ.

ಅಮೃತಕಿರಣನುದಯಿಸಿದ ಇಳೆಯ ಬೆಳುದಿಂಗಳಲ್ಲಿ ತೊಳೆದು
ತೇನೆ ಹಕ್ಕಿ ಮಂಗಲವ ಪಾಡಿ ಹಾರಿತ್ತು ನಭವನಳೆದು

-ಅಪೂರ್ವವಾದ ಶಾಂತಿಭಾವದ ಸಂಕೇತವಾಗಿ ಮೂಡಿರುವ ತೇನೆ ಹಕ್ಕಿಯ ಹಾರುವಿಕೆ ಕಣವಿಯವರ ಲೋಕೋತ್ತರ ಚಿಂತನದೃಷ್ಟಿಗೆ ಸಾಕ್ಷಿಯಾಗಿದೆ. ನವೋದಯ ಕಾಲಘಟ್ಟದ ಸಂದರ್ಭದಲ್ಲಿ ರಚಿತಗೊಂಡ ಶ್ರೀ ಕಣವಿ ಅವರ ಈ ಕಥನಕಾವ್ಯವು ಕಾವ್ಯಭಾಷೆ ಹಾಗೂ ಬಂಧಗಳ ದೃಷ್ಟಿಯಿಂದ ಸರಳತೆ - ಗಂಭೀರತೆ -ಮಧುರತೆ- ಪ್ರೀತಿಪರತೆ-ಸಹಜತೆಗಳನ್ನು ಮೈಗೂಡಿಸಿಕೊಂಡಿದೆ. ವಸ್ತುನಿಷ್ಠ ನಿರ್ವಹಣಾ ಕ್ರಮ-ಗೀತ ಗುಣ-ಪ್ರತಿಮೆ. ರೂಪಕಗಳ ಸೃಷ್ಟಿ-ನಿಸರ್ಗ ಪ್ರೀತಿ -ಅನನ್ಯ ಮಾನವ ಪ್ರೀತಿ - ಜೀವನ ಮೌಲ್ಯ- ಲೋಕೋತ್ತರವಾದ ಅನುಭಾವಿಕ ಹೊಳಹುಗಳು ಇವೆಲ್ಲ ಕವಿತೆಯ ಒಟ್ಟು ತಾತ್ವಿಕತೆಗೆ ಪೂರಕವಾಗುವ ಅಂಶಗಳು.

ಮನೋನ್ಮನಿ

# ೮. ನಿಯಮೋಲ್ಲಂಘನ

'ಸುಯ್' ಎಂದು ನಿಡುಸುಯ್ದು ಹುಯ್ಯಲಿಡುತಿದೆ ಗಾಳಿ
ಜಗದ ಆರ್ದ್ರತೆಯನ್ನ ಹೀರಿ ಹೀರಿ !
ಮೂಡಗಾಳಿಗೆ ಬಾನ ಮೊಗ ಒಡೆದು ಬಿಳಿ ಬೂದಿ
ಬಳಿದಂತೆ ತೋರುತಿದೆ ಮೇರೆ ಮೀರಿ.

ತರು ಲತಾದಿಗಳಲ್ಲಿ ಚಿಗುರಿಲ್ಲ, ಹೂಗರಿಲ್ಲ
ಅಸ್ಥಿಪಂಜರವಾಗಿ ನವೆಯುತಿಹವು;
ಎಲ್ಲೊ ಅಂಗೈಯಗಲ ಹಸಿರು ಕಂಡರೆ ಸಾಕು
ಮನದ ಆಸೆಗಳಲ್ಲಿ ಸೇರುತಿಹವು.

ಏನು ಬಾನೋ ಎನಿತು ದೂರವಿದ್ದಂತಿಹುದು
ನಮಗು ಅದಕೂ ಮಾತು-ಕತೆಯೆ ಇಲ್ಲ;
ಒಂದು ಮೋಡವೇ? ಮಿಂಚೆ? ಮಳೆಯೆ? ಕಾಮನಬಿಲ್ಲೆ?
ಚಳಿಗಾಲಕೋ ಕೊಂಚ ಬುದ್ಧಿಯಿಲ್ಲ.

ಕ್ಷಾಮ ಡಾಮರ ಬಡಿದ ನಿರ್ವಾಸಿತರ ತೆರದಿ
ಒಣಗಿದೆಲೆಗಳ ರಾಶಿ ಭಣಗುಟ್ಟಿದೆ;
ಮೈಕೊರೆವ ಚಳಿಗಾಳಿ ನಿಷ್ಕರುಣದಲಿ ದಾಳಿ
ಗೈಯೆ ತರಗೆಲೆ ಮತ್ತೆ ಮೊರೆಯುತ್ತಿವೆ!

ಹೇಮಂತ ಋತುವಿಂಗೆ ಸಾಮಂತ ರಾಜರೊಲು
ಸೂರ್ಯ ಚಂದ್ರರು ನಡುಗಿ ಉಡುಗುತಿಹರೊ!

ಧೀಮಂತ ವರ್ಷ ಋತು ಗುಡುಗು ಹಾಕುವವರೆಗೆ
ಬರಿಯ ನಾಮಾಂಕಿತರೆ ಮೆರೆಯಲಿಹರು !

ಮೂರು ತಿಂಗಳ ಹಿಂದೆ ಮಳೆರಾಯ ಹಗಲಿರುಳು
ಧಾರಿಣಿಗೆ ತನಿಮುದ್ದು ಗರೆಯುತಿದ್ದ;
ಹರುಷದಾವೇಶದಲಿ ಹೊನಲು ಧುಮ್ಮಿಕ್ಕಿರಲು
ಪ್ರೇಮಗೀತಗಳೆನಿತೊ ಹಾಡುತಿದ್ದ !

ಮಳೆಗಾಲವೈತರಲು ನನ್ನ ಕವಿತೆಯ ನವಿಲು
ನೂರು ಕಣ್ಣನು ತೆರೆದು ನರ್ತಿಸುವುದು !
ಭಾವ ಚಾತಕ ಹೊಚ್ಚ ಹೊಸ ಮಳೆಯ ತಂಬನಿಯ
ಜೇಂಬನಿಯ ಗುಟುಕರಿಸಿ ವರ್ತಿಸುವುದು !

ಎಂದು ಬರುವುದೊ ಕಾಲ ನನ್ನಿನಿಯ ಮಳೆಗಾಲ
ವಿರಹ -ವೈಶಾಖವನು ದಾಟಬೇಕೆ ?
ಏನು ಋತುರಿಂಗಣವೊ ವಿಧಿನಿಯಮದಾಳಿಕೆಯೊ
ಒಮ್ಮೆಯಾದರು ತಪ್ಪಿ ನಡೆಯದೇಕೆ ?

'ನವೋದಯ' ಕಾಲದಿಂದಲೇ ತಮ್ಮ ಕಾವ್ಯರಚನೆಯನ್ನು ಆರಂಭಿಸಿದ ಕಣವಿಯವರು ಎಲ್ಲಾ ಕಾಲದ ಸಂವೇದನೆಗಳಿಗೆ ತಮ್ಮನ್ನು ತೆರೆದುಕೊಂಡು ಬೆಳೆದವರು. ನವೋದಯದ ಪ್ರಕೃತಿಪ್ರಿಯತೆ, ನವ್ಯದ ವಾಸ್ತವಿಕ ಪ್ರಜ್ಞೆ ಮತ್ತು ಆನಂತರದ ಸಂವೇದನೆಗಳೂ ಅವರಲ್ಲಿ ಕರಗಿ ಕಾವ್ಯವಾಗಿದೆ. ಡಿ.ಆರ್. ನಾಗರಾಜ್ ಒಂದೆಡೆ ಹೇಳುವ ಹಾಗೆ 'ಭಾವಗೀತಾತ್ಮಕ ವಾಸ್ತವಿಕತೆ' ಪ್ರಮುಖವಾಗಿರುವ ಅವರಿಗೆ "ಪೂರ್ಣ ಉದ್ವಿಗ್ನರಾಗದೆ, ಅತಿರೇಕದಲ್ಲಿ ಯಾವುದನ್ನೂ ಭಾವಿಸದೆ ಅದನ್ನು ಇದ್ದಕ್ಕಿದ್ದ ಹಾಗೆ ಸ್ವೀಕರಿಸುವ" ಗುಣವಿದೆ. 'ಆಕಾಶಬುಟ್ಟಿ'ಯಲ್ಲಿರುವ 'ನಿಯಮೋಲ್ಲಂಘನ' ಕವಿತೆಯಲ್ಲೂ ಈ ಲಕ್ಷಣವನ್ನು ಕಾಣಬಹುದು.

ಮಳೆಯ ಹಂಬಲವನ್ನು ತುಂಬಿಕೊಂಡ ಕವಿತೆ ಇದು. ಚಳಿಗಾಲದ ಕಠೋರ ಅನುಭವವನ್ನು ಹೇಳುತ್ತಲೆ ಆರಂಭವಾಗುತ್ತದೆ.

'ಸುಯ್' ಎಂದು ನಿಡುಸುಯ್ದು ಹುಯ್ಯಲಿಡುತಿದೆ ಗಾಳಿ
ಜಗದ ಆರ್ದ್ರತೆಯನ್ನೆ ಹೀರಿ ಹೀರಿ !

**ಮೂಡಗಾಳಿಗೆ ಬಾನ ಮೊಗ ಒಡೆದು ಬಿಳಿ ಬೂದಿ**
**ಬಳಿದಂತೆ ತೋರುತಿದೆ ಮೇರೆ ಮೀರಿ**

ಚಳಿಗಾಳಿ ಏನೋ ಆಘಾತವಾದಂತೆ ಹುಯ್ಯಲಿಟ್ಟಿದ್ದು ನಿಟ್ಟುಸಿರಿನಂತೆ ಕಾಣುತ್ತದೆ. ಈ ನಿಟ್ಟುಸಿರು ಜಗತ್ತಿನ ಹಸಿಯನ್ನೇ, ಜೀವಂತಿಕೆಯನ್ನೇ ಇಲ್ಲವಾಗಿಸುತ್ತದೆ. ಮೂಡ ಗಾಳಿಗೆ ಸಾಮಾನ್ಯವಾಗಿ ಮುಖ ಒಡೆಯುತ್ತದೆ. ಅದೇ ರೀತಿ ಆಗಸದ ಮುಖ ಒಡೆದಂತೆ ಬಿಳಿ ಮೋಡಗಳು ಕಾಣಿಸುತ್ತವೆ.

**ತರುಲತಾದಿಗಳಲ್ಲಿ ಚಿಗುರಿಲ್ಲ ಹೊಗರಿಲ್ಲ**
**ಅಸ್ಥಿಪಂಜರವಾಗಿ ನವೆಯುತಿಹವು !**
**ಎಲ್ಲೊ ಅಂಗೈಯಗಲ ಹಸಿರು ಕಂಡರೆ ಸಾಕು**
**ಮನದ ಆಸೆಗಳಲ್ಲಿ ಸೇರುತಿಹವು**

ಚಳಿಗಾಲದ ಹೊಡೆತಕ್ಕೆ ಗಿಡಮರಗಳು ಬತ್ತಲೆಯಾಗಿವೆ. ಅವುಗಳ ರೆಂಬೆ-ಕೊಂಬೆಗಳು ಅಸ್ಥಿಪಂಜರದಂತೆ ಕಾಣಿಸುತ್ತವೆ. ಆ ಅಸ್ಥಿಪಂಜರದ ಹೆದರಿಕೆಯಿಂದಲೋ ಎಂಬಂತೆ ಎಲ್ಲಾದರೂ ಸ್ವಲ್ಪ ಹಸಿರು ಕಂಡರೂ ಚೈತನ್ಯ ಬಂದು ಆಸೆಗಳೆಲ್ಲ ಹಾಸಿಕೊಳ್ಳುತ್ತವೆ.

**ಏನು ಬಾನೋ ಎನಿತು ದೂರವಿದ್ದಂತಿಹುದು**
**ನಮುಗು ಆದಕೂ ಮಾತು-ಕತೆಯೆ ಇಲ್ಲ ;**
**ಒಂದು ಮೋಡವೇ ?ಮಿಂಚೆ ? ಮಳೆಯೆ? ಕಾಮನಬಿಲ್ಲೆ?**
**ಚಳಿಗಾಲಕೋ ಕೊಂಚ ಬುದ್ಧಿಯಿಲ್ಲ**

ಚಳಿಗಾಲಕ್ಕೆ ಬುದ್ಧಿ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ. ಇದೂ ಮಳೆಗಾಲದಂತೆ ಮಿಂಚು ಗುಡುಗುಗಳಿಂದ ಆಕಾಶದ ಮೂಲಕ ಮಾತಾಡಿದ್ದರೆ ಈ ಕಾಲದ ಕುರಿತು ಕವಿಗೆ ಇಷ್ಟು ನಿಷ್ಠುರತೆ ಉಂಟಾಗುತ್ತಿರಲಿಲ್ಲ. ಮಳೆಗಾಲಕ್ಕಿರುವ ವೈವಿಧ್ಯ ಚಳಿಗಾಲಕ್ಕಿಲ್ಲ. ಅದು ಪ್ಲೇನ್ ಆದದ್ದು !

**ಕ್ಷಾಮ ಡಾಮರ ಬಡಿದ ನಿರ್ವಾಸಿತರ ತೆರದಿ**
**ಒಣಗಿದೆಲೆಗಳ ರಾಶಿ ಭಣಗುಟ್ಟಿವೆ;**
**ಮೈಕೊರೆವ ಚಳಿಗಾಳಿ ನಿಷ್ಕರುಣದಲಿ ದಾಳಿ**
**ಗೈಯೆ ತರಗೆಲೆ ಮತ್ತೆ ಮೊರೆಯುತ್ತಿವೆ!**

ಬರಗಾಲ ಬಂದು ಜನರೆಲ್ಲ ಗುಳೆ ಹೋಗಿ ಊರೆಲ್ಲ ಕಸಕಡ್ಡಿಯಿಂದ ತುಂಬಿದಂತೆ ಒಣಗಿದ ಎಲೆಗಳು ಬಿಕೊ ಎನ್ನುತ್ತಿವೆ. ದಟ್ಟವಾಗಿ ಚಳಿಗಾಳಿ ಬೀಸಿದಾಗ ಹಾರುವ ತರಗೆಲೆಗಳ ಸದ್ದು ಆರ್ತನಾದದಂತೆ ಕೇಳಿಸುತ್ತದೆ.

**ಹೇಮಂತ ಋತುವಿಂಗೆ ಸಾಮಂತ ರಾಜರೊಲು**
**ಸೂರ್ಯ ಚಂದ್ರರು ನಡುಗಿ ಉಡುಗುತಿಹರೋ!**
**ಧೀಮಂತ ವರ್ಷ ಋತು ಗುಡುಗು ಹಾಕುವವರೆಗೆ**
**ಬರಿಯ ನಾಮಾಂಕಿತರೆ ಮೆರೆಯಲಿಹರು !**

ಆಕಾಶದ ರಾಜರಂತಿರುವ ಸೂರ್ಯ ಚಂದ್ರರು ಈ ಹೇಮಂತದಲ್ಲಿ ಸಾಮಂತ ರಾಜರಂತೆ ಕಾಣುತ್ತಿದ್ದಾರೆ. ಅವರ ಜತೆಯಲ್ಲಿರುವ ನಕ್ಷತ್ರಗಳು ಹೊಳೆಯುವುದರ ಮೂಲಕ ಅವರಿಗೆ ಈ ಸ್ಥಿತಿ ಪ್ರಾಪ್ತವಾಗಿದೆಯೇನೋ! ವರ್ಷ ಋತುವಿನ ಮೋಡ ಗುಡುಗುಗಳಲ್ಲಿ ಅವೆಲ್ಲ ಎಲ್ಲಿ ಕಾಣುತ್ತವೆ!

**ಮೂರು ತಿಂಗಳ ಹಿಂದೆ ಮಳೆರಾಯ ಹಗಲಿರುಳು**
**ಧಾರಿಣಗೆ ತನಿಮುದ್ದು ಗರೆಯುತಿದ್ದ;**
**ಹರುಷದಾವೇಶದಲಿ ಹೊನಲು ಧುಮ್ಮಿಕ್ಕಿರಲು**
**ಪ್ರೇಮಗೀತೆಗಳೆನಿತೊ ಹಾಡುತಿದ್ದ !**

ಚಳಿಗಾಲ ಆರಂಭವಾಗಿ ಆಗಲೇ ಮೂರು ತಿಂಗಳಾಗಿವೆ. ಅದಕ್ಕಿಂತ ಹಿಂದೆ ಮಳೆ ಇಳೆಗೆ ನಿರಂತರವಾಗಿ ಇಳಿಯುತ್ತಿತ್ತು. ಅದರ ಧಾರಾಕಾರದಿಂದ ಹರುಷವೇ ಹೊನಲಾಗಿ ಹರಿದಂತೆ ಕಾಣುತ್ತಿತ್ತು. ನೆಲ ಮುಗಿಲಿನ ಈ ಸಮಾಗಮ ನಲ್ಲ ನಲ್ಲೆಯರ ಸೊಲ್ಲಿನಂತಿತ್ತು.

**ಮಳೆಗಾಲವೈತರಲು ನನ್ನ ಕವಿತೆಯ ನವಿಲು**
**ನೂರು ಕಣ್ಣನು ತೆರೆದು ನರ್ತಿಸುವದು!**
**ಭಾವ ಚಾತಕ ಹೊಚ್ಚ ಹೊಸ ಮಳೆಯ ತಂಬನಿಯ**
**ಜೇಂಬನಿಯ ಗುಟುಕರಿಸಿ ವರ್ತಿಸುವುದು !**

ಚಳಿಗಾಲ ಕುರಿತು ಕವಿಗೆ ಇಷ್ಟೆಲ್ಲ ಬೇಸರವಿರಲು ಕಾರಣ ಇಲ್ಲಿದೆ. ಮಳೆಗಾಲ ಆರಂಭವಾಗುತ್ತಿದ್ದಂತೆ ನವಿಲು ತನ್ನ ಗರಿಯನ್ನು ತೆರೆದು ನೂರು ಕಣ್ಣುಗಳಿಂದ ನರ್ತಿಸುವಂತೆ ಕವಿಯ ಕಾವ್ಯವೂ ಕಾವು ಪಡೆದುಕೊಳ್ಳುತ್ತದೆ. ಬರಡಾಗಿದ್ದ ಭಾವ ಚಾತಕಪಕ್ಷಿಯಂತೆ ಹೊಸ ಮಳೆಯ, ಹೊಸ ಭಾವದ ಜೇನ ಹನಿಯನ್ನು ಕುಡಿದು ತಣಿಯುತ್ತದೆ.

**ಎಂದು ಬರುವುದೊ ಕಾಲ ನನ್ನಿನಿಯ ಮಳೆಗಾಲ**
**ವಿರಹ ವೈಶಾಖವನು ದಾಟಬೇಕೆ ?**
**ಏನು ಋತುರಿಂಗಣವೊ ವಿಧಿ ನಿಯಮದಾಳಿಕೆಯೊ**
**ಒಮ್ಮೆಯಾದರೂ ತಪ್ಪಿ ನಡೆಯದೇಕೆ ?**

ಇಲ್ಲಿ ಮಳೆಯೆಂದರೆ ಮಳೆಗಾಲವೂ ಹೌದು, ಕವಿಯ ಕ್ರಿಯಾಶೀಲವಾಗುವ ಸೃಜನಶೀಲತೆಯ ಸಂದರ್ಭವೂ ಹೌದು. ಹಾಗೆ ನೋಡಿದರೆ ಕವಿಯ ಭಾವ, ಅನುಭವ ಕಾವ್ಯವಾಗುವ ಬಗೆಯೂ, ನೀರು ಮಳೆಯಾಗುವ ಬಗೆಯೂ ತೀರ ಬೇರೆಯಲ್ಲ. ನೆಲದ ನೀರೇ ಆವಿಯಾಗಿ, ಮೋಡವಾಗಿ, ಆಗಸದಲ್ಲಿ ಹರಿದಾಡಿ, ತಂಪಿನ ಕಂಪಿಗೆ ಕುಡಿಯೊಡೆದು ಮಳೆಯ ಹೊಳೆ ಹರಿಯುತ್ತದೆ. ಕವಿಯೂ ಅದೇ ಭಾಷೆ, ಭಾವವನ್ನು ಹೀರಿ, 'ಪೊಸದಪ್ಪುವಂತೆ ಬಗೆ'ದು ಕಾವ್ಯವನ್ನು ಕಂಡರಿಸುತ್ತಾನೆ. ಎರಡೂ ಕ್ರಿಯೆಗೂ ಕಾಯಬೇಕು. ವಿರಹ ವೈಶಾಖವನು ದಾಟಬೇಕು. ಕಾಲ ಸನ್ನಿಹಿತವಾದಾಗ ಮಾತ್ರ ಇದು ಆಗುತ್ತದೆ. ಈ ವಿಧಿನಿಯಮದ ಉಲ್ಲಂಘನೆ ಸಾಧ್ಯವೇ ಇಲ್ಲ ಎಂಬುದರ ಜತೆಗೆ ಯಾಕೆ ಉಲ್ಲಂಘನೆ ಆಗುವುದಿಲ್ಲ ಎಂಬ ಪ್ರಶ್ನೆಯೂ ಇಲ್ಲಿದೆ.

ಇಡೀ ಕವಿತೆಯಲ್ಲಿ ಕಣವಿಯವರು ಕಾವ್ಯ ರಚನೆಯ ಸ್ಫೂರ್ತಿಯನ್ನು ಮಳೆಯ ಜತೆಗೆ ಮೇಳೈಸುತ್ತ ಹೋದಂತೆ ಕಾಣುತ್ತದೆ. ಕನ್ನಡ ಸಾಹಿತ್ಯದಲ್ಲಿಯೇ ಕೆಲವು ಕಾಲಗಳಲ್ಲಿ ವಿಪುಲವಾದ ಸೃಜನಶೀಲ ಚಟುವಟಿಕೆಗಳು ನಡೆದರೆ ಇನ್ನು ಕೆಲವು ಕಾಲಗಳಲ್ಲಿ ಮಹತ್ವದ ಕೃತಿಗಳು ರಚನೆಯಾಗುವುದೇ ಇಲ್ಲ. ಜತೆಗೆ ಕಾಲದಿಂದ ಕಾಲಕ್ಕೆ ಕಾವ್ಯದ ಭಾವ ಭಾಷೆಗಳು ಪರಿವರ್ತನೆಗೊಳ್ಳುತ್ತವೆ. ಅದೇ ರೀತಿ ಈ ಕವಿತೆ ರಚನೆಯಾದ ಸಂದರ್ಭ ಹೊಸಗನ್ನಡ ಕಾವ್ಯ ಮಾರ್ಗ 'ನವೋದಯ'ದಿಂದ 'ನವ್ಯ'ದೆಡೆಗೆ ಬದಲಾಗುತ್ತಿದ್ದ ಕಾಲ. ನವೋದಯ ಕಾಲದ ಸಂವೇದನೆ, ಕಾವ್ಯ ಕಟ್ಟುವ ರೀತಿ ಇತ್ಯಾದಿ ನಿಯಮಗಳು ಕಣವಿಯರ ಕಾವ್ಯದಲ್ಲಿಯೂ ಬೇರೆಯಾಗುತ್ತಿದ್ದ ಸಂಕ್ರಮಣ ಕಾಲ. ಆದ್ದರಿಂದಲೇ ಇಲ್ಲಿ 'ವಿರಹ ವೈಶಾಖ'ವನ್ನು ದಾಟಲೇಬೇಕೆಂಬ ವಿಷಾದವಿದ್ದರೆ, 'ಋತುರಿಂಗಣ'ದಲ್ಲಿ ರಾತ್ರಿಯ ನಂತರ ಹಗಲು ಬರುವ ಹಾಗೆ ಚಳಿಗಾಲದ ನಂತರ ಮಳೆಗಾಲ ಬರುತ್ತದೆ ಎಂಬ ಆಶಾವಾದವೂ ಇದೆ. ಈ ಕಾರಣಗಳಿಂದಲೂ ಈ ಕವಿತೆ ಮಹತ್ವದ್ದಾಗಿದೆ.

**ರಾಜು ಹೆಗಡೆ.**

# ೯. ಮಧುಚಂದ್ರ

ಬಾ ಮಲ್ಲಿಗೆ
ಬಾ ಮೆಲ್ಲಗೆ
ನನ್ನೆದೆ ಮೆಲ್ಪಾಸಿಗೆ
ಇಳೆಗಿಳಿದಿದೆ
ಬೆಳುದಿಂಗಳು
ನಮ್ಮೊಲುಮೆಯ ಕರೆಗೆ !

ಚೆಲುವಾಗಿದೆ
ಬನವೆಲ್ಲವು
ಗೆಲುವಾಗಿದೆ ಮನವು;
ಉಸಿರುಸಿರಿಗು
ತಂಪೆರಚಿದೆ
ನಿನ್ನೆದೆ ಪರಿಮಳವು.

ತಿಂಗಳ ತನಿ
ವೆಳಕಲಿ ಮೈ
ದೊಳೆದಿಹ ಮನದನ್ನೆ!
ಮಂಗಳವೀ
ಮನೆಯಂಗಳ
ಚೆಂಗಲವೆಯ ಚೆನ್ನೆ.

ಹಿತವಾಗಿದೆ
ಮೆಲ್ಲೆಲರುಲಿ

ಮಿತವಾಗಿದೆ ಮೌನ;
ಜೊತೆಗೂಡುತ
ಮಾತಾಡಿವೆ
ಅರೆನಿದ್ದೆಯೊಳೇನ?

ಲೋಕದ ಮೈ
ನೋವಿಗೆ ಶ್ರೀ -
ಗಂಧದ ತನಿಲೇಪ;
ಆಕಾಶದ
ಗುಡಿಯಿಂದಲೆ
ಹೊರಸೂಸಿದೆ ಧೂಪ.

ಒಳಿತೆಲ್ಲವು
ಬೆಳಕಾಯಿತು
ಬಾನ್‌ಕರೆಯಿತು ಜೇನು;
ಆನಂದದ
ಕಡಲಾಳದಿ
ನಾವಾದೆವೆ ಮೀನು.

ಎವೆಯಿಕ್ಕದೆ
ಮಿನುಗುತ್ತಿವೆ
ಚಿಕ್ಕೆಯ ಹನಿದೀಪ
ತಮ್ಮಿಷ್ಟಕೆ
ಜಾನಿಸುತಿವೆ
ಯಾವುದೊ ಸವಿನೆನಪ.

ಬಾ ಮಲ್ಲಿಗೆ
ಬಾ ಮೆಲ್ಲಗೆ
ನನ್ನೆದೆ ಮೆಲ್ಹಾಸಿಗೆ
ಇಳೆಗಿಳಿದಿದೆ
ಬೆಳುದಿಂಗಳು
ನಮ್ಮೊಲುಮೆಯ ಕರೆಗೆ !

ಶ್ರೀ ಚೆನ್ನವೀರಕಣವಿಯವರ 'ಮಧುಚಂದ್ರ' ಕವನವು ಕನ್ನಡಿಗರು ಓದಿರುವ ಚೆಲುವಾದ ಕವನಗಳಲ್ಲಿ ಒಂದು ಎಂಬುದು ಈ ಲೇಖಕಿಯ ಅನಿಸಿಕೆ. ಈ ಕವನದ ಹೆಸರನ್ನೇ ತನ್ನ ಹೆಸರನ್ನಾಗಿಟ್ಟುಕೊಂಡ ಕಣವಿಯವರ ಸಂಕಲನ ಪ್ರಕಟವಾಗಿದ್ದು ೧೯೫೪ರಲ್ಲಿ. ರಮ್ಯ (ನವೋದಯ) ಕಾವ್ಯದ ಪ್ರಭಾವ ಸಾಕಷ್ಟು ಇದ್ದ ಕಾಲ ಅದು. ತಾನು ರಚಿತವಾದ ಕಾಲದ ಕಾವ್ಯಲಕ್ಷಣಗಳನ್ನು ಈ ಕವಿತೆಯ ಎದುರಾದ ಬಗೆ ಯಾವುದು, ಈಗಲೂ ಈ ಕವಿತೆಯನ್ನು ಕನ್ನಡದ ಮನಸ್ಸಿಗೆ ಹತ್ತಿರವಾಗಿಸುತ್ತಿರುವ ಅಂಶಗಳು ಯಾವುವು ಎಂಬುದರ ಅಧ್ಯಯನವು ಸ್ವಾರಸ್ಯಕರವಾದದ್ದು.

ಪ್ರೀತಿಸುವ ಗಂಡಸೊಬ್ಬನು ತನ್ನ ಮನದನ್ನೆಯನ್ನು ನಲ್ಮೆಯಿಂದ ಒಳಗೆ ಕರೆಯುವ ಸುಕುಮಾರ ಸನ್ನಿವೇಶವೊಂದು ಈ ಕವನದಲ್ಲಿ ನಿರ್ಮಾಣವಾಗಿವೆ. ಪಲ್ಲವಿ ಮತ್ತು ಆರು ಚರಣಗಳಲ್ಲಿ ಅರಳಿರುವ ಈ ಕವಿತೆ ಗೇಯಗುಣವನ್ನೂ ಹೊಂದಿರುವುದರಿಂದ ಒಂದು ಸುಮಧುರ ಗೀತೆಯಾಗಿಯೂ ಪ್ರಸಿದ್ಧವಾಗಿದೆ. ದೂರದರ್ಶನದ 'ಗೀತಮಾಧುರಿ' ಎಂಬ ಗೀತಚಿತ್ರ ಕಾರ್ಯಕ್ರಮದಲ್ಲಿ ಇದನ್ನು ದೃಶ್ಯಕ್ಕೂ ಅಳವಡಿಸಲಾಗಿತ್ತು.

ಈ ಚಂದದ ಕವಿತೆಯ ಜೋಡಿ ನಮ್ಮ ಪ್ರಯಾಣವನ್ನು ಆರಂಭಿಸೋಣ. ಮನದನ್ನೆಯನ್ನು 'ಮಲ್ಲಿಗೆ' ಎಂದು ಸಂಬೋಧಿಸುವ ನಲ್ಲ ಅವಳನ್ನು ಮೆಲ್ಲಗೆ ತನ್ನೆದೆಯ ಮೃದು ಹಾಸಿಗೆಗೆ ಬರುವಂತೆ ಕರೆಯುತ್ತಾನೆ. ತಮ್ಮ ಪ್ರೀತಿಯ ಕರೆಗೆ ಓಗೊಟ್ಟು ಬೆಳದಿಂಗಳೇ ಭೂಮಿಗಿಳಿದುಬಿಟ್ಟಿದೆ ಎನ್ನುತ್ತಾನೆ. ಇಲ್ಲಿ ಬೆಳದಿಂಗಳು ತುಂಬ ಚೆಲುವಾಗಿದೆ. ಬರಿದೆ ಹಾಸಿಗೆಗೆ ಕರೆಯದೆ ತನ್ನೆದೆಯ ಮೃದು ಹಾಸಿಗೆಗೆ ಕರೆಯುವುದು ತುಂಬ ಮಧುರವಾಗಿದೆ. "ಬಾ ಮಲ್ಲಿಗೆ... ನನ್ನೆದೆ ಮೆಲ್ಹಾಸಿಗೆ..." ಮೆಲ್ಹಾಸು ಎಂಬ ಪದದಂತೆ ಇಲ್ಲಿ ನಲ್ಲನ ಮಾತೂ ಮೆಲುವಾಗಿದೆ.

ನಲ್ಲನ ಮನಸ್ಸು ಪ್ರೀತಿಯಿಂದ ತುಂಬಿದೆ. ಅಂತೆಯೇ ಸುತ್ತಲಿನ ವಾತಾವರಣವು ಚೆಲುವಿನಿಂದ ತುಂಬಿದೆ. ಬನವೆಲ್ಲವೂ ಚೆಲುವಾಗಿದೆ, ಮನವು ಗೆಲುವಾಗಿದೆ. ನಲ್ಲನ ಉಸಿರುಸಿರಿಗೂ ಪ್ರಿಯತಮೆಯ ಎದೆಯ ಪರಿಮಳ ತಂಪನ್ನೆರಚುತ್ತಿದೆ. ಪ್ರೇಮದಿಂದಾಗಿ ಚೆಲುವಿನಿಂದಾಗಿ ಎಲ್ಲವೂ ಗೆಲುಗೆಲುವಾಗಿರುವ ಹರ್ಷಮಯ ವಾತಾವರಣ.

ಮುಂದಿನ ಚರಣದಲ್ಲಿ ತನ್ನ ಮನದನ್ನೆಯ ಚೆಲುವನ್ನು ನಲ್ಲ ಬೆಳುದಿಂಗಳ ಮಾತುಗಳಿಂದ ವರ್ಣಿಸುತ್ತಾನೆ. ಬೆಳುದಿಂಗಳ ಹಿತವಾದ ಬೆಳಕಿನಲ್ಲಿ ಮೈದೊಳೆದವಳು ತನ್ನ ನಲ್ಲೆ ಚೆಂಗಲವೆಯಂತೆ ಅಂದರೆ ಕೆಂದಾವರೆಯಂತೆ ಇದ್ದಾಳೆ ಎನ್ನುತ್ತಾನೆ. ಇಲ್ಲಿ 'ಚೆಂಗಲವೆ' ಎಂಬ ಅಪರೂಪದ ಪದವು ಬಳಕೆಯಾಗಿರುವುದನ್ನು ಗಮನಿಸಬೇಕು. ತಮ್ಮ ಕವಿತೆಗಳಲ್ಲಿ ಆಗಾಗ ಹೀಗೆ ವಿಶಿಷ್ಟ ಪದಗಳನ್ನು ಬಳಸುವುದು ಕಣವಿಯರ ಅಭ್ಯಾಸ.

ನಲ್ಲನ ಒಲವಿಗೆ ಇಂಬುಗೊಡುವಂತೆ ಮೆಲುವಾಗಿ ಬೀಸುತ್ತಿರುವ ಗಾಳಿ ಅದೇನೋ ಮಾತಾಡುತ್ತಿದೆ. ಆ ಮಾತು ಹಿತವಾಗಿದೆ, ಅಲ್ಲಿನ ಮೌನವೂ ಮಿತವಾಗಿದೆ. ಈ ಮಾತು ಮೌನಗಳು

ಜೊತೆಗೂಡಿ ಅರೆ ನಿದ್ದೆಯಲ್ಲಿ ಏನೋ ಮಾತಾಡುತ್ತಿವೆ... ಒಟ್ಟಿನಲ್ಲಿ ಪರವಶಗೊಳಿಸುವ ವಾತಾವರಣ. ಇದು ಕವನದ ಮೂರನೆಯ ಚರಣ.

ಇದಿರಲಿ, ಇಲ್ಲಿ ಒಲುಮೆಯ ಕರೆಯನ್ನು ಕೇಳಿ ಇಳೆಗಿಳಿದಿರುವ ಬೆಳದಿಂಗಳು ಏನು ಮಾಡುತ್ತಿದೆ? ಅದರ ವರ್ಣನೆ ಮುಂದಿನ ಅಂದರೆ ನಾಲ್ಕನೇ ಚರಣದಲ್ಲಿವೆ. ಬೆಳುದಿಂಗಳು ಲೋಕದ ಮೈ ನೋವನ್ನು ಹೋಗಿಸುವ ಹಿತವಾದ ಲೇಪನದ ಕೆಲಸವನ್ನು ಮಾಡುತ್ತಿದೆ. ಅದು ಆಕಾಶದ ದೇವಾಲಯದಿಂದ ಹೊರಸೂಸುವ ಧೂಪದಂತೆ ಮಂಗಳಕರವಾಗಿದೆ. ಪ್ರೇಮದ ಹಿತಕರವಾದ ಗುಣ ಇಲ್ಲಿ ಬೆಳುದಿಂಗಳಿಗೂ ಬಂದಿದೆ.

ಈ ಮಂಗಳದ ಕಲ್ಪನೆಯು ಮುಂದಿನ ಚರಣದಲ್ಲಿ ಇನ್ನಷ್ಟು ವಿಸ್ತರಿಸಿಕೊಳ್ಳುತ್ತದೆ. ಪ್ರಪಂಚದಲ್ಲಿನ ಒಳಿತೆಲ್ಲವೂ ಬೆಳಕಿನ ರೂಪ ತಳೆದುಬಿಟ್ಟಿದೆ. ಬಾನು ಜೇನನ್ನೇ ಕರೆಯುತ್ತಿದೆ. ಈ ಸವಿ ಸವಿ ವಾತಾವರಣದಲ್ಲಿ ನಲ್ಲನಿಗೆ - ತಾನು ತನ್ನ ನಲ್ಲೆ ಆನಂದದ ಕಡಲಿನ ಆಳದಲ್ಲಿ ಮೀನಾಗಿ ವಿಹರಿಸುತ್ತಿದ್ದೇವೆ ಎಂಬ ಭಾವನೆ ಉಂಟಾಗಿದೆ.

ಮುಂದಿನ ಚರಣದಲ್ಲಿ (ಇದು ಕೊನೆಯ ಚರಣ) ಆಕಾಶದ ನಕ್ಷತ್ರಗಳ ವರ್ಣನೆ ಇದೆ. ಆಕಾಶದ ಚುಕ್ಕೆಗಳು ನಲ್ಲನ ಕಣ್ಣಿಗೆ ಎವೆಯಿಕ್ಕದೆ ಮಿನುಗುತ್ತಿರುವ ಹನಿದೀಪಗಳಂತೆ ಕಾಣಿಸುತ್ತಿವೆ. ಜೊತೆಗೆ ಅವು ತಮ್ಮಷ್ಟಕ್ಕೆ ಯಾವುದೋ ಸವಿನೆನಪನ್ನು ಧ್ಯಾನಿಸುತ್ತಿವೆ ಅನ್ನಿಸುತ್ತದೆ. ಪ್ರೇಮಿಗಳ ಗುಣ ಅವಕ್ಕೂಬಂದಂತಿದೆ.

ಕವಿತೆಯ ಕೊನೆಯಲ್ಲಿ ಮತ್ತೆ ಬಾ ಮಲ್ಲಿಗೆ... ಎನ್ನುವ ಪಲ್ಲವಿಯ ಸಾಲುಗಳು ಪುನರಾವರ್ತನೆಗೊಳ್ಳುವೆ.

***

ಈ ಕವಿತೆಯ ಬಗೆಗೆ ಇನ್ನಷ್ಟು ಮೆಲುಕು. ಇದರ ಶೀರ್ಷಿಕೆ 'ಮಧುಚಂದ್ರ' ಮಧುಚಂದ್ರವೆಂದರೆ "ವಿವಾಹವಾದ ತರುಣದಲ್ಲಿ ನವದಂಪತಿಗಳು ಕೈಗೊಳ್ಳುವ ವಿಹಾರದಂತೆ" ಎಂಬ ಶಾಸ್ತ್ರೀಯವಾದ ಅರ್ಥವಿದೆ. ಇಲ್ಲಿ ಮಧುಚಂದ್ರ ಪದವನ್ನೇ ಕವನವು ಶೀರ್ಷಿಕೆಯನ್ನಾಗಿ ಹೊಂದಿರುವುದು ಹಾಗೂ ಮಂಗಳಕರವಾದ ಮನೆಯಂಗಳದ ಪ್ರಸ್ತಾಪ ಇವು. ಈ ಕವಿತೆಯು ಹೊಸ ದಂಪತಿಗಳ ಪ್ರೇಮ ಸನ್ನಿವೇಶವೆಂಬ ಭಾವನೆಯನ್ನುಂಟು ಮಾಡುತ್ತಿವೆ. ಆದರೆ ಈ ಎರಡು ಪ್ರಸ್ತಾಪಗಳನ್ನು ಬಿಟ್ಟರೆ ಇಲ್ಲಿ ಮದುವೆ, ಗಂಡ ಹೆಂಡತಿ ಎಂಬ ಸಾಂಪ್ರದಾಯಿಕ ವಿಚಾರಗಳ ನೇರ ಉಲ್ಲೇಖಗಳಿಲ್ಲ. ಕವಿತೆಯ ಹೆಸರು 'ಮಧುಚಂದ್ರ'ವಾದರೂ ಇಲ್ಲಿನ ದಂಪತಿಗಳು ವಿಹಾರಕ್ಕಾಗಿ ಪ್ರಯಾಣ ಮಾಡದೆ ಮನೆಯಂಗಳದಲ್ಲೇ ಇದ್ದಾರೆ. ಬೆಳದಿಂಗಳು ಅವರ ಒಲುಮೆಯ ಕರೆಯನ್ನು ಕೇಳಿ ಅವರ ಅಂಗಳಕ್ಕೆ ಇಳಿದುಬಿಟ್ಟಿದೆ!

ಗಮನಿಸಬೇಕಾದ ಇನ್ನೊಂದು ಸಂಗತಿ, ಕಾಮದ ಲೇಪವಿಲ್ಲದೆ ನವಿರು ಪ್ರೇಮ ಇಲ್ಲಿನದು. ನವೋದಯ/ ರಮ್ಯ ಕಾವ್ಯದ ಲಕ್ಷಣಗಳಲ್ಲಿ ಒಂದಲ್ಲವೇ ಇದು. ಸಾಮಾನ್ಯವಾಗಿ ಕಾಮವು ವಿಜೃಂಭಿಸುವ ವಿವಾಹತರುಣದ ಸಂದರ್ಭದಲ್ಲಿ ಈ ನವಿರು ಪ್ರೇಮದ ಭಾವನೆಯು ಸಭ್ಯತೆಯ ಮಾನದಂಡಗಳಿಂದ ಸಂಸ್ಕರಿತಗೊಂಡ ಕವಿ ಮನವನ್ನು ತೋರಿಸುತ್ತದೆ.

ಕುವೆಂಪು ಅವರ 'ಜೇನಾಗುವಾ' ಕವಿತೆ, ಕೆ.ಎಸ್.ನ. ಅವರ 'ಮದುವೆಯಾಗಿ ತಿಂಗಳಿಲ್ಲ ನೋಡಿರಣ್ಣ ಹೇಗಿದೆ' ಕವಿತೆಯ ಸಾಲುಗಳು ನೆನಪಾಗುತ್ತವೆ. ಆದರೆ ಆ ಎರಡು ಕವಿತೆಗಳಿಗಿಂತಲೂ ಮೃದುವಾಗಿರುವ ಕವಿತೆ ಇದು.

ಒಟ್ಟಿನಲ್ಲಿ ಕಣವಿಯವರ ಮಧುಚಂದ್ರ ಕವಿತೆ ನವಿರಾಗಿದೆ, ಮೃದು ಮಧುರವಾಗಿದೆ. ಕನಸಿನ ಲೋಕದಂತಿದೆ.

ಎಲ್.ಜಿ. ಮೀರಾ.

# ೧೦. ವಿರಹ ಕೂಜನ

೧

ಮನೆಯೊಳಗೆ ಅತ್ತಿತ್ತ ಕಾಲು ಸುಳಿದಾಡುತಿವೆ
ಕಂಡು ಕಂಡೂ ಕಣ್ಣು ಹುಡುಕುತಿಹವು;
ಸುಮ್ಮಸುಮ್ಮನೆ ಕಿವಿಗಳೇನೊ ಆಲಿಸಿದಂತೆ...
ತಮ್ಮ ರೂಢಿಗೆ ತಾವೆ ನಾಚುತಿಹವು.
ಅಡುಗೆ ಮನೆಯೊಳು ಬರಿಯ ಹೊಗೆಯಾಡಿದಂತಿಹುದು
ದಿನದ ಗುಂಜಾರವದ ನಿನದವಿಲ್ಲ;
ನಡುಮನೆಗು ಪಸರಿಸುವ ನಗೆಯ ಸುಳಿವೇ ಇಲ್ಲ
ಸಜ್ಜೆಮನೆ ಪಡಿಪಾಟು ಶಿವನೆ ಬಲ್ಲ.

೨

ಸಂಜೆ ಮನೆಗೈತರಲು ಪ್ರೇಮಪೂರ್ಣಿಮೆ ನಗಲು
ಹುಣ್ಣಿಮೆಗು ಹೊಸ ಬಣ್ಣ ಮೂಡುತಿತ್ತು;
ಇಡಿಯ ದಿನದಾಯಸವು ಮಂದಹಾಸದಿ ಕರಗಿ
ಸ್ವಚ್ಛಂದ ಛಂದದಲಿ ಹಾಡುತಿತ್ತು.
ಗಾಳಿಯಲೆಗೂ ನಲುಮೆ ಬೆರಳನಾಡಿಸಿದಂತೆ
ತರಳೆಯೊಲವಿನ ಹೊಳಪುದೋರುತಿತ್ತು;
ಬೆಣ್ಣೆಯೊಳಗಿನ ಕೂದಲೆಳೆಯು ಹೊರದೆಗೆವನಿತು
ನಯವಾಗಿ ದಿನಬಳಕೆ ಸಾಗುತಿತ್ತು.

೩

ತವರುಮನೆ ನೆನೆದೊಡನೆ ಹಗಲೆಲ್ಲ ಹಿಗ್ಗಿದಳು
ನನ್ನ ಅನುಮತಿಗೆನಿತೊ ಅಮೃತಧಾರೆ -

ಮರುಗಳಿಗೆಯಲಿ ಮತ್ತೆ ಇರುಳು ಕೊರಳನ್ನಪ್ಪಿ
'ಅಗಲಲಾರೆನು' ಎಂಬ ಕಣ್ಣಧಾರೆ !
ಅವಳಿಗೋ ಮೊದಲ ಸಲ ತವರು ಮನೆ ಹಂಬಲವು
ನನಗೊ ಅಗಲಿಕೆಯೊಂದು ಮಧುರಶಾಪ,
ಹೆತ್ತ ತಾಯ್ತಂದೆಗಳ ಕರುಳ ಮಲ್ಲಿಗೆಯರಳ
ಕಳಿಸಿರುವೆ ನಾಲ್ಕು ದಿನ ಇರಲಿ ಪಾಪ !

೪

ಅಂದು ಆಗಿನ ಬುದ್ಧಿ ಇಂದಿಗಿರಬೇಕಲ್ಲ
ಸಾಕು ಸಾಕೆನಿಸಿಹುದು ಮೂಕ ಮನಕೆ,
ಏಕಾದರೂ ಕಳಿಸಿ ಏಕಾಕಿಯಾದೆನೋ -
(ಪತ್ರ ಬಂದಿದೆ; ಆದರಷ್ಟೆ ಸಾಕೆ?)
ಒಂದು ತೋಪಿನ ಮರದಿ ಕುಳಿತ ಬೆಳವನಹಕ್ಕಿ
ಕಳುಹಿಸಲು ಕೂಜನದ ಪ್ರಣಯಗೀತ
ಸ್ವಿಚ್ಚನೊತ್ತಲು ಬಲ್ಬು ಬೆಳಕು ಚಿಮ್ಮುವ ತೆರದಿ
'ಕೂ' ಎಂದು ಅದರ ಸಖಿ ಎದೆಯ ಮಿಡಿತ !

***

ಇಂದು ಬಂದಿಹ ಓಲೆಯಲ್ಲಿ ಮರುಕದ ಸಾಲು ;
"ರವಿವಾರ ದಿನ ನೀವು ಬರಲೆಬೇಕು;"
ಅದು ಎಲ್ಲ ಸರಿ, ಆದರಿಂದು ಮಂಗಳವಾರ
ನಾಲ್ಕು ದಿನಗಳನೆಂತು ನೂಕಬೇಕು.

ಗಂಡು - ಹೆಣ್ಣಿನ ನಡುವಿನ ಪ್ರೀತಿ, ಪ್ರೇಮ, ದಾಂಪತ್ಯ ಸಂಬಂಧಗಳಲ್ಲಿನ ಅನೇಕ ಭಾವ ಸ್ಥಿತಿಗಳು ನವೋದಯದ ಪ್ರತಿಯೊಬ್ಬ ಕವಿಯ ಕಾವ್ಯದಲ್ಲಿ ಸ್ಥಾಯಿಯಾಗಿ ಕೆಲವು ಕವಿತೆಗಳಲ್ಲಿಯಾದರೂ ಕಾಣಿಸಿಕೊಂಡಿವೆ. ಕಣವಿಯವರೂ ಇದಕ್ಕೆ ಹೊರತಾಗಲಾರರು. ಪು.ತಿ.ನ. ಅವರ 'ಪ್ರತೀಕ್ಷೆ' - ಇನಿಯನ ಬರವಿನ ನಿರೀಕ್ಷೆಯಲ್ಲಿರುವ ಹೆಣ್ಣಿನ ವಿವಿಧ ಮನಃಸ್ಥಿತಿಗಳನ್ನು ಸುಂದರ ಚಿತ್ರಗಳ ಮೂಲಕ, ಮತ್ತು ಕೆಲವು ಅದ್ಭುತ ರೂಪಕಗಳ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಕಟ್ಟಿಕೊಟ್ಟರೆ, ಕೆ.ಎಸ್.ನ ಅವರ 'ಎಂದು ಬರುವೆ ನೀನು', 'ನೀರೀಕ್ಷೆ', 'ವಿರಹಿಣಿ' ಮೊದಲಾದ ಕವಿತೆಗಳು ಪುರುಷನ ಬರವಿಗಾಗಿ ಕಾತರ, ಕಳವಳ, ಆಸೆ, ನಿರಾಸೆಗಳ, ಮನಃಸ್ಥಿತಿಯಲ್ಲಿ ಕಾದು ನಿಂತ ಹೆಣ್ಣಿನ ಚಿತ್ರವನ್ನು ಬಿಡಿಸಿಟ್ಟರೆ, 'ನಾಳೆ ಬರುವಳು ಗೌರಿ' ಎನ್ನುವ ಕವಿತೆಯೊಂದು ಮಾತ್ರ ಮಡದಿಯ ಬರವಿಗಾಗಿ ನಿಂತ ಪುರುಷನ ಚಿತ್ರವನ್ನು ನಮ್ಮ ಮುಂದಿರಿಸುತ್ತದೆ.

ಕಣವಿಯವರ 'ಮಧುಚಂದ್ರ' ಕಾವ್ಯ ಸಂಕಲನದಲ್ಲಿನ 'ವಿರಹ ಕೂಜನ' ಕವಿತೆ ಪುರುಷನ ವಿರಹ ಸ್ಥಿತಿಯನ್ನು ವಿವರಿಸುತ್ತದೆ. 'ಮಧುಚಂದ್ರ'ದ ಮುಕ್ಕಾಲುಪಾಲು ಕವಿತೆಗಳಲ್ಲಿ 'ಹೆಣ್ಣು-ಗಂಡು' ನಡುವಿನ ಪ್ರೀತಿ, ಮಿಲನ-ವಿರಹದ ವಿವಿಧಾವಸ್ಥೆಗಳು ಲೌಕಿಕದ ವಿವರಗಳೊಂದಿಗೆ ಮತ್ತು ಕೆಲವೊಮ್ಮೆ ಅನುಭಾವಿಕ ಧ್ವನಿಯೊಂದಿಗೆ ಕಾಣಿಸಿಕೊಳ್ಳುತ್ತವೆ.

ಸಾಮಾನ್ಯವಾಗಿ ಪ್ರೇಮ ಕವನಗಳಲ್ಲಿ, ಸ್ತ್ರೀಯು ಗಂಡ, ಪ್ರಿಯತಮ- ಇವರುಗಳ ನಿರೀಕ್ಷೆಯಲ್ಲಿ ಕಾತರಳಾಗಿ, ದೈನ್ಯಳಾಗಿ, ಹತಾಶಳಾಗಿ, ಆಶಂಕಿತಳಾಗಿ, ಕೆಲವೊಮ್ಮೆ ಆಸೆ, ಭರವಸೆ ತುಂಬಿದವಳಾಗಿ ಕಾಣಿಸಿಕೊಳ್ಳುವುದೇ ಹೆಚ್ಚು. ಆದರೆ ಈ 'ವಿರಹ ಕೂಜನ' ಕವಿತೆಯಲ್ಲಿ ಕವಿ, ನಿರೂಪಕ ಅಥವಾ ನಾಯಕ, ತವರಿಗೆ ಹೋದ ಮಡದಿಯ ಅನುಪಸ್ಥಿತಿ ಅನುಭವಿಸುವ ಯಾತನೆ, ಬೇಸರ, ಚಡಪಡಿಕೆ ಕಳೆದ ದಿನಗಳ ನೆನಪುಗಳಲ್ಲಿ, ಬೇಗ ಬರಬಾರದೆ- ಎಂಬ ಹಾರೈಕೆಯಲ್ಲಿ ನಿಂತಿರುವ ಚಿತ್ರವನ್ನು ನೀಡುತ್ತದೆ.

ಈ 'ಕವಿತೆ' ಶೀರ್ಷಿಕೆಯಂತೆ 'ವಿರಹಕೂಜನ' ಪುರುಷನ ವಿರಹದ ಕೂಗು ಇದಾಗಿದೆ. ಇಲ್ಲಿನ ನಾಯಕ ವಿರಹದ ಸ್ಥಿತಿಯಲ್ಲಿದ್ದಾನೆ. ಮದುವೆಯಾದ ಪ್ರಾರಂಭದ ದಿನಗಳಲ್ಲಿ ಹೆಣ್ಣುಮಕ್ಕಳಿಗೆ ಗಂಡನ ಪ್ರೀತಿಯನ್ನೆಲ್ಲಾ ಮೀರಿದ ತವರಿನ ಹಂಬಲ. ಹಾಗೆಂದು ಗಂಡನನ್ನು ಅಥವಾ ಪ್ರಿಯನನ್ನು ಸುಲಭವಾಗಿ ಬಿಟ್ಟು ಹೋಗಲೂ ಒಲ್ಲದ ಮನಸ್ಸು! ಇಂತಹ ಸಂದಿಗ್ಧ ಆ ಹೆಣ್ಣಿನದು. ಪ್ರಿಯನಿಗೂ ಕೈ ಹಿಡಿದವಳ ಮನಸ್ಸನ್ನು ನೋಯಿಸಲಾಗದೆ, ಹಾಗೂ ತವರಿಗೆ ಹೋಗಗೊಡದೆ ನಿಲ್ಲಿಸಿಕೊಳ್ಳಲೂ ಮನಸ್ಸು ಒಪ್ಪದೆ ಕಡೆಗೆ ಕನಿಕರಿಸಿ ಕಳುಹಿಸಿಕೊಡುವ ಉದಾರತೆ! ಆದರೆ ಕಳಿಸಿಕೊಟ್ಟ ಮೇಲೆ ನಾಯಕನ ಸ್ಥಿತಿ ಹೇಗಾಗುತ್ತದೆ, ಹೇಗಿರುತ್ತದೆ ಎನ್ನುವುದಕ್ಕೆ,

**ಮನೆಯೊಳಗೆ ಅತ್ತಿತ್ತ ಕಾಲು ಸುಳಿದಾಡುತಿವೆ**
**ಕಂಡು ಕಂಡೂ ಕಣ್ಣು ಹುಡುಕುತಿಹವು ;**
**ಸುಮ್ಮಸುಮ್ಮನೆ ಕಿವಿಗಳೇನೊ ಆಲಿಸಿದಂತೆ-**
**ತಮ್ಮ ರೂಢಿಗೆ ತಾವೆ ನಾಚುತಿಹವು.**
**ಅಡುಗೆ ಮನೆಯೊಳು ಬರಿಯ ಹೊಗೆಯಾಡಿದಂತಿಹುದು**
**ದಿನದ ಗುಂಜಾರವದ ನಿನದವಿಲ್ಲ;**
**ನಡುಮನೆಗು ಪಸರಿಸುವ ನಗೆಯ ಸುಳಿವೇ ಇಲ್ಲ**
**ಸೆಜ್ಜೆವನೆ ಪಡಿಪಾಟು ಶಿವನೆ ಬಲ್ಲ**
**-ಎನ್ನುವ ಈ ಸಾಲುಗಳು ನೀಡುವ ವಿವರಣೆಯೇ ಸಾಕು.**

ಹೆಂಡತಿಯಾದವಳು ಮನೆಯಲ್ಲಿದ್ದರೆಯೇ ಸಂಭ್ರಮ, ಸದ್ದು, ಓಡಾಟ. ಅಡುಗೆಮನೆಯಲ್ಲಿ ಗಲಿಬಿಲಿ, ನಡುನಡುವೆ ಮಾತು. ಎಲ್ಲಕ್ಕಿಂತ ಹೆಚ್ಚಾಗಿ ರಾತ್ರಿಯಲ್ಲಿನ ಮಧುರ ಸಾಹಚರ್ಯ. ಇಂತಹ ರೂಢಿಯ ಅನುಭವಕ್ಕೆ ಅಭ್ಯಸ್ಥವಾದ ಮನಸ್ಸಿಗೆ, ಮಡದಿ ಮನೆಯಲ್ಲಿ ಇಲ್ಲದಾಗಲೂ

ಏನೋ ಒಂದು ಬಗೆಯ ಭ್ರಮೆ; ಭ್ರಾಂತಿ. ಇಲ್ಲದ ಮಡದಿಗಾಗಿ ಅರಸುವ ಕಣ್ಣು, ಕೇಳಬಾರದ ಕೊರಳಿಗಾಗಿ ಕಾತರಗೊಳ್ಳುವ ಕಿವಿ!! ಭ್ರಮೆ ಸರಿದಾಗ, ದಿನದ ಗುಂಜಾರವದ ನಿನದವಿಲ್ಲ; ನಗೆಯ ಸುಳಿವಿಲ್ಲ, ಸಜ್ಜೆವನೆಯ ಸುಖವಿಲ್ಲ; - ಎಂಬ ಕಹಿ ವಾಸ್ತವದ ಅರಿವಿನ ಎಚ್ಚರ, ಮಡದಿ ಮನೆಯಲ್ಲಿದ್ದಾಗಿನ ಕ್ಷಣಗಳ, ಸನ್ನಿವೇಶಗಳ ನೆನಪುಗಳ ಮೂಲಕ ಮಧುರಾನುಭೂತಿಯ ಕಡೆಗೆ ಹೊರಳುತ್ತದೆ.

ದಣಿದು ಮನೆಗೆ ಬಂದಾಗ, ನಾಯಕನನ್ನು ಸ್ವಾಗತಿಸುವ ಅವಳ ನಗು 'ಪ್ರೇಮ ಪೂರ್ಣಿಮೆಯ ನಗುವಾಗಿ' ಹುಣ್ಣಿಮೆಗೂ ಹೊಸ ಬಣ್ಣತರಿಸುವಂಥ ನಗೆಯಾಗಿ ಭಾಸವಾಗುತ್ತಿತ್ತು. ಬೆಳಗಿನಿಂದ ದುಡಿದು ಸಂಚಯಿಸಿಕೊಂಡಿದ್ದ ಆಯಾಸ ಅವಳ ಮಂದಹಾಸದಲ್ಲಿ ಕರಗಿ ಹೋಗುತ್ತಿತ್ತು. ಅಷ್ಟೇ ಅಲ್ಲ, "ಗಾಳಿಯಲೆಗೂ ನಲುಮೆ ಬೆರಳನಾಡಿಸಿದಂತೆ! ತರಳೆಯೊಲವಿನ ಹೊಳವುದೋರುತಿತ್ತು' - ಇಂತಹ ದಾಂಪತ್ಯ, ಮನಗಳ ಅನ್ಯೋನ್ಯ ಬೆಸುಗೆ, ಸಹಯೋಗ, ಸಹಬಾಳ್ವೆ-ಬದುಕು ನಯವಾಗಿ, ನಾಜೂಕಾಗಿ, ಯಾವುದೇ ಅಡೆತಡೆಯಿಲ್ಲದೆ ಸಾಗಿ ಹೋಗುತ್ತಿತ್ತು ಎನ್ನುವುದನ್ನು "ಬೆಣ್ಣೆಯೊಳಗಿನ ಕೂದಲೆಳೆಯ ಹೊರದೆಗೆವನಿತು ನಯವಾಗಿ ದಿನಬಳಕೆ ಸಾಗುತಿತ್ತು" - ಎನ್ನುವ ಸಾಲುಗಳು ಸಮರ್ಥವಾಗಿ ಧ್ವನಿಸುತ್ತವೆ. ಸಾಂಗತ್ಯ, ಸಾಹಚರ್ಯ, ಒಡನಾಟ ದಾಂಪತ್ಯವನ್ನು, ಬದುಕನ್ನು ನಿರರ್ಗಳವಾಗಿ, ಅವ್ಯಾಹತವಾಗಿ ಅಡೆತಡೆಯಿಲ್ಲದ, ಸವಿತುಂಬಿದ ಅಮೃತಧಾರೆಯಾಗಿ ಸಾಗಿಸುತ್ತದೆ. ಆದರೆ ಮಡದಿಯ ಅಗಲಿಕೆ, ವಿರಹಗಳು ಮನವನ್ನು ನೋವು ಕಾತರ, ಆತಂಕ, ಬೇಸರಗಳ ಗೂಡಾಗಿಸುತ್ತವೆ. ಬದುಕೇ ಹೊರೆಯಾಗಿ ಭಾಸವಾಗುತ್ತದೆ.

ಹೆಣ್ಣಾಗಾದಲೋ ಕೆ.ಎಸ್.ನ. ರ "ಎಂದು ಬರುವೆ ನೀನು" ಕವಿತೆಯ ನಾಯಕಿ, ವಿರಹಿಣಿಗೆ ಆದಂತೆ ಮಾವಿನ ತೋಪು ಬಿಮ್ಮನಿಸುತ್ತದೆ; ಕನಸಿನೊಳಗೆ ಇಲ್ಲದ ಗಾಯ, ಭಯಗಳು ಕಾಣಿಸಿಕೊಳ್ಳುತ್ತವೆ; ಕಡೆಗೆ ಮುಡಿದ ಹೂವೂ ಹೊರೆಯೆನಿಸುತ್ತದೆ.

ಕಣವಿಯವರ ಕವಿತೆಯ ನಾಯಕನ ಸ್ಥಿತಿಯೂ ಇದಕಿಂತ ಬೇರಿಲ್ಲ. ಆದರೂ ಮಡದಿಯನ್ನು ತವರಿಗೆ ಕಳಿಸುವುದು ಅನಿವಾರ್ಯವಾಗುತ್ತದೆ. ಆಕೆಯ ಪ್ರಾರ್ಥನೆ, ತವರಿನ ನೆನಪಿನೊಂದಿಗೆ ಅವಳ ಮೊಗದಲ್ಲಿ ಅರಳುವ ಹಿಗ್ಗು, ಅವಳ ಆಸೆ, ಹಂಬಲವನ್ನು ತಿರಸ್ಕರಿಸಲಾಗದಂತೆ ಒತ್ತಾಯಿಸಿವೆ. ತವರ ಹಂಬಲ ಮಾತ್ರದಿಂದಲೇ ತನ್ನ ಮೇಲಿನ ಪ್ರೀತಿಗೆ ಹೊರೆಯಾಗಲಾರದೆನ್ನುವ, ನಂಬಿಕೆಗೆ ಮಡದಿಯು ಕೊರಳಪ್ಪಿ 'ಅಗಲಲಾರೆನು' ಎಂದು ಸುರಿಸುವ ಕಣ್ಣೀರಧಾರೆಯೇ ಸಾಕ್ಷಿಯಾಗುತ್ತದೆ. ಅಗಲಿಕೆ ಅನಿವಾರ್ಯವಾಗಿ ಅದೊಂದು 'ಮಧುರಶಾಪ'ವೆಂದು ಭಾವಿಸಿ ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳುವ, ವಿರಹಕ್ಕೆ ಒಗ್ಗಿಕೊಳ್ಳುವ ಅಭ್ಯಾಸಕ್ಕೆ ಮನಸ್ಸನ್ನು ಸಜ್ಜುಗೊಳಿಸುವ ಪ್ರಯತ್ನಕ್ಕೆ ನಾಯಕ ಸಿದ್ಧನಾಗುತ್ತಾನೆ. ಮಡದಿಯ ಬಗ್ಗೆ ಸಹಾನುಭೂತಿ, ಅನುಕಂಪ, ಅವಳ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ಉದಾರತೆ, ನಾಯಕನ ನಿರಹಂಕಾರತೆ, ಮಾನವೀಯತೆಗಳನ್ನು ಬಿಂಬಿಸುತ್ತವೆ. ಆದ್ದರಿಂದಲೇ "ಹೆತ್ತ ತಾಯ್ತಂದೆಗಳ ಕರುಳ ಮಲ್ಲಿಗೆಯರಳ! ಕಳಿಸಿರುವೆ ನಾಲ್ಕು ದಿನ ಇರಲಿ ಪಾಪ!" -ಎಂದು ಕಳಿಸಿಕೊಟ್ಟ ಮನಸ್ಸು ಅಂದಿನದಾಗಿತ್ತು.

ನಾಲ್ಕನೆಯ ಪದ್ಯದಲ್ಲಿ, ಹೀಗೆ ಕಳಿಸಿಕೊಟ್ಟ ಮನಸ್ಸು ಪರಿತಪಿಸುತ್ತದೆ. ಅಗಲಿಕೆಯ ವೇದನೆಯ ತೀವ್ರತೆ, ಬೇಸರಗಳು "ಏಕೆ ಕಳಿಸಿಕೊಟ್ಟೆನೋ, ಕಳಿಸಿಕೊಟ್ಟು ಏಕಾಕಿ ಯಾಕಾದೆನೋ!" ಎಂದು ಪಶ್ಚಾತ್ತಾಪಪಡುವಂತೆ ಮಾಡಿದೆ.

ಇದೇ ಪದ್ಯದಲ್ಲಿ ಬರುವ 'ಬೆಳವನಹಕ್ಕಿ'ಯ ಕೂಜನದ ಪ್ರಣಯಗೀತದ ಸಂದೇಶಕ್ಕೆ ಪ್ರತಿಕ್ರಿಯಿಸುವ ಅದರ ಸಖಿಯಂತೆ, ವಿರಹಿ ನಿರೂಪಕನ 'ವಿರಹಕೂಜನ' ತವರಿನಲ್ಲಿರುವ ಮಡದಿಯ ಮನದ ತಂತುಗಳನ್ನು ಮಿಡಿದಿರಬೇಕು!

ರವಿವಾರ ಮರಳುವ ಸೂಚನೆ ಬರಬೇಕೆಂಬ ಆದೇಶ ಕ್ಷಣದ ಸಾಂತ್ವನಕಷ್ಟೇ ! ರವಿವಾರದವರೆಗೆ ಕಾಯಲು ಇನ್ನೂ ನಾಲ್ಕು ದಿನದ ಅಂತರ!! ಪ್ರೀತಿಸುವ ಹೃದಯಗಳಿಗೆ ಕ್ಷಣ ಕ್ಷಣವೂ ಯುಗಯುಗದಂತೆ ಭಾಸವಾಗುತ್ತದೆ. 'ಕ್ಷಣವೊಂದು ಯುಗವಾಗುವುದು' ಎಲ್ಲ ಸಾಂಪ್ರದಾಯಿಕ ಪ್ರೇಮಗೀತೆಗಳ ನಾಯಕ, ನಾಯಕಿಯರ ಅನುಭವದಲ್ಲಿ ಸರ್ವೇಸಾಮಾನ್ಯ. ಅಂತೆಯೇ ಈ ಕವಿತೆಯ ನಾಯಕನಿಗೂ, ಮಡದಿಯ ಓಲೆ ಬಂದರೂ.

**"ಇಂದು ಬಂದಿಹ ಓಲೆಯಲ್ಲಿ ಮರುಕದ ಸಾಲು;**
**'ರವಿವಾರ ದಿನ ನೀವು ಬರಲೇಬೇಕು;'**
**ಅದು ಎಲ್ಲ ಸರಿ, ಆದರಿಂದು ಮಂಗಳವಾರ**
**ನಾಲ್ಕು ದಿನಗಳನೆಂತು ನೂಕಬೇಕು"**

ಎಂದು ಪ್ರಶ್ನಿಸಿಕೊಳ್ಳುವ ಪರಿ, ಕಾಯುವ ಬೇಸರ, ಅಗಲಿಕೆಯ ಚಡಪಡಿಕೆ, ಒಂದು ಬಗೆಯ ಸೌಮ್ಯ ಅಸಮಾಧಾನಗಳನ್ನು ಬಿಂಬಿಸುತ್ತದೆ.

ಈ ಮೇಲೆ ಪ್ರಸ್ತಾಪಿಸಿರುವ ಪದ್ಯದ ಸಾಲುಗಳು 'ಮೈಸೂರು ಮಲ್ಲಿಗೆ'ಯ ಸಂಕಲನದಲ್ಲಿನ 'ನಾಳೆ ಬರುವಳು ಗೌರಿ' ಎಂಬ ಕವಿತೆಯಲ್ಲಿನ

**ಮೂರು ತಿಂಗಳು ಕಳೆದ ಮೂರನೆಯ ದಿವಸವೇ**
**ಬರುವೆನೆಂದಾಣೆಯಿಟ್ಟೊಲವ ಮಿಡಿದು**
**ತೌರಿಗೋಡಿದ ಗೌರಿ ಮೂರು ತಿಂಗಳ ಮೇಲೆ**
**ವಾರವೊಂದಾದರೂ ಬಂದಿಲ್ಲವು- ಎಂಬ ಸಾಲುಗಳನ್ನು ನೆನಪಿಸುತ್ತವೆ.**

ಪ್ರೇಮಗೀತೆಗಳ ಪ್ರಧಾನರಸ ಶೃಂಗಾರ. ಸಂಭೋಗ ವಿಪ್ರಲಂಭ ಶೃಂಗಾರವೆಂದಿರುವ ಎರಡು ರಸಪ್ರಭೇದಗಳಲ್ಲಿ, ಇಲ್ಲಿನದು ವಿಪ್ರಲಂಭ. ಕೇವಲ ಹೆಣ್ಣಿನ ಮಿಲನ ಸಂಭ್ರಮ ಸ್ಥಿತಿಗಳನ್ನು, ವಿರಹೋತ್ಕಂಠ ಸ್ಥಿತಿಯನ್ನು ನಮ್ಮ ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರಧಾನವಾಗಿ ಕಾಣುವೆವಾದರೂ, ಅಪರೂಪಕ್ಕೆ ಪುರುಷನ ವಿರಹದ ಉತ್ಕಟ ಸ್ಥಿತಿಯನ್ನು ಅತ್ಯಂತ ಸರಳ ನಿರೂಪಣೆಯಲ್ಲಿ, ಸುಕುಮಾರ ಪ್ರಕೃತಿ ಚಿತ್ರಗಳ ಮೂಲಕವಾಗಿ ಹೃದಯಸ್ಪರ್ಶಿಯಾಗಿ ಕಟ್ಟಿಕೊಡುವಲ್ಲಿ ಈ ಕವನ

ಯಶಸ್ವಿಯಾಗಿರುವುದಲ್ಲದೆ, ಪುರುಷ ನೆಲೆಯಿಂದ ಅಗಲಿಕೆಯ ನೋವನ್ನು ಕಾವ್ಯವಾಗಿಸಿರುವುದು, ವಿಶಿಷ್ಟವೆನಿಸಿದೆ. ಶ್ಲೇಷಗಳಿಂದ ಮುಕ್ತವಾಗಿ, ವಾಸ್ತವಿಕ ಅನುಭವದ ನೆಲೆಯಿಂದ ಹೊರಟ ಈ 'ವಿರಹ ಕೂಜನ' ವಿರಹಿಗಳ ಮನಃ ಸ್ಪಂದನಕ್ಕೆ ಪ್ರಚೋದನಕಾರಿಯಾಗಿದೆ ಎನಿಸುತ್ತದೆ.

ಇದ್ದಾಗ ಇದ್ದಂತೆ ಅನಿಸುವುದಿಲ್ಲ. ಒಲಿದ ಜೀವಗಳು ಒಡನಾಟದ ಕ್ಷಣಗಳ ಸುಖದ ಬೆಲೆಯನ್ನು ಅಗಲಿಕೆಯ ನೋವಿನ ಕ್ಷಣಗಳಲ್ಲಿ ಗ್ರಹಿಸುವುದೇ ಅಲ್ಲದೆ, ಅಂದಿನ ನೆನಪುಗಳೇ ಬದುಕಿನ ಆಲಂಬನವೆಂಬಂತೆ ಭಾವಿಸುವವು. ಹಾಗಾಗಿ ಈ ಕವಿತೆಯ ನಾಯಕನಿಗೆ ಮಡದಿಯ ಅಗಲಿಕೆ ಶಾಪವೆನಿಸದೆ, ಮಧುರಶಾಪವೆನಿಸುತ್ತದೆ. ಅಗಲಿಕೆಯ ಅವಧಿಯಲ್ಲಿ ವಿಸ್ಮೃತಿಯಾಳದಲ್ಲಿ ಮಧುರಾನುಭೂತಿಗಳು ಮರುಕಳಿಸಿ ವಿರಹ ಕ್ಷಣಗಳ ಸುಡು ಬಿಸಿಲಿಗೆ ತಂಪರೆಯುತ್ತವೆ.

ಪ್ರೇಮ ಗೀತೆಗಳ ಪರಂಪರೆಯಲ್ಲಿ, ಅದೂ ಕನ್ನಡ ಕಾವ್ಯ ಸಂದರ್ಭದಲ್ಲಿ ಪುರುಷನ ವಿರಹದ ಚಿತ್ರದ ಮೂಲಕವಾಗಿ ಒಂದು ವಿಶಿಷ್ಟ ಮತ್ತು ಅಪರೂಪದ ಕವಿತೆಯಾಗಿದೆ, ಈ 'ವಿರಹ ಕೂಜನ'.

**ವಿಜಯಾ ಸುಬ್ಬರಾಜ**

# ೧೧. ಬೇಲಿಯ ಮೇಲಿನ ನೀಲಿಯ ಹೂಗಳು

ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ
ಮುಂಜಾವದಲಿ ಬೇಲಿತುಂಬ ನೀಲಿಯ ಹೂವು
ಜೀವನೋತ್ಸಾಹದಲಿ ಎದೆದುಂಬಿಸುವ ರೂಹು!
ಭೂಮಿಯಾಳದ ಭಾವ ಮೇಳೈಸಿ ಪುಟಿದಂತೆ
ಎಲ್ಲೆಂದರಲ್ಲೆ ಮನಸೇಚ್ಛೆ ಬೆಳೆದಿಹ ಬಳ್ಳಿ
ತೆರೆದಿಹುದು ನೂರು ಸಾವಿರ ನೀಲ ಬಗೆಗಣ್ಣು !
(ನೇಸರನಿಗು ಜಗಕು ಇನ್ನೂ ನಿದ್ದೆಗಣ್ಣು)
ಎಲ್ಲ ಒಂದೇ ಅದಕೆ -ತೋಟ ಬೇಲಿಯಕಳ್ಳಿ.
ಬಿಸಿಲು ಬಲಿಯುವ ಮುನ್ನ ಬಗೆಗೊಂಡ ಸೌಜನ್ಯ
ಮುಖವ ಸಣ್ಣದು ಮಾಡಿ ಮುದುಡಿಕೊಂಡಿರೆ ಜೀವ
ಬರಿಯ ನೆನಪಿಗೆ ಉಳಿದ ದೇಟಿಗಂಟಿದ ಹೂವ
ಬದಿಬದಿಗೆ ನಾಳೆಯರಳುವ ಮೊಗ್ಗೆ ಮೂರ್ಧನ್ಯ !
ವಿಮಲ ಕೋಮಲ ಕಾಂತಿಯೊಗುಮಿಗುವ ಚೈತ್ಯಾಕ್ಷಿ
ಅದೊ ಅಲ್ಲಿ ಇದೊ ಇಲ್ಲಿ ಪ್ರತ್ಯಕ್ಷ ಸುಮ ಸಾಕ್ಷಿ !

ಈ ಹಿಂದೆ 'ಚೆಂಗುಲಾಬಿ' 'ಈ ಮಲ್ಲಿಗೆ' ಬರೆದ ಕವಿಯ ಲಕ್ಷ್ಯ ಈಗ ' (ದೀಪಧಾರಿ' : ೧೯೫೬) ಬೇಲಿಯ ಮೇಲಿನ ನೀಲಿಯ ಹೂಗಳ ಕಡೆಗೆ ಹೊರಳುತ್ತಿದೆ. ಎಲ್ಲೆಂದರಲ್ಲಿ ಬೇಲಿಯಲ್ಲಿ ಸಮೃದ್ಧವಾಗಿ ಅರಳಿದ ಕಾಡುಕುಸುಮಗಳ ಕಡೆಗೆ ಕವಿಯ ಗಮನ ಹರಿಯುತ್ತಿದೆ. ಮುಂಜಾನೆಯ ದೃಶ್ಯದಿಂದ ಕವಿತೆ ಆರಂಭವಾಗುತ್ತದೆ. ಬೇಲಿಯ ತುಂಬ ನೀಲಿ ಹೂಗಳು ಹೇಗೆ ಅರಳಿವೆಯೆಂದರೆ 'ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ'. ಇದು ಕವಿಗೆ ಅತ್ಯಂತ ಖುಷಿ ನೀಡುವ ದೃಶ್ಯ. ಹೊರಗಣ್ಣಿಗೆ ಮಾತ್ರ ಖುಷಿ ಕೊಡದೆ ನಮ್ಮ 'ಬಗೆಗಣ್ಣು' ಕೂಡ ಹಲವು ಬಗೆಯಾಗಿ ತೆರೆದುಕೊಳ್ಳುತ್ತದೆ. ಈ ಚಿತ್ರ 'ಎದೆದುಂಬಿಸುವ ರೂಹು' ಆಗಿದೆ. 'ಜೀವನೋತ್ಸಾಹದಲಿ' ಎಂಬ

ಪದದ ವಿಶೇಷತೆಯನ್ನು ಕೂಡ ಗಮನಿಸಬೇಕು. ಪ್ರಕೃತಿ ಮತ್ತು ಮನುಷ್ಯನ ಸಂಬಂಧದ ಕುರಿತು ಸೂಕ್ಷ್ಮವಾಗಿ ನಮ್ಮ ಲಕ್ಷ್ಯವನ್ನು ಸೆಳೆಯುತ್ತದೆ. ಇಂದ್ರಿಯ ಗಮ್ಯವಾಗಿರುವುದು ಭಾವಗಮ್ಯವಾಗುತ್ತದೆ. ಕವಿಗೆ, ಆ ಮೂಲಕ ಓದುಗನಿಗೂ ಜೀವನೋತ್ಸಾಹವನ್ನುಂಟುಮಾಡುವಂಥ ದೃಶ್ಯ. ಈ ಹೂಗಳು ಹೇಗೆ ಹೊರಹೊಮ್ಮಿವೆಯೆಂದರೆ: 'ಭೂಮಿಯಾಳದ ಭಾವ ಮೇಳೈಸಿ ಪುಟಿದಂತೆ' ಶುದ್ಧಾಂತಃಕರಣದ ಕವಿಯ ಹೃದಯದಾಳದಿಂದ ಭಾವನೆಗಳು ಧುಮ್ಮಿಕ್ಕುವಂತೆ ಭೂಮಿಯಾಳದ ಭಾವವೇ ಹೂಗಳಾಗಿ ಪುಟಿದೆದ್ದಿವೆ. ಕವಿ ಕೇವಲ ಹೂಗಳನ್ನೇ ಕುರಿತು ಹೇಳಿದರೂ ಸೂಕ್ಷ್ಮವಾಗಿ ಮನುಷ್ಯನಿಗೂ ಮತ್ತು ಪ್ರಕೃತಿಗೂ ಇರುವ ಗಾಢ ಸಂಬಂಧದ ಬಗೆಗೆ ಆಲೋಚಿಸುವಂತೆ ಮಾಡುತ್ತಾರೆ. ಎಲ್ಲೆಂದರಲ್ಲಿ ಮನಸೇಚ್ಛೆ ಬೆಳೆದಿರುವ ಬಳ್ಳಿಗೆ ನೂರು ಸಾವಿರ ನೀಲ ಬಗೆಗಣ್ಣು. ಕವಿ ತನಗೆ ಆಗಿರುವ ಅನುಭವವನ್ನು ಅತ್ಯಂತ ಸೂಕ್ತವಾದ ಪ್ರತಿಮೆಗಳ ಮೂಲಕ ಅಭಿವ್ಯಕ್ತಿಸಿ ನಮ್ಮ ಭಾವನೆಗಳಿಗೂ ಪ್ರಚೋದನೆ ನೀಡುತ್ತಾನೆ. ಹೃದಯದ ಕಣ್ಣು ತೆರೆಯುತ್ತದೆ. 'ನೇಸರನಿಗೂ ಜಗಕು ಇನ್ನೂ ನಿದ್ದೆಗಣ್ಣು' ಎಂದು ಹೇಳುವಲ್ಲಿ ಇದು ನಸುಕಿನ ಚುಮುಚುಮು ಬೆಳಕು ಹರಿಯುವ ಸಮಯ. ಇನ್ನೂ ಜೀವ ಪ್ರಪಂಚ ಪೂರ್ತಿ ಕಣ್ಣು ಬಿಡದಿದ್ದಾಗ ಇದು ಕಣ್ಣುಬಿಟ್ಟಿದೆ. 'ಮುಂಜಾವದಲಿ ಬೇಲಿ ತುಂಬ ನೀಲಿಯ ಹೂವು' ನಮ್ಮ ಹೊರಗಣ್ಣು ಹಾಗೂ ಒಳಗಣ್ಣಿಗೆ ಬೆಳಕು ನೀಡುವಂಥ ದೃಶ್ಯವನ್ನು - ಭಾವ ಜಗತ್ತನ್ನು ಕವಿ ಇಲ್ಲಿ ಕಟ್ಟಿಕೊಡುತ್ತಾನೆ. 'ಎಲ್ಲ ಒಂದೇ ಅದಕೆ' ಎಂಬ ಪದ ಪುಂಜವೂ ಕೂಡ ಅರ್ಥವತ್ತಾಗಿದೆ. 'ಬೆಳಕು' ಮತ್ತು ಇಲ್ಲಿ ಅರಳಿದ ಹೂ ಎಲ್ಲೆಂದರಲ್ಲಿ ತೆರೆಯುವಂಥವು. ಮಲ್ಲಿಗೆ ಗುಲಾಬಿಗಳಿಗೆ ತಮ್ಮದೇ ಕಂಪು ಇದ್ದರೆ ಬೇಲಿಯ ಮೇಲಿನ ನೀಲಿ ಹೂವುಗಳಿಗೂ ತಮ್ಮದೇ ಸೊಬಗು ; ಆ ಮೂಲಕ ಅವೂ ಅಸ್ತಿತ್ವ ಪಡೆದುಕೊಂಡಿವೆ. ಕವಿಯ ಈ ಆಯ್ಕೆಯಲ್ಲಿಯೇ ಆತನ ಸಮಭಾವ ತಿಳಿಯುತ್ತದೆ. ಕವಿಯ ಈ ಪ್ರಕೃತಿ ಪ್ರೀತಿಯಲ್ಲಿ ಆತ ಕಂಡುಕೊಳ್ಳುವ ಸಮದರ್ಶನ ಇಲ್ಲಿ ಕೂಡ ಲಕ್ಷ್ಯಾರ್ಹವಾಗುತ್ತದೆ.

ಮುಂದಿನ ಸಾಲುಗಳಲ್ಲಿ ದೃಶ್ಯ ಬದಲಾಗುತ್ತದೆ. ಇದೇ ಸನ್ನಿವೇಶ, ಸಂದರ್ಭ ಕೊನೆಯವರೆಗೂ ಉಳಿಯುವುದಿಲ್ಲ. ಬಿಸಿಲು ಬಲಿಯುತ್ತಿರುವಂತೆ ಹೂಗಳು ಮುದುಡಿಕೊಳ್ಳುತ್ತವೆ. 'ಬಿಸಿಲು ಬಲಿಯುವ ಮುನ್ನ ಬಗೆಗೊಂಡ ಸೌಜನ್ಯ ಮುಖವ ಸಣ್ಣದು ಮಾಡಿ' ಮುದುಡಿಕೊಳ್ಳುತ್ತದೆ. 'ಸೌಜನ್ಯ' ಪದವನ್ನು ಬಳಸುತ್ತಿದ್ದಾನೆ. ಸೌಜನ್ಯ. ಸಮಭಾವ, ಸಮದರ್ಶನ ಕವಿಯ ಜೀವನ ಮೌಲ್ಯಗಳೇ ಆಗಿವೆ. ಎಲ್ಲೂ ವಾಚ್ಯವಾಗದೆ ಧ್ವನಿಸುವ ಕಾವ್ಯಶಕ್ತಿಯ ತರಂಗಗಳು ಅಗಾಧ ಪರಿಣಾಮವನ್ನುಂಟು ಮಾಡುತ್ತವೆ. ಸುಪುಷ್ಪವಾಗಿ ಸಮೃದ್ಧವಾಗಿ ಹರಡಿಕೊಂಡಿರುವ ಹೂಗಳು ಬಿಸಿಲು ಬಲಿಯುತ್ತಿರುವಂತೆ ಮುದುಡಿಕೊಳ್ಳುತ್ತವೆ. 'ಮುಖವ ಸಣ್ಣದು ಮಾಡಿ ಮುದುಡಿಕೊಂಡಿದೆ ಜೀವ/ಬರಿಯ ನೆನಪಿಗೆ ಉಳಿದ ದೇಟಿಗಂಟಿದ ಹೂವ' ಕವಿ ಇವುಗಳ ಅಂತ್ಯ ಹೇಳುವಾಗಿನ 'ಮುದುಡಿಕೊಂಡಿದೆ' 'ದೇಟಿಗಂಟಿದ ಹೂವ' ವಿಷಣ್ಣತೆ ಉಂಟು ಮಾಡುತ್ತವೆ. ಈವರೆಗಿನ ಜೀವನೋತ್ಸಾಹದ ಸಂಭ್ರಮ ಕಾಣೆಯಾಗುತ್ತದೆ. ಬದುಕಿನ ಕ್ಷಣಭಂಗುರತೆಯ ಅರಿವು ಉಂಟಾಗುತ್ತದೆ. ಆದರೆ ಹತಾಶೆಗೊಳ್ಳಬೇಕಿಲ್ಲ. ಬಾಡಿದ ಹೂಗಳ ಬದಿಗೇ ನಾಳೆ ಅರಳುವ ಮೊಗ್ಗುಗಳಿವೆ. ಇದು ಕವಿಯ ಆಶಾವಾದದ ಪ್ರತೀಕ.

ಕೊನೆಯ ಎರಡು ಸಾಲುಗಳಲ್ಲಿ ಕವಿ ಬೆಳಗಿನಲ್ಲಿ ಕಂಡ 'ವಿಮಲ ಕೋಮಲ ಶಾಂತಿ' ಉಕ್ಕಿಸುವ ಹೂಗಳನ್ನು ಕುರಿತು ಧೇನಿಸುತ್ತಾನೆ. ನಯ ನಾಜೂಕಿನ ಪರಿಶುದ್ಧ ಕಾಂತಿಯನ್ನು ಹೊರಸೂಸುವ ಚೈತ್ಯಾಕ್ಷಿ ಎಂದು ವರ್ಣಿಸುವಾಗ ಕವಿಯ ರೂಪಕ ಪ್ರತಿಭೆ ಅದ್ಭುತವಾಗಿ ಅಭಿವ್ಯಕ್ತಗೊಳ್ಳುತ್ತದೆ.

ಕವಿ ಬರೀ ನಿಸರ್ಗದ ಆರಾಧಕ, ಆಸ್ವಾದಕ ಮಾತ್ರ ಅಲ್ಲ. ಆತನ ನಿಸರ್ಗ ಪ್ರೀತಿ ಜೀವನೋತ್ಸಾಹವನ್ನು ಅಧಿಕಗೊಳಿಸುವಂಥದ್ದು. ನಿಸರ್ಗ ಮನುಷ್ಯನ ಚೈತನ್ಯವನ್ನು ಪೊರೆಯಬಲ್ಲಂಥದ್ದು.

ಈ ಕವಿತೆಯ ಆಕೃತಿಯ ಬಗ್ಗೆ ಕೂಡ ಚರ್ಚಿಸಬೇಕಿದೆ. ಇದು ಶೇಕ್ಸಪಿಯರನ ಸಾನೆಟ್ಟಿನ (ಸುನೀತ) ಮಾದರಿಗೆ ಸಮೀಪವಾದದ್ದು ಎಂದರೆ ಸಾಮಾನ್ಯವಾಗಿ ಮೂರು ಚೌಪದಿಗಳು ಮತ್ತು ಒಂದು ಪ್ರಾಸಬದ್ಧ ದ್ವಿಪದಿಗಳುಳ್ಳ ಹದಿನಾಲ್ಕು ಸಾಲುಗಳ ಪದ್ಯ. ಇಲ್ಲಿಯ ಅಂತ್ಯ ಪ್ರಾಸ ಸಂಯೋಜನೆ ಅ ಆ ಆ ಅ, ಇ ಈ ಈ ಇ, ಉ ಊ ಊ ಉ, ಎ ಎ ಇರುವುದನ್ನು ಗುರುತಿಸಬಹುದು. ಶೇಕ್ಸಪಿಯರ ಇಂಥ ಸೀಮಿತ, ಬಂಧದಲ್ಲೇ ತನ್ನ ಅಪಾರ ಪ್ರತಿಭೆಯನ್ನೂ ಮೆರೆಯುತ್ತಾನೆ. ಇದೊಂದು ಸೂಕ್ಷ್ಮವಾದ 'ಕೆತ್ತನೆಯ ಕೆಲಸ', ಇಲ್ಲಿ ಅಕ್ಕಸಾಲಿಗನ ಚಿನ್ನದ ಕಸುಬು ಇದೆ. ಹಾಗೆಯೇ ಶೇಕ್ಸಪಿಯನಿಗಿರುವಂಥ ಕಾವ್ಯದ ಓಜಸ್ಸೂ ಇದೆ. ಕೊನೆಯ ಎರಡು ಸಾಲುಗಳು (ದ್ವಿಪದಿ) ಸಮಾರೋಪದ ತರಹ ಅರ್ಥವತ್ತಾಗಿ ಕಂಗೊಳಿಸುತ್ತವೆ. ಕವಿಯ ಕಲ್ಪಕತೆ, ಭಾವತೀವ್ರತೆ, ಕಲೆಗಾರಿಕೆಗಳನ್ನೆಲ್ಲ ಮೇಳವಿಸಿಕೊಂಡ ಒಂದು ಸುಂದರವಾದ ಪದ್ಯ ಇದು.

ಮಲ್ಲಿಕಾರ್ಜುನ ಹಿರೇಮಠ

## ೨

ತನ್ನ ಕಾವ್ಯದಲ್ಲಿ ಕವಿಗೆ ಬಿಚ್ಚಿಡಲು ಸಾಧ್ಯವಾಗಬಹುದಾದ್ದು ಅದರ ಅರ್ಥವನ್ನು ಹಾಗೆಯೇ ಪೂರ್ತಿ ಕೀ ಹಾಕಿ ಅನ್ಯರು ಬಿಚ್ಚಲು ಅಸಾಧ್ಯವಾದ ಕಠಿಣ ಅವಯವಗಳ ಲಾಕರ್ ಕೂಡ ಕಾವ್ಯ ಆಗಲಾರದು. ಸಂಪೂರ್ಣ ಬಚ್ಚಿಟ್ಟು ಬಿಟ್ಟರೆ ಕಾವ್ಯಕ್ಕೆ ಉಳಿಯಬಹುದಾದ ಜೀವಂತಿಕೆಯಾದರೂ ಏನು? ಕೇವಲ ಮುನ್ನುಡಿಗಳೇ ಕಾವ್ಯಕ್ಕೆ ಆಮ್ಲಜನಕವಾಗುವಂಥದ್ದು ದುರ್ದೈವದ ಸಂಗತಿಯೇ ಸೈ. ಕಾವ್ಯ ಕಳಿತ ಹಣ್ಣಿನಂತೆ ಸರ್ರನೆ ಕೈಗೆ ದಕ್ಕುವಂಥದ್ದು. ಓದುಗನಿಗೆ ನಿರಂತರವಾದ ಓದು ಪೂರ್ಣಗೊಂಡ ಮೇಲೇ. ಕವಿಗೂ, ಓದುಗನಿಗೂ ಆಗ ನಿರಂತರವಾದ ದೊಡ್ಡ ಕಂದಕ ಇರಲು ಸಾಧ್ಯವಿಲ್ಲ. ಹಿಂದಿನ ರಾತ್ರಿ ಹೆಪ್ಪಿಟ್ಟ ಗಿಡದ ಮೊಗ್ಗುಗಳಂತೆ, ಬೆಳಗಾದರೆ ಬಿಚ್ಚಿಡೆನು ಎಂಬಂತಿದ್ದ ಹೂವು ಅನನ್ಯವಾಗಿ ಬಿಚ್ಚಿಕೊಂಡಂತೆ ದಿವ್ಯಕ್ಕೆ ಹತ್ತಿರುವ ಸುಮದೊಡಲು ಆಗ.

ಬದುಕು ಮತ್ತು ಬದುಕಿನಾಚೆಯ ಮಾತು ವಾಸ್ತವವಾಗಿ ಮನುಷ್ಯನನ್ನು ಲಾಗಾಯ್ತಿನಿಂದ ಕಾಡುತ್ತಲೇ ಉಳಿದ ಅಂಶಗಳು. ಮನುಷ್ಯನಿಗೆ ಈ ಕಾಟ ಒದಗಿದ್ದು ಪರಿಪೂರ್ಣವಾಗಿ ಬೆಳೆದುಕೊಂಡ ಮಿದುಳಿನ ಕಾರಣದಿಂದಿರಬಹುದು. ಗಾಂಧೀಜಿ, ಮಾರ್ಟಿನ್ ಲೂಥರ್‌ಕಿಂಗ್, ಲಿಂಕನ್ ಮುಂತಾದವರು ಸತ್ಯ ಮತ್ತು ಸಹನೆಯೊಂದಿಗೆ ಭೂಮಿಯಲ್ಲಿನ ತಮ್ಮ ಅಂಗಳದಲ್ಲಿ ಓಡಾಡುತ್ತ ಎಲ್ಲರ ಬದುಕನ್ನೂ ಸಾಮಾಜಿಕತೆಯನ್ನು ಕಟ್ಟಲು ಹೊರಟರೆ, ಹಿಟ್ಲರ್, ಇದಿ ಅಮಿನ್, ಲಾಡೆನ್ ಅಂಥವರು ಬದುಕಿನ ಸಂದರ್ಭದಲ್ಲಿ ಮನುಷ್ಯರ ರುಂಡಗಳನ್ನೇ ಚೆಂಡಾಡುವ ರೀತಿ ನಾವು ಗಮನಿಸಿದ್ದೇವೆ. ಬಹುಶಃ ಅನಿಶ್ಚಿತವಾದ ಬದುಕು ಸಹನೆಯನ್ನು ಒಂದಿಷ್ಟು ಮಂದಿಗೆ ಒದಗಿಸಿದರೆ, ಇನ್ನೊಂದಿಷ್ಟು ಮಂದಿಗೆ ಹಿಂಸೆಯಿಂದ ಎಲ್ಲವನ್ನೂ ನಿಯಂತ್ರಿಸಿ ಆರೂಢಗೊಳ್ಳುವ ಹಂಬಲವನ್ನು ಬಿತ್ತಬಹುದೇನೋ?

ಇಂಥದೊಂದು ಸರಕನ್ನು ನಮ್ಮ ಯೋಚನೆಗೆ ಒದಗಿಸಬಹುದಾದ ರೀತಿಯಲ್ಲಿ ಕಣವಿಯವರು ಸುನೀತ "ಬೇಲಿಯ ಮೇಲಿನ ನೀಲಿಯ ಹೂಗಳು" ನನಗಿಂದು ಮತ್ತೆ ತೆರೆದುಕೊಂಡಿತು. ಹೀಗಿದು ತೆರೆದುಕೊಳ್ಳುತ್ತಿರುವಾಗಲೇ, ಕೆಲವು ಟಿಪ್ಪಣಿಗಳ ಮೂಲಕ ನನಗೆ ಕವಿತೆಯ ಮೂಲಕ ಒದಗಿದ ಖುಷಿಯನ್ನು ಹಂಚಿಕೊಳ್ಳಲೂ ಮುಂದಾಗಿದ್ದೇನೆ. ಮುಖ್ಯವಾಗಿ ಕಣವಿಯವರು ಹೂವಿನ ಬಗೆಗಾಗಿ ಹೇಳುವಾಗ ಅವರು ಕಣವಿಯವರಿಗೆ ಸಹಜವಾದ ಸೌಜನ್ಯವನ್ನು ಹೆಚ್ಚು ಮಿಡಿಯುತ್ತಾರೆ. ಇದು ಕಣವಿಯವರ ಕವಿತೆಗಳನ್ನು ಹೆಚ್ಚು ಗೌರವದಿಂದ ವಿಶ್ಲೇಷಿಸಲು ಕಾರಣವಾಗುವ ಕ್ರಮವೂ ಹೌದು. ಸೌಜನ್ಯದ ವಿನಾ ಬದುಕು ಅರ್ಥಹೀನವೆಂಬುದು ನನಗೆ ದೊಡ್ಡ ನಂಬಿಕೆಯಾಗಿದೆ.

ಕಣವಿಯವರ 'ಬೇಲಿಯ ಮೇಲಿನ ನೀಲಿಯ ಹೂಗಳು' ಈ ಸುನೀತದಲ್ಲಿ ಹೂಗಳು ಹೊಂದಿರಬಹುದಾದ ಸೌಜನ್ಯವನ್ನು ಗ್ರಹಿಸುವುದಾದರೆ ಮೇಲೆ ಹೇಳಿದ ಸಾತ್ವಿಕ ಹಾಗೂ ದುರ್ಬುದ್ಧಿಯ ಮನೋಧರ್ಮೀಯರ ಬದುಕಿನ ಸಂಬಂಧವಾದ ಸಂವಿಧಾನಗಳನ್ನು ವಿವರಿಸಲು ಹೆಚ್ಚು ಬೆಳಕೊದಗುತ್ತದೆ.

'ಬಿಸಿಲು ಬಲಿಯುವ ಮುನ್ನ ಬಗೆಗೊಂಡ ಸೌಜನ್ಯ'

ಎಂಬಲ್ಲಿ ಕವಿತೆಯ ಧ್ವನಿ ಶಕ್ತಿ ಅಪಾರವಾದದ್ದು. ರಾತ್ರಿಯಿಂದ ಬೆಳತನಕ ಹೆಪ್ಪಿಟ್ಟ ಹಾಲು ಪಡೆಯುವ ಅವಸ್ಥಾಂತರವನ್ನು ಕೂಡ ಇಲ್ಲಿ ಓದುಗ ನೆನಪಿಸಿಕೊಳ್ಳಬಹುದು. ಮೊಸರು (ಹೆಪ್ಪುಗೊಂಡ ಹಾಲು) ಅದೇ ಆಗ ಹಾಲಿನಿಂದ ಮುಂದರಿದ ಅವಸ್ಥೆಯಲ್ಲಿ ಹೊತ್ತಿರುವ ಸೌಜನ್ಯದಿಂದಾಗಿಯೇ ಅದು ಹುಳಿಯಾಗಿರುವುದಿಲ್ಲ. ರುಚಿಗೆ ಇನ್ನೊಂದು ಮಧುರತೆಯನ್ನು, ಅನನ್ಯತೆಯನ್ನು ಒದಗಿಸಿದ ಸ್ವರೂಪ ಅದು. ಅದೇ ಸ್ವಲ್ಪ ಕಾಲಾನಂತರ ಅದು ಹುಳಿಯಾಗುವ ದಿಕ್ಕಿಗೆ ಪರಿವರ್ತಿತ, ಅತಿಯಾದ ಹುಳಿ ಒಂದು ವಿಕೃತಿ.

ಹೂಗಳದೂ ಹಾಗೆ; ನೆಲದಿಂದೆದ್ದ ಗಿಡದ ಗಿಣ್ಣುಗಳಿಗೆ ಅಮರಿಕೊಂಡ ದೇಟು, ದೇಟುಗಳ ನೆತ್ತಿಗೆ ಮೊಗ್ಗು, ಈ ಮೊಗ್ಗು ನಿನ್ನೆಯ ಮುಕ್ತಾಯಕ್ಕೆ ಕಂಡ ಸ್ವರೂಪವೇ ಇನ್ನಿಲ್ಲದಂತೆ ಇನ್ನೊಂದೇ ಆಗಿ ಮಾರನೆಯ ದಿನದ ನೇಸರನ ಕಾವು ಹೂವನ್ನು ಹುಟ್ಟಿಸುವ ಹಾಗೆ ಬೆಳೆದುಕೊಳ್ಳುವುದಕ್ಕೂ ಮುನ್ನ ಬಗೆಬಗೆಯ ಸೌರಭದ ದಿವ್ಯದಲ್ಲಿ ಸೌಜನ್ಯದ ಆಕೃತಿಯಲ್ಲಿ ಬಿರಿದುಕೊಳ್ಳುವ ಜೀವ ಸಂವರ್ಧನೆಯ ನಡೆಸುವುದೊಂದು ಧರ್ಮವಾಗಿದೆ.

ಹೂವು ಅರಳಿ ನಿಲ್ಲುವ ಒಂದು ಪರಿಪೂರ್ಣ ಚಿತ್ರವನ್ನು, ಸೌಜನ್ಯಕ್ಕೆ ಹೋಲಿಸುವ ಕಣವಿಯವರ ಕವಿತಾಶಕ್ತಿ ಆಪ್ತವೆನಿಸುತ್ತದೆ. ಜೀವ ರಸಾಯನವನ್ನು ಚೆನ್ನಾಗಿ ತಿಳಿದ ಕವಿ. ಅರಳಿ ನಿಲ್ಲುವುದನ್ನು ಯಾವಾಗಲೂ ಪ್ರೀತಿಸುತ್ತಾನೆ. ಕವಿ ಆಹ್ಲಾದತೆಯನ್ನು ಪ್ರೀತಿಸಿ, ಸೌಮ್ಯವಾಗಿ ತಾನು ಪ್ರೀತಿಸಿದ್ದನ್ನು ಚಿತ್ರಿಸುವ ಸೌಜನ್ಯದ ಕ್ರಮ ಪ್ರಶ್ನೆಗಳನ್ನೆತ್ತದೇ ಸಮರ್ಥ ಚಿತ್ರ ಕಟ್ಟಿಡುವ ಕಣವಿಯವರು ಇಷ್ಟವಾಗುತ್ತಿರುವಾಗಲೇ, ಪ್ರಶ್ನಿಸುವ ಅಡಿಗರೂ ಇಲ್ಲಿ ನೆನಪಿಗೆ ಬರುತ್ತಾರೆ. ಅಡಿಗರೂ ಕೂಡ ಆಹ್ಲಾದವನ್ನು ಮೆಚ್ಚುವವರೇ ಆಗಿದ್ದರು. ಆದರೆ ಅವರಲ್ಲಿ ಪ್ರಶ್ನೆ ಇರುತ್ತಿತ್ತು. ಹೀಗಾಗಿ "ಎದೆಯಲ್ಲಿ ಹಿರಣ್ಯಾಕ್ಷ ಪೀಠ ಸುಸ್ಥಿರವಿರಲಿ, ಬುರುಡೆಯಲ್ಲಿ ಪ್ರಹ್ಲಾದ ಪುಟಿವುದುಂಟೆ" ಎಂದು ಪ್ರಶ್ನಿಸಿದರು. ಪ್ರಶ್ನಿಸುವ ಅಡಿಗರು ಪ್ರಶ್ನಿಸದೇ ಇದ್ದರೆ ಅಸಹಜವಾಗುತ್ತಿತ್ತು. ಕಣವಿಯವರು ಪ್ರಶ್ನಿಸಿದರೇ ಅಸಹಜತೆ ಉಂಟಾಗಬಹುದು. ಆದರೆ ಇಬ್ಬರೂ ದಿವ್ಯದ ಆಹ್ಲಾದವನ್ನು ಬದುಕಿದ ದಾರಿಯಲ್ಲಿ ಸೌಜನ್ಯದಿಂದಲೇ ಕಂಡುಕೊಂಡವರು.

ಹಾಗೆಯೇ ಇಡೀ ಈ ಕವಿತೆಯ ಆವರಣಗಳನ್ನು ಒಂದು ಕೆಲೈಡೋ ಸ್ಕೋಪ್ ಮಾದರಿಯಲ್ಲಿ ಬಳಸಿಕೊಳ್ಳಬಹುದಾದರೆ ಒದಗುವ ನೀಲಿ ಹೂವುಗಳ ಚಿತ್ತಾರಕ್ಕೆ ಒದಗಬಹುದಾದ ಅರ್ಥ ವಿಸ್ತಾರ ಸ್ವಾರಸ್ಯಕರವಾದುದು. ಭಗವದ್ಗೀತೆ ತಿಳಿ ಹೇಳುವ ವ್ಯಕ್ತ ಮಧ್ಯದ ಕಲ್ಪನೆಯನ್ನು ಕವಿ ಬೇಲಿಯ ಮೇಲಿನ ನೀಲಿ ಹೂವುಗಳಲ್ಲಿ ತುಂಬಿಡುತ್ತ ಹೋಗಿದ್ದಾರೆ. ಈ ಕವಿತೆಯಲ್ಲಿ, ಲೌಕಿಕ. ಅಲೌಕಿಕ ಬದುಕಿನ ನಡುವಿನ ತಾರ್ಕಿಕತೆಯನ್ನು ನಡೆಸದೇ ಮನುಷ್ಯನ ಬದುಕು ಪೂರ್ಣವಾಗಲಾರದು. ಕಸ್ತ್ವಂ, ಕೋಹಂ ಮುಂತಾದ ಪ್ರಶ್ನೆಗಳು ಏಳುವುದೇ ಸೂತ್ರಗಳು ಬೇಡಿಯ

ಹಾಗೆ ಬಾಧಿಸದಿದ್ದಾಗ, ಹಾಗೆಂದು ಎಲ್ಲವೂ ಕೇವಲ ಭ್ರಮೆಯೇ ಆದರೂ ಮಾನಸಿಕ ಸ್ವಾಸ್ಥ್ಯಕ್ಕೆ ಶೈಥಿಲ್ಯ ಒದಗದಿರದು.

ಹೀಗಾಗಿ ಕವಿ ಕಣವಿ ಎಚ್ಚರದಿಂದ "ಎಲ್ಲೆಂದರಲ್ಲೆ ಮನಸೇಚ್ಛೆ ಬೆಳೆದಿಹ ಬಳ್ಳಿ, ತೆರೆದಿಹುದು ನೂರು ಸಾವಿರ ನೀಲ ಬಗೆಗಣ್ಣು"

ಇಷ್ಟು ಹೇಳಿದ್ದು ಸಾಲದೆಂಬಂತೆ "ನೇಸರನಿಗೂ, ಜಗಕೂ ಇನ್ನೂ ನಿದ್ದೆಗಣ್ಣು" ಎನ್ನುತ್ತಾರೆ. ಹುಟ್ಟಿಕೊಂಡ ಜೀವ ವೈವಿಧ್ಯ ಬಾಲ್ಯ, ಕೌಮಾರ್ಯ, ಯೌವನ ವೃದ್ಧಾಪ್ಯಗಳನ್ನೆಲ್ಲ ಮುಗಿಸಿ ಸಂಪೂರ್ಣ ಮುಗಿದು ಹೋದರೂ, ಹೋಗುತ್ತಿದ್ದರೂ, ವಿಕಾಸವಾದದ ಪಾಠಗಳು, ಖಗೋಲಶಾಸ್ತ್ರದ ಬಹುಶ್ರುತರು ತಿಳಿಸಿ ಹೇಳುವುದು ನೇಸರನೇ ಇರಲಿ, ಜಗತ್ತೇ ಇರಲಿ ಇನ್ನೂ ಹುಟ್ಟಿ ಬಹಳ ಕಾಲವೇನಾಗಿಲ್ಲ. ಈಗಿನ್ನೂ ಮುಂಜಾನೆ ಏಳಬೇಕಿರುವ ಮುಂಚಿನ ನಿದ್ದೆಗಣ್ಣು ಅವಕ್ಕೆ.

ಆದರೆ ಸಂಜೆಯಾದರೆ ಉದುರಲಿರುವ ನೀಲಿ ಹೂಗಳು ವಿವಿಧ ಬಗೆ ಪಡೆದ ಸೌಜನ್ಯದೊಂದಿಗೆ ತೊನೆದರಳಿ, ಪ್ರಬುದ್ಧಾವಸ್ಥೆ ತಲುಪಿ, ಮುಖವ ಸಣ್ಣದು ಮಾಡಿ, ಮುದುಡಿ, ಸವಕಳಿ ಪಡೆದರೆ ಜೀವ ನಂತರ ಬರೀ ನೆನಪು, ದೇಟಿಗಂಟಿದ ಒಣಗಿ ನೆಲಕ್ಕೊರಗಲಿರುವ ಜೀವನದ ಚಕ್ರ ಮುಗಿದ ಬಗೆಯಲ್ಲೂ ಕವಿ ಚಿತ್ತಾರ ನೀಡುತ್ತಾರೆ.

ಜೀವನ ಚಕ್ರ, ಸಾವು, ಬದುಕು, ಲೌಕಿಕ, ಅಲೌಕಿಕಗಳ ಬಗ್ಗೆ ಕವಿತೆ ತರ್ಕಬದ್ಧವಾಗಿ ಹೇಳುತ್ತ ಹೇಳುತ್ತ ಒದಗಿಸುವ ಧನ್ಯತೆ ಇಲ್ಲಿ ವಿಶಿಷ್ಟವಾಗಿದೆ.

ಸರಳವಾಗಿ ನೋಡಿದಾಗಲೂ ಕವಿತೆ ಸುಂದರವಾಗಿದೆ. ಬೇಲಿಯ ಮೇಲಿನ ನೀಲಿಯ ಹೂಗಳನ್ನು ಕವಿ ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ ಎಂದು ಚಿತ್ರಿಸುತ್ತಾರೆ. ಇದೊಂದು ರೋಚಕ ಚಿತ್ರವಾಗಿದೆ. "ಜೀವನೋತ್ಸಾಹದಲಿ ಎದೆದುಂಬಿಸುವ ರೂಹು;' ಎಂದು ಕವಿ ಹೇಳುವಲ್ಲಿ ತುಂಬಿದೆದೆಯೂ ಹೊಳೆದು, ಹೂವಿನೆಡೆಗೆ ಢೀ ಇಡುವ ದುಂಬಿಗಳ ನೆನಪು ಬಾರದಿರದು. ಇಂಥ ಮೈದುಂಬಿದ ಹೂಗಳು ಪುಟಿಯತೊಡಗಲು ಒದಗಿದ ಚೈತನ್ಯ ಭೂಮಿಯಾಳದ ಭಾವ ಮೇಳೈಸಿದ್ದರಿಂದ ಎಂದು ಅನ್ನುತ್ತಾರೆ. ಭೂಮಿಯಾಳದ ಭಾವ ಭೂಮಿಯ ಸಾರವಾಗಿದೆ ಕವಿಗೆ. ಮತ್ತೆ ನಿದ್ದೆಗಣ್ಣು ತೂರೆದ ನೇಸರ, ಬಿಸಿಲು ಬಲಿಯುತ್ತ, ಬಲಿಯುತ್ತ ತನ್ನ ಶಾಖಕ್ಕೆ ತಾನೇ ಬಸವಳಿದು ವಿರಮಿಸಲು ತಂಪಾಗಿ ಅಸ್ತಾಚಲದ ಕೊಳದೊಳಗೆ ತಿರುಗಿ ಹೊರಟಾಗ ಪೂರ್ತಿ ಬದುಕೊಂದನ್ನು ಮುಗಿಸಿ ಧರೆಗುರುಳುವ ನೀಲ ಹೂಗಳನ್ನೂ ಕವಿ ವರ್ಣಿಸುತ್ತಾರೆ.

ಇಷ್ಟೇ ಆಗಿದ್ದರೆ ಕವಿತೆ ಗೆದ್ದ ಕವಿತೆಯ ಸಾಲಿಗೆ ಸೇರ್ಪಡೆಗೊಳ್ಳುತ್ತಿರಲಿಲ್ಲ. ಉರುಳುವ ಬೇಲಿಯ ನೀಲ ಹೂಗಳ ಜತೆಗೇ ಕವಿಯು ತನ್ನ ಸುನೀತದಲ್ಲಿ ಬದಿಬದಿಗೆ ನಾಳೆಯರಳುವ ಮೊಗ್ಗುಗಳು ಓಂಕಾರದಂತೆ ಬಳ್ಳಿಯ ನೆತ್ತಿಗೆ ಇನ್ನೂ ಸೊಕ್ಕಿಂದ ಉಕ್ಕಿಕೊಳ್ಳುತ್ತಿರುವ ಚಿತ್ರವನ್ನು ಒದಗಿಸುತ್ತಾರೆ. ಈ ಮೊಗ್ಗುಗಳನ್ನು ಬರಿದೇ ನಾಳೆ ಅರಳುವ ಹೂವೆಂದು ಹೇಳಿ ನಡು ದಾರಿಯಲ್ಲಿ

ಕೈಬಿಡಲು ಇಷ್ಟವಿಲ್ಲ. ಈ ಮೊಗ್ಗುಗಳನ್ನು ವಿಮಲ ಕೋಮಲ ಕಾಂತಿಯನ್ನು ಅಧಿಕವಾಗಿ ಹೊರಸೂಸುವ ಸ್ಮಾರಕಗಳು ಎಂದು ಸಂಬೋಧಿಸುತ್ತಾರೆ. ಇಂದು ಧರೆಗುರುಳಿ ಬಿದ್ದ ಹೂಗಳ ಮೇಲೆ ಕಟ್ಟಿ ಸ್ಮಾರಕ ಎಂದು ಜೈವಿಕವಾದ ಜೀವ ಚಕ್ರವನ್ನು ಬದುಕಿನ ಸಂದರ್ಭಕ್ಕೆ ದಕ್ಕಿದ ಸುಮ ಸಾಕ್ಷಿ ಎಂದು ಹೇಳಿ, ತನ್ನ ಕಾವ್ಯಶಕ್ತಿಯನ್ನು ಮೆರೆಯುತ್ತಾರೆ.

ಸುನೀತವಾಗಲಿ, ಭಾಮಿನಿ ಷಟ್ಪದಿಯಾಗಲಿ, ಚಂಪೂಕಾವ್ಯ, ರಗಳೆಗಳೇ ಇರಲಿ, ಸಶಕ್ತ ಕವಿಯು ಕವಿತೆಯ ಮೂಲಕ ನಡೆಸುವ ಅಕ್ಷರಗಳ, ಶಬ್ದಗಳ ಸುಸಂಬದ್ಧ ಚಲನವಲನ ಎಂಥದೊಂದು ಅಗಾಧಕ್ಕೆ ಕೈ ಇಕ್ಕಬಹುದೆಂಬುದಕ್ಕೆ ಕಣವಿಯವರ 'ಬೇಲಿಯ ಮೇಲಿನ ನೀಲಿಯ ಹೂಗಳು' ಕವಿತೆ ಸಾಕ್ಷಿ.

**ಮಹಾಬಲಮೂರ್ತಿ ಕೊಡ್ಲೆಕೆರೆ**

# ೧೨. ಋತುಸಂಸಾರ

೧

ಮೂರು ತಿಂಗಳು
ಬೇಸರವ ನೀಗಿಕೊಳ್ಳಲು ಬಂದು ತಂಗಿದಳು
ಮಗಳ ಮನೆಯೊಳು ಮುದುಕಿ ಮೋಜುಗಾರ್ತಿ.
ಮೊದಲೆರಡು ದಿನ ಕ್ಷೇಮಸಮಾಚಾರದ ಸುದ್ದಿ
ಬೇಡವೆಂದರೂ ಕೂಡ ಕೆಲಸಕ್ಕೆ ಹಾತೊರೆವ ಕೈ
ಹಾಗೆಯೇ ನಾಲ್ಕು ದಿನ ಸೈ;
ಸುರುವಾಯ್ತು ರಗಳೆ
ಅಷ್ಟಿಷ್ಟು ಮಾತಿಗೇ ವಟವಟಾ ಪಿಟಿಪಿಟೀ...
ಲಟಿಕೆ ಮುರಿದು ಚಟುಕು ಮುಳ್ಳಾಡಿಸುವ
ಸುಮ್ಮಸುಮ್ಮನೆ ಕೆಮ್ಮಿ ಕ್ಯಾಕರಿಪ ತಾಪ.
ಗಿಡಬಳ್ಳಿಯನು ಹಿಡಿದು ಅಲ್ಲಾಡಿಸಿತು ಅವಳ ನಿಟ್ಟುಸಿರ ಶಾಪ!
ಅಣಕಿಸುತ ಗಾಳಿಯಲಿ ಹಾರಿಹೋದವು ಬತ್ತಿದೆಲೆಯ ಬಳಗ
ಗದಗುಟ್ಟಿ ನಡುಗಿ ಕಟಕಟ ಹಲ್ಲು ಕಡಿದರು ಮಂದಿ;
ಮಾತು ಮಾತಿಗೆ ಅವಳು ಮಾತ್ರ, "ಏನಂದೀ?"
ಸುಕ್ಕುಗಟ್ಟಿದ ಮುಖಕೆ ಸೆರಗೆಳೆದು ಕೋಲೂರಿ
ಹೊರಟುಬಿಟ್ಟಳು, ಒಮ್ಮೆಲೆ ಗಂಟು ತಲೆಗಿಟ್ಟು
ಏನವಳ ಸೆಡವು ಸಿಟ್ಟು!

೨

ಮಾವು ಹೂವಿನ ಕೊಡೆ ವಿಮಾನದಿಂದಿಳಿತಂದು
ಬಂದ ಪ್ರೀತಿಯ ಕಂದ;
"ಕುವ್ವೂ, ಜಗ್ ಜಗ್, ಪುವ್ವೀ ಟುವ್ವಿಟ್ಟವ್ವೂ"
ಕಾಲೇಜು ಕಟ್ಟೆಯ ಹತ್ತಿ ಮೊದಲ ಸಲ ಊರಿನೆಡೆ

ಕನಸಿನಲ್ಲಿಯೆ ನಡೆದು ಬಂದಿಹನು ಹುಡುಗ;
ಎತ್ತರೆತ್ತರದಲ್ಲಿ ಹಾರುತಿದೆ ಗಿಡುಗ!
ದಿನದಿನಕು ಕನಸುಗಳು ಚಿಗುರಿ ತೋರಣ ಕಟ್ಟಿ
ಬರೆದಿಹವು 'ಸುಸ್ವಾಗತ'.
ಕಾವ್ಯಕಾದಂಬರಿಯ ನಾಯಕರ ಜೊತೆಯಲ್ಲಿ ನಿತ್ಯ ಸ್ವಗತ.
ಕೋಗಿಲೆಯ ಧ್ವನಿಗೆದೆಯ ಬಾಗಿಲವೆ ತೆರೆದಿಹುದು
ಮನದ ಮೇಲಿನ ಮಹಡಿಯಲ್ಲಿ ನಡೆದಿದೆ ಸರಸ ಸಂಗೀತಗೋಷ್ಠಿ!
ಕಣ್ಣೆದುರು ಕುಣಯುತಿವೆ ಕರ್ಪೂರಗೊಂಬಿ:
ಹೋಳಿಹುಣ್ಣಿವೆ ಬಂತು ತಾಳಿ ಎನುತಿದೆ ಗಾಳಿ
ತಾಳಲಾರದು ಬಿಸಿದು ರಕ್ತನಾಡಿ!

೩

ಗಾಳಿ ಗಿರಿಗಿರಿ ಬುಗುರಿಯಾಡಿ ಹಕ್ಕಲುಹೊಲದ
ಹೊಟ್ಟು ರವುದೆಯ ತೊಟ್ಟು ಆಕಾಶಕೇರಿ
ಮೋಡಮೋಡಕು ಹಾಯ್ದು ಝಾಡಿಸಿದೆ, ನೆರೆದಿರುವ
ಸಂತೆಯಲಿ ಬಿಡಬಹುದೆ ಇಂಥ ಹೋರಿ ?
ಹೊತ್ತೇರಿದಂತೆ ನೆತ್ತಿಗೆ ಚುರುಕು ಬಡಿದಿತ್ತು
ತಳಿರು ನಾಲಗೆ ಚಾಚಿ ತೇಕುತಿತ್ತು;
ಮರದ ಕೆಳಗಡೆ ನೆಳಲು ಮೈಚಾಚಿ ಮಲಗಿತ್ತು
ಬಿಸಿಲುಗುದುರೆಯು ವ್ಯರ್ಥ ಓಡುತಿತ್ತು.

೪

ಬಂತು ಮಳೆ ಹನಿಯಾಗಿ
ಜೀವವಾಹಿನಿಯಾಗಿ
ಬಾನ ಕೊಡುಗೈದೊರೆಗೆ ಇಳೆಯು ಋಣಿಯಾಗಿ
ಹಳ್ಳ ಹೊಳೆ ಹಾಡಿದವು ಜಲಪಾತವಾಗಿ
ಗಿಡಗಿಡದ ನೆತ್ತಿಯನು ಅಡರಿ ಕುಳಿತಿಹ ಜಗದ ಧೂಳು ತೊಡೆದು
ಧಾರೆ ಎರೆಯುತ ಬಂದ ನವನೀರದ!
ಪುಲಕಗೊಂಡಳು ಪ್ರಕೃತಿ
ಹಸಿರುಟ್ಟು ಹೂವಿನಾರತಿಯೆತ್ತಿ ನಿಂತಿಹಳು

**ಬಾನುದ್ದ ಬೆಳೆದಂತೆ ಜಗದ ಪ್ರೀತಿ!**
**ಒಸಗೆಯಾಯಿತು;ನರನ ಒಂದೊಂದು ಕೃತಿ-ವಿಕೃತಿ**
**ಋತು ಋತುವಿನೊಡನಿಂತು ಬೆಸುಗೆಯಾಗಿ.**

ಚೆನ್ನವೀರ ಕಣವಿಯವರ 'ದೀಪಧಾರಿ' ಕವನ ಸಂಗ್ರಹದ 'ಋತು ಸಂಸಾರ' ಕವನ ಋತುಗಳನ್ನು' ವ್ಯಕ್ತೀಕರಿಸು'ವುದರ ಮೂಲಕ ಅವುಗಳ 'ಮಾನವೀಯ' ಮುಖಗಳನ್ನು ಚಿತ್ರಿಸುತ್ತದೆ. ತನ್ಮೂಲಕ ಸ್ವಭಾವಕ್ಕೂ (=ಪ್ರಕೃತಿಗೂ) ಮಾನುಷ ಸ್ವಭಾವಕ್ಕೂ ಇರುವ ಸಂಬಂಧದ ಎಳೆಗಳನ್ನು ಬಿಡಿಸಿ ತೋರಿಸುತ್ತದೆ.

ಕವನದ ಮೊದಲ ಭಾಗದಲ್ಲಿ ಚಳಿಗಾಲವನ್ನು ಮುದುಕಿಯೊಬ್ಬಳ ವ್ಯಕ್ತಿತ್ವದೊಂದಿಗೆ ಸಮೀಕರಿಸಲಾಗಿದೆ. ಆಕೆ ತನ್ನ ಮಗಳ ಮನೆಗೆ (=ನಿಸರ್ಗ) ಬಂದು ತಂಗುತ್ತಾಳೆ ತನ್ನ ಬೇಸರದ ನಿವಾರಣೆಗೆ. 'ಮೊದಲೆರಡು ದಿನ ಕ್ಷೇಮ ಸಮಾಚಾರದ ಸುದ್ದಿ'ಯನ್ನು ಮಾತನಾಡಿ 'ಬೇಡವೆಂದರು ಕೂಡ ಕೆಲಸಕ್ಕೆ ಹಾತೊರೆಯುತ್ತಾಳೆ. ಆದರೆ ಆನಂತರದಲ್ಲಿ 'ಸುರುವಾಯ್ತು ರಗಳೆ'. ಅವಳ ವರ್ತನೆ ಅಸಹನೀಯವಾಗುತ್ತದೆ.

**ಅಣಕಿಸುತ ಗಾಳಿಯಲಿ ಹಾರಿಹೋದವು ಬತ್ತಿದೆಲೆಯ ಬಳಗ**
**ಗದಗುಟ್ಟಿ ನಡುಗಿ ಕಟಕಟ ಹಲ್ಲು ಕಡಿದರು ಮಂದಿ;...**

ಚಳಿಗಾಲದ ಪರಿಣಾಮ ಹಾಗೂ ಮುದುಕಿಯ ವರ್ತನೆಯ ಪರಿಣಾಮಗಳ ಸಾರ್ಥಕ ಸಮೀಕರಣ ಇಲ್ಲಿದೆ. ಅವಳದು 'ಸುಕ್ಕುಗಟ್ಟಿದ ಮುಖ' ಅವಳು 'ಒಮ್ಮೆಲೇ ಗಂಟು ಕಲೆಗಿಟ್ಟು' 'ಮುಖಕೆ ಸೆರಗೆಳೆದು ಕೋಲೂರಿ' ಸಿಟ್ಟಿನಿಂದ ಹೊರಟುಬಿಡುತ್ತಾಳೆ.

ಚಳಿಗಾಲವನ್ನು ಮುದುಕಿಯೊಂದಿಗೆ ಸಮೀಕರಿಸುವುದರ ಔಚಿತ್ಯವನ್ನು ಗಮನಿಸಬೇಕು. ಮುದುಕಿ ಭೂತಕಾಲದ ಪ್ರತೀಕ. ಅಲ್ಲದೆ ಇಲ್ಲಿ ಅವಳ ವರ್ತನೆಯಲ್ಲಿ ಪರಸ್ಪರ ಹೊಂದಾಣಿಕೆ (adjustment) ಇಲ್ಲ. ಮೊದಲು ಬಂದಾಗ ಆಪ್ತಳಂತೆ ತೋರಿದರೂ ಅನಂತರ ಅವಳ ವರ್ತನೆ ಅಸಹನೀಯವಾಗುತ್ತದೆ. ಚಳಿ ಒಂದು ಮಟ್ಟದವರೆಗೆ ಹಿತವೆಂದು ತೋರಿದರೂ ಚಳಿಗಾಲದಲ್ಲಿ ಉಂಟಾಗುವ ಸ್ಥಿತಿಯನ್ನು ಮುದುಕಿಯ 'ನಿಟ್ಟುಸಿರ ಶಾಪ' ಪರಿಣಾಮ ಎನ್ನಲಾಗಿದೆ. ಹಾಗೆಯೇ ಇಂಥ ಮುದುಕಿಯ ಸನಿಹವನ್ನು ಸಹಿಸಲಾಗದೆ ಬಳಗದವರು ದೂರವಾಗುವಂತೆ ಈ ಕಾಲದಲ್ಲಿ ಉದುರಿದ ಎಲೆಗಳು ಗಾಳಿಯಲ್ಲಿ ಹಾರಿಹೋಗುತ್ತವೆ. ಮುದುಕಿಯ ವರ್ತನೆಯಿಂದಾಗಿ (=ಚಳಿಯಿಂದಾಗಿ) ಜನ ನಡುಗಿ ಕಟಕಟ ಹಲ್ಲು ಕಡಿಯುತ್ತಿರುತ್ತಾರೆ. ಯಾರಿಗೂ ಬಗ್ಗದೆ ಎಲ್ಲರನ್ನೂ ಬಗ್ಗಿಸುವ ಚಳಿಯನ್ನು ಹಠ ಸ್ವಭಾವದ ಮುದುಕಿಗೆ ಹೋಲಿಸಿರುವುದನ್ನು ಈ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬಹುದು.

ಎರಡನೆಯ ಭಾಗದಲ್ಲಿ ವಸಂತ ಋತುವಿನ ಚಿತ್ರಣವಿದೆ. ಮೊದಲ ಭಾಗದಲ್ಲಿ ಚಳಿಗಾಲವನ್ನು ಮುದುಕಿಯೊಂದಿಗೆ ಸಮೀಕರಿಸಿದ್ದರೆ, ಅದಕ್ಕೆ ವ್ಯತಿರಿಕ್ತವಾಗಿ ಇಲ್ಲಿ ವಸಂತ

ಋತುವನ್ನು ಕಂದನೊಂದಿಗೆ, ಬಳಿಕ ಹುಡುಗನೊಂದಿಗೆ ಸಮೀಕರಿಸಲಾಗಿದೆ. ಭೂತ ಹಾಗೂ ವರ್ತಮಾನ-ಭವಿಷ್ಯಗಳ ನಡುವಣ ವೈದೃಶ್ಯವೂ (contrast) ಇಲ್ಲಿ ವ್ಯಕ್ತವಾಗುತ್ತದೆ. ಇಲ್ಲಿರುವುದು ಮಾವು, ಹೂವಿನ ಕೊಡೆ ವಿಮಾನ, ಕನಸಿನಲ್ಲಿ ನಡೆಯುವ ಹುಡುಗ, ಎತ್ತರೆತ್ತರದಲ್ಲಿ ಹಾರುವ ಗಿಡುಗ, ಕನಸುಗಳು ಚಿಗುರಿ ಕಟ್ಟಿರುವ ತೋರಣ- ಇವು ಅಂತರಂಗದ ಉತ್ಸಾಹ- ಸಂಭ್ರಮಗಳನ್ನು ಬಹಿರಂಗದ ವಿವರಗಳ ಮೂಲಕ ವ್ಯಕ್ತಪಡಿಸುತ್ತವೆ. ಅಲ್ಲದೆ ಇಲ್ಲಿನ ಕೋಗಿಲೆಯ ಧ್ವನಿ, ಸರಸ, ಸಂಗೀತಗೋಷ್ಠಿ, ದುಂಬಿಗಳ ಮೊರೆತ- ಇವುಗಳ ಮೂಲಕ ವ್ಯಕ್ತವಾಗುವ 'ನಾದಮಯ' ಪರಿಸರ ಇಲ್ಲಿನ ಲಹರಿಯ ಸ್ವರೂಪವನ್ನು ಸ್ಪಷ್ಟಪಡಿಸಿದೆ. ಜೊತೆಗೆ ಇದು ಭಾವಗಳ ತಾಕಲಾಟವನ್ನು ಹತೋಟಿಯಲ್ಲಿ ಇಡಲಾಗದ ಕಾಲವೂ ಹೌದು-

**ಕಣ್ಣೆದುರು ಕುಣಿಯುತಿವೆ ಕರ್ಪೂರಗೊಂಬಿ**
**ಹೋಳಿ ಹುಣ್ಣಿಮೆ ಬಂತು ತಾಳಿ ಎನುತಿದೆ ಗಾಳಿ**
**ತಾಳಲಾರದು ಬಿಸಿದು ರಕ್ತನಾಡಿ**

ಇಲ್ಲಿ ಕಣ್ಣೆದುರು ಕುಣಿಯುವುದೆಲ್ಲ 'ಕರ್ಪೂರಗೊಂಬೆ'ಗಳೇ. 'ಹೋಳಿ ಹುಣ್ಣಿಮೆ'ಗಾಗಿ (=ಕಾಮದಹನದ ಹುಣ್ಣಿಮೆಗಾಗಿ) 'ತಾಳಿ ಎನುತಿದೆ ಗಾಳಿ' ಎನ್ನುವುದು ಒಂದೆಡೆ ಭಾವನೆಯ ರಭಸವನ್ನೂ, ಇನ್ನೊಂದೆಡೆ ಅದರ ಹಚ್ಚಹಸಿರು ಪ್ರಾಕೃತಿಕ (=ಪರಿಷ್ಕೃತವಲ್ಲದ) ಸ್ಥಿತಿಯನ್ನೂ ನಿರ್ದೇಶಿಸುತ್ತ 'ಹುಣ್ಣಿಮೆ'ಗಾಗಿ (=ಪಕ್ವತೆಗಾಗಿ) ತಾಳುವ ಕರೆಯನ್ನು ನೀಡುತ್ತಿದ್ದರೆ, 'ರಕ್ತದ ಬಿಸಿ' ಅದನ್ನು ಮೀರಿ ಹೊರಬರುವ ಶಕ್ತಿಯ ಪ್ರತೀಕವಾಗುತ್ತದೆ. ಇವೆಲ್ಲವೂ ಇಲ್ಲಿನ ಗಿಡುಗ-ದುಂಬಿ ಮೊದಲಾದ ವಿವರಗಳಿಗೆ ಹೊಂದಿಕೊಂಡಂತೆಯೇ ನಿರೂಪಿತವಾಗಿವೆ. ಅಂತರಂಗದ ಪ್ರಕೃತಿ ಹಾಗೂ ಬಹಿರಂಗದ ಪ್ರಕೃತಿಗಳ ಸಾರ್ಥಕ ಸಮೀಕರಣದ ಮುಂದುವರಿಕೆಯನ್ನು ಇಲ್ಲಿ ಕಾಣಬಹುದು. 'ಕಣ್ಣೆದುರು ಕುಣಿಯುತಿವೆ ಕರ್ಪೂರಗೊಂಬಿ' ಎನ್ನುವಲ್ಲಿ ಇಲ್ಲಿನ ವ್ಯಕ್ತಿತ್ವದ ದೃಷ್ಟಿಯ 'ಮಿತಿ' ವ್ಯಕ್ತವಾಗುತ್ತದೆ. 'ಕರ್ಪೂರ ಗೊಂಬೆ'ಯು ಆಚೆಗಿನದೇನನ್ನು ಅದು ಕಾಣಲಾರದು. 'ಕಾಮದಹನ'ದ ಹೋಳಿ ಹುಣ್ಣಿಮೆ'ಗಾಗಿ ಕಾಯದ ರಭಸ ಇಲ್ಲಿ ವ್ಯಕ್ತವಾಗುತ್ತದೆ. ಏಕೆಂದರೆ ಇಲ್ಲಿರುವುದು 'ಬಿಸಿದು' ರಕ್ತನಾಡಿ. ಭಾವನೆಯ ರಭಸ ಯಾವುದೇ ನಿಯಂತ್ರಣವಿಲ್ಲದೆ ತಾನೆ ತಾನಾಗಿ ಹರಿಯುವ ಹಂತ ಇಲ್ಲಿ ನಿರೂಪಿತವಾಗಿದೆ.

ಈ ಎರಡನೆಯ ಭಾಗದಲ್ಲಿನ ವಸಂತ ಋತುವಿನ ವಿವರಣೆಯ ತಾರ್ಕಿಕ ಮುಂದುವರಿಕೆಯನ್ನು ಮೂರನೆಯ ಭಾಗದಲ್ಲಿ ಬೇಸಿಗೆಯ ವಿವರಗಳಲ್ಲಿ ಕಾಣಬಹುದು. ಇಲ್ಲಿರುವುದೆಲ್ಲ ಶಕ್ತಿಯ ವ್ಯಕ್ತರೂಪ ಹಾಗೂ ಅದರ ಪರಿಣಾಮ. ಎರಡನೆಯ ಭಾಗದ 'ಗಾಳಿ'ಯ ಚಿತ್ರಣ ಇಲ್ಲಿಯೂ ಮುಂದುವರಿಯುತ್ತದೆ. ಅದು 'ಗಿರಿಗಿರಿ ಬುಗುರಿಯಾದ' ಹೊಲದ ಹೊಟ್ಟು - ಎಲೆಗಳನ್ನು ಆಕಾಶಕ್ಕೊಯ್ದು, 'ಮೋಡ-ಮೋಡಕು ಹಾಯ್ದು ಝಾಡಿಸಿದೆ'ಎನ್ನುವಲ್ಲಿ ಅದರ ವಿಸ್ತೃತ ಶಕ್ತಿಯ ಪರಿಚಯವಾಗುತ್ತದೆ. ಇದು 'ಸಂತೆಯಲ್ಲಿ ಬಿಟ್ಟ ಹೋರಿ'ಯಂತೆ. ಈ ಬಿಸಿಲು 'ಹೊತ್ತೇರಿದಂತೆ ನೆತ್ತಿಗೆ, ಚುರುಕು ಬಡಿಯುತ್ತ' 'ತಳಿರು ನಾಲಗೆ ಚಾಚಿ' ತೇಕುವಂತೆ ಮಾಡುತ್ತದೆ. ಜೊತೆಗೆ ಇದು 'ಬಿಸಿಲುಗುದುರೆ'ಯ ಹೌದು, ಗುರಿಯನ್ನು ಕಳೆದುಕೊಂಡ ಅದು ನಿರರ್ಥಕವಾಗಿ ಓಡುತ್ತದೆಯಲ್ಲದೆ ತನ್ನ ಅಸ್ತಿತ್ವವನ್ನು ತಾನೇ ಇಲ್ಲವಾಗಿಸಿಕೊಳ್ಳುತ್ತದೆ. ಗುರಿಯನ್ನು

ಕಳೆದುಕೊಂಡ ಶಕ್ತಿ ಹಾಗೂ ಸುಡುವಿಕೆ ಈ ಭಾಗದಲ್ಲಿನ ಮುಖ್ಯ ಸಂಗತಿಗಳು. ಸಂತೆಯಲ್ಲಿ ಬಿಟ್ಟ ಹೋರಿ ದಿಕ್ಕಾಪಾಲಾಗಿ, ಮನಬಂದೆಡೆ ನುಗ್ಗುವಂತೆ ನಿಯಂತ್ರಣವನ್ನು ಕಳೆದುಕೊಂಡ ಸ್ವಭಾವವೂ ಸ್ವೇಚ್ಛೆಯಿಂದ ಹರಿಯುತ್ತದೆ. ಇದರ ಪರಿಣಾಮ 'ನೆತ್ತಿಗೆ ಚುರುಕು ಬಡಿಯುವ' (=ತಲೆಯನ್ನುಬಿಸಿ ಮಾಡುವ) ತಾಪ ಮಾತ್ರವಲ್ಲದೆ ಬೇರೇನಲ್ಲ. ಬಿಸಿಲಿನಲ್ಲಿ ಬಾಡಿರುವ ಹಸಿರೆಲೆ ಇಲ್ಲಿ ನಾಲಗೆಯನ್ನು ಚಾಚಿ ಉಸಿರಿಗಾಗಿ ತೇಕುತ್ತಿರುವಂತೆ ತೋರುತ್ತದೆ. 'ಬಿಸಿಲುಗುದುರೆ' ಎಂಬ ಪ್ರಯೋಗ ಅದನ್ನು ಬೆನ್ನಟ್ಟುವುದರ ನಿರರ್ಥಕತೆಯನ್ನು ಸ್ಪಷ್ಟಪಡಿಸುತ್ತದೆ.

ಈ ಪರಿಸ್ಥಿತಿಯ ನಿವಾರಣೆಯ ಹಂತವನ್ನು ನಾಲ್ಕನೆಯ ಭಾಗದಲ್ಲಿ ಕಾಣಬಹುದು. ಇಲ್ಲಿನ ಮಳೆಗಾಲ ಬೇಸಿಗೆಯ ನೈಸರ್ಗಿಕ' ಮುಂದುವರಿಕೆಗಾಗಿ ಮಾತ್ರವಲ್ಲದೆ ಪರಿಹಾರವಾಗಿಯೂ ಬರುತ್ತದೆ. ಇಲ್ಲಿ ಅದು 'ಜೀವವಾಹಿನಿ'ಯಾಗುತ್ತದೆ. ಸೃಷ್ಟಿಯ ಸ್ವರೂಪವನ್ನೇ ಬದಸಲಾಯಿಸುತ್ತದೆ. 'ಗಿಡಗಿಡದ ನೆತ್ತಿಯನು ಅಡರಿ ಕುಳಿತಿಹ ಜಗದ ಧೂಳನ್ನು' ತೊಡೆಯುವುದರ ಮೂಲಕ. ಬೇಸಿಗೆಯಲ್ಲಿ ತಾಪ ಮಾತ್ರವಲ್ಲದೆ ಹಸಿರನ್ನೆಲ್ಲ ಧೂಳು ಆವರಿಸಿರುತ್ತದೆ. ಈ ಧೂಳನ್ನು ಕಳೆಯಲು ಹೊಸ ಮೋಡದಿಂದ ಇಳಿಗಿಳಿಯುವ ಮಳೆ ನೀರು ಬೇಕು. ಇದು ಕಲ್ಮಷವನ್ನೆಲ್ಲ ಕಳೆದು ಹಸಿರಿಗೆ ನವಚೇತನವನ್ನು ನೀಡುತ್ತದೆ. ಪುಲಕಗೊಂಡ ಪ್ರಕೃತಿಯೂ 'ಹಸಿರುಟ್ಟು ಹೂವಿನಾರತಿ ಎತ್ತಿ' ನಿಲ್ಲುತ್ತಾಳೆ. ಇದು ಮಾನವ ಪ್ರಕೃತಿಯ ಹೊಸ ಜೀವಂತಿಕೆಯ ಸಂಕೇತವೂ ಹೌದು. ಈ ಹಸಿರಿನ ಮೂಲಕ 'ಜಗದ ಪ್ರೀತಿ' ಬಾನುದ್ದ ಬೆಳೆದಂತೆ' ತೋರುತ್ತದೆ. ಹಲವಾರು ಏಳುಬೀಳುಗಳನ್ನು ಹಾದು ಬಂದ ನಿಸರ್ಗದ ಪಯಣ ಇಲ್ಲಿ ಮಂಗಳದಲ್ಲಿ ('ಒಸಗೆ') ಮುಕ್ತಾಯವಾಗುತ್ತದೆ. ಇದು ಬಹಿರಂಗದ ನೈಸರ್ಗಿಕ ಆಗುಹೋಗುಗಳನ್ನು ಮಾತ್ರವಲ್ಲದೆ ಅಂತರಂಗ ಪ್ರಕೃತಿಯ ವಿಕಾಸದ ಹಂತಗಳನ್ನೂ ತೆರೆಯುತ್ತ ಹೋಗುತ್ತದೆ. ಹೀಗೆ 'ನರನ ಒಂದೊಂದು ಕೃತಿ ವಿಕೃತಿ'ಯೂ ಋತು ಋತುವಿನೊಡನೆ ಬೆಸುಗೆಯಾಗಿದೆ. ಆದ್ದರಿಂದಲೇ ಅದು 'ಋತು ಸಂಸಾರ'ವೂ ಹೌದು. ಇಲ್ಲಿನ ಆಗುವಿಕೆಯ ಪ್ರತಿಯೊಂದು ಘಟಕವೂ ತನ್ನಷ್ಟಕ್ಕೇ ಬಿಡಿ ಬಿಡಿಯಾಗದೆ ಸಮಗ್ರವಾದ /ಇಡಿಯ ವ್ಯವಸ್ಥೆಯೊಂದರ ಅಂಗವಾಗಿ ಅರ್ಥಪೂರ್ಣವಾಗಿ ಬೆಳೆಯುವುದರ ಮೂಲಕ 'ಸಂಸಾರ'ದ (ವ್ಯವಸ್ಥಿತ ಸಂಬಂಧಗಳ) ಸ್ವರೂಪವನ್ನು ಪಡೆದುಕೊಳ್ಳುವುದನ್ನು ಕವಿ ಈ ಕವನದ ನಾಲ್ಕು ಭಾಗಗಳಲ್ಲಿ ನಿರೂಪಿಸಿದ್ದಾನೆ. ಕವನದ ಮೊದಲೆರಡು ಭಾಗಗಳಲ್ಲಿ ನಿಸರ್ಗವನ್ನು ಅದಕ್ಕೆ ಹೊರತಾದ ವ್ಯಕ್ತಿ/ ವ್ಯಕ್ತಿತ್ವಗಳೊಂದಿಗೆ ಸಮೀಕರಿಸಿದ್ದರೆ ಕೊನೆಯ ಭಾಗದಲ್ಲಿ ಮಾತ್ರ ನಿಸರ್ಗ ತಾನು ಇರುವ ಸ್ಥಿತಿಯಲ್ಲಿಯೇ ವ್ಯಕ್ತಿತ್ವವನ್ನು ತಾಳುತ್ತದೆ. 'ಪುಲಕಗೊಂಡಳು ಪ್ರಕೃತಿ', 'ಹಸಿರುಟ್ಟು ಹೂವಿನಾರತಿ ಎತ್ತಿ ನಿಂತಿಹಳು' ಎಂಬ ಸಾಲುಗಳಲ್ಲಿ ಇದನ್ನು ಗಮನಿಸಬಹುದು. ಮೊದಮೊದಲು ಪ್ರಕೃತಿ ಹಾಗೂ ವ್ಯಕ್ತಿತ್ವಗಳು ಸಮೀಕರಣದೊಂದಿಗೆ ಚಿತ್ರಿತವಾಗಿದ್ದರೆ ಕೊನೆಯಲ್ಲಿ ಪ್ರಕೃತಿಯೇ ವ್ಯಕ್ತಿತ್ವವಾಗುತ್ತದೆ. ಈ ಮೂಲಕ ಎಲ್ಲ ಜೀವಪ್ರಪಂಚವೂ-ನಿಸರ್ಗವಾಗಲಿ, ಪ್ರಾಣಿಯಾಗಲಿ, ಮನುಷ್ಯನಾಗಲಿ- ಪರಸ್ಪರ ಅಭಿನ್ನ ಎಂದು ತೋರಿಸುತ್ತದೆ; ಇವೆಲ್ಲವೂ ವಿಕಾಸ ಹೊಂದುತ್ತಿರುವ ಸಮಗ್ರ ವ್ಯವಸ್ಥೆಯೊಂದರ (=ಋತು) ಮುಖಗಳು ಗುರುತಿಸುತ್ತ ಅದನ್ನೊಂದು 'ಸಂಸಾರ'ದ ವಿವಿಧ ವ್ಯಾಪಾರಗಳಂತೆ ಕಾಣುತ್ತದೆ.

ಎಚ್.ಎನ್. ಮುರಳೀಧರ

# ೧೩. ಕಾಲಾತೀತ

ಬಿಡುವಿಲ್ಲ ಅರ್ಜಂಟು! ಟಾರು ಬೀದಿಯ ತುಡಿತ
ಕಾರು ಮೋಟಾರು ಸೈಕಲ್ಲು ಟಾಂಗಾ ಟ್ರಕ್ಕು
ಉಸಿರು ಕಟ್ಟುವ ತೆರದಿ ಬಟ್ಟೆಯಲಿ ಹಾಸು-ಹೊಕ್ಕು
ಗಡಿಯಾರದೆಡೆಬಿಡದ ಟಿಕ್ಕುಟಿಕ್ಕಿನ ಬಡಿತ!
ಆಫೀಸು ಶಾಲೆ ಕಾಲೇಜು ಅಂಗಡಿ ಬ್ಯಾಂಕು
ಎಳೆಯುತಿಹವಯಸ್ಕಾಂತದೊಲು ಜೀವಾಣುಗಳ
ಮೂಗುದಾರವ ಜಗ್ಗಿ; ನೂರು ಗಾಲಿಯ ಕೀಲ
ಸವೆದು ಕಿರುಗುಟ್ಟುತಿವೆ; ನರನಿಗೆ ಜಯಪರಾಕು !
ಬೀದಿಯಂಚಿನ ಕಾಲುದಾರಿಯಲಿ ದನಗಾಹಿ
ಮಹಿಷವಾಹನನಾಗಿ ಕೊಳಲೂದಿ ಸಾಗಿಹನು
ನೋಡಿದಿರ? ನೋಡದಿದ್ದರು ಸರಿಯೆ;ಅವನೇನು
ಮಂತ್ರಿಯೆ ? ಯಾವದಾದರು ಸಭೆಯ ಮನಮೋಹಿ
ಗಾರುಡಿಯೆ? ಅವನಲ್ಲ ಬಿಡಿ ; ಆದರೆನ್ನಾಣೆ
ಅಂಥ ಮನಸಿನ ಶಾಂತಿ ಯಾರಿಗಿಹುದೋ ಕಾಣೆ.

'ದೀಪಧಾರಿ' ಕವನ ಸಂಗ್ರಹದ ಇದು ಮೊದಲ ನೋಟಕ್ಕೆ ಪ್ರತಿಮಾ ವಿಧಾನವನ್ನೇ ಆಶ್ರಯಿಸಿ ಬೆಳೆಯುವ ನವ್ಯ ಕವಿತೆಯಂತಿದೆ. ಈ ಕವನದಲ್ಲಿ ಎರಡು ಚಿತ್ರಗಳಿವೆ. ಒಂದು, ಒತ್ತಡಕ್ಕೆ ಒಳಗಾದ ಬದುಕು! ಎರಡು ನಿಶ್ಚಿಂತೆಯಿಂದ ಸಾಗುವ ವ್ಯಕ್ತಿ! ಇಲ್ಲಿ ನಗರದ ಯಾಂತ್ರಿಕ ಜೀವನ ಹೀಗಿದೆ ಎಂದು ಕವಿ ನೇರವಾಗಿ ಹೇಳದಿದ್ದರೂ, ಆತ ನೀಡುವ ವಿಭಿನ್ನ ಹೋಲಿಕೆಗಳ ಮೂಲಕ ಅದೇ ಎಂಬುದು ಸ್ಪಷ್ಟವಾಗುತ್ತದೆ. 'ಟಾರು ಬೀದಿ' ಮತ್ತು 'ಕಾಲುದಾರಿ' ಎಂಬ ಎರಡು ಪ್ರಧಾನ ಪ್ರತಿಮೆಗಳು ಇಡೀ ಕವನದ ವಿಶೇಷಾರ್ಥವನ್ನು ಒಳಗೊಂಡಂತಿದೆ. 'ಬೀದಿ' ಎಂಬುದೆ ಒಂದು ಅನಿವಾರ್ಯ ನಿರ್ಮಿತಿಯಾಗಿದೆ. ಆದರೆ, 'ದಾರಿ' ಎನ್ನುವದು ಸಹಜವಾಗಿ ತೆರೆದುಕೊಳ್ಳುವಂತದ್ದು.

ನಗರದ ನಿಬಿಡತೆ ಕವಿಯಲ್ಲಿ ಬೆರಗು/ಭಯವನ್ನು ಮೂಡಿಸಿದೆ. ಅಲ್ಲಿನ ಜೀವನ ಸಹಜವಾದ ತುಡಿತಗಳಿಂದ ಬೇರ್ಪಟ್ಟಿದೆ: ಯಾರಿಗು 'ಬಿಡುವಿಲ್ಲ': ಅವಸರದ ಕ್ಷಣ. 'ಟಾರು ಬೀದಿ'ಗೆ ಪ್ರವೇಶಿಸಿದರೆ, ಅಲ್ಲಿ 'ಕಾರು ಮೋಟಾರು ಸೈಕಲ್ಲು ಟಾಂಗಾ ಟ್ರಕ್ಕು'ಗಳು ಚಲಿಸುತ್ತಿವೆ. 'ಬಟ್ಟೆಯಲಿ' (ದಾರಿ) 'ಉಸಿರುಕಟ್ಟುವ' ಹಾಗೆ ಕ್ರಮಿಸುತ್ತಿರುವುದಷ್ಟೇ ಅಲ್ಲ; ಇಕ್ಕಟ್ಟುಗಳಲ್ಲಿ 'ಹೊಕ್ಕು' ಹೋಗುತ್ತಿರುವ ದೃಶ್ಯ ಗಾಬರಿಯನ್ನು ಉಂಟುಮಾಡುವಂಥದ್ದು. ನಿಮಿಷ/ಕ್ಷಣಗಣನೆಯೊಳಗೇ ಎಲ್ಲವುಗಳ ಚಲನೆ ನಡೆದು ಹೋಗುತ್ತಿದೆ. ಅದು 'ಗಡಿಯಾರದೆಡೆಬಿಡದ ಟಿಕ್ಕುಟಿಕ್ಕಿನ ಬಡಿತ!'ದ ಹಾಗೆ ಮುಂದುವರಿಯುತ್ತಿದೆ.

ಇನ್ನು ಮನುಷ್ಯನನ್ನು ಸೆಳೆಯುತ್ತಿರುವ ಕೇಂದ್ರಗಳೆಂದರೆ 'ಆಫೀಸು ಶಾಲೆ ಕಾಲೇಜು ಅಂಗಡಿ ಬ್ಯಾಂಕು', ಇವೆಲ್ಲವೂ ಆತನ ಅಸ್ತಿತ್ವವನ್ನು ಪ್ರಶ್ನಿಸುವ ತಾಣಗಳೇ ಆಗಿವೆ. ಅಲ್ಲಿ ದುಡಿಯುವ, ಕಲಿಯುವ, ಕೊಳ್ಳುವ, ಪಡೆಯುವ ವಹಿವಾಟುಗಳೆಲ್ಲ ಅವನನ್ನು ಜಗ್ಗಿ ಎಳೆಯುತ್ತಿವೆ. ಹೀಗಾಗಿ, ಅವನು ಮಾನವನಿಗಿಂತ 'ಜೀವಾಣು' ರೂಪದಲ್ಲಿ ಒದ್ದಾಡುವಂತಾಗಿದೆ. ಕ್ಷಿಪ್ರಗತಿಯಲ್ಲಿ ಚಲಿಸುತ್ತಿರುವ 'ನೂರು ಗಾಲಿಯ ಕೀಲು/ ಸವೆದು ಕಿರುಗುಟ್ಟುತಿದೆ'. ಇದು ಕೇವಲ ಯಂತ್ರದ ಚಲನೆ ಮಾತ್ರವಲ್ಲ; ಮನುಷ್ಯನ ಯಾಂತ್ರಿಕ ಜೀವನದ ಚಕ್ರಗತಿ ಕೂಡ ಹೌದು.

ಹೀಗೆ, ಒಂದು ಕಡೆ ಬದುಕು ಹಲವಾರು ಸಂಕೀರ್ಣತೆ/ಜಟಿಲತೆಗಳ ನಡುವೆ ಸಾಗುತ್ತಿದ್ದರೆ, ಮತ್ತೊಂದೆಡೆ 'ಬೀದಿಯಂಚಿನ ಕಾಲುದಾರಿಯಲ್ಲಿ ದನಗಾಹಿ'ಯೊಬ್ಬ ಎಮ್ಮೆಯ ಮೇಲೆ ಕುಳಿತು, ಕೊಳಲನ್ನು ಊದುತ್ತಾ ಸಾಗಿದ್ದಾನೆ. ಅವನು 'ಟಾರು ಬೀದಿ'ಯ ತುಡಿತಕ್ಕೆ ಒಳಗಾದವನಲ್ಲ. ಈತ ಅಂಥ ಬೀದಿಯೊಂದರ ಅಂಚಿನಲ್ಲಿರುವ ಕಾಲುದಾರಿಯಲ್ಲಿ ಸಂಚರಿಸುತ್ತಿರುವ ವ್ಯಕ್ತಿ. ಎಲ್ಲವನ್ನೂ ನಾಗರಿಕತೆ /ಆಧುನಿಕತೆ ವ್ಯಾಪಿಸಿಕೊಳ್ಳುತ್ತಿರುವಾಗ (ಟಾರು ಬೀದಿ) ಅಂಚಿನಲ್ಲಿ ಉಳಿದಿರುವ ಭಾಗದಲ್ಲಿ (ಕಾಲುದಾರಿ) ಸಾಗುತ್ತಿರುವ ಈತನ ಬಗ್ಗೆ ಯಾರಿಗೂ ಗಮನವಿಲ್ಲ. ಅವನು ಮತ್ತು ಅವನು ಏರಿ ಬರುತ್ತಿರುವ ಪ್ರಾಣಿ ಇವೆರಡೂ ಇಂದಿನ ಜೀವನ ದೃಷ್ಟಿಗೆ ಯೋಗ್ಯವಾದವುಗಳಲ್ಲ ಎನಿಸುವಂತಿದೆ. ಆದರೂ ಅವನ ಮನಸ್ಸಿನಲ್ಲಿ ನೆಲೆಸಿರುವ ಶಾಂತಿ 'ಯಾರಿಗಿಹುದೋ ಕಾಣೆ' ಎಂಬ ಕವಿಯ ಅಚ್ಚರಿ. ನಾಗರಿಕನ ಬಗೆಗಿನ ಸಹಾನುಭೂತಿಯಾಗಿಯೂ ಕಾಣುತ್ತದೆ. ಒಟ್ಟಾರೆ. 'ಕಾಲಾತೀತ' ಆಧುನಿಕ ಮಾನವನ ನಿರರ್ಥಕತೆಯನ್ನು ಪ್ರತಿಮಿಸಿದೆ. ಆದರೂ, ಬದುಕಿನ ಬಗ್ಗೆ ಆಶಾವಾದವನ್ನುಳ್ಳ ಕವಿ ಹಳ್ಳಿಗಾಡಿನ ಅನನ್ಯತೆಯ ಕಡೆಗೆ ಹೆಚ್ಚು ಒಲವು ತೋರಿರುವುದು ಗಮನಾರ್ಹ. ಕವಿತೆಯೊಳಗಿನ ಎರಡು ದೃಶ್ಯಗಳಲ್ಲಿ ಜೀವನ ಕೇಂದ್ರಿತವಾದ ಒಂದೇ ವಿಷಯ ವ್ಯಕ್ತವಾಗುತ್ತಿದ್ದರೂ, ಬಾಳುವ ಭಿನ್ನ ಕ್ರಮಗಳು ಕಂಡುಬರುತ್ತವೆ.

**ಕುಮಾರ ಚಲ್ಯ**

# ೧೪. ಮೃತ್ಯುಬಂಧ

೧

ಅಲ್ಲಿಯೇ ಕುಳಿತಿತ್ತು ಹಾವು!
ಮೆತ್ತಗೆ ಸುರುಳಿ ಸುತ್ತಿ ಹೆಡೆಯೆತ್ತಿ ಆಡುತ್ತಿತ್ತು
ಕೈ ಮಾಡಿ ಕರೆವಂತೆ ಮೋಹಬಂಧ.
ಜೋಡು ನಾಲಗೆ-ನಾ ಮುಂಚು ತಾ ಮುಂಚು
ಮುಗಿಲ ಮೋಹರದಲ್ಲಿ
ಸಳ ಸಳ ಮಿಂಚು ಹರಿದಾಡಿ, ನಡೆದಂತೆ
ಸಿಡಿಲಿನೊಳಸಂಚು !
ನಾವು ನೀವೂ ಅಲ್ಲಿಯೇ
ಅಲೆದುದೆಷ್ಟೋ ಬಾರಿ,
ಒಮ್ಮೆಯಾದರೂ
ನಮ್ಮನದು ಕಂಡಿರಬೇಕು, ಖಂಡಿತ;
ಮನದೊಳೇನೋ ಗುಣಾಕಾರ ಹಾಕಿರಬೇಕು
ಈಗಲಾದರೂ ಕಂಡಿರ, ಅದರದೆಂಥಾ ಚಮಕು ಚುರುಕು?

೨

ನೆರಳ ಜೊತೆ ನೆರಳಾಗಿ ಅರಿವಾಗಗೊಡದಂತೆ ಹುಟ್ಟಿನಿಂದಲೆ
ಬಂತು ಬೆನ್ನ ಹಿಂದೆ.

ಹೆಜ್ಜೆಯಲಿ ಹೆಜ್ಜೆಯನಿಟ್ಟು
ಕಾಯ್ದುಕೊಂಡೇ ಇತ್ತು
ಎಂಥಾ ಒಜ್ಜೆ ಹೊತ್ತರೂ ನುಜ್ಜುಗುಜ್ಜಾಗದೊಲು ಮಾಂಸಮಜ್ಜೆ
ಜಪ್ಪಿಸಿ ಕುಳಿತು ನೋಡುವುದು, ತಪ್ಪಿತೊ

ಕುಣುಸಿಟ್ಟು ಕೊನೆಗಾಣಿಸಿಯೆ ಬಿಡುವ ಹಿಡಿತ ಹೊಡೆತ!
ಇದೆ ಈಗ ಸುರುಳಿಯ ಬಿಚ್ಚಿ, ಮಿಂಚಿ ಮರೆಯಾಯ್ತು!
ನುಣ್ಣಗಿನ ಡೊಂಕುಗೆರೆ ಬದಿಗೆ ಹಕ್ಕಿಯ ಹೆಜ್ಜೆ
ನಕ್ಷತ್ರ ಮೂಡಿಸಿದೆ! ಮುಂದೆ ಮಾತೇ ಇಲ್ಲ. ಅದರ ಗುರುತಿಲ್ಲ.
ಯಾರು ಊದಿದರೇನು ಮನಸೆಳೆವ ಪುಂಗಿ
ಅದಕಿತ್ತು ಬೇರೊಂದು ಭಾವ ಭಂಗಿ!

೩
ಉಸುಕಿನಲಿ ನಡೆದಂತೆ ಸಾಗಿತ್ತು ನಾಡೀಪರೀಕ್ಷೆ
ಔಷಧಿಯ ಚಮಚೆ ಎಣಿ ಎಣಿಸಿತ್ತು ಒಂದೊಂದೆ ಕೊನೆಯ ಗಳಿಗೆ.
ಭೂಲೋಕವನು ಮೂರು ಸುತ್ತು ಸುತ್ತಿದರೂ
ಸಪ್ತಸಾಗರ ತಳವ ಶೋಧಿಸಿದರೂ
ಇಲ್ಲ ...ಎಲ್ಲೂ...ಇಲ್ಲ
ಬರಿಯ ಪಂಜರ ಕೆಳಗೆ ಜೋತಾಡುತಿತ್ತು.
"ಸಣ್ಣ ಗಿಣಿಯು ಕತ್ತಲಲ್ಲಿ ಎಲ್ಲಿ ಹಾರಿತು?"
ಆಕಾಶವಾಣಿಯು ನುಡಿದು, ಗುಡುಗು ಮಿಂಚನು ತಳೆದು
ದೇವದೇವಿಯರೊಲಿದು ಬರುವ ಮೊದಲೇ
ಮಣ್ಣಲೋಕದ ಸಣ್ಣ ಚೊಂಚೆ ಕೇಳಿತು ಜಗವ;
"ಹೊತ್ತಾಯ್ತು ನಾನಿನ್ನು ಹೋಗಿ ಬರಲೆ ?"

'ಸಾವು' ಮತ್ತು 'ಕಾಮ'ದ ಬಗ್ಗೆ ಬರೆಯದೇ ಇರುವ ಕವಿ ಅಥವಾ ಲೇಖಕ ಮೇಜರ್ ರೈಟರ್ ಅಲ್ಲ ಎಂಬ ಒಂದು ಮಾತಿದೆ. ಆದ್ದರಿಂದಲೇ "ಮಹಾಭಾರತ"ದಲ್ಲಿ ಇವೆರಡನ್ನೂ ಆಮೂಲಾಗ್ರವಾಗಿ 'ಶೋಧಿಸಿ'ರುವ ವ್ಯಾಸರನ್ನು ಮಹಾಕವಿ ಎಂದು ನಾವು, ಒಪ್ಪುತ್ತೇವೆ. ಕಣವಿಯವರ "ದೀಪಧಾರಿ" ಸಂಕಲನದ "ಮೃತ್ಯುಬಂಧ" ಒಂದೂವರೆ ಪುಟಗಳ ಮೂರು ಭಾಗಗಳ ಒಂದು ಕವಿತೆ. ಇದಲ್ಲದೆ ಮೃತ್ಯುವನ್ನು ಹಗುರವಾಗಿಯೂ ಗಂಭೀರವಾಗಿಯೂ ವಿಡಂಬನೆಯಾಗಿಯೂ ಬಳಸಿಕೊಂಡಿರುವ ಇತರ ಕವಿತೆಗಳೆಂದರೆ 'ನಂಜುಂಡನಾಗಿ ಬಾಳು', 'ಬಂಧದಿಂ ಬಿಡುಗಡೆಗೆ', 'ಸಾವುದೆಲ್ಲಾ ಸತ್ತು', 'ಮೃತ್ಯುವಿಗೆ', 'ಮೃತ್ಯು ಘೋಷಣೆ', 'ಹಿರಿಯರ ಸಾವು', 'ನೇಣು ನುಡಿದದ್ದು!', 'ಹೆಬ್ಬಾವು', ಇವುಗಳೊಂದಿಗೆ ಹೋಲಿಸಿದಾಗ ಬಹು ಹಿಂದೆಯೇ ಬರೆದ 'ಮೃತ್ಯುಬಂಧ' ಎಂಬ ಕವಿತೆ ವಿಶೇಷವಾಗಿ ಕಾಣುತ್ತದೆ.

'ಅಲ್ಲಿಯೇ ಕುಳಿತಿತ್ತು ಹಾವು' ಎಂದು ಪ್ರಾರಂಭವಾಗುವ ಈ ಕವಿತೆಯು ಎರಡನೆಯ ಭಾಗಕ್ಕೆ ಹೋಗುತ್ತಲೇ ಹಾವಿನ ಪ್ರತಿಮಾ ಸ್ವರೂಪ ಸ್ಪಷ್ಟವಾಗುವುದರಿಂದ ಮೃತ್ಯುವಿನ ಹೊಂಚು, ತಿಳಿದುಬಿಡುತ್ತದೆ.

ಮೆತ್ತಗೆ ಸುರುಳಿ ಸುತ್ತಿ ಹೆಡೆಯೆತ್ತಿ ಆಡುತ್ತಿತ್ತು
ಕೈ ಮಾಡಿ ಕರೆವಂತೆ ಮೋಹಬಂಧ
ಜೋಡು ನಾಲಗೆ ನಾ ಮುಂಚು ತಾ ಮುಂಚು
.....................................

ಎಂಬ ಹಾವಿನ ಚಲನವಲನದ ಚಿತ್ರವತ್ತಾದ ವಿವರಣೆಯಲ್ಲಿ ಹಾವಿನ ಭಯಂಕರ ಚಿತ್ರವೇನೂ ಇಲ್ಲ. ಕವಿ ಅಲ್ಲೇ ಓಡಾಡುವಾಗ ಅದನ್ನು ಕಂಡಿಲ್ಲ. ಆದರೆ ಹೊಂಚು ಹಾಕುತ್ತದೆ. ಹೀಗೆ ಸಾವು ಎಂದೂ ನಮ್ಮನ್ನು ಮೀರಿದ್ದು ನಮಗಿಂತ ದೊಡ್ಡದು; ಕವಿತೆಯ ಎರಡನೇ ಭಾಗದಲ್ಲಿ 'ಹುಟ್ಟಿನಿಂದಲೇ ಬಂತು ಬೆನ್ನು ಹಿಂದೆ' ಎಂಬ ಮಾತು. ನಮ್ಮ ಹಳೆಯ ಮಾತು 'ಜಾತಸ್ಯ ಮರಣಂ ಧ್ರುವಂ' ಎಂಬುದನ್ನು ನೆನಪಿಸುತ್ತದೆ. ಅದು ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯುವ, ಅದು ಹಿಂಬಾಲಿಸುತ್ತಲೇ ಇರುವ ಅರಿವು ಕವಿಗಿದೆ. ಆದರೆ ಆಶ್ಚರ್ಯವೆಂದರೆ ಅದರ ಹೆಡೆಯ ಕೆಳಗೆ ಕುಳಿತೇ ನಾವು ಈ ಬದುಕಿನ ಎಂಥೆಂಥ ಆಮೋದ ಸವಿಯುತ್ತೇವಲ್ಲಾ.... ಹಕ್ಕಿಯ ಹೆಜ್ಜೆ ....ನಕ್ಷತ್ರ... ಇವುಗಳ ಮುಂದೆ, ಅದು ನಮ್ಮ ಬೆನ್ನ ಹಿಂದಿದೆ ಎಂಬುದನ್ನೇ ಮರೆತು ಬಿಡುತ್ತೇವಲ್ಲಾ. ಅದೂ ಹಾಗೆಯೇ ಯಾರೋ ಪುಂಗಿ ಊದಿದರೆಂದು ಅತ್ತ ಕಡೆ ಗಮನ ಹರಿಸಿ ನಮ್ಮನ್ನು ಮರೆತಂತೆ ನಟಿಸುತ್ತದೆ. ಆದರೆ ಮರೆಯುವುದಿಲ್ಲ. ಕವಿತೆಯ ಮೂರನೇ ಭಾಗದಲ್ಲಿ ಆಗಲೇ ಮುಪ್ಪು ಆವರಿಸಿಕೊಂಡಾಗಿದೆ. ಮುಪ್ಪಿನ ಜೊತೆಜೊತೆಗೆ ನೂರಾ ಎಂಟು ಕಾಯಿಲೆಗಳು, ನಾಡಿ ಸಿಗುತ್ತಿಲ್ಲ. ಮರಳಿನಲ್ಲಿ ಪಾದವನ್ನು ಎಳೆದೆಳೆದು ನಡೆಯುವಂತೆ ಪ್ರಮಾದಕರ ಅದರ ಬಡಿತ. ಔಷಧಿಯ ಚಮಚೆಯೂ, ಕೊನೆಯ ಗಳಿಗೆಯನ್ನು ಎಣಿಸುತ್ತಿದೆ. ಗಿಣಿಯಿದ್ದ ಪಂಜರ ಯಾರಿಗೂ ಅರ್ಥವಾಗದಂತೆ ಖಾಲಿಯಾಗಿದೆ. ಸಪ್ತಸಾಗರ ಶೋಧಿಸಿದರೂ ಆ ಗಿಣಿ ಇನ್ನು ಸಿಗುವುದಿಲ್ಲ. ಕತ್ತಲಲ್ಲಿ ಹಾರಿ ಹೋದ ಗಿಣಿ ಅದು, ಎತ್ತ ಹಾರಿತೋ ತಿಳಿಯದು, ಮುಂದೆ ಸ್ವರ್ಗವೋ, ನರಕವೋ ದೇವದೇವಿಯರ ಲೋಕವೋ... ಅದೇನಾದರೂ ಇರಲಿ, ಮಣ್ಣಿನಿಂದ ಬಂದ ದೇಹ ಅದು, ಮಣ್ಣಿನ ಬೊಂಬೆ. ಅದೂ ಈಗ ಹೊರಡಬೇಕು. ಪ್ರಾಣವೇ ಹೋದ ಮೇಲೆ ದೇಹಕ್ಕೇನು ಬೆಲೆ? ಅದಕ್ಕೆ ಸಂಸ್ಕಾರವಾಗಬೇಡವೇ? ಅದು ಜಗತ್ತನ್ನೇ ಕೇಳುತ್ತಿದೆ. "ಹೊತ್ತಾಯ್ತು (ಅಂದರೆ ಹೆಚ್ಚು ಕಾಲ ಇಟ್ಟರೆ ಹೆಣ ಕೊಳೆಯುತ್ತಿದೆ) ನಾನಿನ್ನು ಹೋಗಿ ಬರಲೇ ?" ಅದನ್ನು ಜಗತ್ತು ಶವ ಸಂಸ್ಕಾರ ತಿಥಿ ಮತಿ ಇತ್ಯಾದಿಗಳಿಂದ ಬೀಳ್ಕೊಡುತ್ತದೆ. ಹೀಗೆ ಬಾಳನ್ನು ಗೆದ್ದು ಸಾವು ವಿಜೃಂಭಿಸುತ್ತದೆ.

ಕನ್ನಡದ ಎಲ್ಲ ದೊಡ್ಡ ಕವಿಗಳೂ ತಮ್ಮ ಒಂದಲ್ಲ ಒಂದು ಕವಿತೆಯಲ್ಲಿ ಮೃತ್ಯುವಿನ ಸಮೀಪ ಹೋಗಿ ಬಂದಿದ್ದಾರೆಂಬುದೇ ಒಂದು ಅಚ್ಚರಿಯ ಸಂಗತಿಯಾದರೂ ಸತ್ಯ. ಹೀಗಾಗಿ ಈ, ಕವಿತೆಯನ್ನು ಕ್ವಚಿತ್ತಾಗಿ ಕೆ.ಎಸ್.ನ. ಅವರ 'ತೆರೆದ ಬಾಗಿಲು' ಮತ್ತು 'ಮನೆಯಿಂದ ಮನೆಗೆ', ನಿಸಾರ್ ಅಹಮದ್ ಅವರ 'ರಾಮನ್ ಸತ್ತ ಸುದ್ದಿ' ಕವಿತೆಗಳೊಂದಿಗೆ ಹೋಲಿಸಬೇಕೆನ್ನಿಸುತ್ತಿದೆ. ಕೆ.ಎಸ್.ನ. ನವೋದಯದಿಂದ ನವ್ಯಕ್ಕೆ ತುಂಬಾ ಉದಾರವಾಗಿ ಸಂಪೂರ್ಣವಾಗಿ ತೆರೆದುಕೊಂಡವರು.

ಮನೆಯಿಂದ ಮನೆಗೆ ವರ್ಗವಾಗಿ ಹೋಗುವ ಬದುಕಿನಲ್ಲಿ ಈ ಒಳಮನೆಗಳ ಸಹವಾಸ ಸಾಕುಸಾಕಾಗಿ ಕೊನೆಗೆ ಕಾದಿರುವ ಹೊರ ಮನೆಯ ಆದರವಿರದ, ಕದವಿರದ, ಹೋದವರು ಹಿಂದುರಿಗಿ ಬರಲು ದಾರಿಗಳಿರದ ಆ ಮನೆಯು ಮನಸ್ಸನ್ನಾಕರ್ಷಿಸಿ ಮೃತ್ಯುವಿನ ಅನಿವಾರ್ಯತೆಯನ್ನು ಹೇಳುತ್ತಿದ್ದರೆ, 'ತೆರೆದ ಬಾಗಿಲು' ಶೀರ್ಷಿಕೆಯೇ ಮೃತ್ಯುವನ್ನು ಆಹ್ವಾನಿಸುತ್ತಿದೆ. ಪಕ್ಕದ ರಸ್ತೆಯ ನರಸಿಂಹ ಸ್ವಾಮಿ ಸತ್ತಿದ್ದಾರೆ. ಅದು ಪೇಪರ್ ಆಫೀಸಿಗೆ ತಲುಪಿ ತಾನೇ ಸತ್ತೆನೆಂದು ಭಾವಿಸಿ ಮೂರನೇ ದಿನ ಬರುವ ಸಂತಾಪ ಸೂಚಕ ಪತ್ರಗಳ ನೆನಪಾಗಿ ದಿಗಿಲಾಹುವ ಕವಿಗೆ ಊರಿನಿಂದೊಬ್ಬ ನೆಂಟ ಬರುತ್ತಾನೆ. ಅವನೊಂದಿಗೆ ಕುಶಲೋಪರಿಯಾಗುವ ವೇಳೆಗೆ ಮೂವರು ಬ್ರಾಹ್ಮಣರು ಬರುತ್ತಾರೆ. ಮೂರು ಬೆಂಕಿಗಳಂತೆ ಮೂರು ಕಾಲಗಳಂತೆ ಮೂರು ತಲೆಮಾರುಗಳ ಸುಕೃತವೇ ಮೈವೆತ್ತಂತೆ ಅಕ್ಷತೆ ಕೈಲಿ ಹಿಡಿದು ಬಂದವರು ವಾಸ್ತವವಾಗಿ ಮೃತ್ಯುವಿನ ಪ್ರತಿನಿಧಿಗಳೇ ಆಗಿ ಕವಿಯೇ ಅವರಿಗೆ ತೆರೆದ ಬಾಗಿಲಾಗುತ್ತಾನೆ.

ಹನುಮ ಹಳ್ಳಿಯವ, ಅವನಿಗೆ ರಾಮನ್ ಸತ್ತರೂ ಅಷ್ಟೇ ರಸೆಲ್ ಸತ್ತರೂ ಅಷ್ಟೇ. ಆದರೂ ಕವಿಗೆ ರಾಮನ್ ಸತ್ತ ತಳಮಳ, ಅದನ್ನು ಹನುಮನಿಗೆ ಹೇಗೆ ಹೇಳಬೇಕೆಂಬ ಜಿಜ್ಞಾಸೆ. ಹೇಗೆ ಹೇಳಿದರೂ ಅದು ಅವನಿಗೆ ಅರ್ಥವಾಗುವುದಿಲ್ಲ. ಕೊನೆಗೆ ತಾನು ಸತ್ತರೂ ಅಷ್ಟೇ, ಈ ಹನುಮ ಸತ್ತರೂ ಅಷ್ಟೇ. ಯಾರಿಗೂ ತಿಳಿಯುವುದಿಲ್ಲ ಅನ್ನಿಸುವ ಮೂಲಕ ಸಾವಿನ ಅಗಾಧತೆ ಇಡಿ ಇಡಿಯಾಗಿ ಆವರಿಸಿಕೊಳ್ಳುತ್ತದೆ.

ನವೋದಯದಲ್ಲಿ ಬಂದ ಕಣವಿಯವರ 'ಮೃತ್ಯುಬಂಧ'ದೊಂದಿಗೆ ಸದ್ಯದಲ್ಲಿ ಬಂದ ಈ ಎರಡು ಕವಿತೆಗಳನ್ನು ಹೋಲಿಸುವ ಮೂಲಕ ಸದ್ಯದ ಸಂಕೀರ್ಣತೆಯಲ್ಲಿ 'ಸಾವಿ'ನಂತಹ ಪ್ರೌಢ ವಿಷಯಗಳು ಹೇಗೆ ಜಟಿಲತೆಯ ಅರ್ಥವಿಸ್ತಾರ ಹೊಂದಿದುವು ಎಂಬುದರ ಅರಿವೂ ಆಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದ ಇಂತಹ ಮೃತ್ಯು ಕವಿತೆಗಳ ತೌಲನಿಕ ಅಧ್ಯಯನಕ್ಕೆ ಅವಕಾಶ ತೆರದೇ ಇದೆ.

ಎಸ್.ವಿ. ಪ್ರಭಾವತಿ

# ೧೫. ದ್ವಂದ್ವ

ಎಲ್ಲಾ ಬಿಟ್ಟು ತಲೆಯೊಳಗೇ ಏಕೆ ಸುರುವಾಯ್ತೊ
ಹಾಳಾದ ಕಾರಖಾನೆ!
ನೂರು ಯಂತ್ರದ ಗಾಲಿ ಚೀತ್ಕರಿಸಿ ಓಡುತಿವೆ ಇಲ್ಲಿ ಒಂದೇ ಸಮನೆ.
ಹಗಲಿರುಳು ಬಿಟ್ಟೂಬಿಡದೆ ಕಪ್ಪು ಹೊಗೆಯುಗುಳಿ
ಅಳಿಸಿಬಿಟ್ಟಿದೆ ಅಗೊ ಆಕಾಶದ ನಕಾಶವನ್ನೆ.
ಎಲ್ಲಿ ಬಿರುಗಾಳಿಯಲಿ ಮಗುಚಿ ಮೋಡದ ದೋಣಿ
ಚಿಕ್ಕೆ ತಳಕಂಡವೋ,
ಹಗಲು ಕಾಮನಬಿಲ್ಲು ಸೇತುವೆಯು ಮುರಿದಿರುಳ
ರಹದಾರಿ ಬಂದಾಯಿತೋ.
ಇಲ್ಲಿಯವರಿಗೇ ಮೊದಲು ನೆಲೆಯಿಲ್ಲ.
ಅಲ್ಲಿಯವರನು ಕುರಿತ ಯೋಚನೆಗೆಲ್ಲಿ ಅವಕಾಶ ?
ಇಂದಿನದೆ ಮುಖ್ಯ ರಾದ್ಧಾಂತವಾಗಿದೆ ನೋಡಿ-
ಉಳಿದದ್ದು ಮುಂದೆ ನೋಡೋಣ, ಸಾವಕಾಶ.

*    *    *

ಸೆಳಕಿನ ಹಿಂದೆ ಸೆಳಕು, ಸೆಳಕಿನ ಹಿಂದೆ ಸೆಳಕು
ನಡುನಡುವೆ ಕುಲುಕುತಿಹುದಲ್ಲ ಇದು ಯಾವ ಬೆಳಕು ?
ದಿಕ್ಕು ದಿಕ್ಕುಗಳಿಂದ ತೂರಿಬಿಟ್ಟಂತಿಹುದು ಹಸುರು ಸರ್ಚ್‌ಲೈಟು
ಕಾಡುನಾಡೆನ್ನದೆಯೇ ಹುಲ್ಲು ಹಸುರಾಣೆಯಲಿ ಅದರ ಝೋಕು!
ಒಳಗೆ ಬೆಚ್ಚಗೆ ಕುಳಿತು ಚಹವ ಗುಟುಕರಿಸುತ್ತ
ಆಗಾಗ ಕಿಟಕಿಯಲಿ ಹಣಕಿದರೆ ಸಾಕು
ಇನ್ನೇನು ಬೇಕು ?

ಆಹ! ಹೀಗೆಯೇ ಸಾಗಿರಲಿ ಈ ಜಗತ್ತು.
ಮರದ ಪೊಟರೆಯೊಳೊಂದೆ ಗಿಳಿಯಮರಿ -ಕಿಲಿಕಿಲಿ
ಜಿನುಗು ಮಳೆಯಲಿ ತೊಯ್ದು ತೆಪ್ಪಗಿವೆ ಉಳಿದೆಲ್ಲ ಹಕ್ಕಿಪಕ್ಕಿ.
ತೊಟ್ಟಿಲಲಿ ಮಗುವಿನೆಳನಗೆಯ ತಲಕಾವೇರಿ!
ಅಂಗಳದ ಕಸಗಂಟೆಯಲಿ ರಸದ ವಿಜಯಧ್ವಜವನೆತ್ತಿವೆ
ಗುಲಾಬಾಕ್ಷಿ

'ರಸೋವೈಸಃ'
ಮದುಗುಣಕೆ ಊದಿವೆ ತುತೂ ತುತ್ತುತೂರಿ.
ಕಂಪೌಂಡು ಗೋಡೆಯ ಮೇಲು ಬರೆದಿದೆ ಹಸಿರು ತನ್ನ
ಸಂಪೂರ್ಣ ಹೆಸರು.
ಬೆಳ್ಳಗೆ ನಿರಿಯ ಚಿಮ್ಮುತ ಬಂದು
ನೆಲವ ಮೋಹಿಸಿ ಮತ್ತೆ ಬಾನಿಗೇರಿದೆ ಮಳೆಯ ಥಳಕು.
ನೀರೆಲ್ಲ ಬಸಿದು, ರೇವೆ ಮಣ್ಣನು ಹರವಿ
ನಿಶ್ಚಿಂತ ನಿಂತಿಹುದು ಜೀವರ್ಝುರಿಯು;
ತೊಳೆದ ಮನಸಿನ ತೋಟದಲ್ಲಿ ಮೂಡಿವೆ ನೂರು ಡೇರೆ ಹೂ
ಮರಿನೇಸರು.
ಎದೆ ಎದೆಗಳಲ್ಲಿ ಕುಣಿದು ಕೋಲಾಟವಾಡಿದೆ ಅದೇ;
'ಚೆಲುವಯ್ಯ ಚೆಲುವೋ... ಚೆಲುವಯ್ಯ ಚೆಲುವೋ'

* * *

ಅದಕಾಗಿ ಇದಕಾಗಿ ಬೆದಕುತಿಹುದಲ್ಲ ಮನ
ಅದಕಿಹುದೆ ಬೇರೆ ಬದುಕು?
ತೊಟ್ಟು ಕುಣಿಯುತ್ತಿಹುದು ನಿಮಿಷ ನಿಮಿಷಕ್ಕೊಂದು ಬೇರೆ ಪೋಷಾಕು,
ಸಾಧನೆ, ಸತ್ಯದಾರಾಧನೆಗಳೆಂದರದಕೆ ತಲೆ ಬೇನೆ,
ಈಗಿರುವ ಮೆದುಳೊ? ಖಾಲಿ ಖಜಾನೆ.
ಇಷ್ಟರ ಮೇಲೆ ಹೇಗೆ ನಡೆದೀತು, ವರ್ಷಗಟ್ಟಲೆ ಈ ನಮ್ಮ ಕಾರಖಾನೆ.
ಇಲ್ಲವೆಂದರು ಬೇರೆ ಎಲ್ಲಿಂದ ತರುವದಿದೆ ಹೇಳಿ,
ಅದು ಮೊಟ್ಟಮೊದಲೇ ಬ್ರಹ್ಮ ಕೊಟ್ಟ ಆಸ್ತಿ!
ಸಂಪು ಹೂಡಿದರೂ ನಡೆಯುವುದಿಲ್ಲ.
ಅದರ ಮಾಲಕನು ಅಷ್ಟಿಷ್ಟಕ್ಕೇ ಹಣಿಯುವುದಿಲ್ಲ ಮಾರಾಯಾ.
ಆದುದಾಗಲಿ, ಕೊನೆಗೆ ಆಗಿಯೇ ಬಿಡಲಿ ಕುಸ್ತಿ

**ನೋಡೋಣ ಒಂದು ಕೈ!**
**ಗೆದ್ದರೂ ಸೈ,**
**ಗೆದೆಯದಿದ್ದರೂ ಸೈ.**

ನೆಲ-ಮುಗಿಲು, ಕತ್ತಲೆ-ಬೆಳಕು, ಗಂಡು-ಹೆಣ್ಣು, ಬುದ್ಧಿ-ಮನಸು ಮೊದಲಾದ ದ್ವಂದ್ವಗಳ ಅರಿವು, ಅವುಭವ, ಅಭಿವ್ಯಕ್ತಿಗಳಲ್ಲಿಯೇ ಕಾವ್ಯ ಹುಟ್ಟಿಕೊಳ್ಳುತ್ತದೆ. ದ್ವಂದ್ವಗಳನ್ನು ಮೀರಿದ ದ್ವಂದ್ವಾತೀತ ಅವಸ್ಥೆ ಕವಿಯದಲ್ಲ, ಸಂತನದು. ಆ ಸ್ಥಿತಿಯಲ್ಲಿ ಎಲಿಯಟ್ ಹೇಳಿದ ಹಾಗೆ the poetry does not matter. ಭಗವದ್ಗೀತೆಯಲ್ಲಿ ಕಾವ್ಯವಿದೆ. ಆದರೆ ಕಾವ್ಯಾನುಭವಕ್ಕಾಗಿ ಯಾರೂ ಗೀತೆಯನ್ನು ಓದುವುದಿಲ್ಲ. ದ್ವಂದ್ವಗಳ ತೀವ್ರ ಅರಿವಿದ್ದೂ ಅವುಗಳಲ್ಲಿ ಏಕಸೂತ್ರತೆಯನ್ನು ಕಾಣುವ ಇನ್ನೊಂದು ರೀತಿಯ ಕಾವ್ಯವೂ ಇದೆ. 'ನಾದಲೀಲೆ'ಯ ಕವಿ ಬೇಂದ್ರೆಯವರಲ್ಲಿ ಅದನ್ನು ಕಾಣಬಹುದು. ಆದರೆ ಅಪರಿಹಾರ್ಯ ದ್ವಂದ್ವಗಳ ಅನುಭವ ನವ್ಯಕಾವ್ಯದ ಒಂದು ವಿಶಿಷ್ಟ ಗುಣವೇ ಆಗಿ ಮೂಡಿ ಬಂದಿತು.

**ಮಣ್ಣು, ಪೂರಾ ಮಣ್ಣು ಬೊಂಬೆಯಾಗಿದ್ದರದು ಒಂದು ತರ;**
**ಈ ಬೊಂಬೆಯಲ್ಲೂ ಉಸುರಿನ ತಂತ್ರ;**
**ತಂತ್ರದಾಚೆಗೆ ಶುದ್ಧ ಬೆಳಕು ಮಂತ್ರ -ಛುತೂರಿ**
**ಹೆಜ್ಜೆ ಮೂಡದ ಹಾದಿ ಗಾಳಿ ಬೀದಿ.**

ಅಡಿಗರ 'ಭೂಮಿಗೀತ'ದ ಈ ಸಾಲುಗಳು ಈ ದೃಷ್ಟಿಯಿಂದ ಪ್ರಾತಿನಿಧಿಕವಾಗಿವೆ. ನವ್ಯ ಕಾಲಖಂಡದಲ್ಲಿ ಚೆನ್ನವೀರ ಕಣವಿಯವರು ಬರೆದ ಹಲವಾರು ಕವಿತೆಗಳಲ್ಲಿಯೂ ಈ ಆಶಯವನ್ನು ಗುರುತಿಸಬಹುದು. ಆದರೆ ಈ ಇಬ್ಬರು ಕವಿಗಳಲ್ಲಿ ಅದರ ಅಭಿವ್ಯಕ್ತಿ ಮಾತ್ರ ಬೇರೆ ಬೇರೆಯಾಗಿದೆ.

**ಇವಳೆದೆಗೆ ಬೇರಿಳಿದ ಕಾಲು ನನ್ನದು; ಬರಿದೆ ನಕ್ಷತ್ರಲೋಕಕ್ಕು ರೈಲು ಬಿಟ್ಟೆ**
**ಹೆಂಕುಳಿಯ ಹಾಗೆ ನರಸತ್ತು ಹುಡುಕಿದೆ ಮನದ**
**ಬಚ್ಚಲಲಿ ಕೊನೆಯಿರದ ಕೊನೆಯ ಬಟ್ಟೆ.**

ಇಂಥ ಸಾಲುಗಳಲ್ಲಿ ನೆಲ-ಮುಗಿಲುಗಳ ದ್ವಂದ್ವವನ್ನು ಎದುರಿಸುವಲ್ಲಿ ಅಡಿಗರು ಅನುಭವಿಸಿದ ಸೋಲು, ವೈಫಲ್ಯಗಳ ಅಬಿವ್ಯಕ್ತಿ ಆವೇಗ, ಕವಿತೆಗಳಲ್ಲಿ ಅದು ಒಂದು ರೀತಿಯ ಸಮಶೀತೋಷ್ಣ ವಲಯದಲ್ಲಿಯೇ ತನ್ನ ಪೂರ್ಣತೆಯನ್ನು ಕಂಡುಕೊಳ್ಳುತ್ತವೆ. 'ಭೂಮಿಗೀತ' ಅಡಿಗರ ಪ್ರಾತಿನಿಧಿಕ ಕವಿತೆಯಾಗಿದ್ದಂತೆ ಅವರ ಬೆನ್ನ ಹಿಂದೆಯೇ ಬಂದ 'ದ್ವಂದ್ವ' ಕಣವಿಯವರ ವಿಶಿಷ್ಟ ಮನೋಧರ್ಮವನ್ನು ಸಂಕೇತಿಸುವ ಕವಿತೆಯಾಗಿದೆ. ಈ ಕವಿತೆಗಳಲ್ಲಿ ಇಹ-ಪರ, ಪ್ರಕೃತಿ-ಸಂಸ್ಕೃತಿ, ಮನಸ್ಸು-ಬುದ್ಧಿ ಮೊದಲಾದ ಸಹಜ ದ್ವಂದ್ವಗಳ ಅಭಿವ್ಯಕ್ತಿಯಿದೆ. ಆದರೆ, ಇವು ಯಾವುವೂ ಕವಿಯ ಸ್ವಾಸ್ಥ್ಯವನ್ನು ಕೆಡಿಸುವುದಿಲ್ಲ. ಉದಾಹರಣೆಗೆ, ಕವಿತೆಯ ಮೊದಲ ಭಾಗವನ್ನೇ

ನೋಡಬಹುದು. ಈ ಕವಿತೆಯ ನಾಯಕನಿಗೆ 'ನಕ್ಷತ್ರಲೋಕಕ್ಕೆ ರೈಲುಬಿಡುವ' ಸಾಧ್ಯತೆಗಳೇ ಇಲ್ಲ. ಯಾಕೆಂದರೆ, ಆಕಾಶದ ನಕಾಶವೇ ಅಳಿಸಿಹೋಗಿದೆ. ಇದಕ್ಕೆ ಕಾರಣ ಅವನ ಬೌದ್ಧಿಕ ವ್ಯಾಪಾರಗಳು. ಔದ್ಯೋಗಿಕ ಸಂಸ್ಕೃತಿಯ ಪ್ರಮುಖ ಸಂಕೇತಗಳಲ್ಲೊಂದಾದ 'ಕಾರಖಾನೆ'ಯ ಸಂಕೇತದ ಮೂಲಕ ಈ ಕ್ರಿಯೆಯನ್ನು ಕವಿ ವರ್ಣಿಸುತ್ತಾನೆ:

**ಎಲ್ಲಾ ಬಿಟ್ಟು ತಲೆಯೊಳಗೇ ಏಕೆ ಸುರುವಾಯ್ತೋ**
**ಹಾಳಾದ ಕಾರಖಾನೆ!**
**ನೂರು ಯಂತ್ರದ ಗಾಲಿ ಚೀತ್ಕರಿಸಿ ಓಡುತಿವೆ ಇಲ್ಲಿ ಒಂದೇ ಸವನೆ.**
**ಹಗಲಿರುಳು ಬಿಟ್ಟೂ ಬಿಡದೆ ಹೊಗೆಯುಗುಳಿ**
**ಅಳಿಸಿಬಿಟ್ಟಿದೆ ಅಗೋ ಆಕಾಶದ ನಕಾಶವನ್ನೆ.**

ಪ್ರಯಾಣಕ್ಕೆ ಅನುಕೂಲವೊದಗಿಸಲು 'ದೋಣಿ' 'ಸೇತುವೆ'ಗಳೂ ನಾಶವಾಗಿ ರಹದಾರಿಯೇ ಮುಚ್ಚಿಬಿಟ್ಟಿದೆ. ಆದರೆ, ಇದು ಕವಿತೆಯ ನಾಯಕನಿಗೆ ಹತಾಶೆಯ ವಿಷಯವಲ್ಲ. ಅವನ ಆದ್ಯತೆಗಳೇ ಬೇರೆಯಾಗಿವೆ.

**ಇಲ್ಲಿಯವರಿಗೇ ಮೊದಲು ನೆಲೆಯಿಲ್ಲ.**
**ಅಲ್ಲಿಯವರನು ಕುರಿತು ಯೋಚನೆಗೆಲ್ಲಿ ಅವಕಾಶ ?**
**ಇಂದಿನದೆ ಮುಖ್ಯ ರಾದ್ಧಾಂತವಾಗಿದೆ ನೋಡಿ.**
**ಉಳಿದದ್ದು ಮುಂದೆ ನೋಡೋಣ ಸಾವಕಾಶ.**

ಎಂದು ಹೇಳಿ ಅವನು ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾನೆ.

ಇಂದಿನ ರಾದ್ಧಾಂತವನ್ನು ಕುರಿತು ನಾಯಕ ಕವಿತೆಯ ಮುಂದಿನ ಭಾಗದಲ್ಲಿ ಮಾತನಾಡಬಹುದೆಂದು ನಿರೀಕ್ಷಿಸಿದವನಿಗೆ ಆಶ್ಚರ್ಯ ಕಾದಿದೆ. ಯಾಕೆಂದರೆ, ಅವನೀಗ 'ಒಳಗೆ ಬೆಚ್ಚಗೆ ಕುಳಿತು ಚಹವ ಗುಟುಕರಿಸುತ್ತ'ಕಿಟಕಿಯಲ್ಲಿ ಕುಳಿತು ಶ್ರಾವಣದ ವೈಭವವನ್ನು ಸವಿಯುತ್ತಿದ್ದಾನೆ;

**ಎಲ್ಲ ದಿಕ್ಕುಗಳಿಂದ ತೂರಿಬಿಟ್ಟಂತಿಹುದು ಹಸಿರು ಸರ್ಚ್‌ಲೈಟು.**
**ಕಾಡು ನಾಡೆನ್ನದೆಯೆ ಹುಲ್ಲು ಹಸುರಾಣೆಯುಲಿ ಅದರ ಝೋಕು!**

ಮರದ ಪೊಟರೆಯಿಂದ ಕಿಲಿಕಿಲಿಸುತ್ತಿದ್ದ ಒಂದೇ ಗಿಳಿಮರಿ, ಮಳೆಯಲ್ಲಿ ತೊಯ್ದ ಪಕ್ಷಿಗಳ ಮೌನ, ತೊಟ್ಟಿಲಲ್ಲಿ ಮಗುವಿನ ಎಳೆನಗೆ, ಕಸಕಂಟೆಯಲ್ಲಿ ಕೂಡ ರಸದ ವಿಜಯಧ್ವಜವನ್ನೆತ್ತಿರುವ ಗುಲಾಬಾಕ್ಷಿ, ತುತ್ತೂರಿಯನ್ನೂದುತ್ತಿರುವ ಮದಗುಣಿಕೆ ಎಲ್ಲೆಲ್ಲಿಯೂ ಹಸಿರಿನ ರುಜುವಾತು. 'ರಸೋವೈಸಃ' ಎಂಬ ಆರ್ಷವಾಣಿ ಅವನ ಮನಸ್ಸಿನಲ್ಲಿ ಮೊಳಗುತ್ತದೆ. ಮನಸ್ಸಿನ ತೋಟ ಜೀವರ್ಝುರಿಯಲ್ಲಿ ತೊಳೆದು ಸ್ವಚ್ಛವಾಗಿದೆ. ಪರದ ಚಿಂತೆಯನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು

ಅವನೀಗ 'ಇಹದ ಪರಿಮಳ'ವನ್ನು ಸಂಪೂರ್ಣವಾಗಿ ಸವಿಯುತ್ತಿದ್ದಾನೆ. ಈ ಭಾಗದ ಕೊನೆಯಲ್ಲಿ ಬರುವ 'ಚೆಲುವಯ್ಯ ಚೆಲುವೋ" ಎಂಬ ಅವನ ಉದ್ಗಾರ ಅವನ ರಸಾನುಭೂತಿಯ ಸಂಭ್ರಮದ ಕುರುಹಾಗಿದೆ.

ಆದರೆ ಇದೇ ಅವನ ಶಾಶ್ವತ ಅವಸ್ಥೆಯಲ್ಲ. ರಸಾವೇಶದಿಂದ ಹೊರಗೆ ಬಂದಾಗ ಅವನಿಗೆ ತನ್ನೊಳಗಿನ ಅತೃಪ್ತಿಯ ಅರಿವಾಗುತ್ತದೆ. "ಅದಕಾಗಿ ಇದಕಾಗಿ ಬೆದಕುತಿಹುದಲ್ಲ ಮನ" "ತೊಟ್ಟು ಕುಣಿಯತ್ತಿಹುದು ನಿಮಿಷ ನಿಮಿಷಕ್ಕೊಂದು ಬೇರೆ ಪೋಷಾಕು" ಎಂದು ಅವನು ಕಳವಳಿಸುತ್ತಾನೆ. ಮನಸ್ಸಿನ ಚಾಂಚಲ್ಯದ ಅರಿವಿನೊಡನೆಯೇ ಅವನಿಗೆ ಅದರ ಆದರ್ಶ ಹೀನ ಸ್ವಭಾವದ ಅರಿವೂ ಆಗುತ್ತದೆ. "ಸಾಧನೆ ಸತ್ಯದಾರಾಧನೆಗಳೆಂದರದಕೆ ತಲೆ ಬೇನೆ." ಮೆದುಳನ್ನೂ ನಂಬುವಂತಿಲ್ಲ. ಯಾಕೆಂದರೆ, ಅದು ಈಗ "ಖಾಲಿ ಖಜಾನೆ". ಇಂಥ ಬಂಡವಲವನ್ನಿಟ್ಟುಕೊಂಡು ವರ್ಷಗಟ್ಟಲೆ ಬದುಕಿನ ಕಾರಖಾನೆಯನ್ನು ಹೇಗೆ ನಡೆಸುವುದು ಎಂಬ ಚಿಂತೆ ಅವನನ್ನು ಕಾಡುತ್ತವೆ. ಆದರೆ ಬ್ರಹ್ಮಲಿಖಿತವೇ ಹಾಗಿರುವಾಗ ಅವನು ಅಸಹಾಯ. ಮಾನವನಾಗಿ ತಾನು ಪಡೆದದ್ದೇ ಇಷ್ಟಿರುವಾಗ ತಾನೇನು ಮಾಡಬಲ್ಲ ? ಕಾರಖಾನೆಯಲ್ಲಿ ದುಡಿಯುವ ಕೆಲಸಗಾರರಂತೆ ತಾನೂ ಸಂಪು ಹೂಡಬಹುದು. ಆದರೆ "ಅದರ ಮಾಲಕನು ಅಷ್ಟಕ್ಕೇ ಹಣಿಯುವುದಿಲ್ಲ" ಎನ್ನುವುದೂ ಅವನಿಗೆ ತಿಳಿದಿದೆ.

**ಆದುದಾಗಲಿ. ಕೊನೆಗೆ ಆಗಿಯೇ ಬಿಡಲಿ ಕುಸ್ತಿ**
**ನೋಡೋಣ ಒಂದು ಕೈ;**
**ಗೆದ್ದರೂ ಸೈ,**
**ಗೆದೆಯದಿದ್ದರೂ ಸೈ.**

ಎಂಬ ಅವನ ನಿರ್ಧಾರದ ಹಿಂದೆ ಬಲವಿಲ್ಲ. ಅದೊಂದು ವೀರಮುದ್ರೆಯಷ್ಟೇ. ಅದರಲ್ಲಿ

**ನಚೈತದ್ವಿದ್ಮ: ಕತರನ್ನೋ ಗರೀಯೋ**
**ಯದ್ವಾಜಯೇಮ ಯದಿ ವಾ ನ ಜಯೇಯುಃ**

ಎಂಬ ಅರ್ಜುನನ ಮಾತಿನಲ್ಲಿಯ ಆಳವಿಲ್ಲ. ಅಡಿಗರ 'ಭೂಮಿಗೀತ' ಮಾನವನ ದುರಂತದ ಒಂದು ಮುಖವನ್ನು ತೋರಿಸಿದರೆ ಕಣವಿಯವರ ಕವಿತೆ ಅದರ ಇನ್ನೊಂದು ಮುಖಕ್ಕೆ ಕನ್ನಡಿ ಹಿಡಿಯುತ್ತದೆ. ನೆಲದಲ್ಲಿ ಬೇರುಬಿಟ್ಟ ಮನುಷ್ಯ ನಕ್ಷತ್ರಲೋಕದ ವ್ಯರ್ಥ ಬಯಕೆಯನ್ನಿಟ್ಟುಕೊಳ್ಳುವುದು ಒಂದು ದುರಂತವಾದರೆ, ಆ ಲೋಕದ ಹಂಗು ಬಿಟ್ಟಷ್ಟೂ ನೆಲದ ಹಂಗನ್ನು ಹರಿಯುವುದೂ ಕೂಡ ಅವನಿಗಿರುವ ಶಕ್ತಿ, ಸಾಮರ್ಥ್ಯಗಳಲ್ಲಿ ಎಷ್ಟು ಕಷ್ಟವಾಗಬಲ್ಲದು ಎನ್ನುವುದು ಇನ್ನೊಂದು ದುರಂತ.

**ಜಿ.ಎಸ್. ಆಮೂರ**

# ೧೬. ದೀಪಧಾರಿ

೧

ಒಂದು... ಎರಡು... ಮೂರು...
ಒಂದೊಂದು ಹೂ ಹಗುರು
ಮಗುವಿಡುವ ಮೊಟ್ಟಮೊದಲಿನ ಪುಟ್ಟ ಹೆಜ್ಜೆಗಳನೆಣಿಸಿದನು
ಸೃಷ್ಟಿಕರ್ತ!
ದಟ್ಟಡಿಯನಿಡುತಲಿವ ನಡೆಗಲಿತುದೇ ಒಂದು
ಶುಭ ಮುಹೂರ್ತ.
ಭೂಮಂಡಲವ ನೆತ್ತಿಯಲಿ ಹೊತ್ತು ಮೇಲೆತ್ತುವೊಲು
ಏಳುವವನನಾಮತ್ತು;
ಜೋಲಿ ಹೊಡೆಯುತ ತಂತಿ ಮೇಲೆ ಓಡುವ, ನಡೆವ
ವಿವಿಧ ಕಸರತ್ತು;
ಅದರ ಗತ್ತುಗಳೆಲ್ಲ ಇವನಿಗೂ ಗೊತ್ತು!
ಬಂದು ನೋಡಿರಿ ಒಮ್ಮೆ, ಗರ್ದಿಗಮ್ಮತ್ತು.

೨

ಪದವಿಟ್ಟುದೇ ಭಂಗಿ
ನಡೆದದ್ದೆ ದಾರಿ,
ಕಣ್ಣು ತಪ್ಪಿದರಿವನು ವಿಶ್ವಸಂಚಾರಿ!
ಹಿಡಿದದ್ದೆ ಹಟ
ಇವನು ನುಡಿದದ್ದೆ ವೇದ,
ತಳಕಿತ್ತು ಓಡುವವು ಎಲ್ಲ ವಾಗ್ವಾದ
ಎದ್ದನೊ,-

ತೊತ್ತಳಂದುಳಿವ ಯಜ್ಞದ ಕುದುರೆ!
ಬಿದ್ದನೋ-
ಇವಗಿಲ್ಲ ಅದರ ಪರಿವೆ,
ಎದ್ದೆದ್ದು ಬಿದ್ದು ಮುನ್ನುಗ್ಗಿ ನಡೆಯುವ ಹಿಗ್ಗು
ಸಾಹಸದ ದಂಡಯಾತ್ರೆ.
ನಡೆಯುತಿಗೆ ಈಗಿನಿಂದಲೇ ಮುಂದಿನಾವ ಹೋರಾಟಕ್ಕೊ ಈ ಸಿದ್ಧತೆ.

೩
ಇವನ ಅಧ್ಯಕ್ಷತೆಯ ಕೆಳಗೆ ಜರುಗಲು ಬೇಕು
ಈ ಮನೆಯ ಪ್ರತಿಯೊಂದು ಕೆಲಸ ಕಾರ್ಯ
ತಪ್ಪಿತೋ-
ಹಿಂದುಮುಂದೂ ನೋಡಿದವನು ಊದಿಯೆ ಬಿಡುವ
ಸಮರ ತೂರ್‍ಯ!
ನಮಗಿಲ್ಲ ಇವನೆದುರು ನಿಂತು ನುಡಿಯುವ ಧೈರ್‍ಯ;
ಬೆಳಗಿನಿಂದಲು ಸಂಜೆವರೆಗು ಒಂದೇ ಸವನೆ ಉರಿವ ಸೂರ್‍ಯ!
ಆಡಿದರೆ ಆಡಿಯೇ ಆಡುವನು-ಮನಸುಖರಾಯ
(ನಮೋ ವಿಶ್ವೇಶ್ವರಾಯ)
ಕಲ್ಲೊ ಮುಳ್ಳೋ-ಇವನು ಒಂದನೂ ಲೆಕ್ಕಿಸನು
ವಜ್ರಕಾಯ!
(ಇತ್ತೀಚೆ ಬೇರೆ ಕಲಿತಿಹನು
ಕಣ್ಣನಲಿ ನೀರಿಲ್ಲದೆಯೆ ಅಳುವ ಹೊಸ ಉಪಾಯ)
ಮರುಗಳಿಗೆ ಶುಭಗಳಿಗೆ -ಏನು ಹೊಳೆವುದೊ ಏನೊ
ಏನಿಳಿವುದೋ ಚಂದ್ರಲೋಕದಿಂದ,
ಇಷ್ಟಗಲ ಅರಳುವುದು ದುಂಡು ಮಲ್ಲಿಗೆ ನಗೆಯು
ಹೊಮ್ಮಿದೊಲು ಈ ಬಾಳಿನೆಲ್ಲ ಚೆಂದ.

೪
ಎತ್ತಲೋ ಹತ್ತು ದಿಕ್ಕಿಗು ಕೈಯನೆತ್ತುವನು
ಕಾಣದುದ ಕೈಮಾಡಿ ಕರೆಯುತಿಹನು
ಇವನ ಕಪ್ಪನೆ ಕಣ್ಣಗಿದಿರು ಕುಣಿಯುವ ನವಿಲು
ಯಾವುದೋ? ಬೆರಳೆತ್ತಿ ತೋರಿಸುವನು.

ಬಾನ ಮರೆಗಿರುವ ಚಂದ್ರನ ಹುಡುಕಿ ತೆಗೆಯುವನು
ಒಂದೆ ನೋಟಕೆ ಚುಕ್ಕಿ ಜಾಲಾಡಿಸುವನು.
ಹೂವ ಕಂಡರೆ ಹಿಗ್ಗಿ ಮೂಸುವನು ಈ ರಸಿಕ
ಬಾನುಲಿಗೆ ತಾನೆ ಹೊಸ ಹಾಡು ಕಲಿಸುವನು.

ಬಿಸಿಲ ಕೋಲನು ಹಿಡಿದು ಮೇಲೇರ ಬಯಸುವನು
ಮಣ್ಣನಲಿ ಹೊನ್ನ ಕಣವಾರಿಸುವನು;
ಮೇಲೆ ಹಾರುವ ಹಕ್ಕಿ ಪುಚ್ಚಗಳನೆಣಿಸುವನು
ಮೌನಗಾಳಿಯ ಜಡಿದು ಮಾತಾಡಿಸುವನು!

ಹಗಲು ಸತತೋದ್ಯೋಗಿ, ಇರುಳು ಕಿಂದರಜೋಗಿ
ನಿದ್ದೆ ಎಲ್ಲೋ ಯಕ್ಷಲೋಕ ಸಂಚಾರಿ,
ಇವನೆಳೆಯ ಕಂಗಳಲಿ ಹೊಳೆವ ತಿಂಗಳ ಬೆಳಕು
ದಿನದ ದಾರಿಯೊಳೆಮಗೆ ದೀಪಧಾರಿ.

'ದೀಪಧಾರಿ' (೧೯೫೬) ಕವನ ಸಂಗ್ರಹದ ಶೀರ್ಷಿಕೆಯೂ ಆಗಿರುವ ಇದು ಪ್ರತಿ ಓದುಗನ ಮನಸ್ಸಿನಲ್ಲೂ ಒಂದು ಪುಟ್ಟ ಮಗುವನ್ನೇ ಹುಟ್ಟು ಹಾಕುವ ಪೂರ್ಣ ಪ್ರಮಾಣದ ಕವನ ದೊಡ್ಡವರಿಗೂ ಕೂಡ ದಾರಿ ಬೆಳಕೊಂದು ಈ ಕವನದಲ್ಲಿ ತೆರೆದುಕೊಂಡಿದೆ. ಈ ಕವಿತೆಯನ್ನು ಯಾವ ಮಗ್ಗುಲಿನಿಂದ ಓದಿದರೂ ಮಾತಿನಾಚೆಯ ಹಿತಾನುಭವವೊಂದು ಸಿಗುತ್ತದೆ, -ಕಬ್ಬನ್ನು ಯಾವ ಭಾಗದಿಂದ ಜಗಿದರೂ ಸಿಹಿಸುಖದ ಅನುಭವವಾಗುವಂತೆ!...

ಕರುಳವಾತ್ಸಲ್ಯ ಕವಲೊಡೆಯುತ್ತ, ಭಿನ್ನ ಭಿನ್ನ ಅನುಭವಗಳನ್ನು ಹುಟ್ಟು ಹಾಕುತ್ತಾ ರೂಪಕಗಳಿಂದ ಕಟ್ಟಿಹಾಕುತ್ತಾ ಸಹೃದಯನನ್ನು ಮಂತ್ರಮುಗ್ಧಗೊಳಿಸುವ ಮೋಡಿ ಈ ಕವನದ್ದಾಗಿದೆ. ಆರಂಭದಲ್ಲೇ ಹೇಳಿದ ಹಾಗೆ, ಸಹೃದಯ ಓದುಗ ಈ ಕವಿತೆಯ ಒಳಗಡೆ ಇಳಿಯುತ್ತಿದ್ದಂತೆ ತಾನೇ ಮಗುವಾಗಿಬಿಡುತ್ತಾನೆ. ತನ್ನ ಬಾಲಲೀಲೆಯ ನೆನಪನ್ನು ಮೊಗೆಯಲು ಉದ್ಯುಕ್ತನಾಗುವಂತೆ ಅವನನ್ನು ಪ್ರೇರೇಪಿಸುವ ಈ ಕವನದ ಪರಿ ವಿಶೇಷವಾದದ್ದು.

'ದೀಪಧಾರಿ' ಕುರಿತು ಇನ್ನಷ್ಟು ಮಾತನಾಡುವ ಮೊದಲು ಇದೇ ಕವಿಯ 'ಮಧುಚಂದ್ರ' ಸಂಕಲನದೊಳಗಿನ (೧೯೫೪) 'ಮಗುವಿಗೆ' ಕವನವನ್ನು ನೆನಪು ಮಾಡಿಕೊಡಬೇಕೆನಿಸುತ್ತದೆ. ಆ ಕವಿತೆಯಲ್ಲೂ ಕೂಡ ಕಣವಿಯವರು ಹಸುಳೆಯ ಬಾಲಲೀಲೆಗಳನ್ನು ಬಿಡಿಬಿಡಿಯಾಗಿ ಬಣ್ಣಿಸಿದ್ದಾರೆ. ಕೆಲವು ಸಾಲುಗಳನ್ನು ನೋಡಬಹುದು;

ಗಾಳಿಗಡಲಿನಲ್ಲಿ ಹುಟ್ಟು ಕಡೆಯುತಿರುವ ಕೈಗಳು!
ಮಲಗಿದಲ್ಲೆ ಬೈಸಿಕಲ್ಲು ತುಳಿವ ಪುಟ್ಟ ಕಾಲ್ಗಳು
ಇಷ್ಟು ಅಗಲ ಬಾಯಿ ತೆರೆದು ಆಕಳಿಸುವ ಏಗಳು
ಒಂದೆ ಸಮನೆ ನೋಡುತಿರುವೆ ನೋಯವೇನು ಕಂಗಳು?

ಆ ಕಂದ, 'ದೀಪಧಾರಿ'ಯಲ್ಲಿ ಬರುವ - ಈ ಮಗುವಿಗಿಂತ ಇನ್ನೂ ಚಿಕ್ಕದ್ದು. ಅದರ ಬಾಲಲೀಲೆಗಳಿಗೆ ಮನಸೋತ ಕವಿ ನಿದ್ದೆಯಲ್ಲೂ ನಗುವ ಆ ಕಂದನ ರೀತಿಯನ್ನು ನಮ್ಮ 'ಬುದ್ಧಿ ಯಾಚೆಗಿನ ಮಾತು' ಎಂಬುದಾಗಿ ಗುರುತಿಸಿದ್ದು ಮತ್ತು ಆ ಕಂದನ ಬಾಲ್ಯ-ಚಿತ್ರ-ಲೀಲೆಗಳು ಹಿರಿಯರಾದ ನಮ್ಮ ನೆನಪಿನ ವಿಶೇಷ ಸಂಚಿಕೆಯೆಂದು ಗುರುತಿಸಿದ್ದು ಯಥೋಚಿತವಾಗಿದೆ.

'ದೀಪಧಾರಿ' ಕವನದ ಮಗು 'ಮಲಗಿದಲ್ಲೇ ಬೈಸಿಕಲ್ಲು ತುಳಿ'ಯುವ ವಯಸ್ಸಿನದಲ್ಲ ಎಂಬುದಕ್ಕೆ ಈ ಕೆಳಗಿನ ಸಾಲುಗಳು ಸಾಕ್ಷಿ:

ಒಂದು... ಎರಡು... ಮೂರು...
ಒಂದೊಂದು ಹೂ ಹಗುರು
ಮಗುವಿಡುವ ಮೊಟ್ಟಮೊದಲಿನ ಪುಟ್ಟ ಹೆಜ್ಜೆಗಳನೆಣಿಸಿದನು
ಸೃಷ್ಟಿಕರ್ತ

ಅಂದರೆ 'ದೀಪಧಾರಿ'ಯ ಮಗು ಆ ಕಂದನಿಗಿಂತ ಕನಿಷ್ಠ ಆರೆಂಟು ತಿಂಗಳಿಗೆ ದೊಡ್ಡದು. ದಟ್ಟಡಿಯನಿಡುತ ನಡೆದಾಡುವುದನ್ನು ಕಲಿತುಕೊಳ್ಳಲು ಉದ್ಯುಕ್ತನಾಗುವ ವಯಸ್ಸು. ಬೀಳುತ, ಏಳುತ ಅದು ಇಡುವ ಮೊದಲ ಹೆಜ್ಜೆಯನ್ನು ಕವಿ ಬಾಳಪಥದ 'ಶುಭ ಮುಹೂರ್ತ' ಎಂದು ಬಣ್ಣಿಸಿದ್ದಾರೆ. ಯಾವದೇ ಮನೆಯ ಹಿರಿಯ ಜೀವಗಳು ಪ್ರತ್ಯಕ್ಷ ಅನುಭವಿಸಿ ಸಂತೋಷಪಡಬಲ್ಲ ಸಂದರ್ಭಗಳಿವು. ಈ ಸಂದರ್ಭವನ್ನು ಕವಿ ಕಣವಿಯವರು ಕಲ್ಪನೆಯ ಆಚೆಗೂ ವಿಸ್ತರಿಸಿದ್ದು ವಿಶೇಷವಾಗಿದೆ.

'ಸೃಷ್ಟಿಕರ್ತ' ಎಂಬ ಪದ ಈ ಕವನದಲ್ಲಿ ಎರಡು ಅರ್ಥದಲ್ಲಿ ಬಳಕೆಯಾಗಿರುವುದನ್ನು ಗಮನಿಸಬೇಕು. ಲೌಕಿಕ ದೃಷ್ಟಿಯಲ್ಲಿ 'ತಂದೆ'ಯಾದರೆ, ಇನ್ನೊಂದರ್ಥದಲ್ಲಿ ಸೃಷ್ಟಿಕರ್ತನಾದ ದೇವರು, ಮಗು ಮೊದಲ ಹೆಜ್ಜೆಯನ್ನು ಭಾರವಾಗಿ ಎತ್ತಿ ಇಡುವ ಸನ್ನಿವೇಶವನ್ನು ಕವಿ ಇಲ್ಲಿ ಹೂಬೇಹೂಬಾಗಿ ಚಿತ್ರಿಸಿದ್ದಾರೆ. ಮಗುವಿನ ಮುಂದಣ ಬೆಳವಣಿಗೆಗೆ ಮುಹೂರ್ತ ರೂಪದಲ್ಲಿರುವ ದಿಟ್ಟ ಹೆಜ್ಜೆಯ ಕಡೆ ಒತ್ತು ನೀಡಿದ್ದನ್ನು ಮರೆಯುವಂತಿಲ್ಲ. ವಿಸ್ತಾರವಾದ ಜಗತ್ತಿನಲ್ಲಿ ಅನಂತರದ ಹೆಜ್ಜೆಗಳೆಷ್ಟೋ! ಇಡೀ ಭೂಮಂಡಲದ ಭಾರವನ್ನು ನೆತ್ತಿಯಲಿ ಹೊತ್ತು ಮೇಲೆತ್ತುವ ಮೊದಲ ಹೆಜ್ಜೆಯೆಂಬಂತೆ ವರ್ಣಿಸಲಾಗಿದೆ. ತಂತಿಯ ಮೇಲೆ ಓಡುವ-ನಡೆವ-ಜೋಲಿ ಹೊಡೆವ ಕರಸತ್ತೆಂಬಂತೆ ಕವಿಯ ಸೂಕ್ಷ್ಮ ಕಣ್ಣು ಅದನ್ನು ಗುರುತಿಸಿದೆ.

ಪ್ರಾಸ, ಲಯ, ಪ್ರತಿಮಾಸೃಷ್ಟಿ, ಕಾವ್ಯಮಯ ಬುದ್ಧಿಗುಣ, ಭಾವನೆ, ಪದಪವಣಿಕೆ-ಇವು ಚೆನ್ನವೀರಕಣವಿಯರ ಕವಿತೆಗಳ ಷಡ್ಗುಣಗಳು ಎಂಬುದಾಗಿ ಹಿರಿಯ ವಿದ್ವಾಂಸರಾದ ಗೌರೀಶ

ಕಾಯ್ಕಿಣಿಯವರು ಬಹು ಹಿಂದೆಯೇ ಗುರುತಿಸಿದ್ದಾರೆ. ('ಕಣವಿಯವರ ಕಾವ್ಯದೃಷ್ಟಿ') 'ದೀಪಧಾರಿ'ಯಲ್ಲೂ ಕೂಡ ಈ ಪ್ರಾಸ, ಲಯ, ಪದಪವಣಿಕೆ, ಪ್ರತಿಮಾಸೃಷ್ಟಿ ಮತ್ತು ಭಾವನೆಗಳೆಲ್ಲವೂ ಮೇಳೈಸಿರುವುದನ್ನು ಗುರುತಿಸಬಹುದಾಗಿದೆ. ಒಂದು ಸಹಜ ಮೈಗುಣವೆಂಬಂತೆ ಕವಿತೆಯ ಉದ್ದಕ್ಕೂ ಪ್ರಾಸ ತಾನೇ ತಾನಾಗಿ ವಿಜೃಂಭಿಸಿದೆ. ಸೃಷ್ಟಿಕರ್ತ; ಶುಭಮುಹೂರ್ತ. ಅನಾಮತ್ತು; ಕಸರತ್ತು. ಗತ್ತು; ಗರ್ದಿಗಮ್ಮತ್ತು. ಎದ್ದನೊ; ಬಿದ್ದನೋ. ಕಾರ್ಯ;ತೂರ್ಯ, ಧೈರ್ಯ; ಸೂರ್ಯ, ಮನಸುಖರಾಯ; ವಿಘ್ನೇಶ್ವರಾಯ, ಸಂಚಾರಿ-ದೀಪಧಾರಿ- ಹೀಗೆ ಇನ್ನೂ ಕೆಲವಷ್ಟು ಪ್ರಾಸಬದ್ಧ ಪದಜೋಡಣೆಗಳನ್ನು ಉದಾಹರಿಸಬಹುದು.

ಈ ಕವಿತೆಯ ಎರಡನೆಯ ನುಡಿಯಲ್ಲಿ ಮಗು ನಿಂತಲ್ಲಿ ನಿಲ್ಲದ, ಹಿಡಿದ ಹಟ ಬಿಡದ, ತುಳಿತುಳಿದು ಮಟ್ಟ ಹಾಕುವ, ಬಿದ್ದೆದ್ದು ಮುನ್ನುಗ್ಗಿ ನಡೆವ ಸುಂದರ ಚಿತ್ರಣಗಳನ್ನು ನೀಡಲಾಗಿದೆ.

**ಎದ್ದನೋ,-**
**ತೊತ್ತಳಂದುಳಿವ ಯಜ್ಞದ ಕುದುರೆ!...**
**ಬಿದ್ದನೋ,-**
**ಇವಗಿಲ್ಲ ಆದರ ಪರಿವೆ.**
**ಎದ್ದೆದ್ದು ಬಿದ್ದು ಮುನ್ನುಗ್ಗಿ ನಡೆಯುವ ಹಿಗ್ಗು**
**ಸಾಹಸದ ದಂಡಯಾತ್ರೆ-**
**ನಡೆಯುತಿದೆ ಈಗಿನಿಂದಲೆ ಮುಂದಿನಾವ ಹೋರಾಟಕ್ಕೋ**
**ಈ ಸಿದ್ಧತೆ!**

'ಸಾಹಸದ ದಂಡಯಾತ್ರೆ ನಡೆಯುತಿದೆ ಈಗಿನಿಂದಲೇ' ಎಂಬಲ್ಲಿಗೆ ಆ ನುಡಿ ಮುಕ್ತಾಯಗೊಂಡರೂ ಸಾಕಿತ್ತು; ಮುಂದಿನ ಭಾಗ ಬಿಟ್ಟಿದ್ದರೂ ಒಟ್ಟಂದದ ಭಾವಕ್ಕೆ ಚ್ಯುತಿಯೇನು ಆಗುತ್ತಿರಲಿಲ್ಲ. ಯಾಕೆಂದರೆ, ಎರಡನೆಯ ಈ ನುಡಿಯ ನಡಿಗೆಯೇ ಪರಿಣಾಮೈಕ್ಯತೆಯ ಅಂಥ ಒಂದು ಒಳಸಂಬಂಧದಿಂದ ಹೆಣೆಯಲ್ಪಟ್ಟು, ವಿವರಣೆಯ ಹಂಗಿಲ್ಲದೆಯೂ ಒಳಗೆ ಇಳಿಯಬಲ್ಲ ಭಾವನಿಬಿಡತೆಯಿಂದ ಕೂಡಿದ್ದಾಗಿದೆ.

ಮಕ್ಕಳು 'ಹಟ'ವನ್ನು ಗುತ್ತಿಗೆ ಹಿಡಿದವರು. ಮನೆಯ ಹಿರಿಯರನ್ನು ತಮ್ಮ ಹಟಬುದ್ಧಿಯಿಂದ ಸೋಲಿಸಿ ಇನ್ನಷ್ಟು ಪ್ರೀತಿಯನ್ನು, ಬಿಟ್ಟಿರಲಾಗದ ಭಾವಸಂಬಂಧವನ್ನು ಹೆಣೆಯುವವರು. ಎಷ್ಟು ಮಾತಾಡಿದರೂ ದಣಿಯದವರು. ತಮ್ಮ ಮನಸ್ಸಿಗೆ ಇಷ್ಟವಾದುದನ್ನು ಮಾಡಿಯೇ ತೀರುವವರು. ಕಣ್ಣಲ್ಲಿ ನೀರಿರಲಿ, ಇಲ್ಲದಿರಲಿ ಅತ್ತು ಚಂಡಿ ಹಿಡಿದು ಬೇಕಾದುದನ್ನು ಪಡಕೊಳ್ಳುವವರು. ಅತ್ತ ಮರುಗಳಿಗೆಯೇ ನಕ್ಕು ಬೆಳಕು ಚೆಲ್ಲುವವರು. ಮನೆಯಲ್ಲಿ ನಡೆಯುವ ಹಿರಿಯರ ಮಾತುಕತೆ ಅರ್ಥವಾಗಲಿ ಬಿಡಲಿ, ಮಧ್ಯೆ ಬಾಯಿ ಹಾಕುವವರೇ ಮತ್ತು ಆ ಸ್ಥಳದಲ್ಲಿ ತಮ್ಮ ಪ್ರಾಮುಖ್ಯತೆಯನ್ನು ದಾಖಲಿಸುವವರೇ! ಈ ಎಲ್ಲ ಸಂಗತಿಗಳನ್ನು ಕವಿ ಕಣವಿಯವರು ಅತ್ಯಂತ ಮನಂಬುಗುವಂತೆ 'ದೀಪಧಾರಿ'ಯ ಮೂರನೇ ನುಡಿಯಲ್ಲಿ ಹಿಡಿದಿಟ್ಟಿದ್ದಾರೆ.

ನಾಲ್ಕನೆಯ ನುಡಿ ಪುಟ್ಟ ಮಗು ಜಗತ್ತನ್ನು ಅಳೆಯುವ, ತಿಳಿಯುವ ಮತ್ತು ನಿಸರ್ಗದ ಬದಲಾವಣೆಗಳೊಂದಿಗೆ ತನ್ನ ಸಂಬಂಧವನ್ನು ಸ್ಥಾಪಿಸುವ ವಿಚಾರಗಳ ಬಗ್ಗೆ ಮಾತನಾಡುತ್ತದೆ.

**ಎತ್ತಲೋ ಹತ್ತು ದಿಕ್ಕಿಗು ಕೈಯನೆತ್ತುವನು**
**ಕಾಣದುದ ಕೈ ಮಾಡಿ ಕರೆಯುತಿಹನು;**
**ಇವನ ಕಪ್ಪನೆ ಕಣ್ಣಿಗಿದುರು ಕುಣಿಯುವ ನವಿಲು**
**ಯಾವುದೋ ಬೆರಳೆತ್ತಿ ತೋರಿಸುವನು.**
**ಬಾನಮರೆಗಿರುವ ಚಂದ್ರನ ಹುಡುಕಿ ತೆಗೆಯುವನು**
**ಒಂದೆ ನೋಟಕೆ ಚಿಕ್ಕೆ ಜಾಲಾಡಿಸುವನು**
**ಹೂವ ಕಂಡರೆ ಹಿಗ್ಗಿ ಮೂಸುವನು ಈ ರಸಿಕ -**
**ಬಾನುಲಿಗೆ ತಾನೆ ಹೊಸ ಹಾಡು ಕಲಿಸುವನು**

ಇವೆಲ್ಲವು ಮಗು ತನ್ನ ಎದುರಿಗಿರುವ ಜಗತ್ತಿನೊಂದಿಗೆ ತಾನು ಸಂವಾದಿಸುವ, ಅಲ್ಲಿನ ಕ್ರಿಯೆಗಳಿಗೆ ಪ್ರತಿಕ್ರಿಯಿಸುವ ಸ್ವಚ್ಛ-ಸ್ವತಂತ್ರ ಮನಃಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತಹ ಸಾಲುಗಳು.

ಮಗು ಮಣ್ಣಿನಲಿ ಆಡುವ ರೀತಿ ಚಿನ್ನದ ಕಣ ಆರಿಸುವ ಪರಿಯಂತೆ ಕವಿಗೆ ಕಂಡಿದೆ. ನೆಟ್ಟ ದಿಟ್ಟಿಯಿಟ್ಟು ಆಕಾಶವನ್ನು ನೋಡುವಲ್ಲಿ ಹಾರುವ ಹಕ್ಕಿಯ ಪುಚ್ಛಗಳನ್ನೆಣಿಸುತ್ತಿದೆಯೇ ಎಂಬ ಭಾವನೆ ಮೂಡಿಸುತ್ತದೆ. ನಿಲ್ಲದ ಅದರ ತೊದಲು ಸಂವಾದವನ್ನು ಕಂಡಾಗ ಮೌನ ಗಾಳಿಯ ಜಡಿದು ಮಾತಾಡಿಸುತ್ತಿದೆಯೆ ಎಂಬ ಕಲ್ಪನೆ ಕುಡಿಯೊಡೆಯುತ್ತದೆ. ಹೀಗೆ ಹಗಲುದ್ದ ಸತತೋದ್ಯೋಗಿಯಾಗಿರುವ ಮಗುವನ್ನು ಕವಿ ಇರುಳು 'ಕಿಂದರಜೋಗಿ' ಎಂದು ಕರೆದಿದ್ದಾರೆ ಮತ್ತು ನಿದ್ದೆಯಲ್ಲಿ ಯಕ್ಷಲೋಕ ಸಂಚಾರಿಯಂತೆ ತೋರುವ ಈ ಮಗು ದಿನದ ದಾರಿಯೊಳಗೆ ಹಿರಿಯರಾದ ನಮಗೆಲ್ಲ 'ದಾರಿದೀಪ' ಅನ್ನುವ ತೀರ್ಮಾನಕ್ಕೆ ಬರುತ್ತಾರೆ.

ಹುಟ್ಟಿದ ಮಗುವಿನ ಹಂತ ಹಂತದ ಬೆಳವಣಿಗೆಯನ್ನು ಗಮನಿಸುವುದೇ ಒಂದು ಸುಂದರ ಅನುಭವ. ಹಸುಳೆಯ ಲೀಲೆಗಳು, ಮಗುವಿನ ಆಟಪಾಠಗಳು, ಅನಂತರದ ಹಾಲುಹಲ್ಲಿನ ಕಾಲದಲ್ಲಿ ಅದು ನಡೆಸುವ ತುಂಟಾಟಗಳು ಹೆತ್ತವರ ಪಾಲಿಗೆ ಪೂರ್ಣಾನುಭವದ ಸುಖವನ್ನು ನೀಡುತ್ತವೆ. ಏಳು-ಬೀಳುಗಳ ಮೂಲಕ, ಹಿರಿಯರ ಗಮನ ಸೆಳೆಯುವರೆ ಹೂಡುವ ತಂತ್ರೋಪಾಯಗಳ ಮೂಲಕ, ಹೊರಜಗತ್ತಿನ ಸಂಪರ್ಕಕ್ಕಾಗಿ ಹಸಿದವರಂತೆ ಪ್ರತಿಕ್ರಿಯಿಸುವ ಮೂಲಕ-ಮಕ್ಕಳು ಇಡೀ ಮನೆಯನ್ನು ಜೀವಂತವಾಗಿಡುವವರು. ಅವರೊಳಗಿನ ಮುಗ್ಧತೆ, ನಿರ್ದುಷ್ಟಭಾವದ ನೇರನುಡಿ, ಬೆಚ್ಚಿಬೀಳಿಸುವಂತಹ ಕೆಲವು ಪ್ರಶ್ನೆಗಳು ನಮ್ಮನ್ನೇ ನಾವು ನೋಡಿಕೊಳ್ಳುವಂತೆ ತಿದ್ದಿಕೊಳ್ಳುವಂತೆ ಮಾಡುತ್ತವೆ. ಆದ್ದರಿಂದ ಮಗು ಕಣವಿಯವರ ಕವಿ ಮನಸ್ಸಿಗೆ 'ದೀಪಧಾರಿ'ಯಾಗಿ ಕಂಡದ್ದು ಯಥಾಯೋಗ್ಯವೇ ಆಗಿದೆ.

ವಿಷ್ಣು ನಾಯ್ಕ

# ೧೭. ಮಣ್ಣಿನ ಮೆರವಣಿಗೆ

೧

ತಿರುಗುತ್ತಿದೆ, ಎಂದೋ ಸಿಡಿದಾರಿದ
ಅಗ್ನಿಯ ಪಿಂಡ;
ಆರಿದೆಯೆಂದವರಾರೊ, ಇನ್ನೂ ನಿಗಿ ನಿಗಿ ಉರಿಯುತ್ತಿದೆ
ಅದರೆದೆಯಾಳದ ಕುಂಡ!
ಹರಿಯುತ್ತಿವೆ ಬೆಂಕಿಯ ಹೊಳೆ
ತಣ್ಣನೆ ಕಡಲೊಳಗೆ;
ಹೊಗೆಯಾಡುತ್ತಿದೆ ಸುಮ್ಮನೆ ನುಣ್ಣನೆ ಬಾನೊಳಗೆ.
ಬಿದ್ದಿವೆ
ಒಡ ಮುರಿದೆದ್ದಿವೆ ಗಿರಿ ಗಹ್ವರ-
ಯುಗ ಯುಗಗಳ ನೋವೆ!
ದರಿಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ.

ಕುದಿಯುವ ಆ ಬಸಿರಿನ ಆವುದೊ ರಸ ಹೀರಿ,
ಚಿಮ್ಮಿವೆ
ದಿನದಿನವೂ ಹೊಮ್ಮಿವೆ ಹಸುರಾಗಿ
ಲಕ್ಷಾಂತರ ಆಶೆ!
ದಿಕ್ಕು ದಿಕ್ಕುಗಳ ಗೋಪುರವೇರಿ ದಿಟ್ಟಿಸಿವೆ;
ಕಣ್ಣಿ ಕ್ಷಿತಿಜದ ಆಚೆ ನೂರು ಗೋಲಗಳಾಡಿ
ಅದನಿದನು ಇದನದನು ಹಿಡಿದು ಎಳೆದಾಡಿ,
ಕೂಡಿ ಕುಣಿದಾಡಿ,

ಕೊನೆಯಿರದ ವರ್ತುಲಕೆ ಒಯ್ದು ಮುಟ್ಟಿಸಿವೆ!
ಸಂಜೆ ಮುಂಜಾವುಗಳ ಸೂರ್ಯ ಬಿಂಬದ ಸುತ್ತು-
ಸದ್ದುಗದ್ದಲವಿಲ್ಲದೆದ್ದು ಬಾನಂಗಳಕೆ ಬರುವ ಚಂದ್ರನ
ಹೆಗಲಮೇಲೆ ಹೊತ್ತು
ಬಾನ ಕಣದಲಿ ಕೋಟಿ ಚಿಕ್ಕೆ ಹಂತಿಯ ಕಟ್ಟಿ
ದಿವದ ಬದುಕನು ಒಕ್ಕಿ ರಾಶಿಮಾಡಿ
ಬೆಳಕು ಚಕ್ರಾಕಾರ ತಿರುಗುತ್ತಿದೆ!

೨
ಮಣ್ಣ ಮನೆಯೊಳು ಮಗುವು ಕಣ್ಣು ತೆರೆದಿತ್ತು!
ಬೆಳಕಿಂಡಿಯಿಂದ ಪಡಸಾಲೆಯಲಿ, ಮೂಲೆಯಲಿ
ಕೋಲಾಡಿಸಿತ್ತೆಳವಿಸಿಲು ;
('ದೇವರ ಬಂಗಾರದ ಕುದುರೆ')
ಕಿಟಕಿಯಲಿ ಕೈಚಾಚಿ ಕರೆದ ಚಂದ್ರ.
(ಚೆಂದಪ್ಪ ಚೆಂದಪ್ಪ ಚೆಲುವ, ಚುಂಗಬಿಟಗೊಂಡು ಬರುವ)
ಚಿಕ್ಕೆ ನಕ್ಕವು ಬಾನ ಕನ್ನಡಿಯ ತುಣುಕಿನಲಿ
ಬಾನ ಬೀದಿಗೆ ನೂರುಬೆಳ್ಳಿಯ ರಥ!
ಅಕ್ಕಪಕ್ಕದ ಮರದ ಹೂ ತುರಾಯಿಯ ಮೇಲೆ
ಹಾಡಿನುಯ್ಯಾಲೆ-
"ಅಕ್ಕ ಓ ಚಿಕ್ಕವ್ವಾ"
ಸಾಲೆ ಕೋಣೆಯಲಂದು ಮಗ್ಗಿ ಒಪ್ಪಿಸುವಾಗ
ಮೇಜ ಮೇಲೆಯೆ ಇತ್ತು ಪೃಥ್ವಿಗೋಳ.
ಗೂಡಿನಲಿ ಕುಳಿತು ಗುಟುಕರಿಸಿತ್ತು ಪಾರಿವಾಳ,
ಕಿಟಕಿಯಾಚೆಗೆ ದೂರ ಬೆಟ್ಟಬಯಲುಗಳಲ್ಲಿ
ಮುಂಗಾರು ಮಳೆ ಬೆಳೆದ ಭಾವ ಮೇಳ!
ಮಣ್ಣನೆದೆಯೊಳು ಸ್ನೇಹವಂಕುರಿಸಿ ಬೆಳೆದು
ಬೆಳುದಿಂಗಳಿನ ಹೊನಲೆ ಎಲ್ಲೆಲ್ಲು ಹರಿದು
ಕಣ್ಣೆದುರು ಸಾಗಿತ್ತು ಮಣ್ಣ ಮೆರವಣಿಗೆ
ಇಲ್ಲಿಂದ ಆ ಬಾನ ಗುಡಿಯವರೆಗೆ!

೩

ಕತ್ತಲೆಯ ಕೋಣೆಯಲಿ ಹುಣ್ಣಿವೆಯು ಹರಿದಾಡಿ
ಮಣ್ಣ ಗೋಡೆಯ ಮೇಲೆ ಬಣ್ಣ ಬರೆದಿತ್ತು.
ಆಷಾಢ ನಿಬ್ಬಣವು ಸೂಸ್ಯಾಡಿ ಬರುವಾಗ ಎಷ್ಟೊಂದು ಚೆಂದವಿತ್ತು!
ಚಿತ್ತವೆಲ್ಲಾ ಅದರ ಮೇಲೆ ಇತ್ತು.
ಬಂದು ಹೋದವು ಬಂಡು ಹೂಡಿ ಒಂದರ ಮೇಲೆ ಒಂದು ಮಳೆಗಾಲ
ಗುಡುಗಿ, ಗದ್ದಲಿಸಿ, ಮದ್ದಳೆ ಬಡಿದು ಕುಣಿದಾಡಿ
ಹಿಡಿದು ಹೆಂಡದ ಬುಂಡಿ ಎತ್ತಿ ಕುಡಿದು!
ಹಾಗು ಹೀಗೂ ಗೋಡೆ ನಿಂತಿಹವು ಜೋಲಿ ಹೊಡೆದು;
ಕುಸಿಯತೊಡಗಿದೆ ಕೆಳಗೆ ನೆಲಗಟ್ಟು, ಮೇಲೆ ಬಿದ್ದಿದೆ ಭಾರ ನೀಗದಷ್ಟು
ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿ ವರುಷ ಇದರ ಹಾದೇ ಇಷ್ಟು:
ಮಾಳಿಗೆಯ ಮೇಲೆ ಇರುವೆಗಳ ಸಾಲುದುರ್ಗ
ಜಂತಿಯಲಿ ಇಲಿಗಳೋಡಾಡಿ ದಿನವೂ ಬುಟ್ಟಿ ಬುಟ್ಟಿ ಮಣ್ಣುದುರಿ
ಎಲ್ಲಿ ನೋಡಿದರಲ್ಲಿ ಸುರಂಗ ಮಾರ್ಗ!
ಇರುಳಿನಲಿ ಕುರುಡು ಬೆಳಕಿನ ಸುತ್ತ ನೆರಳುಗಳ ಕುಣಿತ.
ಇತ್ತೋ ಇಲ್ಲೋ ಎನಿಸಿ ಬಿಡುವ ಕತ್ತಲೆ ಒಳಗೆ;
ಹತ್ತು ಸಲ ಆರಿ ಹತ್ತುವ ದೀಪ ಬೀದಿಯಲಿ!
ಕೂಟು ಕೂಟುಗಳಲ್ಲಿ ಬೂಟು -ಸಪ್ಪಳ ಸೀಟಿ
ದಾಟಿ ಹೊಸತಿಲಿನಾಚೆ ಹೋದರೇನೊ ಎಂತೋ-
ಒಟ್ಟಿನ ಮೇಲೆ,
ಪರಿಸ್ಥಿತಿ ತುಂಬಾ ಶೋಚನೀಯ.

ಮೇಲೆ ಕಣ್ಣಟ್ಟ ಕಡೆಗೆಲ್ಲ ಜ್ಯೋತಿರ್ಮಾಲೆ
ನೀಲ ಬೆಳಕಿನಪೂರ್ವ ನೃತ್ಯಶಾಲೆ,
ಮಣ್ಣಮಡಿಲೊಳು ನಿತ್ಯ ಯಾತನೆಯ ನೆಲಗುಮ್ಮ
"ಎಚ್ಚತ್ತು ತಾಯಿ ಎಂವಿ ಬಿಚ್ಚಿ ಏಳಮ್ಮಾ
ಮಲಗಿರುವ ತಾಯಿ ಪೃಥಿವೀ"
ಕತ್ತಲೆಯ ಹುತ್ತ ಬೆಳೆದಿದೆ ಎತ್ತ ಸರಿದರೂ
ಆದರೂ ಎಂಥ ಸೋಜಿಗವೆಂದಿ-
ಬೆಳಕಿನಿಂದಲೆ ಅದರ ಉಪಜೀವನ
ಜನನದಲಿ ಮರಣದಲಿ ತುಂಬಿ ಜಯಗಾನ.

ಚಳಿಗಾಲದಲ್ಲಿ ಮೈ ಸೆಟೆದುಕೊಂಡಿದ್ದ ತರು
ಬಂದು ನಿಂತಿದೆ ಬೀದಿ ಮಧ್ಯದಲಿ ಸಿಂಗಾರಗೊಂಡ ತೇರು !
ಬೇಡವೆಂದವರಾರು?
ಹಲಗೆ ಬಾರಿಸಿ, ಕಹಳೆಯೂದಿ, ಸಾಗಲಿ ಮುಂದೆ
ದುಂದು ಮೆರವಣಿಗೆ-
ಓ ಜೀವನವೆ!
ಶುಭಮಸ್ತು ನಿನಗೆ.

'ಮಣ್ಣಿನ ಮೆರವಣಿಗೆ' ಸಂಗ್ರಹದ (೧೯೬೦) ಮೊದಲ ಕವನವಿದು.

'ಇಳೆಯೆಂದರೆ ಬರಿ ಮಣ್ಣಲ್ಲ' - ಎಂದು ಕವಿ ಬೇಂದ್ರೆ ಹಾಡಿದ್ದರು. ಅದೇ ನೆಲದ ಮತ್ತೊಬ್ಬ ಕವಿ ಚೆನ್ನವೀರ ಕಣವಿಯವರು ಜೀವಜಾಲಗಳ, ಭೂತವರ್ತಮಾನಗಳ ಋತುಋತುಗಳ ಆಡುಂಬೊಲವಾದ ಈ ಧರೆಯ ವೈಚಿತ್ರ್ಯವನ್ನು ಮಣ್ಣಿನ ಮೆರವಣಿಗೆಯಾಗಿ ಕಾಣುತ್ತಾರೆ. ಎಲ್ಲವನ್ನೂ ಅಖಂಡ ಪ್ರಜ್ಞೆಯಲ್ಲಿ ಕಾಣಲೆಳಸುವ ಚೇತನಕ್ಕೆ ಮಾತ್ರ ಅಂತಹ ದರ್ಶನ ಸಾಧ್ಯ.

ವೈಜ್ಞಾನಿಕವಾಗಿ ಈ ಭೂಮಿಯನ್ನು ಸೂರ್ಯನಿಂದ ಸಿಡಿದ ಅಗ್ನಿಗೋಳವೇ ತಣ್ಣಗಾಗಿ ಜೀವಜಾಲದ ಸೃಷ್ಟಿಗೆ, ವಾಸಕ್ಕೆ ಯೋಗ್ಯವಾಯಿತೆಂದು ತಿಳಿಯಲಾದರೂ ಕವಿಯ ಮನ ಮಾತ್ರ ಅದನ್ನು ಒಪ್ಪುತ್ತಿಲ್ಲ. ಇಲ್ಲಿನ ವಿದ್ಯಮಾನಗಳು ಭೂಮಿ ತಣ್ಣಗಾಗಿದೆ ಎನ್ನುವುದನ್ನು ನಿರಾಕರಿಸುವಂತಿವೆ. ಕಡಲೊಳಗಿನ ಬಡಬಾಗ್ನಿಯಂತೆ, ಒಳಗೆ ಬೆಂಕಿಯ ಹೊಳೆ ಪ್ರವಹಿಸುತ್ತಿದೆಯೇನೋ ಎಂಬಂತೆ ಈ ಭುವಿಯ ಮೇಲಿನ ಕಷ್ಟಕೋಟಲೆಗಳ ಪರಂಪರೆ ಇದೆ. ಮೇಲೆ ನಯವಾಗಿ, ಶಾಂತವಾಗಿ ಕಾಣಿಸುವ ಬಾನಿನ ಮರೆಯಲ್ಲೂ ಅಶಾಂತಿಯ ಹೊಗೆಯೇಳುವಂತೆ, ಯುಗಯುಗಗಳ ನೋವೆ ಗಿರಿಗಹ್ವರಗಳಾಗಿ ತಲೆಯೆತ್ತಿದಂತೆ, ಕಣಿವೆ ಕಂದರಗಳ ಆಳದಲ್ಲಿ ಮನುಕುಲದ ಅಳಿವಿನ ಬಗ್ಗೆ ಇನ್ನೂ ಸಂಶಯದ ನೆರಳು ಇರುವಂತೆ ಕವಿಗೆ ಅನಿಸುತ್ತದೆ.

ಆದರೆ ಕವಿ ಈ ಒಂದು ಮುಖವನ್ನೇ ಮಾತ್ರ ದರ್ಶಿಸಿದ್ದಲ್ಲ. ಆ ಬೇಗೆ ತುಂಬಿದ ಒಡಲಾಳದ ಗರ್ಭದಿಂದಲೇ ಅದಾವ ಚೈತನ್ಯವನ್ನು ಮೊಗೆದೊ-ಲಕ್ಷಾಂತರ ಆಸೆಗಳು, ಕನಸುಗಳು ಸಸ್ಯರಾಶಿಗಳಾಗಿ ಕಣ್ಣುಬಿಟ್ಟಿವೆಯಲ್ಲ. ದೆಸೆದೆಸೆಗೆ ತಲೆಯೆತ್ತಿ ಭವ್ಯ ಭವಿತವ್ಯವನ್ನು ನಿರೀಕ್ಷಿಸುತ್ತಿವೆಯಲ್ಲ- ಎನ್ನುವುದು ಕವಿಯ ಅಚ್ಚರಿ.

ಸೂರ್ಯ, ಚಂದ್ರ, ತಾರೆಗಳು ಸಾಕ್ಷಿಯಾಗಿ ಬೆಳಗು ಬೈಗುಗಳ ಆವರ್ತನದಲ್ಲಿ ಈ ಭೂಮಿ ಅದೆಷ್ಟು ಸ್ಥಿತ್ಯಂತರಗಳನ್ನು ಕಂಡಿತು. ಇನ್ನೂ ಏನೇನು ಆಗಲಿಕ್ಕಿದೆಯೊ - ಇದು ಕೊನೆಯಿರದ ವರ್ತುಲ.

ಜೀವವಿಕಾಸದ ಹಂತದಲ್ಲಿ ಈ ಭುವಿಯ ಮೇಲೆ ಮಾನವ ಶಿಶುವಿನ ಜನನವೆನ್ನುವುದು ಮಹತ್ವದ ಗಳಿಗೆಯಾಗಿಬಿಟ್ಟಿತು. ಕ್ರಮಕ್ರಮೇಣ ಮನುಷ್ಯ ತನ್ನ ಇರವಿನ ಕುರಿತಾದ ಅರಿವನ್ನು,

ಪರಿಸರದ ಅರಿವನ್ನು ಮೈಗೂಡಿಸಿಕೊಂಡದ್ದು, ಋತುಗಳ ಆವರ್ತವನ್ನು ಭೂಮಿಯ ಅಸ್ತಿತ್ವವನ್ನು, ಅದರ ಆಕೃತಿಯನ್ನು ಅರಿಯಲೆತ್ನಿಸಿದ್ದು - ಒಂದೊಂದೂ ಮನುಷ್ಯ ನಾಗರಿಕತೆಯ ಮಹತ್ವದ ಹೆಜ್ಜೆಗಳೇ. ಆಷಾಢದ ಸೊಬಗು, ಮಳೆಯ ಉನ್ಮತ್ತ ವಿಲಾಸ-ಪ್ರಾಕೃತಿಕ ವಿಕೋಪಗಳು ಒಂದೆಡೆಯಾದರೆ ಕೆಳಗೆ ನೆಲಗಟ್ಟು ಕುಸಿಯುತ್ತಿದೆಯೇನೋ ಅನಿಸುವಷ್ಟು ನಾಗರಿಕತೆಯ ವಿಕೃತ ವಿಲಾಸ ಮೇರೆ ಮೀರಿ ಮುಂದುವರಿದುಬಿಟ್ಟಿದೆ. ಅಳತೆ ಮೀರಿ ಹೊರೆಯೇರಿಬಿಟ್ಟಿದೆ. ಒಂದೊಂದು ಬಾರಿ ಗಲಭೆ, ಕರ್ಫ್ಯೂ, ಕಂಡಲ್ಲಿ ಗುಂಡುಗಳ ವಿಜೃಂಭಣೆಯಿರುವಾಗಲೂ ಹೊರಗೆ ಕಾಲಿರಿಸುವುದಕ್ಕೆ ಆತಂಕ, ಭಯ. ಈ ನಾಗರಿಕತೆಯನ್ನು ಈ ಮಣ್ಣಿನ ಮೇಲಿನ ಬದುಕಿನ ಚೆಲುವನ್ನು ಹಿಡಿದಿಡುವ ಹೆಚ್ಚಿಸುವ ಪ್ರಯತ್ನಗಳು ಸಂಸ್ಕೃತಿ ಪ್ರೀತಿಯ ಹರಿಕಾರರಿಂದ ಅದೆಷ್ಟೋ ಬಾರಿ ಮತ್ತೆ ಮತ್ತೆ ಆಗುತ್ತಲಿದ್ದರೂ ನೇತ್ಯಾತ್ಮಕ ಶಕ್ತಿಗಳೂ ಬಲವಾಗಿಯೇ ಇವೆ. ನಿಜವಾದ ಶತ್ರುಗಳು ಯಾರು ಎಂದು ತಿಳಿಯಲಾಗದ ಕುರುಡುತನ ಇದೆ. ಆತಂಕ ಇದೆ. ವಿನಾಶದಂಚಿನಲ್ಲಿ ಬಂದು ನಿಂತಿದೆಯೇನೋ ಅನಿಸುವಷ್ಟು ಅನಿಶ್ಚಿತತೆ, ಗೊಂದಲ, ಅನುಮಾನಗಳಿವೆ. ಒಟ್ಟಿನ ಮೇಲೆ ಪರಿಸ್ಥಿತಿ ತುಂಬಾ ಶೋಚನೀಯ.

ಆದರೆ ಮೇಲೆ ನೋಡಬೇಕು- ಬೆಳಕಿನ ಅನಂತ ವಿನ್ಯಾಸಗಳು ಹೇಗೆ ಹೊಳೆಹೊಳೆಯುತ್ತವೆ! ಅವು ವಿಕಾಸದ, ಮೇಲ್ಮೆಯ ಅನಂತ ಸಾಧ್ಯತೆಗಳ ಸೂಚಿಗಳೇ ಆಗಿವೆ. ಆದರೂ ಈ ಭೂಮಿಯ ಪಾಡು ಹೇಗೆಂದರೆ -ನಿತ್ಯ ಯಾತನೆಯ ನೆಲಗುಮ್ಮ ಅದನ್ನು ಅಮುಕಿ ಹಿಡಿದಿದೆ. ಅನುಭಾವಿ ಕವಿ ಮಧುರಚೆನ್ನರು ತಮ್ಮ 'ದೇವತಾಪೃಥಿವಿ' ಕವನದಲ್ಲಿ. ಈ ಭೂಮಿ ಜಡತತ್ವದಿಂದ ಚೈತನ್ಯತತ್ವಕ್ಕೆ ವಿಕಾಸ ಹೊಂದುವ ಸುಂದರವೂ ಅತ್ಯಂತ ಮಧುರವೂ ಆದ ಕನಸನ್ನು ಕಂಡಿದ್ದರು. ಉತ್ಕಟ ಹಂಬಲದ ಆಪ್ತ ವಿನ್ಯಾಸವನ್ನು ಹೆಣೆದಿದ್ದರು. ಆ ಕನಸು ಮತ್ತೊಮ್ಮೆ ಕವಿ ಕಣವಿಯವರಲ್ಲಿ 'ಎಚ್ಚತ್ತು ತಾಯಿ ಎಂವಿ ಬಿಚ್ಚಿ ಏಳಮ್ಮಾ ಮಲಗಿರುವ ತಾಯಿ ಪೃಥಿವೀ'- ಎಂಬ ಸೊಲ್ಲಿನಲ್ಲಿ ಅನುರಣನಗೊಳ್ಳುತ್ತದೆ. ಆ ಕನಸು ಬೇರೆ. ಈ ಕನಸು ಬೇರೆ ಎಂದು ನಾವು ತಿಳಿಯಬೇಕಿಲ್ಲ. ಆ ಕನಸಿನ ಮುಂದುವರಿಕೆಯೇ ಈ ಕನಸು. ಏಕೆಂದರೆ ಅದೇ ಭೂಮಿ ಅದೇ ಪಾಡು, ಅದೇ ಹಾಡು. ಇಲ್ಲಿನ ಆಗುಹೋಗುಗಳನ್ನು ಎಣಿಸಿದರೆ ಎತ್ತ ನೋಡಿದರೂ ಕತ್ತಲೆಯ ಮೊತ್ತ ಬಹಳವಾಗಿರುವಂತೆ ಕವಿಗೆ ಅನಿಸುತ್ತದೆ. ಆದರೂ ಬೆಳಕಿನ ಅಸ್ತಿತ್ವ ಮತ್ತು ಅದರ ಸಾಧ್ಯತೆಯ ಅರಿವಿನಿಂದಲೇ ಕತ್ತಲೆ ಉಪಜೀವಿಸುತ್ತಿರುವ ಸತ್ಯವನ್ನು ಕವಿ ಮನಗಾಣುತ್ತಾರೆ. ಜನನದಲ್ಲಿ ಮರಣದಲ್ಲಿ ಮತ್ತೆ ಮತ್ತೆ ಈ ಕತ್ತಲೆ ಬೆಳಕಿನಾಟ ಆವರ್ತಿಸುತ್ತದೆ ಎನ್ನುವುದೊಂದು ವಾಸ್ತವ.

ಕವಿ ಭೂಮಿಯ ಕುರಿತು ಹೀಗೆಲ್ಲ ಯೋಚಿಸುವುದಕ್ಕೆ ನಿಮಿತ್ತವಾದದ್ದು ಯಾವುದೆಂದು ನೋಡಿದರೆ ಚಳಿಗಾಲದಲ್ಲಿ ಎಲೆಯುದುರಿಸಿದ ಬೋಳುಮರವೊಂದು ಸಿಂಗಾರಗೊಂಡ ರಥದ ಹಾಗೆ ಹೂ ತುಂಬಿ ಕಂಗೊಳಿಸುತ್ತಿರುವ ದೃಶ್ಯ. ಶಿಶಿರದ ಮೇಲೆ ವಸಂತ ಸಾಧಿಸಿದ ಈ ವಿಜಯದ ಸಂಕೇತವು ಕವಿಗೆ ಭುವಿಯ ಬದುಕಿನ ಬಗೆಗೆ ಆಶಾವಾದಿಯಾಗಿರುವಂತೆ ಮಾಡುತ್ತದೆ. ಈ

ಭುವಿಯನ್ನು ಕಾವಳದಂತೆ ಕವಿಯುವ ನಾನಾ ರೀತಿಯ ಸಮಸ್ಯೆಗಳು, ಲೆಕ್ಕವಿರದ ಬಗೆಯ ಬೇಗುದಿ ಸಂಕಟಗಳು ಇದ್ದೇ ಇದೆ. ಭ್ರಮಣಗೈಯುವ ಅದರ ವಿಧಿ ಇನ್ನೂ ಮುಗಿದಿಲ್ಲ. ಆದರೂ ಕತ್ತಲೆಯು ಬೆಳಕಿನ ನೆನಪನ್ನು, ಭರವಸೆಯನ್ನು ತರುವಂತೆಯೇ ಕಷ್ಟಕೋಟಲೆಗಳು ಅವುಗಳನ್ನು ದಾಟಿದ ಸ್ಥಿತಿಯ ಕನಸನ್ನು ಕಾಣುವಂತೆ ಮಾಡುತ್ತವೆ. 'ಮಣ್ಣಿನ ಮೆರವಣಿಗೆ' - ಎಂಬ ಪ್ರಯೋಗವು ಮುಗಿಯದ ದೃಶ್ಯಾವಳಿಯನ್ನು ಸೂಚಿಸುತ್ತದೆ. 'ಮೆರವಣಿಗೆ'ಯು ಮದುವೆಯ ಮೆರವಣಿಗೆಯೂ ಆಗಬಹುದು, ಮಸಣದ ಮೆರವಣಿಗೆಯೂ ಆಗಬಹುದು. ಒಂದಲ್ಲ ಒಂದು ಇದ್ದದ್ದೇ. ಅದು ಮುಗಿಯದ ಮೆರವಣಿಗೆ.

ಹೀಗೆ ಒಟ್ಟು ಮೂರು ಭಾಗಗಳಲ್ಲಿ ಗುಡಿಗಟ್ಟಿದ ಈ ಕವಿತೆ ಭೂಮಿಯ ಮೇಲೆ ನಮ್ಮ ಇರುವಿಕೆಯ ಅರ್ಥಪೂರ್ಣತೆಯನ್ನು ಭೂಮಿಯ ದ್ವಂದ್ವಮಯ ಅಸ್ತಿತ್ವವನ್ನು ಅರಿಯುವ ಪ್ರಯತ್ನ ಮಾಡುತ್ತದೆ. 'God is in his heaven and all is well in the world ಎಂದು ನಿರಾಳವಾಗಿರಲು ಅಸಾಧ್ಯವಾಗಿರುವ ರೀತಿಯಲ್ಲಿ ಇಲ್ಲಿನ ವಿದ್ಯಮಾನಗಳು ಇರುವುದನ್ನು ಕಣವಿಯವರ ಸಂವೇದನೆ ಗುರುತಿಸಿರುವ ಬಗೆ ವಿಶಿಷ್ಟವಾದುದು. ಆದರೆ ಸೂರ್ಯಚಂದ್ರರಾಗಲಿ, ಕೋಟಿ ನಕ್ಷತ್ರಗಳಾಗಲಿ ಹೊಸ ಭರವಸೆ, ನಿರೀಕ್ಷೆಗಳನ್ನು ಸದಾ ಸುರಿಸುತ್ತವೆ. ಇದನ್ನು ಅರ್ಥ ಮಾಡಿಕೊಳ್ಳಲು ನಮಗೆ ಸಾಧ್ಯವಾಗಬೇಕು ಎನ್ನುವುದು ಕವಿಯ ಹಂಬಲ. ಈ ಮಣ್ಣಿನ ಭವಿತವ್ಯದ ಕುರಿತು ಹೀಗೆ ಪ್ರೀತಿ ಕಾಳಜಿಗಳಿರುವುದರಿಂದಲೇ ಕವಿತೆಯ ದನಿ ಮೌಲಿಕವಾಗುತ್ತದೆ.

ಯು. ಮಹೇಶ್ವರಿ

೨

ಚೆನ್ನವೀರ ಕಣವಿಯವರ ಮಹತ್ವಾಕಾಂಕ್ಷಿ ಕವನಗಳಲ್ಲೊಂದು 'ಮಣ್ಣಿನ ಮೆರವಣಿಗೆ'. ಆದರ್ಶವಾದ ಕಾವ್ಯಬಂಧದಲ್ಲಿ ಭಾವಗೀತಾತ್ಮಕತೆಯಾಗಿ ಭಾಷಾಂತರವಾಗುತ್ತದೆ ಎಂಬ ಮಾತಿಗೆ ಈ ಕವನ ತುಂಬ ಒಳ್ಳೆಯ ಉದಾಹರಣೆ. ನವ್ಯಕಾವ್ಯ ಮಾರ್ಗದ ಅನೇಕ ಅಂಶಗಳನ್ನು ಒಳಗೊಂಡಿರುವ ಈ ಕವನ ಕಣವಿಯವರ ವಸ್ತು ನಿರ್ವಹಣಾ ಕ್ರಮದ ಮುಖ್ಯ ಲಕ್ಷಣಗಳನ್ನು ಹೇಳುತ್ತದೆ.

ಕವನ ಪ್ರಾರಂಭವಾಗುವುದೇ ದಟ್ಟ ವೈಜ್ಞಾನಿಕ ವಿವರಗಳಿಂದ. ಆದರೆ, ಇಲ್ಲಿಯ ವೈಶಿಷ್ಟ್ಯವೆಂದರೆ ಕವನದ ವೈಜ್ಞಾನಿಕ ವಿವರಗಳು ತಮ್ಮ ನಿರ್ಜೀವ ವಸ್ತುನಿಷ್ಠತೆಯನ್ನು ಕಳೆದುಕೊಂಡು ಕವನದ ಒಟ್ಟು ತಾತ್ವಿಕತೆಯ ಸಂದರ್ಭದಲ್ಲಿ ಭಾವುಕ ಸತ್ಯವಾಗಿ ಕೂಡಾ ಮಿಂಚಿದೆ. ಕವನದ ಮೊದಲ ಭಾಗ ಪೂರ್ತಿ ಈ ಭೂಮಿಯ, ವಿಶ್ವದ ಉಗಮವನ್ನು ಕುರಿತದ್ದು. ಈ ಮೊದಲ ಭಾಗದಲ್ಲಿ ಆಧ್ಯಾತ್ಮಿಕ ಎಂದು ಕರೆಯಬಹುದಾದ ದರ್ಶನವೊಂದು ನೇರವಾಗಿ

ಅಲ್ಲದಿದ್ದರೂ, ಬಿಡಿ ಬಿಡಿ ವಾಕ್ಯಗಳು ಭಾವನಾ ವಾತಾವರಣದಿಂದ ಪ್ರತೀತವಾಗುತ್ತಿರುತ್ತದೆ. ವಿಶ್ವದ ದಿನನಿತ್ಯದ ವಿವರಗಳಲ್ಲಿ, ಆಗು-ಹೋಗುಗಳಲ್ಲಿ ಯಾವ ದಿವ್ಯಾರ್ಥವನ್ನೂ ಕಾಣದ ಪ್ರಾಕೃತಿಕ ದೃಷ್ಟಿಕೋನವಲ್ಲ ಕವಿಯದು. ಯಾವ ಹೊರಗಿನ ಶಕ್ತಿಯೂ ಕವನದ ಮೊದಲ ಭಾಗದಲ್ಲಿ ನೇರವಾಗಿ ಅವತರಿಸದಿದ್ದರೂ, ಒಂದು ಬಗೆಯ ದಿವ್ಯ ಆಶಾಭಾವ ಇಲ್ಲಿ ಆವರಿಸುತ್ತದೆ. ದಿನನಿತ್ಯದ ವಿವರಗಳನ್ನು ಕವಿ ಚಿತ್ರಿಸುವ ರೀತಿ ಇದು.

**ಸಂಜೆ ಮುಂಜಾವುಗಳ ಸೂರ್ಯ ಬಿಂಬದ ಸುತ್ತು**
**ಸದ್ದುಗದ್ದಲವಿಲ್ಲದೆದ್ದು ಬಾನಂಗಳಕೆ ಬರುವ ಚಂದ್ರನ ಹೆಗಲ ಮೇಲೆ ಹೊತ್ತು**
**ಬಾನ ಕಣದಲಿ ಕೋಟಿ ಚಿಕ್ಕೆ ಹಂತಿಯ ಕಟ್ಟಿ**
**ಬೆಳಕು ಚಕ್ರಾಕಾರ ತಿರುಗುತ್ತಿದೆ.**

ಇಲ್ಲಿ ಮೂಡುವ ಕೃಷಿ ಪ್ರತಿಮೆ ತನ್ನೊಡಲೊಳಗೇ ಸಾರ್ಥಕತೆ ಮತ್ತು ಶ್ರದ್ಧೆಯನ್ನು ಹುದುಗಿಸಿಕೊಂಡಿದೆ ಎಂಬುದು ಗಮನಿಸತಕ್ಕ ಅಂಶ. ಕವನದಲ್ಲಿ ಮನುಷ್ಯ ಅವತರಿಸುವುದಕ್ಕೆ ಮುಂಚೆಯೇ ಬರುವ ಈ ಮಾನವ ಜೀವನದ ಪ್ರತಿಮೆ ಕವನದ ಗಾಢ ಮಾನವೀಯ ಸತ್ವಕ್ಕೆ ಮೊದಲಿಗೆಯೇ ಸಾಕ್ಷಿ ಹೇಳುತ್ತದೆ.

ಕವನದ ಎರಡನೆಯ ಭಾಗದಲ್ಲಿ ಮನುಷ್ಯನ ಅವತಾರವಾಗುತ್ತದೆ. ಈ ಭಾಗದಲ್ಲಿ ಕೂಡಾ ಮಾನವ ಪ್ರಗತಿಯ ಬಗ್ಗೆ, ಮನುಕುಲದ ದೈವೀ ಸತ್ವದ ಬಗ್ಗೆ ಕವಿಗಿರುವ ಬಿರುಕಿಲ್ಲದ ನಂಬಿಕೆಯ ಅನುಭವವೇ ಮುಖ್ಯ. ಮೊದಲ ಭಾಗದಲ್ಲಿ ಒಟ್ಟಾರೆಯಾಗಿ ದೊಡ್ಡ ಶಕ್ತಿಯೊಂದು ಮೂಡಿದ್ದು, ಈ ಭಾಗದಲ್ಲಿ ಭೂಮಿಯ ಪ್ರೀತಿ ಮುಖ್ಯರಂಗಕ್ಕೆ ಬರುತ್ತದೆ. ಎರಡನೆಯ ಭಾಗದಲ್ಲಿ ಪ್ರತೀತವಾಗುವ ಇನ್ನೊಂದು ಅಂಶವೆಂದರೆ, ಮನುಷ್ಯನ ಮನಸ್ಸಿನ ಎಲ್ಲ ಮೂಲೆಗಳಲ್ಲಿ ಬೇರೂರಿರುವ ಭೂಮಿಯ ಕಲ್ಪನೆಗೆ ಅರ್ಥವಿರುವುದು ಮಾನವ ಅಸ್ತಿತ್ವದ ಸಂದರ್ಭದಲ್ಲಿ ಮಾತ್ರ ಎಂಬುದು. ಭೂಮಿ ಎಂಬುದಕ್ಕೆ ಎಲ್ಲ ಬಗೆಯ ಆಧ್ಯಾತ್ಮಿಕ, ಮಾನವೀಯ ಅರ್ಥಗಳು ಬರುವುದು ಮನುಷ್ಯ ಅಲ್ಲಿ ಸಂಭವಿಸದಾಗ ಮಾತ್ರ. 'ಮಣ್ಣ ಮನೆಯೊಳು ಮಗುವು ಕಣ್ಣು ತೆರೆದಿತ್ತು' ಎಂಬ ಸಾಲಿನಿಂದ ಎರಡನೆಯ ಭಾಗ ಪ್ರಾರಂಭವಾಗುತ್ತದೆ. ಮಣ್ಣು ಇಲ್ಲಿ ಮನೆಯಾಗಿದೆ. ಇಂಥಲ್ಲಿ ಮಗು ಕಣ್ಣು ತೆರೆದಿದೆಯಂತೆ. ಹೀಗೆ ಪ್ರಾರಂಭವಾದ ಮಾರ್ದವದ ಧ್ವನಿ ಇಡೀ ಕವನಕ್ಕೆ ಹಬ್ಬುತ್ತದೆ. ತುಂಬುಪ್ರೀತಿಯ, ಲಾಲಿತ್ಯದ, ತನ್ಮಯತೆಯ ಪ್ರತಿಮೆಗಳೇ ಇಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತವೆ. 'ಹೂತುರಾಯಿ', 'ಎಳೆವಿಸಲು', 'ಹಾಡಿನುಯ್ಯಾಲೆ' ಮುಂತಾದ ಪ್ರತಿಮೆಗಳು ಸಮರ್ಥವಾದ ಭಾವನಾ ವಾತಾವರಣವೊಂದನ್ನು ನಿರ್ಮಿಸುತ್ತವೆ. ಮಗುವಿನ ಹುಟ್ಟಿನಿಂದ ಪ್ರಾರಂಭವಾದ ಈ ಭಾಗ ಅವನ ಬೆಳವಣಿಗೆಯ ದಾರಿಯನ್ನು ಕೂಡಾ ಹೇಳುತ್ತದೆ.

**ಮಣ್ಣೆನೆದೆಯೊಳು ಸ್ನೇಹವಂಕುರಿಸಿ ಬೆಳೆದು**
**ಬೆಳದಿಂಗಳಿನ ಹೊನಲೆ ಎಲ್ಲೆಲ್ಲು ಹರಿದು**

**ಕಣ್ಣೆದುರು ಸಾಗಿತ್ತು ಮಣ್ಣಿ ಮೆರವಣಿಗೆ**
**ಇಲ್ಲಿಂದ ಆ ಬಾನ ಗುಡಿಯವರೆಗೆ**

ಹೀಗೆ ಎರಡನೆಯ ಭಾಗದಲ್ಲಿ ಕೂಡಾ ತುಂಬು ಪ್ರೀತಿಯ ಸಂಭ್ರಮವೇ ಮುಖ್ಯ. ಮುಂದಿನ ಭಾಗಲ್ಲಿ ಕವನ ಭಾವನಾ ಅನುಭವದ ದೃಷ್ಟಿಯಿಂದ ಪ್ರಬುದ್ಧ ಸ್ಥಿತಿಗೇರುತ್ತದೆ. ಮೊದಲಿನ ಮುಗ್ಧ ಸಂಭ್ರಮ ಮಾಯವಾಗಿ ಜೀವನದ ಆಘಾತಗಳಿಗೂ ತನ್ನನ್ನು ಒಡ್ಡಿಕೊಂಡಿರುವ ಮನಸ್ಸೊಂದು ತನ್ನನ್ನು ಸೃಷ್ಟಿಸಿದ, ಒಮ್ಮೆ ಗಾಢವಾಗಿ ಅನುಭವಿಸಿದ ಪ್ರೀತಿಯನ್ನು ನೆನಸಿಕೊಳ್ಳಲು ಯತ್ನಿಸುತ್ತದೆ. ಈ ದೃಷ್ಟಿಯಿಂದ ಈ ಭಾಗ ವರ್ಡ್ಸ್‌ವರ್ತಿಯನ್ ಅನುಭವದ ಜೊತೆಗೆ ಸಾಮ್ಯವನ್ನು ಹೊಂದಿದೆ. ಒಮ್ಮೆ ಗಾಢವಾಗಿ ಅನುಭವಿಸಿದ್ದ. ಯಾವುದೋ ಲೋಕ ಈಗ ಕಳೆದುಹೋಗಿದೆ. ಅದರ ನೆನಪಿನಿಂದ ವಿಚಲಿತವಾದ ಅನುಭವ ಇಲ್ಲಿ ಪ್ರಕಟವಾಗಿದೆ. ವರ್ತಮಾನದ ಭಾರವನ್ನು ನೀಗಲು ನೆನಪಿನ ಆಕಾಶದಲ್ಲಿ ಹಾರಲು ಇಲ್ಲಿ ಪ್ರಜ್ಞೆ ಯತ್ನಿಸುತ್ತದೆ.

**ಆಷಾಢ ನಿಬ್ಬಣವು ಸೂಸ್ಯಾಡಿ ಬರುವಾಗ ಎಷ್ಟೊಂದು ಚೆಂದವಿತ್ತು !**
**ಚಿತ್ತವೆಲ್ಲಾ ಅದರ ಮೇಲೆ ಇತ್ತು.**
**ಬಂದು ಹೋದವು ಬಂದು ಹೂಡಿ ಒಂದರ ಮೇಲೆ ಒಂದು ಮಳೆಗಾಲ**
**ಗುಡುಗಿ ಗದ್ದಲಿಸಿ ಮದ್ದಳೆ ಬಡಿದು ಹಿಡಿದು ಹೆಂಡದ ಬುಂಡಿ ಎತ್ತಿ ಕುಡಿದು!**
**ಹಾಗು ಹೀಗೂ ಗೋಡೆ ನಿಂತಿಹವು ಜೋಲಿ ಹಿಡಿದು**
**ಕುಸಿಯತೊಡಗಿದೆ ಕೆಳಗೆ ನೆಲಗಟ್ಟು, ಮೇಲೆ ಬಿದ್ದಿದೆ ಭಾರ ನೀಗದಷ್ಟು**
**ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿ ವರುಷ ಇದರ ಹಾಡೇ ಇಷ್ಟು!**

ಇಡೀ ಕವನದ ಅತ್ಯಂತ ಶಕ್ತಿಶಾಲೀ ಭಾಗ ಇದು. ಎರಡು ವಿರುದ್ಧಾನುಭವಗಳನ್ನು ಇಲ್ಲಿ ಮುಖಾಮುಖಿಯಾಗಿಸಲಾಗಿದೆ. ವರ್ತಮಾನದ ಅಸಹನೀಯತೆಯ ಕಾರಣಕ್ಕಾಗಿಯೇ ಭೂಮಿಯ ಮೂಲ ಪ್ರೀತಿ ಇನ್ನಷ್ಟು ಉಜ್ವಲವಾಗಿ ಕಾಣತೊಡಗುತ್ತದೆ. ಈ ಭಾವನಾ ಸಂಘರ್ಷವಾದ ನಂತರ ಮೂರನೆಯ ಭಾಗ ನಿಧಾನಕ್ಕೆ ನಿರಾಶೆಯ ಆಳಕ್ಕೆ ಇಳಿಯುವ ಹಾಗೆ ತೋರುತ್ತದೆ. 'ಒಟ್ಟಿನಲ್ಲಿ ಪರಿಸ್ಥಿತಿ ತುಂಬ ಶೋಚನೀಯ' ಎಂಬ ಸಾಲು ಇದನ್ನೇ ಸೂಚಿಸುತ್ತದೆ. ಆದರೆ, ಮೊದಲಿನ ಭಾಗಗಳಲ್ಲಿ ಪ್ರವಹಿಸುತ್ತಿದ್ದ, ಮೂರನೆಯ ಭಾಗದಲ್ಲಿ ಬರೀ ನೆನಪಾಗಿ ಹೋಗಿಬಿಟ್ಟಿದ್ದ ಭೂಮಿಯ ಪ್ರೀತಿ ಮತ್ತೆ ಇಲ್ಲಿ ಸಜೀವವಾಗುತ್ತದೆ. ಇದು ಸಜೀವವಾದಾಗ ಸಹಜವಾಗಿ ಆಕಾಶ ಕೂಡಾ ಕಂಗೊಳಿಸತೊಡಗುತ್ತದೆ. 'ಮೇಲೆ ಕಣ್ಣಿಟ್ಟ ಕಡೆಗೆಲ್ಲ ಜ್ಯೋತಿರ್ಮಾಲೆ' ಎಂದು ಈ ಅನುಭವ ಪ್ರಾರಂಭವಾಗುತ್ತದೆ. ಒಂದೇ ಭಾಗದಲ್ಲಿ ಹೀಗೆ ತಟಕ್ಕನೆ ನಾಟಕೀಯವಾಗಿ ಇನ್ನೊಂದು ದಿಕ್ಕಿಗೆ ತಿರುಗುತ್ತದೆ. ಮೊದಲಿನೆರಡೂ ಭಾಗಗಳಲ್ಲಿ ಹರಿದು ಬಂದಿದ್ದ ಅನುಭವ ನಿರಂತರತೆ ಇಲ್ಲಿ ಪೂರ್ಣವಾಗುತ್ತದೆ. ಆ ವಿದ್ಯುಕ್ತ ವಿಧಿಯನ್ನು ಆಚರಿಸಿದ ಮನಸ್ಸೊಂದು ಅದರ ಸಾಂಕೇತಿಕತೆಯನ್ನು ವಾಚ್ಯವಾಗಿಸುವಂತೆ ತುಂಬು ಪ್ರೀತಿಯ ದನಿಯೊಂದು ಕವನದ ಕೊನೆಯಲ್ಲಿ ಹೊರಡುತ್ತದೆ. ಪ್ರಾರ್ಥನೆಯ ದನಿಯ ಎಳೆಯೊಂದು ಇಲ್ಲಿ ಸೇರಿ ಹೋಗುತ್ತದೆ. ಈ ಕವನದ ಇಡೀ ಅನುಭವ ಭೂಮಿಯ ದೈವಿಕ ದರ್ಶನದಂತೆಯೇ ಕಾಣುತ್ತದೆ.

**ಚಳಿಗಾಲದಲ್ಲಿ ಮೈ ಸೆಟೆದುಕೊಂಡಿದ್ದ ತರು**
**ಬಂದು ನಿಂತಿದೆ ಬೀದಿ ಮಧ್ಯದಲಿ ಸಿಂಗಾರಗೊಂಡ ತೇರು**
**ಬೇಡವೆಂದವರಾರು? ಹಲಗೆ ಬಾರಿಸಿ ಕಹಳೆಯೂದಿ**
**ಸಾಗಲಿ ಮುಂದೆ ದುಂದು ಮೆರವಣಿಗೆ**
**ಓ ಜೀವನವೇ ಶುಭಮಸ್ತು ನಿನಗೆ**

ಕಣವಿಯವರ ಪ್ರಾತಿನಿಧಿಕ ತಾತ್ವಿಕ ನಿಲುವು ಈ ಕೊನೆಯ ಸಾಲುಗಳಲ್ಲಿದೆ. ಎಂಥ ಯಾತನೆಯ ಸಂದರ್ಭದಲ್ಲೂ ಆಸೆಯನ್ನು ಕಳೆದುಕೊಳ್ಳದ, ನೆಲ-ಆಕಾಶಗಳ ನಂಟನ್ನು ಕಳೆದುಕೊಳ್ಳದ ಶುಭ್ರ ಚೈತನ್ಯದ ಅನುಭವದ ಅಭಿವ್ಯಕ್ತಿ ಇದು. ಅವರ ಎಲ್ಲ ಮಹತ್ವದ ಕವನಗಳಲ್ಲೂ ಇದೇ ಬಗೆಯ ದರ್ಶನ ಮೂಡುತ್ತದೆ. 'ಶಿಶು ಕಂಡ ಕನಸು' ಕವನ ಕೂಡಾ ಇದೇ ಅನುಭವದ ಇನ್ನೊಂದು ಮುಖವನ್ನು ಹೇಳುತ್ತದೆ. 'ಇಳೆಯ ಹಾಡನ್ನೆಲ್ಲ ಕುಡಿದ ಸಾವಿರ ಚಿಕ್ಕೆ'ಯ ಕೆಳಗೆ ಬದುಕುವ ಮಾನವ ಚೈತನ್ಯವನ್ನು ಕುರಿತು ಈ ಕವನ ಹಾಡುತ್ತದೆ.

**ಡಿ. ಆರ್. ನಾಗರಾಜ್**

# ೧೮. ಅಪರಾವತಾರ

೧.

ಚೋಟುದ್ದ, ಗೇಣುದ್ದ, ಆಕಾಶದುದ್ದ
ಕುತುಬ ಮೀನಾರಕ್ಕೆ ಕೈಯೂರಿ ಎದ್ದ!
ಕೆರೆಯಿಂದ ಸಾಗರದವರೆಗೆ ಸಾಗರಬಿದ್ದ
ರಾಡಿ ಮೈಯಿಂದಲೇ ಮೇಲಕೆದ್ದ-
ಗೌರಿಶಂಕರ ಶಿಖರ ಏರಬೇಕೆಂದಿದ್ದ
ಆದರೀಗಾಗಲೆ ಅದು ನಿಷಿದ್ಧ
ಬುದ್ಧನೊಬ್ಬನು ಬೇರೆ ಆಗಿ ಹೋಗಿದ್ದ
ಇಲ್ಲದಿದ್ದರೆ ಇವನೆ ಇಂದಿಗೂ ಮುಂದಿಗೂ
    ಜಗದೆಲ್ಲ ಮಂದಿಗೂ ಸುಪ್ರಸಿದ್ಧ!

ಅಲ್ಲಿದ್ದ
ಇಲ್ಲಿದ್ದ
ಎಲ್ಲ ಕಡೆಗೂ ಬಾಲ ಗುಂಡಾಡಿಸಿದ್ದ.
ಹೋದ ಹೋದಲ್ಲೆಲ್ಲ ಹದನೋಡಿ ಹುಸಿಗುಂಡು ಹಾರಿಸಿದ್ದ!
ಮುದ್ದಾಗಿ ತೋರಿದವ ಹದ್ದಾಗಿ ಹಾರಿದ
'ಉಳಿದ ಪಕ್ಷಿಗಳೇನು ನನ್ನಂತೆ ಹಾರುವವೆ
ಹಾಲಬಲ್ಲವೆ?' ಎಂದು ಡಂಗುರವ ಸಾರಿದ.
'ಕಿಂಖಿಲಿಲಿಲಿಲಿ' ಹರಡಿತ್ತು ನಾದಪ್ರಮಾದ!
ಆಕಾಶದಲ್ಲೆ ಯಾವ ದೇವರಿಗೊ ಪ್ರದಕ್ಷಿಣೆ ಹಾಕುತಿದ್ದವನು
ಕೆಳಗೆ ಸರ್ರನೆ ಇಳಿದು ಕೋಳಿಮರಿಗಳ ಮೇಲೆ
ಬಂದೆರಗಿದ!

ಪೂರ್ವ ಜನ್ಮದ ಸುಕೃತ-
ಈ ಮಹೋದಯ ಕೃಪಾಕಟಾಕ್ಷಕ್ಕೆ ನಾ ಬಿದ್ದೆ ಅಪ್ರಬುದ್ಧ.
ಚಿಕ್ಕೆ ಬಳಗದ ಚಂದ್ರ ಚಲುವಿನಿಂದ್ರ
ನಾಲ್ಕಾಣೆ ಚೂರುಗಳ ನಡುವೆ ಹೊಳೆಯುವ ಬೆಳ್ಳಿ ರೂಪಾಯಿಯಾದ.
ಬಿಡಲಿಲ್ಲ ಈತ ಅಲ್ಲಿಗೂ ಹೋಗಿ ಗಟ್ಟಿ ತಳವೂರಿದ;
ಹೂವಿನ ಸುವಾಸನೆಯ ಬೆಳದಿಂಗಳಿನ ತಂಪ
ತಕ್ಕಡಿಯ ಪರಡಿಯಲಿ ತೂಗ ಹೊರಟ.
ಕೊಬ್ಬರಿಯ ಜೊತೆಗದರ ಕರಟವನ್ನೂ ಕೂಡ
ತಿಂದು ಬಿಟ್ಟ.
ನಿತ್ಯವೂ ಮೊಗೆ ಮೊಗೆದು ಕುಡಿಯತೊಡಗಿದನಾಸೆಯಾಮಿಷದ
ಪೀಯೂಷ
ಏನು ಕೊಟ್ಟರೆ ತಾನೆ ಬಂದೀತು ಇದರಿಂದ
ಬರುವ ಮಾದಕದಮಲು, ಸರಿಗಟ್ಟಿ ನಿಂತೀತು ದ್ರಾಕ್ಷಾರಸ?

ರೂಪಾಯಿ, ಆಣೆ, ಪೈ.
ಮನಸಿನೊಳಗೇ ಬೇಕಾದ್ದು ಬೈ
(ಪೂರ್ಣಪರವಾನಿಗಿ)
ಜಮಾ ಖರ್ಚಿಗೆ ಮಾತ್ರ ವ್ಯತ್ಯಯವಾಗದಿರಲಿ
ವೇದದಷ್ಟೇ ಪೂಜ್ಯ ರೋಜ ಕಿರ್ದಿ.
ರೂ. ಆ. ಪೈ.
ಇದರ ನಾದವೆ ನಾದ ಇದುವೆ ಸಂಗೀತ
ಇದರ ಕುಣಿತವೆ ಕುಣಿತ ಝುಣ್ ಝುಣ್ ತಕ್ಕಥೈ.
ಸೈ ಸೈ ತಲೆದೂಗಿ ಬೆನ್ನು ಚಪ್ಪರಿಸಿದನು
ಕಥೆಯಾಗಿ ಕುಳಿತ ಆ ಮಿಡಾಸ!
ಅವರಿವರು ತೊಟ್ಟ ಬಿಳಿಯ ಬಟ್ಟೆಯ ಮೇಲೆ
ಮಸಿಯ ಸಿಡಿಸಿದರೆಷ್ಟು ಸೊಗಸು ಸಂತೋಷ!
ಯಾರ ತಲೆಗೆಂಥ ಟೊಪ್ಪಿಗೆಯಾದರೊಪ್ಪೀತು-
ಹಗಲಿರುಳು ಅದರದೇ ಧ್ಯಾನ, ಅದುವೆ ಜೀವನೋಲ್ಲಾಸ!

ಕತ್ತರಿಸಿ, ಹೊಲಿದು. ಬಿಚ್ಚಿ ತೇಪೆಯ ಹಚ್ಚಿತೊಟ್ಟು
ತೋರಿಸುವನು ತಗೊ ತಾಸಿಗೆ ನೂರು ವೇಷ.
ಊರಿನುಸಾಬರಿ ಇವನ ಊಟಕುಪ್ಪಿನಕಾಯಿ
ಕೊಂಡಿ ಮಂಚಣ್ಣ, ಶಕುನಿ ಜಕ್ಕಿಸಿ ಹೋದರಿವನೆದುರು
ಅವರಿಗಿದ್ದವೆ ಹೇಳಿ, ನೂರು ಬಾಯಿ ?
ಸಮಯಬಂದಾಗಿರಲಿ ಎಂದು ಸಂಗ್ರಹಿಸಿಹನು
ನಸುಗುನ್ನಿಕಾಯಿ.
ಕರಟಕರು ದಮನಕರಿಗೆಲ್ಲ ಇವನೇ ಇಂದು
ತಂದೆ ತಾಯಿ.

ಕಣ್ಣು ಗುಳಿಗಣ್ಣು, ಸದಾ ಒಳಸಂಚುಗಳ ಕೋಣೆ
ಒಮ್ಮೆಯಾದರೂ ಅಪ್ಪಿತಪ್ಪಿ ಹೃದಯದ ಮಾತು
ಹೊರ ಬಂದರಾಣೆ!

ಬಿಂಕುದುಟಿಗಳ ಮೇಲೆ ಹಾಸ-ವಿರೋಧಾಭಾಸ
ಒಮ್ಮೊಮ್ಮೆ ಮಾತಿನಲಿ ಚೈತ್ರಮಾಸ!
ಮೊದಲ ನೋಟಕ್ಕಿವನು ಹಸುಳೆ, ಪೂರಾ ಹಸುಳೆ
ಗುಮ್ಮನಗುಸುಗ;
ಭಾವಕೋಶದ ಮೇಲುಮುಸುಗನೆಳೆದರೆ ಸಾಕು
ಮೂಗು ಮುಚ್ಚದೆ ಬೇರೆ ಗತಿಯೆ ಇಲ್ಲ.
ಒಳ ಮುಚುಗ; ನಾಲಿಗೆಯು ಹೊರಗೆ ಹಾದರೆ ಚುಚುಗ-
ತಿಂದುಚುಗ!
ಬೆಳಕಿಂಡಿಯಲ್ಲಿಳಿದು ಬಂದು ಬೆಣ್ಣೆಯ ತಿಂದು
ಗುರ್ರೆನುವ ಬಾವುಗ!
ಗೋಣಿಚೀಲದಿ ಹಾಕಿ ಹೊತ್ತು ಹೊರಗೊಗೆದರೂ
ಮತ್ತೆ ಹೇಗೋ ಬಂದು ಮೂಸುವುದು ಸೋಜಿಗ!

ಅಲ್ಲಲ್ಲಿ ಸಂಶಯದಿ ಏಕೆ ಹುಡುಕುತ್ತಿಹಿರಿ
ಇಲ್ಲಿಯೇ, ಇವನಂತರಂಗದಲ್ಲಿಯೇ ಹೊಗೆಯಾಡುತಿದೆ

ಬನ್ನಿ, ಮೂರನೆ ಮಹಾಯುದ್ಧ.
ಗೊಬೆಲ್ಸ ಮಹಾಶಯ ಕೊನೆಯ ಗಳಿಗೆಯಲಿ ತನ್ನೆಲ್ಲ
ಗುಟ್ಟು ಇವನಿಗೆ ಕೊಟ್ಟು ಪ್ರಾಣ ಬಿಟ್ಟ.

ಕಂಡಿರಾ ನೀವಿವನ, ಪರಮ ಸ್ನೇಹಿತನ?
ಸ್ನೇಹಕೆಂದೇ ಮೂರ್ತಿಮತ್ತಾಗಿ ಈ ಇಳೆಗೆ ಅವತರಿಸಿದವನ ?
ಮೊನ್ನೆ ಮೊನ್ನೆಯೆ ಆಯಿತೆನಗೆ ತಾನಾಗಿಯೇ
ಇವನೊಡಲ ಬ್ರಹ್ಮಾಂಡದ ಮಹಾದ್ಭುತ ವಿಶ್ವರೂಪದ ದರ್ಶನ
ಸಿಡಿಲೆರಗಿದಂತಾಯ್ತು ನಡುಗಿಹೋಯಿತು ನನ್ನ ಅತ್ಯಲ್ಪ ಚೇತನ
"ನಮೋನಮಸ್ತೇಸ್ತು ಸಹಸ್ರ ಕೃತ್ವ:
ಪುನಶ್ಚಭೂಯೋಪಿ ನಮೋ ನಮಸ್ತೆ."

'ಮಣ್ಣಿನ ಮೆರವಣಿಗೆ' ಸಂಗ್ರಹದಲ್ಲಿರುವ ಕಣವಿಯವರ 'ಅಪರಾವತಾರ' ಕವಿತೆ, ಸಂಕ್ಷೇಪವಾಗಿ ಹೇಳುವುದಾದರೆ ಒಬ್ಬ ಪುಢಾರಿಯ ಆತ್ಮವೃತ್ತ. ಸ್ವಾತಂತ್ರ್ಯ ಬಂದ ಹತ್ತೇ ವರ್ಷಗಳಲ್ಲಿ, ಸಾಹಸಶೀಲನಾದ ವ್ಯಕ್ತಿಯೊಬ್ಬ ಯಾವ ಯಾವ ದಿಕ್ಕಿನಿಂದ ಭ್ರಷ್ಟಗಾಳಿ-ಆಹಾರಗಳನ್ನು ಸೇವಿಸಿ ಬೆಳೆಯಬಹುದು ಎಂಬುದಕ್ಕೆ ಇಲ್ಲಿಯ ನಾಯಕ ಒಂದು ಉತ್ತಮ ಸಂಕೇತವಾಗಿ ನಿಲ್ಲುತ್ತಾನೆ. ಈ ಕವನದ ನಾಯಕನಂಥವರಿಂದ ಸಮಾಜ ಜೀವನದ ಎಲ್ಲ ಮುಖಗಳೂ ಹೇಗೆ ಕರುಕುಗಟ್ಟಿಕೊಂಡಿವೆ ಎಂಬುದನ್ನು ವಿವರಿಸುವುದೇ ಈ ಕವಿತೆಯ ಉದ್ದೇಶ. ಇಂಥ ವಸ್ತುವನ್ನು ಕಣವಿಯವರು ಆರಿಸಿಕೊಂಡು ಅದಕ್ಕೆ ಅನುಗುಣವಾದ ವ್ಯಂಗ್ಯ ಬೆರೆತ ಉತ್ಪ್ರೇಕ್ಷೆಯ ವೈಭವದ ಶೈಲಿಯಲ್ಲಿ ಕವಿತೆಯನ್ನು ನಿಭಾಯಿಸಲು ಪ್ರಯತ್ನಿಸಿದ್ದಾರೆ. ಇಡೀ ಕವನದಲ್ಲಿ ಅಣಕದ ಧೋರಣೆಯಿದೆ.

ಕವಿತೆಯಲ್ಲಿ ಏಳು ಚರಣಗಳಿವೆ. ಮೊದಲನೆಯ ಚರಣ ನಾಯಕನ ಯೋಗ್ಯತೆಯನ್ನು ಅಳೆಯಲು ಕೆಲವು ಅಳತೆಗಳನ್ನು ಅವಲಂಬಿಸಿ ಸಾಗುತ್ತದೆ. ರಾಜಕಾರಣಿಗಳು ಇತರ ಕ್ಷೇತ್ರಗಳ ಜನಗಳ ಹಾಗೆ ಕ್ರಮಬದ್ಧವಾದ ಪ್ರಗತಿಯ ಹಾದಿಯಲ್ಲಿ 'ಉದಿತೋದಿತ'ರಾಗಿ ಸಾಗುವ ಜಾತಿಯವರಲ್ಲ. ಅವರ ಏರಿಕೆ ಇಳಿಕೆ ಎರಡು ತಟಕ್ಕನೆ ಗೋಚರವಾಗುವ ಬಗೆಯವು. ನಮ್ಮ ಕಣ್ಣೆದುರಿಗೇ ಸಣ್ಣವನಾಗಿದ್ದ,. ಮಾತಾಡಲೂ ಬರದ, ವ್ಯವಹಾರದ ಕಲ್ಪನೆ ಸಾಲದ, ಸಾಮಾನ್ಯ ಪ್ರತಿಭೆಯ ವ್ಯಕ್ತಿ ತಟಕ್ಕನೆ ಹೇಗೆ ಕೀರ್ತಿಯ ಶಿಖರ ಮುಟ್ಟಿಬಿಡುತ್ತಾನೆ ಎಂಬ ಪ್ರಚಾರ ತಂತ್ರದ ಪರಿ ಇಲ್ಲಿ ವರ್ಣಿತವಾಗಿದೆ. ಕಣವಿಯವರ ಈ ನಾಯಕನ ಪರಿಚಯ ಕವನದ ಶರೀರದಲ್ಲಿ ಹಂಚಿಹೋಗಿದೆ. ಕವಿಗೆ ಈತನ ಪರಿಚಯವಾದದ್ದು ಒಂದು ಆಕಸ್ಮಿಕ ಸಂದರ್ಭದಲ್ಲಿ. ಈ ನಾಯಕ ರಾಡಿ ಮೈಯಿನವ; ಡಂಗುರದವ; ಮೇಲಿನವರನ್ನು ದೇವರೆಂದೂ ಕೆಳಗಿನವರನ್ನು

ಕೋಳಿಮರಿಗಳೆಂದೂ ಕಾಣುವ ದ್ರಾಬೆ: ಲೌಕಿಕವಾಗಿ ಕೊಬ್ಬರಿಯ ಜತೆಗೆ ಕರಟವನ್ನೂ ನುಂಗಬಲ್ಲ ಬಕ ಪ್ರಚಂಡ; ಹಣದ ಮುಂದೆ ವೇದದ ನಾದ ಸೊಗಸುವುದಿಲ್ಲವೆಂಬ ಭಾವದವ; ಇತರರ ಬಿಳಿಯ ಬಟ್ಟೆಯ ಮೇಲೆ ಮಸಿ ಸಿಡಿಸಿ ಸುಖಿಸುವವ; ಕೊಂಡೆಯದ ಮಂಚಣ್ಣ, ಶಕುನಿಗಳನ್ನೂ ಮೀರಿಸಿದವ; ನಸುಗುನ್ನಿ, ಬಾವುಗ, ಗೊಬೆಲ್ಸ್‌ನಂಥ ಪ್ರಚಾರ ತಂತ್ರಜ್ಞ; ಕದನದ ಮೂಲ ಪುರುಷ. ಇಂಥವನ ಪರಿಚಯ ಬೆಳೆಸಿಕೊಂಡರೆ ವಿಶ್ವರೂಪದರ್ಶನ ಪಡೆದ ಅರ್ಜುನನಂತೆ ಕವಿ ತತ್ತರಿಸಬೇಕಾಯಿತು. ಇದು ಸ್ಥೂಲವಾಗಿ ಕವನದ ನಡಿಗೆ.

ಈ ಕವಿತೆಯ ಹಲವಾರು ಚರಣಗುಚ್ಛಗಳಲ್ಲಿ ಮುಖ್ಯವಾಗಿ ಸಾಲಿನ ಕೊನೆಯಲ್ಲಿ ಮತ್ತು ಉಳಿದಂತೆ ಕೆಲವೆಡೆಗಳಲ್ಲಿ ಬರುವ ಶಬ್ದಸಾಮ್ಯಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಮೊದಲ ೨೪ ಸಾಲುಗಳವರೆಗೆ ಒಂದು ಚರಣದಲ್ಲೂ ತಪ್ಪದೆ, ಚರಣದ ಒಳಮೈಯಲ್ಲಿ ಕ್ವಚಿತ್ತಾಗಿ, ಕೊನೆಯ ಅಕ್ಷರದಲ್ಲಿ ನಿಯತವಾಗಿ ಕಾಣಿಸಿಕೊಳ್ಳುವ ದ, ದ್ದ, ದ್ಧ - ಈ ಶಬ್ದಗಳ ದಾಳಿಯನ್ನು ಲಕ್ಷಿಸಬೇಕು. ಉದ್ದ, ಎದ್ದ, ಬಿದ್ದ, ಇದ್ದ, ಹಾರಿದ, ಸಾರಿದ. ಎರಗಿದ, ಊರಿದ ಮುಂತಾದ ಕಡೆ ಬೆಳವಣಿಗೆಯ ಕ್ಷಿಪ್ರತೆಯನ್ನು ಸೂಚಿಸುತ್ತ ಭೂತಕಾಲದ ಪ್ರತ್ಯಯವಾಗಿ ಮಾತ್ರ ಬಳಕೆಯಾಗಿರುವ ಶಬ್ದರೂಪಗಳು ಒಂದು ಕಡೆ ಸಾಗಿದರೆ, ನಿಷಿದ್ಧ, ಪ್ರಸಿದ್ಧ, ಅಪ್ರಬುದ್ಧ ಮೊದಲಾದ ಪ್ರತ್ಯಯವಲ್ಲದ ಶಬ್ದಗಳಲ್ಲೂ ಈ ನುಡಿಗಳ ಜೋಡಣೆಯಾಗಿರುವುದರಿಂದ ಇಲ್ಲಿಯ ಸಾಲುಗಳಿಗೆ ಏಕತಾನತೆಯ ಬೇಸರದಿಂದ ಜಿಗಿಯಲು ಸಾಧ್ಯವಾಗಿದೆ. ನಾದ ಪ್ರಮಾದ, ಚೆಲುವಿನಿಂದ್ರ ಈ ಎರಡು ಶಬ್ದಗಳು ಅಪ್ರಯತ್ನಪೂರ್ವಕವಾಗಿ ಮೇಲಿನ ನುಡಿನೆಯ್ಗೆಯೊಂದಿಗೇ ಸೇರಿಹೋಗಿರುವುದು ಗಮನಿಸಬೇಕಾದ ಸಂಗತಿ. ಅಲ್ಲದೆ ಒಂದನೆಯ ಚರಣದಿಂದ ಎರಡನೆಯ ಚರಣದ ಮುಕ್ಕಾಲು ಭಾಗದವರೆಗೆ ಸಾಗಿರುವ ಈ ನುಡಿನೆಯ್ಗೆ ಇದ್ದಕ್ಕಿದ್ದಂತೆ ಎರಡನೆಯ ಚರಣದಲ್ಲಿಯೇ ತನ್ನ ಗತಿಯನ್ನು ಟ ಕಾರ, ಸ ಷ ಕಾರಗಳ ನೇಯ್ಗೆಗೆ ಬದಲಿಸಿಕೊಂಡಿರುವುದು ಕುತೂಹಲಕಾರಿಯಾಗಿದೆ. ಹಾಗೆ ನೋಡಿದರೆ ಇಡೀ ಕವಿತೆ ಇಂಥ ನಾಲ್ಕಾರು ಅಂತ್ಯಾಕ್ಷರಗಳ ಸಮೃದ್ಧ ಬಳಕೆಯನ್ನು ಮೈಗೂಡಿಸಿಕೊಂಡು ಸಾಗಿದೆ. ಮೇಲೆ ಹೇಳಿದಂತೆ ೨೪ ಸಾಲುಗಳವರೆಗೆ ದ, ದ್ದ, ದ, ದ್ರ - ಈ ವರ್ಣ ಮಿಶ್ರಣಗಳಿದ್ದರೆ ೨೫ನೆಯ ಸಾಲಿನಿಂದ ಮುಂದಕ್ಕೆ ಏಳು ಸಾಲುಗಳಲ್ಲಿ ಟ-ಸ ಕಾರಗಳು ಬಳಕೆಗೊಂಡಿವೆ. ಮುಂದೆ ೩೩ನೆಯ ಸಾಲಿನಿಂದ ಯಿ, ಸ, ಷ ಗಳನ್ನು ಅಂತ್ಯಾಕ್ಷರಗಳಲ್ಲಿ ಅನಿಯತವಾಗಿ ಬೆರೆಸಿರುವ ರೀತಿ. ಕೊನೆಯ ಚರಣದಲ್ಲಿ ಬಹುಕಾಲ ಕಾಡುವ 'ಗ' ಕಾರ ಕೊನೆಯ ಭಾಗದ 'ನ' ಕಾರಗಳ ಅಧ್ಯಯನವು ಕವಿತೆಯ ಹೊರಶಿಲ್ಪದ ಬಗೆಗೆ ಬೆಳಕು ಬೀರುತ್ತದೆ. ಮುಂದೆ ಚೆನ್ನವೀರ ಕಣವಿಯವರು 'ಜಗದೇಕ ಮಲ್ಲ' ಎಂಬ ಕವಿತೆಯಲ್ಲಿ ಶೀರ್ಷಿಕೆಯಿಂದ ಹಿಡಿದು ಕೊನೆಯವರೆಗೆ 'ಲ್ಲ'ಕಾರವನ್ನು ದುಡಿಸಿಕೊಳ್ಳುವುದಕ್ಕೆ ಸಹಾಯಕವಾದ ತಾಂತ್ರಿಕ ನೆರವು ಈ ಕವಿತೆಯಿಂದ ಸಿಕ್ಕಿದೆ ಎಂದು ಹೇಳಬಹುದು.

ಒಂದನೆಯ ಚರಣದ ಬಗೆಗೆ ಮೊದಲಲ್ಲೇ ಸೂಚನೆಗಳನ್ನು ಕೊಟ್ಟಿದ್ದೇನೆ. ಇಲ್ಲಿ ಕುತಬ್‌ಮೀನಾರ ಮತ್ತು ಗೌರಿಶಂಕರ ಈ ಎರಡು ಎತ್ತರಗಳು ಮಾನವನ ವ್ಯವಹಾರ ಲೋಕದ

ಮತ್ತು ಸಾಧನಾಲೋಕದ ಎರಡು ತಲುಪು ನೆಲೆಗಳನ್ನು ಸೂಚಿಸುತ್ತವೆ. ರಾಜಕಾರಣಿಯಾಗಿ ಮೇಲಕ್ಕೆ ಬರಬೇಕೆಂದು ಬಯಸುವ ವ್ಯಕ್ತಿ ಬೌದ್ಧಿಕವಾದ ಯಾವ ಸಾಧನೆಯನ್ನೂ ಮಾಡುವುದಿಲ್ಲ. ಬುದ್ಧನಿಗೂ ಗೌರೀಶಂಕರಕ್ಕೂ ದೂರದಿಂದಲೇ ಕೈಮುಗಿದು ವ್ಯಾವಹಾರಿಕ ನೆಲೆಯಾದ ರಾಜಧಾನಿ ದೆಹಲಿಯಲ್ಲಿನ ಕುತುಬಮೀನಾರವನ್ನು ತನ್ನ ನೆಲೆಯಾಗಿ ಆರಿಸಿಕೊಂಡಿದ್ದಾನೆ. ಚೋಟು, ಗೇಣು, ಆಕಾಶ ಈ ಮೂರು ಶಬ್ದಗಳು ವಾಮನನ ಮೂರು ಹೆಜ್ಜೆಗಳಂತೆ ಈತ ಕ್ಷಿಪ್ರವಾಗಿ ರಾಜಕೀಯ ವಲಯದಲ್ಲಿ ಪ್ರಸಿದ್ಧಿಗೆ ಬಂದ ಪರಿಯನ್ನು ಚಿತ್ರಿಸುತ್ತವೆ. ಕೆರೆ-ಸಾಗರಗಳ ಹೋಲಿಕೆಯೂ ಈ ದಿಕ್ಕಿನಲ್ಲೇ ಬೆಳೆದರೂ ಆ ನಾಯಕನ ಬೆಳವಣಿಗೆ ಸ್ವಚ್ಛವಾದುದಲ್ಲ ಎಂಬುದನ್ನು 'ರಾಡಿ ಮೈ' ಎಂಬ ಮಾತು ಸ್ಪಷ್ಟಗೊಳಿಸುತ್ತದೆ. ಬುದ್ಧನಾಗುವುದಾಗಲಿ ಪರ್ವತ ಸಾಹಸಿಯಾಗುವುದಾಗಲಿ ಅವನಿಗಿಷ್ಟವಿಲ್ಲದ, ಕೈಲಾಗದ ಸಂಗತಿ. ಆದರೆ ಇನ್ನೊಬ್ಬರನ್ನು ಅನುಕರಿಸುವ ಚಟ ತನಗಿಲ್ಲ, ತಾನು ಸ್ವೋಪಜ್ಞ ಎಂಬ ಹೆಮ್ಮೆಯಿಂದ ಬೀಗುತ್ತಾನೆ. ತಮ್ಮ ಅಳತೆಗೆ ಮೀರಿದ ವಿಷಯಗಳ ಬಗೆಗೂ ರಾಜಕಾರಣಿಗಳು ಎಂಥ ಧೋರಣೆ ತಳೆಯಬಲ್ಲರೆಂಬುದಕ್ಕೆ ಈ ಉಡಾಫೆಯ ಮಾತುಗಳು ಸಾಕ್ಷಿಯಾಗುತ್ತವೆ.

ಎರಡನೆಯ ಚರಣದಲ್ಲಿ ನಾಯಕನ ಸರ್ವಾಂತರ್ಯಾಮಿತ್ವದ ಚರ್ಚೆಯಿದೆ. ಬಾಲಗುಂಡಾಡಿಸುವ ಅನುನಯಪ್ರವೃತ್ತಿ, ಹೋದ ಹೋದಲ್ಲಿ ಪ್ರತಾಪವನ್ನು ಕೊಚ್ಚಿಕೊಳ್ಳುವ ಜಾಣತನ, ಮುದ್ದಾಗಿ ತೋರುತ್ತಲೇ ಹಟಾತ್ತಾಗಿ ಹದ್ದಾಗಿ ಹಾರುವ ಸಮಯಸಾಧಕ ಬುದ್ಧಿ, ಇಂಥ ತನ್ನ 'ಕಲ್ಯಾಣ ಗುಣ'ಗಳನ್ನು ಒಗ್ಗಿಸಿಕೊಳ್ಳಲಾಗದ ಪ್ರಾಮಾಣಿಕ ಜನರ ಬಗೆಗೆ ತಿರಸ್ಕಾರ ಬೆರೆತ ಅನುಕಂಪೆ, ತನ್ನ ಬಗೆಗೆ ಡಂಗುರ ಸಾರಿಕೊಳ್ಳುವ ಬುದ್ಧಿ, ಕಾರ್ಯಸಾಧನೆಗಾಗಿ ಉನ್ನತ ವಲಯಗಳಲ್ಲಿ ಡೊಗ್ಗು ಸಲಾಮು ಹೊಡೆಯುತ್ತ ಕೆಳಸ್ತರದಲ್ಲಿ ಕೋಳಿಮರಿಗಳಂತಹ ಪುಕ್ಕಲು ಜನರ ಮೇಲೆ ಸಾಧಿಸುವ ರೊಚ್ಚು ಇಲ್ಲಿ ವರ್ಣಿತವಾಗಿದೆ. ಕವಿಗೆ ಇಂಥದೊಂದು ಸಂದರ್ಭದಲ್ಲಿ ನಾಯಕನ ಸಾಕ್ಷಾತ್ ಪರಿಚಯವಾಗುತ್ತದೆ. ಗುಂಪುಗೂಡಿಸುವುದರಲ್ಲಿ ಆತ ಪ್ರಸಿದ್ಧ ಎಂಬುದನ್ನು 'ಚಿಕ್ಕೆ ಬಳಗದ ಚಂದ್ರ' ಎಂಬ ಮಾತು ಸಮರ್ಥವಾಗಿ ಧ್ವನಿಸುತ್ತದೆ. ಇಷ್ಟಾದರೂ ಕವಿಯ ದೃಷ್ಟಿಯಲ್ಲಿ ಆತ ಸವೆದ ಪಾವಲಿಗಳ ನಡುವೆ ಹೊಳೆಯುವ ಬೆಳ್ಳಿ ರೂಪಾಯಿ ಅಷ್ಟೆ. ಆತನಲ್ಲಿ sterling qualities ಅಪರಂಜಿತನ ಇಲ್ಲ. ಇವನ ಅಭಿರುಚಿ ಬರಿಯ ವ್ಯಾಪಾರಿಯ ಮಟ್ಟದ್ದು ಎಂಬುದನ್ನು 'ತಕ್ಕಡಿಯ ಪರಡಿ' ಎಂಬ ಸಂಕೇತ ಖಚಿತಗೊಳ್ಳುತ್ತದೆ. ಈತನ ಆಸೆ ಆಮಿಷಗಳು ಇತಿಮಿತಿಯಿಲ್ಲದಂಥವು, ಜೀರ್ಣಶಕ್ತಿಯೂ ಅದ್ಭುತವಾದದ್ದು. ಕಳ್ಳು ದ್ರಾಕ್ಷಾರಸಗಳ ಸೇವನೆಯಿಂದ ಬರುವ ಅಮಲು ಈ ದುರಾಶೆಯ ಅಮಲಿನ ಎದುರಿಗೆ ತೀರ ಸಪ್ಪೆಯಾಗಿ ಬಿಡುತ್ತದೆ.

ಮೂರನೆಯ ಚರಣಖಂಡ ನಾಯಕನ ನಡವಳಿಕೆಯ ಇನ್ನೊಂದು ಪುಟವನ್ನು ತೆರೆಯುತ್ತದೆ. ಹಣದ ಸಂಗೀತಕ್ಕೆ ಒಲಿದ ಮನಸ್ಸು ಈತನದು. ಈ ರಾಗವನ್ನು ಒಲಿಸಿಕೊಳ್ಳುವವನು ಉಳಿದವರ ಟೀಕೆಗಳಿಗೆ ಸೊಪ್ಪು ಹಾಕುವುದಿಲ್ಲ. ಲೆಕ್ಕದ ಪುಸ್ತಕ ಅವನಿಗೆ ವೇದದಷ್ಟು ಪೂಜ್ಯ, ಮೈದಾಸನ ಕಥೆಯನ್ನು ಬರೇ ಕೇಳಿದ್ದೇವಷ್ಟೆ. ಆದರೆ ಆತನಂಥವನೂ ಈ ನಾಯಕನ ಸಮಕ್ಕೆ ನಿಲ್ಲಲಾರ.

ದುಡ್ಡು ಸೇರಿಸುತ್ತ ಹೊರಟಾಗ ವ್ಯಕ್ತಿ ತನ್ನ ಸುತ್ತ ಎಂಥ ಭಂಡ ಬೇಲಿಯನ್ನು ಹಾಕಿಕೊಳ್ಳುತ್ತಾನೆಂಬುದು ಇಲ್ಲಿ ವಿಶದವಾಗುತ್ತದೆ.

ನಾಲ್ಕನೆಯ ಚರಣದ ನಾಯಕನ ವ್ಯಾವಹಾರಿಕ ಮುಖದ ಹತ್ತಾರು ಮೊಡವೆಗಳನ್ನು ಚಿತ್ರಿಸುತ್ತ ಹೋಗುತ್ತದೆ. ಅಸೂಯೆ ಇಲ್ಲಿಯ ಸ್ಥಾಯಿ. ಸಭ್ಯರ ಜೀವನ ರೀತಿ ಈತನಿಗೆ ನುಂಗಲಾರದ ತುತ್ತಾಗುತ್ತದೆ. ಅವರ ಬಿಳಿಯ ಬಟ್ಟೆಯ ಮೇಲೆ ಮಸಿ ಸಿಡಿಸಲು ಅವಕಾಶ ಹುಡುಕುತ್ತಾನೆ. ಎಲ್ಲರ ತಲೆಗಳೂ ಇರುವುದು ಟೋಪಿ ಹಾಕಿಸಿಕೊಳ್ಳುವುದಕ್ಕೆ ಮಾತ್ರ ಎಂದು ಈತ ನಂಬುತ್ತಾನೆ. ಊರಿನ ಉಸಾಬರಿ ಹಚ್ಚಿಕೊಂಡಂತೆ ನಟಿಸಿ, ಎಲ್ಲರ ನಡುವೆ ಕಿತಾಪತಿ ಎಬ್ಬಿಸುವುದೇ ಈತನ ಉದ್ದೇಶ. ಈ ಮೂರು ದುರ್ಗುಣಗಳನ್ನು ಸಮರ್ಥಆಗಿ ರೂಪಿಸಲು ಕವಿ ಬಸವಣ್ಣನ ಕಾಲದಲ್ಲಿ ಚಾಡಿಗೆ ಪ್ರಸಿದ್ಧವಾಗಿದ್ದ ಕೊಂಡೆ (ಚಾಡಿ)ಯ ಮಂಚಣ್ಣ, ಮಹಾಭಾರತದ ಶಕುನಿ, ಕರಟಕ, ದಮನಕ ಇವರನ್ನೆಲ್ಲ ಉದ್ಧರಿಸಿದ್ದಾರೆ. ಈ ಚರಣದಲ್ಲಿ ಉದ್ದಕ್ಕೂ ಐತಿಹಾಸಿಕ, ಪೌರಾಣಿಕ ಪ್ರತಿಮೆಗಳು, ಪ್ರಾಣಿ, ಸಸ್ಯ ಲೋಕಗಳ ರೂಢ ಸಂಕೇತಗಳು ಬೆಳೆದುಕೊಂಡು ಬಂದು ನಾಯಕನ ಸಂಕೀರ್ಣ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತವೆ. ಐದನೆಯ ಚರಣದಲ್ಲಿ ಭಗವಂತನ ವಿಶ್ವರೂಪದರ್ಶನವಾಗಿ ತತ್ತರಿಸಿದ ಅರ್ಜುನನ ಸ್ಥಾನದಲ್ಲಿ ನಿಂತ ಕವಿ ಈ ಜನತಾ ಜನಾರ್ಧನನ ಕಾಮರೂಪಗಳನ್ನು ಮತ್ತೆ (ಬೇಸರವಿಲ್ಲದೆ) ವರ್ಣಿಸತೊಡಗುತ್ತಾನೆ. ಐವತ್ತೇಳನೆಯ ಸಾಲಿನಿಂದ ಒಂಬತ್ತು ಸಾಲುಗಳವರೆಗೆ ಲಾಸ್ಯವಾಡುವ 'ಗ'ಕಾರದ ಶಬ್ದಾಭಿನಯ (ಗುಮ್ಮನ ಗುಸುಗ, ಚುಚುಗ, ತಿಂದುಬುಗ, ಬಾವುಗ) ವಿವಿಧ ತರಂಗಗಳಲ್ಲಿ ಪ್ರಸಾರಗೊಳ್ಳುತ್ತದೆ. (ಕೊನೆಯ ಐದು ಸಾಲುಗಳಲ್ಲಿ ಬರುವ 'ನ'ಕಾರದ ಪುನರಾವೃತ್ತಿಗೆ ಈ ಬಾಹುಳ್ಯವಿಲ್ಲ) ಮೇಲು ನೋಟಕ್ಕೂ ಒಳಚರ್ಯೆಗೂ ಸಮುದ್ರದಷ್ಟು ಅಂತರವಿರುವುದನ್ನು ಈ ಸಾಲುಗಳು ತೋರಿಸುತ್ತವೆ. ಅವನ ಸರ್ವೇಂದ್ರಿಯಗಳೂ ಹೇಗೆ ವಿರೋಧಾಭಾಸದ ಒಳಸಂಚಿನಲ್ಲಿ ಸಹಕಾರಿಯಾಗಿವೆ ಎಂಬುದು ಇಲ್ಲಿನ ಸಾಲುಗಳಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ. ಕಣ್ಣು, ತುಟಿ, ನಾಲಗೆ, ಮೂಗು, ಚರ್ಮ ಇವೆಲ್ಲ ಆತನ ಸ್ವಾರ್ಥಕ್ಕೆ ಉಪಯೋಗವಾಗುವಂತೆಯೇ ನಟಿಸುತ್ತವೆ. ಒಳಮುಚುಗ, ಚುಚುಗ, ಉಚುಗ ಈ ಮೂರು ಶಬ್ದಗಳು ನಾಯಕನ ಬುದ್ಧಿ-ವೈಪರೀತ್ಯಗಳನ್ನು ಮಾರ್ಮಿಕವಾಗಿ ತಿಳಿಯಪಡಿಸುತ್ತವೆ. ಶ್ಲೇಷೆಯಿರುವ ಈ ಸಾಲುಗಳಿಗೆ ಸ್ವಲ್ಪ ಅರ್ಥ ವಿವರಣೆ ಅಗತ್ಯ. 'ಒಳಮುಚುಗ' ಎಂದರೆ ಮುಟ್ಟಿದರೆ ಮುನಿ ಎಂಬ ಸಣ್ಣ ಮುಳ್ಳಿನ ಕಂಟಿ. ನಾಯಕನೂ ಅಂಥವನೇ, ಆದರೆ ಈ ಸಂಕೋಚನ, ಅವರಿವರ ಆಘಾತದಿಂದಗಾಲಿ ತನ್ನ ಮಾರ್ದವತೆಯಿಂದಾಗಲಿ ಬಂದ ಗುಣವಲ್ಲ. ಒಳಮುಚುಗ ಎಂಬ ಶಬ್ದಕ್ಕೆ ಶ್ಲೇಷೆಯ ಎರಡನೆಯ ಅರ್ಥವೂ ಈತನಿಗೆ ಅನ್ವಯಿಸುತ್ತದೆ. ಈ ನಾಯಕ ಎಷ್ಟೋ ವಿಷಯಗಳನ್ನು ಹೊರಗಿನವರಿಗೆ ತಿಳಿಯದ ಹಾಗೆ, ಸ್ವಾರ್ಥದೃಷ್ಟಿಯಿಂದ ಒಳಗೇ ಮುಚ್ಚಿಟ್ಟುಕೊಳ್ಳಬಲ್ಲವನು, ಎರಡನೆಯದು 'ಚುಚುಗತನ' ಬೇಯಿಸಲು ಇಟ್ಟ ಪದಾರ್ಥ ಸರಿಯಾಗಿ ಬೆಂದಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಅಡುಗೆ ಮನೆಯಲ್ಲಿ 'ಚುಚುಗ' ಎಂಬ ಉಪಕರಣವನ್ನು ಬಳಸುತ್ತಾರೆ. ಈತ ಆ ಉಪಕರಣದ ಹಾಗೆ ಎಲ್ಲರನ್ನೂ ಪರೀಕ್ಷೆಗೆ ಒಳಪಡಿಸುವ ಸ್ವಭಾವದವ ಅಲ್ಲದೆ ಚುಚುಗದ ತುದಿ ಚೂಪಾಗಿರುವುದರಿಂದ ಚುಚ್ಚಿ ನೋಡುವುದೂ ಸಾಧ್ಯವಾಗುತ್ತದೆ. ಹಾಗೆಯೇ ಈತ ಎಲ್ಲರನ್ನೂ ಚುಚ್ಚಿ ನೋಡುವುದೂ ಸಾಧ್ಯವಾಗುತ್ತದೆ.

ಹಾಗೆಯೇ ಈತ ಎಲ್ಲರನ್ನೂ ಚುಚ್ಚಿ ಶೋಷಿಸಿ ಖುಷಿಪಡುವಾತ. 'ತಿಂದುಚುಗತನ', ಅಂದರೆ ತಿಂದದ್ದನ್ನು ತಿಂದ ಜಾಗದಲ್ಲೇ ವಿಸರ್ಜನೆ ಮಾಡುವುದು. ಅಂದರೆ ಕೊಳಕು ಬುದ್ಧಿ, ಉಪಕಾರಗೇಡಿತನ ಈ ಎರಡೂ ನಾಯಕನಿಗೆ ಸಿದ್ಧಿಸಿವೆ. ಈ ಮೂರು ಬಗೆಯ ದುರ್ಗುಣಗಳ ನಾಯಕನನ್ನು ಕವಿ ಕಳ್ಳ ಬೆಕ್ಕಿಗೆ ಹೋಲಿಸಿದ್ದಾರೆ. ಈ ಕಲಹಲಂಪಟನ ಗುಮ್ಮನಗುಸುಗತನ ಮತ್ತು ಪ್ರಚಾರ ತಂತ್ರಗಳನ್ನು ವಿಶ್ವಮಹಾಯುದ್ಧದಲ್ಲಿ 'ಗೊಬೆಲ್ಸ್ ಮಹಾಶನಯ' ಯುದ್ಧ ತಂತ್ರಗಳ ಹಿನ್ನೆಲೆಯಾಗಿ ತೂಗಿ ನೋಡಿದ್ದಾರೆ.

ಕಡೆಯ ಚರಣದಲ್ಲಿ ಮತ್ತೆ ಈ ನಾಯಕನ ಪರಿಚಯ ತನಗೊದಗಿದ ಒಂದು ಸಂದರ್ಭವನ್ನು ಪ್ರಸ್ತಾಪಿಸಿದ್ದಾರೆ. ಅವತಾರಿಯನ್ನು ಕಂಡ ಅರ್ಜುನನಿಗಾದಂತೆ ಈ ಅಪರಾವತಾರಿಯನ್ನು ಕಂಡಾಗ ತಮ್ಮ 'ಅತ್ಯಲ್ಪ ಚೇತನ' ಹೇಗೆ ನಡುಗಿಹೋಯಿತು ಎಂಬುದನ್ನು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ಇಂಥ ವ್ಯಂಗ್ಯ ಧೋರಣೆಗೆ ಅನುಗುಣವಾಗಿ ಈ ನಾಯಕರಿಗೂ ಇರುವ ವ್ಯತ್ಯಾಸವೂ ಇಲ್ಲಿ ತಟಕ್ಕನೆ ಎದ್ದು ಕಾಣುತ್ತದೆ. ಇಂದಿನ ನಾಯಕನಿಗೆ ಅಭಿಮಾನದ, ಆದರ್ಶದ, ಶೀಲ ನಿರ್ಮಾಣದ ಗೊಡವೆಗಳು ಅಂಟುವುದಿಲ್ಲ. ಈಗ ರಾಷ್ಟ್ರಚೇತವನ್ನು ಮಲಿನಗೊಳಿಸುವ ಅಪರಾವತಾರವನ್ನು ಎತ್ತಿ ಬಂದಿದ್ದಾನೆಂಬ ಧ್ವನಿ ಇಲ್ಲಿದೆ. ಉದ್ದಕ್ಕೂ ಅಣಕದ ಒಳದನಿಯಿದ್ದು ಹೇರಳವಾದ ಲಕ್ಷ್ಯಗಳ ಉಲ್ಲೇಖದಿಂದ ಆ ಧ್ವನಿಯ ಗಡಸುತನವನ್ನು ಬಿತ್ತರಿಸುವ ಪ್ರಯತ್ನ ನಡೆದಿದೆ.

ಕವಿತೆಯ ಹಿಂದೆ ಕವಿಯ ಸಾಮಾಜಿಕ ಕಾಳಜಿ ವ್ಯಕ್ತವಾಗಿದೆ ಎಂಬುದು ನಿಜವಾದರೂ ಕಣವಿಯವರು ಇಂಥದೊಂದು ವಸ್ತು ಬೇಡುವಷ್ಟು ಪ್ರಮಾಣದಲ್ಲಿ ತಮ್ಮ ವ್ಯಂಗ್ಯ-ಕಾಕುಗಳ ಹತಾರುಗಳನ್ನು ಹರಿತಗೊಳಿಸಿಕೊಂಡಿಲ್ಲ ಎನ್ನಿಸುತ್ತದೆ. ಗೌರೀಶ ಕಾಯ್ಕಿಣಿಯವರೆನ್ನುವಂತೆ "ಕಣವಿಯವರಿಗೆ ಒಂದು ಸಾಮಾಜಿಕ ಆದರ್ಶ ಇದೆ. ಆದರೆ ಅದು ಮೂರ್ತಿಭಂಜಕ ರೀತಿಯದಲ್ಲ, ರಾಜಕೀಯ ಪ್ರಜ್ಞೆ ಇವರಲ್ಲಿ ಸ್ಥಗಿತ, ಸ್ತಿಮಿತ". ಇನ್ನೊಂದು ಸಂಗತಿಯೆಂದರೆ ಪೂರ್ವಾಪರ ಸಂಬಂಧವಿಲ್ಲದ ನಿದರ್ಶನ- ಸಂಕೇತಗಳನ್ನು ಸುಮ್ಮನೆ ಒಂದಾದ ಮೇಲೊಂದರಂತೆ ಕೆಡವುತ್ತ ಹೋಗಿರುವುದರಿಂದ ಅವೆಲ್ಲ ಮೂಲರಾಗವೊಂದನ್ನು ಪ್ರಚುರಪಡಿಸಲು ಸಹಾಯಕವಾಗುವ ಸಹಕಾರೀ ಧ್ವನಿಯಾಗುವ ಬದಲಿಗೆ ತಮ್ಮ ತಮ್ಮ ವಿಶಿಷ್ಟ ಸ್ವರಗಳನ್ನು ರಂಜಕವಾಗಿ ಮೆರೆಸುವ ಕಾರ್ಯದಲ್ಲಿ ತೊಡಗಿವೆಯೇನೋ ಎನ್ನಿಸುತ್ತದೆ.

ಕೊನೆಯದಾಗಿ ಕವಿ ಇಂಥ ನಾಯಕನ ಆಕಸ್ಮಿಕ ಪರಿಚಯ ತನಗಾಯಿತೆಂದೆ ಎರಡು ಸಲ ಕೊಡುವ ಹೇಳಿಕೆಯನ್ನು ಬಿಟ್ಟರೆ ಕವಿತೆಯ ಯಾವ ಭಾಗದಲ್ಲೂ ಕವಿ ತನ್ನ ನಾಯಕನ ಸಂಬಂಧವನ್ನು ಕುರಿತು ಚಿಂತಿಸಿದಂತೆ ಕಂಡುಬರುವುದಿಲ್ಲ. ಆದ್ದರಿಂದ ಇಂಥ ಕವಿತೆಗಳಲ್ಲಿ ಅತ್ಯಗತ್ಯವಾದ 'ಆಪ್ತತೆ' ತಪ್ಪಿದಂತಾಗಿದೆ. ತನಗೆ ಕಂಡ ನಾಯಕನೊಬ್ಬನ ಮೂಲಕ 'ನಾಯಕ ಲಕ್ಷಣ'ಗಳನ್ನು ವಿವರಿಸುವುದಕ್ಕೂ, ಬರಿಯ ಲಕ್ಷಣ ಸೂತ್ರಗಳಿಂದ ಸರಳೀಕರಿಸಿ ಒಬ್ಬ ನಾಯಕನನ್ನು ಕಟ್ಟುವುದಕ್ಕೂ ತುಂಬ ವ್ಯತ್ಯಾಸವಿದೆ.

ಅ. ರಾ. ಮಿತ್ರ

# ೧೯. ರಂಜನಾ

ರಂಜನಾ -
ಎಲ್ಲಿ ಕುಳಿತರು ಬಂದು ಕಿವಿಗೆ ಝೇಂಕರಿಸುವುದು
ಮನೆ ತುಂಬ ಹರಿದಾಡಿ ಮರಿದುಂಬಿ ಗುಂಜನ;
ಕಣ್ಣು ನೀಲಾಂಜನ, ಕರಗಿಸಿದ ನಕ್ಷತ್ರ
ಮೂಗು ಹಟಮಾರಿತನಕೊಡೆದ ಮೊಗ್ಗು -
ಗೋಣು ಹೊರಳಿಸಿ ಸೋಗು ಮಾಡಿ ಕುಣಿವೀ ನವಿಲು
ಎತ್ತಿಕೊಂಡರೆ ಮುಗಿಲತನಕ ಹಿಗ್ಗು !

ದಿನದಿನದ ಬೆಳಗು ಹೊಂಗಿರಣದ ಕಿರೀಟ
ನೂರು ಬಣ್ಣದ ಹೂವ ನರುಗಂಪನ್ನೊಮ್ಮೆಲೇ ಚಿಮ್ಮಿಸುವ ತೋಟ.
ಇದು ಯಾವ ಹಕ್ಕಿ-ಹಾಡಿನ ಮಧುರ ಸಂಪುಟ?
ಎಲ್ಲ ಸಂತೋಷಕೂ ಕನ್ನಡಿಯ ಹಿಡಿಯುವುದು ಈ ಮುಖದ
ಮುದ್ದು ಮಾಟ.

ಆನಂದ ಬಂದರಿವಳಾಡಿಸುವನು
ಚಂದ್ರ ಒಂದೇ ಸವನೆ ಕಾಡಿಸುವನು
ಮೂವರೂ ಕೂಡಿದರೆ ಮೂರು ಲೋಕಕು ದಾಳಿ
ಯಾವ ದೇವರು ಬಂದು ಬಿಡಿಸುವವನು?

ಮೂರು ಸಲ ಒಪ್ಪಂದ, ನೂರು ಸಲ ಯುದ್ಧ
ಅವರಿವರ ಸಂಧಾನ ಮೊದಲೇ ನಿಷಿದ್ಧ !

ಪಡುವಣಕೆ ಸಂದ ರವಿ ಮೂಡಣದಿ ಎದ್ದ
ರಂಗಭೂಮಿಗೆ ಮತ್ತೆ ರಥ ಕುದುರೆ ಸಿದ್ಧ.

ರಂಜನಾ
ಇವಳ ದೀರ್ಘಸ್ವರದ ನಡುವೆ ಅವರಿಬ್ಬರೂ ಬರಿ ವ್ಯಂಜನ,
ಸೆಡವು ಬಂದರೆ ಸುತ್ತಿ ಬೀಸುವ ಪ್ರಭಂಜನ!
ತಕ್ಷಣವೆ ಕೇಳುವುದು ಗುಡುಗು ಮಿಂಚಿನ ತಾನ
ಮರುಚಣದಿ ಮಳೆ ಬರುವ ಮೇಳಗಾನ,
ಸುತ್ತಿ ಸುಳಿವುದು ಮತ್ತೆ ಮಂದ ಪವನ,
ಮುಗಿಲು ತೆರೆವುದು ತನ್ನ ಕಲೆಯ ಭವನ,
ನೀರಿನೊಳು ಆಡುವುವು ಮೂರು ಮೀನ.

ದೇವಲೋಕದ ಸರಕು ಹೊತ್ತು ತಂದಿಹ ಹಡಗು
ಈ ದಡವ ತುಂಬಿರುವದಿದರ ಬೆಡಗು ;
ಕ್ಷಿತಿಜದಂಚಿನವರೆಗೆ ತೆರೆ - ನೊರೆಯ ಕೌತುಕವು
ತೆರೆಯುವದು ದಿನಕೊಂದಮೌಲ್ಯ ವಸ್ತು.

ಇರುಳ ಮೌನಕೆ ಬೆಳಗು ತೊದಲು ನುಡಿದು,
ಮೂಡ ಪಡುವಣದಲ್ಲಿ ಜೀವ ಒಡನುಡಿದು;
ಬೆಳಕು-ಬಯಕೆಯ ಬಳ್ಳಿ ನಾಲ್ದೆಸೆಗು ಹಬ್ಬಿ
(ಮರ ಮರವನಾಡಿಸಿವೆ ತರತರದ ಗುಬ್ಬಿ)
ಹುವ ಸೂಸಿದೆ ಸುತ್ತ ಪಾರಿಜಾತ
ಹಸುಳೆ ನಗೆ, ಹೂ ಬಿಸಿಲು ಓ! ಎಂಥ ಚಿತ್ರ.

ರಂಜನಾ
ರಂಜನಾ
ಕುಹೂ ಕುಹೂ ಕೂಜನ
ವಾತ್ಸಲ್ಯದ ಕೇತನ
ಇಲ್ಲಿ ಬಾ, ಹೆಜ್ಜೆಗಳ ಕುಣಿಸಿ ತೋರಿಸು, ಜಾಣೆ
ನೋಡೋಣ. ಕಾರಂಜಿ ಬೃಂದಾವನ!

**ಈ ಸೃಷ್ಟಿ ನೂತನ**
**ನೀನೆಮ್ಮ ಚೇತನ**
**ತೃಣಮಪಿ ನ ಚಲತಿ ನಿನ್ನ ವಿನಾ, ನಿನ್ನ ವಿನಾ, ನಿನ್ನ ವಿನಾ.**

ಬಹುತೇಕ ನವೋದಯ (ರಮ್ಯ) ಕವಿಗಳಿಗೆ ನಮ್ಮ ದೇಶ, ರಾಜ್ಯ, ಪರಿಸರ, ನದಿ-ಗುಡ್ಡಗಳು, ನಿಸರ್ಗ, ಮಳೆ-ಗಾಳಿ, ಹೂವು-ದುಂಬಿ ಅಪ್ಯಾಯಮಾನವಾಗಿದ್ದವು. ಅವರು ಬರೆದ ಕವಿತೆಗಳಲ್ಲಿ ಅವರ ಈ ಆಶಯವನ್ನು ಸಹಜವಾಗಿ ಗುರುತಿಸಬಹುದು. ಈ ಕವಿಗಳು ಪರಿಸರದ ಜೊತೆಗೆಯೇ ತಮ್ಮ ಕುಟುಂಬವನ್ನೂ ಬಹುವಾಗಿ ಪ್ರೀತಿಸುತ್ತಿದ್ದರು. ಅವರು ಚಿತ್ರಿಸಿದ ಕಾವ್ಯನಾಯಿಕೆ ಅವರ ಪತ್ನಿಯೇ (ಉದಾ: ಕೆ.ಎಸ್.ಎನ್. ಕವಿತೆಗಳು) ಆಗಿರುತ್ತಿದ್ದಳು. ಕಾವ್ಯದಲ್ಲಿ ತಮಗೆ ಪ್ರಿಯರಾದ ವ್ಯಕ್ತಿಗಳ ಬಗ್ಗೆ ಬರೆಯುವುದರಲ್ಲಿ ಅವರು ಖುಷಿ ಅನುಭವಿಸುತ್ತಿದ್ದರು. ಗೆಳೆಯರು ರಾಷ್ಟ್ರನಾಯಕರು, ಸಂಗೀತಗಾರರು, ಗಣ್ಯ ವ್ಯಕ್ತಿಗಳು ಹೀಗೆ ವಿವಿಧ ವ್ಯಕ್ತಿ ಚಿತ್ರಣಗಳು ಈ ರೀತಿಯ ಕಾವ್ಯದಲ್ಲಿ ಕಾಣಿಸಿಕೊಂಡಿವೆ.

ಕಣವಿಯವರು ಅನೇಕ ವ್ಯಕ್ತಿಚಿತ್ರಣ ಕವಿತೆಗಳನ್ನು ಬರೆದಿದ್ದಾರೆ. ಒಬ್ಬ ಕುಶಲ ಕಲಾಕಾರನಂತೆ ವ್ಯಕ್ತಿಗಳ ಪ್ರತಿ ಸೂಕ್ಷ್ಮ ವಿವರಗಳನ್ನೂ ಕಣವಿ ತಮ್ಮ ಕವಿತೆಗಳಲ್ಲಿ ಕಟ್ಟಿಕೊಡುತ್ತಾರೆ. ಅವರ ಕಾವ್ಯದ ವ್ಯಕ್ತಿ, ಎದುರಿಗೆ-ಸಾಕ್ಷಾತ್ ಬಂದು ನಿಂತಿದ್ದಾನೆ ಎಂಬಂತೆ ಅವರ ಕಾವ್ಯ ಕಣ್ಣಿಗೆ ಕಟ್ಟುತ್ತದೆ. 'ನೆಲ -ಮುಗಿಲು' ಸಂಗ್ರಹದ (೧೯೬೫) ಪ್ರಸ್ತುತ 'ರಂಜನಾ' ಕವಿಯತೆಯೂ ವ್ಯಕ್ತಿ ಪ್ರಧಾನವಾದ ವಾತ್ಸಲ್ಯ ಗೀತೆಯಾಗಿದೆ. ಈ 'ರಂಜನಾ' ಬೇರೆ ಯಾರೂ ಅಲ್ಲ; ಕವಿ ಪುತ್ರಿಯೇ ಆಗಿದ್ದಾಳೆ. ಈಗ ಐವತ್ತು ಪ್ಲಸ್ ಆಗಿರುವ ರಂಜನಾ, ಪುಟ್ಟ ಮಗುವಾಗಿದ್ದಾಗ, ಕಣವಿ ಬರೆದ ಕವಿತೆ ಇದು. ಕಾವ್ಯದ ಮೇಲೆ ನವೋದಯದ ಪ್ರಭಾವವನ್ನು ಸಹಜವಾಗಿ ಗುರುತಿಸಬಹುದು. ಆದರೂ ದಲಿತ-ಬಂಡಾಯದ ಕಾಲದಲ್ಲಿಯೂ ಕವಿತೆ ಪ್ರಸ್ತುತತೆಯನ್ನು ಪಡೆಯುವುದು ಅದರ ಕಾವ್ಯ ಸತ್ವದಿಂದ. ಐವತ್ತು ವರ್ಷಗಳ ಹಿಂದೆ ಬರೆದಿದ್ದರೂ, ಕವಿತೆ ಇದೀಗ ಬಿರಿದ ಹೂವಿನ ಸುವಾಸನೆಯನ್ನು ಅನುಭವಿಸುವಂತೆ ಮಾಡುತ್ತದೆ.

ಮಗು ರಂಜನಾ ಮನೆ ತುಂಬಾ ಓಡಿಯಾಡುತ್ತಿದ್ದಾಳೆ; ಅವಳ ಮಾತುಗಳೋ ಮರಿದುಂಬಿಯ ಗುಂಜನದಂತೆ ಕಿವಿಗೆ ಝೇಂಕರಿಸುತ್ತಿವೆ. ಮನೆಯಲ್ಲಿ ಎಲ್ಲಿ ಕುಳಿತರೂ ಆಕೆ ಕಿವಿಗೆ ಕಚಗುಳಿಯನ್ನು ಇಡುತ್ತಾಳೆ. ಎತ್ತಿಕೊಂಡರೆ ರಂಜನಾಳಿಗೆ ಹಿಗ್ಗೋ ಹಿಗ್ಗು!

**ಎಲ್ಲಿ ಕುಳಿತರು ಬಂದು ಕಿವಿಗೆ ಝೇಂಕರಿಸುವುದು**
**ಮನೆ ತುಂಬ ಹರಿದಾಡಿ ಮರಿದುಂಬಿ ಗುಂಜನ,**
**ಕಣ್ಣು ನೀಲಾಂಜನ, ಕರಗಿಸಿದ ನಕ್ಷತ್ರ**
**ಮೂಗು ಹಟಮಾರಿತನಕೊಡೆದ ಮೊಗ್ಗು-**

**ಗೋಣು ಹೊರಳಿಸಿ ಸೋಗು ಮಾಡಿ ಕುಣಿವೀ ನವಿಲು**
**ಎತ್ತಿಕೊಂಡರೆ ಮುಗಿಲತನಕ ಹಿಗ್ಗು!**

ಈ ಆರು ಚರಣಗಳಲ್ಲಿ ಕವಿ ರಂಜನಾಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಮರಿದುಂಬಿಯಾಗಿ ಆಕೆ ಮನೆ ತುಂಬ ಹರಿದಾಡುತ್ತ ಗೋಣು ಹೊರಳಿಸಿ ಸೋಗು ಮಾಡುತ್ತ, ನವಿಲಿನಂತೆ ಕುಣಿಯುತ್ತ ಎಲ್ಲರಿಗೂ ಸಂತೋಷವನ್ನುಂಟು ಮಾಡುತ್ತಿದ್ದಾಳೆ. ಆಕೆ ಕಣ್ಣುಗಳನ್ನು ನೀಲಾಂಜನಕ್ಕೆ ಹೋಲಿಸಿ ಅವುಗಳು ಕರಗಿಸಿದ ನಕ್ಷತ್ರಗಳೆಂದು ಅವುಗಳ ಕಾಂತಿಯನ್ನು ವರ್ಣಿಸುತ್ತಾರೆ. ಆಕೆಯ ಮೂಗು ಹಟಮಾರಿತನಕೊಡೆದ ಮೊಗ್ಗು- ಎಂದು ಹೊಸ ಪ್ರತಿಮೆಯನ್ನು ಎದುರಿಗೆ ತಂದು ನಿಲ್ಲಿಸುತ್ತಾರೆ.

ರಂಜನಾಳ ಮಾತುಗಳು ಯಾವ ಹಕ್ಕಿಯ ಹಾಡಿಗಿಂತಲೂ ಕಡಿಮೆ ಏನಲ್ಲ. ಎಲ್ಲ ಸಂತೋಷಗಳೂ ಆಕೆಯ ಮುದ್ದು ಮಾಟದ ಮುಖದಲ್ಲಿ ಪ್ರತಿಬಿಂಬಿತವಾಗಿವೆ.

**ಇದು ಯಾವ ಹಕ್ಕಿ-ಹಾಡಿನ ಮಧುರ ಸಂಪುಟ?**
**ಎಲ್ಲ ಸಂತೋಷಕೂ ಕನ್ನಡಿಯ ಹಿಡಿಯುವುದು**
**ಈ ಮುಖದ ಮುದ್ದು ಮಾಟ.**

ಮನೆಯಲ್ಲಿ ರಂಜನಾಳೊಬ್ಬಳೇ ಮಗುವಲ್ಲ. ಆಕೆಗೆ ಇಬ್ಬರು ಅಣ್ಣಂದಿರಿದ್ದಾರೆ- ಆನಂದ ಮತ್ತು ಚಂದ್ರ. ಈ ಮೂರು ಜನ ಒಂದೆಡೆ ಸೇರಿದರೆ ಮುಗಿಯಿತು; ಮೂರು ಲೋಕಕ್ಕೂ ದಾಳಿಯಾಯಿತೆಂದೇ ಅರ್ಥ. ಮೂರೂ ಜನರು ಪರಸ್ಪರ ಜಗಳಾಡುವುದರಲ್ಲಿಯೂ ನಿಸ್ಸೀಮರು. ಆದರೆ ಸಂಧಾನ ಒಪ್ಪಂದಗಳು ನಡೆದು ಮತ್ತೆ ಮೂವರೂ ಒಂದಾಗುವರು.

**ಮೂರು ಸಲ ಒಪ್ಪಂದ ನೂರು ಸಲ ಯುದ್ಧ.**

ಆದರೆ ಈ ಒಪ್ಪಂದ, ಯುದ್ಧಗಳು ಕೊನೆಯ ಒಪ್ಪಂದ, ಯುದ್ಧಗಳಲ್ಲ. ಒಪ್ಪಂದಗಳಾಗುತ್ತಿದ್ದಂತೆಯೇ ಮತ್ತೆ ಮೂವರೂ ಯುದ್ಧಕ್ಕೆ ಸಿದ್ಧರಾಗುತ್ತಿದ್ದರು.

**ಪಡುವಣಕೆ ಸಂದ ರವಿ ಮೂಡಣದಿ ಎದ್ದ**
**ರಂಗಭೂಮಿಗೆ ಮತ್ತೆ ರಥ ಕುದುರೆ ಸಿದ್ಧ**

ಈ ಮೂರೂ ಮಕ್ಕಳಲ್ಲಿ ರಂಜನಾಳದ್ದೇ ಜೋರು. ಅವಳು ಸಿಟ್ಟಿಗೆದ್ದರೆ ಈ ಇಬ್ಬರೂ ತೆಪ್ಪಗಾಗುವರು. ಆದರೆ ಆ ಸಿಟ್ಟು-ಸಂಕ್ಷಿಪ್ತವಾದ ಸಿಟ್ಟು. ಇವರಿಬ್ಬರು ಬರೀ ವ್ಯಂಜನವಾದರೆ, ಆಕೆ ಸ್ವರ. ಆಕೆಯ ಸಿಟ್ಟಿಗೆ ಇವರಿಬ್ಬರು ಕಂಗಾಲಾಗಿದ್ದರೂ ಅನಂತರದ ಪ್ರೀತಿ ತುಂಬಿದ ಮಧುರ ತಂಗಾಳಿ ಈ ಇಬ್ಬರನ್ನೂ ಖುಷಿಯನ್ನಾಗಿ ಮಾಡುತ್ತದೆ. ಕವಿ ಈ ಮೂರೂ ಮಕ್ಕಳನ್ನು 'ನೀರಿನೊಳು ಆಡುವವು ಮೂರು ಮೀನು' ಎಂಬ ಉಪಮೆ ನೀಡಿ ನೀರಿನಲ್ಲಿ ಆಡುವ ಮೀನುಗಳು ಎಷ್ಟು ಸ್ವಚ್ಛಂದದಿಂದ, ಅದೆಷ್ಟು ಗಾಂಭೀರ್ಯದಿಂದ ಮತ್ತು 'ತಮ್ಮಷ್ಟಕ್ಕೆ ತಾವೇ ಸಂತೋಷದಿಂದ' ಆಟ ಆಡುತ್ತಿರುವುದನ್ನು ಚಿತ್ರಿಸುತ್ತಾರೆ.

ಮಗುವನ್ನು 'ದೇವಲೋಕದ ಸರಕು ಹೊತ್ತು ತಂದಿಹ ಹಡಗು' ಎಂದು ಕವಿ ಕಣವಿ ಕರೆಯುತ್ತಾರೆ. ಈ ಹಡಗಿನಲ್ಲಿ ಅನೇಕ ವಸ್ತುಗಳಿವೆ. ಮಗು ಒಂದೊಂದಾಗಿ ಅವುಗಳನ್ನು ಇಲ್ಲಿ ಹಂಚುತ್ತಿದೆ. ಮಗುವಿನ ಹಸುಳೆ ನಗೆಯಲ್ಲಿ ಹೂಬಿಸಿಲನ್ನು ಕವಿ ಕಂಡಿದ್ದಾರೆ; ಪಾರಿಜಾತದ ಸುಗಂಧವು ಮಗುವಿನ ಸುತ್ತ ಹರಡಿಕೊಂಡಿದೆ.

**ಹೂವ ಸೂಸಿದೆ ಸುತ್ತ ಪಾರಿಜಾತ**
**ಹಸುಳೆ ನಗೆ, ಹೂ ಬಿಸಿಲು ಓ ! ಎಂಥ ಚಿತ್ರ**

ರಂಜನಾ ಕವಿ ಮನೆಯ ವಾತ್ಸಲ್ಯದ ಚೇತನವಾಗಿದ್ದಾಳೆ. ಅವಳು ಕುಣಿದರೆ ಅದೇ ಕವಿಗೆ ಬೃಂದಾವನ.

ಆಕೆ ಮನೆಯಲ್ಲಿ ಇಲ್ಲದಿದ್ದರೆ ಹುಲ್ಲುಕಡ್ಡಿಯೂ ಅಲುಗಾಡಲಾರದು. ಮನೆಯಲ್ಲಿ ಇದ್ದುದನ್ನೆಲ್ಲ ಆಕೆ ಮುರಿಯುತ್ತಾಳೆ; ಜೋಡಿಸುತ್ತಾಳೆ, ಸಂತೋಷಪಡುತ್ತಾಳೆ, ಉಳಿದವರಿಗೆ ಸಂತೋಷವನ್ನು ನೀಡುತ್ತಾಳೆ.

'ರಂಜನಾ' ಕವಿತೆಯ ಸ್ಥಾಯಿ ಭಾವ-ಜೀವನದ ಬಗೆಗಿನ ಪ್ರೀತಿ. ಈ ಜೀವೋತ್ಕರ್ಷವು ವಿವಿಧ ರೀತಿಗಳಲ್ಲಿ ಹರಿದಾಡಿ ಓದುಗರ ಹೃದಯವನ್ನು ಗೆಲ್ಲುತ್ತದೆ. ಕವಿತೆಯ ಲಯ, ಓಟ ಹಾಗೂ ಶೈಲಿಯಿಂದ ಕವಿತೆ ಓದುಗನಲ್ಲಿ ಆಪ್ತತೆಯನ್ನುಂಟು ಮಾಡುವಲ್ಲಿ ಯಶಸ್ವಿಯಾಗುತ್ತದೆ; ಕವಿತೆಯಲ್ಲಿ ವಾತ್ಸಲ್ಯಭಾವವೂ ಇರುವುದರಿಂದ ಕವಿ ಮನೆಯ 'ರಂಜನಾ' ಓದುಗನ ಮನೆಯ ಮಗುವಾಗುತ್ತಾಳೆ. ಓದುಗ ತನ್ನ ಮನೆಯಲ್ಲಿ ಓಡಿಯಾಡುವ ಮಗುವಿನಲ್ಲಿ ಈ ರಂಜನಾಳ ಪ್ರತಿಬಿಂಬವನ್ನು ಗುರುತಿಸುತ್ತಾನೆ.

ಮಗುವಿನ ಆಟಪಾಟ, ಮನೆ ಜನರೆಲ್ಲರನ್ನು ನಿಯಂತ್ರಿಸುವ ಅದರ ಶಕ್ತಿ. ಮಗುವಿನ ಹಟಮಾರಿತನ, ಅದರ ಅಳು-ನಗುಗಳನ್ನು ಸಮರ್ಥವಾಗಿ ಕಣ್ಣೆದುರು ನಡೆದಂತೆ ಕವಿ ಚಿತ್ರಿಸಿದ್ದಾರೆ. 'ರಂಜನಾ' ಬರೀ ಕವಿ ಮನೆಯ ಮಗುವಾಗಿರದೆ ಪ್ರತಿಯೊಬ್ಬ ಓದುಗನ ಮನೆಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಇದೇ ಈ ವಾತ್ಸಲ್ಯ ಗೀತದ ಹಿರಿಮೆ.

**ಸರಜೂ ಕಾಟ್ಕರ.**

# ೨೦. ಧಾರವಾಡದಲ್ಲಿ ಮಳೆಗಾಲ

ಏನಿದೀ ಹನಿಹನಿಯ ತೆನೆತೆನೆ ಸಿವುಡುಗಟ್ಟುತ ಒಗೆವುದು !
ಗುಡ್ಡ ಗುಡ್ಡಕೆ ಗೂಡು ಬಡಿಯುತ ಬೇರೆ ಸುಗ್ಗಿಯ ಬಗೆವುದು.
ಸೆಳಸೆಳಕು ಬೆಳೆ ಕೊಯಿದರೂ ಆ ಮೋಡದೊಕ್ಕಲು ತಂಗದು
ಬಾನ ಮೇಟಿಗೆ ಸೋನೆ ತೂರುತ ರಾಶಿಮಾಡದೆ ಹಿಂಗದು.

ಏನು ಬೆಳ್ಳಗೆ ಎಷ್ಟು ತೆಳ್ಳಗೆ ಮಳೆಯ ಮಸ್ಲಿನ್ ಪರದೆಯು !
ಒಳಗೆ ಸುಮ್ಮನೆ ಕುಳಿತು ನೋಡುವಳಾರು ಹೇಳಾ ಮುಗುದೆಯು?
ಹೂ ಬಿಸಿಲ ಕರವಸ್ತ್ರದಲಿ ತರತರದ ಹೆಣಿಕೆಯ ನಕ್ಷೆಯು
ದೂರ ಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು?

ನೋಡು, ಮೋಡದ ಬಸ್ಸು ಭರ ಭರ ತುಂಬಿಕೊಂಡೇ ಸಾಗಿವೆ
ಯಾವ ಗಿರಿ ಶಿಖರದಲಿ ಜಾತ್ರೆಯೊ, ಏಳುಕೊಳ್ಳಕೆ ಬಾಗಿವೆ.
ದೂರ ದೇಶದ ಯಾತ್ರಿಕರು ತಾ ಬೇರೆ ದೇಶಕೆ ಬಂದರು
ಕಂಡ ಗುಡಿ ಗೋಪುರಕೆ ಕೈ ಮುಗಿಯುತ್ತ ಅಲ್ಲಿಯೆ ನಿಂದರು.

ಏನು ಕಳಕೊಂಡಿರುವೆ ಗಾಳಿಯೆ ಏಕೆ ಈ ಪರಿ ಹುಡುಕುವೆ ?
ಕಿಡಕಿ ಬಾಗಿಲು ಮುಚ್ಚಿರಲು ಕಿರು ಬಿರುಕಿನಲಿ ಬಿಸುಸುಯ್ಯುವೆ.
ಆ ಹಿಮಾಲಯದಿಂದ ನಿನ್ನನ್ನು ಬೀಸಿ ಒಗೆದರೆ ಇಲ್ಲಿಗೆ?
ಸಪ್ತಸಾಗರ ಸುತ್ತಿ ಬಂದೆಯ, ಮತ್ತೆ ಹೋಗುವುದೆಲ್ಲಿಗೆ !

ಮೋಡ ನೂತೇ ನೂಲುವುದು ಬಿಳಿ ದಾರ ಧಾರಾಕಾರದಿ
ಗುಡ್ಡ ಮರಡಿಗೆ ಸುತ್ತಿ ಕುಕ್ಕಡಿ ಮಾಡಿ ತುಂಬಿದೆ ಕೊಳ್ಳದಿ.
ಹಳ್ಳ-ಹೊಳೆ ಮಗ್ಗದಲಿ ನೇಯುತ ಹೊರಗೆ ಕಳಿಸಿದೆ ಮಾಲನು
ಗದ್ದೆ ಹೊಲ ತೋಟಕ್ಕೆ ಹೊಚ್ಚಿದೆ ಕೆಂಪು ಖಾದಿಯ ಶಾಲನು.

ಹಗಲು ಇರುಳೂ ಕೆಲಸವೇನಿದೆ ಮಳೆಗೆ ? - ಬಂದೇ ಬರುವುದು.
ನಡುವೆ ಚಕ್ಕನೆ ಹಸುರ ಮಧ್ಯಕೆ ಸೂರ್ಯ ಸರ್ಚ್‌ಲೈಟ್ ಕೆಡವಲು
ಹನುಮನೆದೆಯೊಳು ರಾಮ ಸೀತೆಯರಂತೆ ಕಣ್ಣಿಗೆ ಹೊಳೆವುದು.
ಮರುಚಣವೆ ಆಕಾಶವೆಲ್ಲವು ಹರಿದು ಬಿದ್ದೊಲು ಸುರಿವುದು.

ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು.
ಬಂತು ಪಂಚಮಿ ಜೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು.
'ಅರಳು-ಮರಳಿ'ನ ಕವಿಯು ಕರೆದನು 'ಬಾರೊ ಸಾಧನಕೇರಿಗೆ'
ಬಂತು ಶ್ರಾವಣ ಬಳಗದೊಂದಿಗೆ 'ಮಳೆಯು ಎಳೆಯುವ ತೇರಿಗೆ'.

ಗಣಪತಿಯು ಇಲಿಯೇರಿ ಭರ್ಜರಿ ವೇಷದಲ್ಲಿಯೆ ಬಂದನು
ಕರಿಕೆ ಪತ್ರಿಯ ಪೂಜೆ ಸಂದಿತು, ಕಡಬು ಹೋಳಿಗೆ ತಿಂದನು.
ಘಟಸ್ಥಾಪನೆಯಾಯ್ತು; ಮೋಡದ ಕೊಡವು ಬುಡಮೇಲಾಯಿತು.
ಸೀಗೆ ಹುಣ್ಣಿವೆಗಾ ಮಸಾರಿಯು ಹಸುರು ಪುಚ್ಚವ ತೆರೆಯಿತು.

ಗೌರಿ ಹುಣ್ಣಿವೆ ಹಾಲ್ಗುಡಿದು ಬಿಳಿ ಜೋಳ ಧ್ವಜವನ್ನೆತ್ತಿತು,
ಗೋಧಿ ಹೊಡೆಗಟ್ಟಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು.
ಕುಸುಬೆ ಹೂಗಳ ಜರದ ಪೀತಾಂಬರವ ಹಬ್ಬಕೆ ಉಟ್ಟಿತು
ಮೊದಲೆ ದೀಪಾವಳಿಗೆ ಒಲುಮೆಯ ದೀಪ ಬೆಳಗಿಸಿಕೊಂಡಿತು.

ಏನು ಈ ಗಿಡ ಬಳ್ಳಿ ಮರಗಳಿಗೆಲ್ಲ ಎಂತಹ ಜಳಕವು!
ಹಸುರು ಹಚ್ಚನೆ ನಿಮಿರಿ ನಿಂತಿಹ ನೆಲಕೆ ಹರ್ಷದ ಪುಳಕವು,
ಎಲ್ಲಿಯಾದರು ಕಸರು-ಕಡ್ಡಿಯ ಹುಡುಕಿ ತೆಗೆಯಿರಿ ನೋಡುವ
ಕೆಸರೊ ಬೇಕಾದಷ್ಟು - ನಡೆಯಿರಿ ನಗರ ಸಭೆಗೇ ತೂರುವ.

ಕೊಡೆ ಹಿಡಿದು ಕಾಯ್‌ಪಲ್ಲೆ ತಂದರೆ ಪ್ಯಾಂಟು ಕೂಡಲೆ ಪಚಡಿಯು,
ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪು ಗೋದಿಯ ಕಿಚಡಿಯು,
ಮಳೆಯ ಪಂಜರದಲ್ಲಿ ಸೆರೆಯಾಗಿಹೆವು ಸರ್ಕಸ್ ಹುಲಿಗಳು,
ಅಲ್ಲಿ ಹೊಲ ಗದ್ದೆಯಲಿ ಕೊಪ್ಪೆಯ ಹೊತ್ತು ಗೆಯ್ವರೆ ಕಲಿಗಳು.

ಬೂಟು ಚಪ್ಪಲು ಮಾಡದಲ್ಲಿಯೆ ಬರುಸುಗಟ್ಟಿವೆ ಥಂಡಿಗೆ-
ಕೋಟು ಸ್ವೆಟರಿನ ಮೇಲೆ ಸ್ಕಾರ್ಫನು ಸುತ್ತಿ ಹೊರಟಿರ ದಂಡಿಗೆ ?

ಬಿಸಿಲ ಮೋರೆಯ ಕಾಂಬುದಾಯಿತು ಬರಿಯ ಮನಸಿನ ಮಂಡಿಗೆ
ಜೀವ ಬೇಡಿದೆ ಕಾಫಿ ದೋಸೆಯ ಕರಿದ ಹಪ್ಪಳ ಸಂಡಿಗೆ.

ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ
ಕನಸಿನಲ್ಲಿಯು ಇಲಿಯು ಬಾರದು, ಹಕ್ಕಿ ಗೂಡೊಳು ತೆಪ್ಪಗೆ,
ಮೈಯುಡುಗಿ ನಡುಗುತ್ತ ದನಕರು ಮೇದು ಬರುತಿವೆ ಒಟ್ಟಿಗೆ
ಮನೆಯ ಒಳಗೇ ಕುಳಿತು ಕಾತರಿಸಿಹೆನು ಗೆಳೆಯರ ಭೆಟ್ಟಿಗೆ.

ಬಿಸೇ ಚುರುಮರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ
ಮಕ್ಕಳೊಂದಿಗೆ ಕುಳಿತು, ಕುರುಕುರು ತಿಂದು ಹೊರಜಗ ಮರೆಯಿರಿ.
ಅಷ್ಟು ಮಿಕ್ಕೀ ಬೇಸರಾದರೆ ರೇಡಿಯೊ ಕಿವಿ ತಿರುವಿರಿ.
ರಾತ್ರಿಯಾಗಲು ಊಟ ತೀರಿಸಿ ಜೊತೆಗೆ ಬೆಚ್ಚಗೆ ಮಲಗಿರಿ.

ಶ್ರೀ ಚೆನ್ನವೀರ ಕಣವಿಯವರ "ಧಾರವಾಡದಲ್ಲಿ ಮಳೆಗಾಲ" ಕುರಿತು 'ನೆಲಮುಗಿಲು' ಸಂಗ್ರಹದಲ್ಲೇ ಎರಡು ಕವಿತೆಗಳಿವೆ. ಹೊಸಗನ್ನಡ ಕವಿಗಳಲ್ಲಿ ಮಳೆಗಾಲವನ್ನು ಕುರಿತು ಕಣವಿಯವರಂತೆ ತನ್ಮಯವಾಗಿ ಬರೆದವರಿಲ್ಲವೆಂದೇ ಹೇಳಬೇಕು ಎಂದು ಜಿ.ಎಸ್. ಶಿವರುದ್ರಪ್ಪನವರು ಹೇಳಿದ್ದಾರೆ.

ಹೀಗೆ ಮೆಚ್ಚಿಕೆಯಾಗುವುದಕ್ಕೆ ಕಾರಣವೇನೆಂದು ಬಿಡಿಸಿ ನೋಡುತ್ತ ಈ ಕವಿತೆಯೊಳಗಿರುವ ಲಕ್ಷಣಗಳನ್ನು ಎತ್ತಿ ತೋರಿಸಿದರೆ ಅದು ಕಾವ್ಯಕಮ್ಮಟಗಳಲ್ಲೂ ಆಗಬೇಕಾದ ಒಂದು ಕೆಲಸವನ್ನು ಸೂಚಿಸುತ್ತದೆ. ಈ ಪ್ರಯೋಗದಿಂದ ಸೂಚನೆ ಪಡೆದು ತಮ್ಮ ಕಾವ್ಯಶಿಶು ತೊದಲುತ್ತ ಒಂದೊಂದೇ ಮಾತನ್ನು ಕಲಿತು, ತೆವಳುತ್ತಿದ್ದದ್ದು ಎದ್ದು ನಿಂತು, ದೊಡ್ಡ ಕವಿಗಳ ಕೈಹಿಡಿದುಕೊಂಡು ನಡೆಯುವುದನ್ನು ಕಲಿಯಲಿಕ್ಕೆ ಸಾಧ್ಯ. ಆಮೇಲೆ ಕಾವ್ಯಶಿಶು ಬಾಲಕನಾಗಿ ಸ್ಪಷ್ಟವಾಗಿ ಮಾತಾಡುವುದನ್ನು ತರುಣನಾಗಿ ಪ್ರೇಮಕವನಗಳು, ದೇಶಪ್ರೇಮದ ಕವನಗಳನ್ನು ಬರೆದು, ತನ್ನಿಂದ ಆಚೆಗಿರುವ ಪ್ರಪಂಚವನ್ನು ನೋಡಿದ ಸಂತೋಷವನ್ನು ಹಂಚಿಕೊಳ್ಳಲಿಕ್ಕೆ ಸಾಧ್ಯ. ಜೊತೆ ಜೊತೆಯಲ್ಲಿ ತನ್ನ ದೇಶದ ಚರಿತ್ರೆ, ಸಂಸ್ಕೃತಿ, ತನ್ನ ಭಾಷೆಯ ಶಬ್ದ ಸಂಪತ್ತು, ಮತ್ತು ನಾದ ಸಂಪತ್ತನ್ನು ಸಂಪಾದಿಸಿಕೊಂಡು, ತನ್ನ ಪಾಡನ್ನು ಹಾಡಾಗಿ ಮಾಡುವುದನ್ನು ಕಲಿಯುವುದು ಸಾಧ್ಯ. ಹೀಗೆ ಸಾಧನೆಯನ್ನು ಮಾಡಿ ಸಿದ್ಧಿಯನ್ನು ಪಡೆದ ಚೆನ್ನವೀರ ಕಣವಿಯವರಿಂದ ನಮ್ಮ ಯುವ ಕವಿಗಳು ಏನನ್ನು ಕಲಿಯಬಹುದು ಎನ್ನುವುದನ್ನು ತೋರಿಸುವುದು ಈ ಲೇಖನದ ಉದ್ದೇಶ.

ಕಣವಿಯವರ ಮೊದಲ ಸಂಕಲನಗಳ ಹೆಸರು 'ಕಾವ್ಯಾಕ್ಷಿ' ಮತ್ತು 'ಭಾವಜೀವಿ' ಎನ್ನುವುದು ಅರ್ಥಪೂರ್ಣವಾಗಿದೆ. ಭವ ನಮ್ಮಲ್ಲಿ ಹುಟ್ಟಿಸುವ ಸ್ಪಂದನೆ ಭಾವ. ಭಾವವೆನ್ನುವುದು ಸುತ್ತಲಿನ ಜನ ಮತ್ತು ಪರಿಸರದೊಂದಿಗೆ ನಮ್ಮ ಸಂಬಂಧ. ಇದು ಮೊದಲು ಕಾಣಿಸಿಕೊಳ್ಳುವುದು ಪ್ರೀತಿಯ ಭಾವನೆಯಾಗಿ. ಪ್ರೀತಿ ಸಿಕ್ಕದಿದ್ದಾಗ ಅದು ನೋವಾಗಿ, ಕೋಪವಾಗಿ ತಿರುಗುತ್ತದೆ. ಪ್ರೀತಿ

ಸಂತೋಷದ ನೆಮ್ಮದಿಯ ಭಾವನೆಗೂ ದಾರಿ ಮಾಡಿಕೊಡಲಾಗುತ್ತದೆ. ಬೇರೆ ಬೇರೆ ರೀತಿಯಿಂದ ಸಂಬಂಧಗಳಿಗೆ ವಾತ್ಸಲ್ಯ, ಅನುರಾಗ, ಮೋಹ, ಸ್ನೇಹ, ಅನುರಕ್ತಿ ಮೊದಲಾದ ನಾಮಕರಣ ಮಾಡಿದ್ದೇವೆ. ಈ ಎಲ್ಲ ಭಾವನೆಗಳೂ ನಮ್ಮ ಭಾವಲೋಕವನ್ನು ಸೃಷ್ಟಿಸುತ್ತಿವೆ. ನಮ್ಮ ಭಾವಲೋಕದಲ್ಲಿ ಭಾಷೆಯನ್ನು ಉಪಯೋಗಿಸುತ್ತೇವೆ. ಈ ಅಭಿವ್ಯಕ್ತಿ ಕಾವಿನಿಂದ ಕೂಡಿಕೊಂಡು ಛಂದೋಬದ್ಧವಾಗಿ ಸುಂದರವಾಗಿ ಹೊರಹೊಮ್ಮಿದಾಗ ಭಾವಗೀತೆ ಹುಟ್ಟುತ್ತದೆ.

ಕಣವಿಯವರ ಮೊದಲ ಸಂಗ್ರಹ 'ಕಾವ್ಯಾಕ್ಷಿ' ಯಾದರೆ ಎರಡನೆ ಸಂಗ್ರಹ 'ಭಾವಜೀವಿ'. ಮೊದಲು ಕವಿ ತನ್ನ ಭಾವನೆಯನ್ನೇ ಮುಖ್ಯವೆಂದುಕೊಂಡಿರುತ್ತಾನೆ. ಆಮೇಲೆ ಅವನಿಗೆ 'ಕಾವ್ಯ'ವೆನ್ನುವುದೊಂದು ಕಲೆ, ಅದೊಂದು ಮಾಧ್ಯಮ. ತಮ್ಮ ಚಿರಕಾಲದ ಅಭಿವ್ಯಕ್ತಿಯಾಗಿ ಉಳಿಯಬೇಕಾದರೆ, ಕಾವ್ಯವೆನ್ನುವ ಮಾಧ್ಯಮದಿಂದ ಮಾತ್ರ ಸಾಧ್ಯ ಅನ್ನಿಸುತ್ತದೆ. ಆಗ ಕವಿ ಕಾವ್ಯ ರಚನೆಯ ಕಡೆಗೆ, ಛಂದಸ್ಸಿನ ಕಡೆಗೆ, ಭಾಷೆಯ ಸಂವಹನ ಸಾಧ್ಯತೆಗಳ ಬಗ್ಗೆ, ಕಾವ್ಯಶಿಲ್ಪದ ಕಡೆಗೆ ಗಮನ ಕೊಡುತ್ತಾನೆ. ಹಾಗೆ ಗಮನ ಕೊಡುವವನೇ ಕವಿಯಾಗಿ ಬೆಳೆಯುತ್ತಾನೆ.

ಇಷ್ಟೆಲ್ಲ ಪೀಠಿಕೆ ಬೇಕಾಗಿತ್ತು. ಏಕೆಂದರೆ ತಾನು ಕಲಿತಿದ್ದನ್ನು ಇನ್ನೊಬ್ಬರಿಗೆ ಕಲಿಸುವ ಶಕ್ತಿಯನ್ನು ತನ್ನ ಭಾವಲೋಕವನ್ನು ಮತ್ತು ಅನುಭವದ ಲೋಕವನ್ನು ಇನ್ನೊಬ್ಬರಿಗೆ ಕಲಿಸುವ ಮತ್ತು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ಜೀವನ ಪ್ರೀತಿ 'ಧಾರವಾಡದಲ್ಲಿ ಮಳೆ' ಎನ್ನುವ ಕವಿತೆಯಲ್ಲಿ ಹೇಗೆ ಹುದುಗಿಕೊಂಡಿದೆ ಎನ್ನುವುದರ ಮೆಚ್ಚಿಗೆಯೇ ಈ ವಿಶ್ಲೇಷಣೆಯ ಮೂಲ ಉದ್ದೇಶವಾಗಿದೆ. ಕವಿತೆ ಹೀಗೆ ಆರಂಭವಾಗುತ್ತದೆ:

**ಏನಿದೀ ಹನಿಹನಿಯ ತೆನೆತೆನೆ ಸಿವುಡುಗಟ್ಟುತ ಒಗೆವುದು!**
**ಗುಡ್ಡಗುಡ್ಡಕೆ ಗೂಡು ಬಡಿಯುತ ಬೇರೆ ಸುಗ್ಗಿಯ ಬಗೆವುದು**
**ಸೆಳಸೆಳಕು ಬೆಳೆ ಕೊಯ್ದರೂ ಆ ಮೋಡದೊಕ್ಕಲು ತಂಗದು**
**ಬಾನ ಮೇಟಿಗೆ ಸೋನೆ ತೂರುತ ರಾಶಿ ಮಾಡದೆ ಹಿಂಗದು.**

ಮಳೆಯನ್ನು ನೋಡಿ ಕವಿಗೆ ಆಶ್ಚರ್ಯವಾಗಿದೆ. ಕವಿ ಮಳೆಯ ಸೌಂದರ್ಯವನ್ನು ನಮಗೆ ತೋರಿಸಲಿಕ್ಕಾಗಿ ಹೊರಟಿದ್ದಾರೆ. ಅವರ ಆಶ್ಚರ್ಯವನ್ನು ನಮ್ಮ ಆಶ್ಚರ್ಯವಾಗಿ ನಮ್ಮ ಅನುಭವಕ್ಕೆ ತರಲಿಕ್ಕಾಗಿ, ಮಳೆಯ ಬಗ್ಗೆ ಮೂರು ಶಬ್ದಗಳನ್ನು ಮಾತ್ರ ಉಪಯೋಗಿಸಿ, ಮಿಕ್ಕೆಲ್ಲ ಮಾತುಗಳಲ್ಲಿ ತೆನೆಯನ್ನು ಸಿವುಡುಗಟ್ಟಿ ಎಸೆಯುವ, ಗೂಡು ಬಡಿಯುವ, ಮೇಟಿಗೆ ಕಾಳನ್ನು ತೂರುವ ಒಕ್ಕಲಿನ ಚಿತ್ರಗಳನ್ನು ಕೊಡುತ್ತಾರೆ. ಇದರ ಪರಿಣಾಮವಾಗಿ ನಮ್ಮೆದುರಿಗಿರುವ ಧಾರವಾಡದ ಮಳೆ ಒಬ್ಬ ರೈತನಾಗಿ ಕಾಣುತ್ತದೆ. ರೂಪಕದ ಭಾಷೆಯ ಈ ಪರಿವರ್ತನೆ, ಅಥವಾ ಈ ಅಪೂರ್ವ ಸೃಷ್ಟಿಯಾಗುತ್ತದೆ. ಮಳೆಗೂ ಮತ್ತು ರೈತನಿಗೂ ಇರುವ ಸಾದೃಶ್ಯವನ್ನು ಕಾಣುವ ಶಕ್ತಿಯನ್ನು 'ಪ್ರತಿಭೆ' ಎಂದು ಕರೆಯುತ್ತೇವೆ. ಮಳೆ ರೈತನಾಗಿ ನಮಗೂ ಕಾಣುತ್ತದೆ. ಈ ಅನುಭವ ನಮಗೂ ವಿಸ್ಮಯವನ್ನು ಹುಟ್ಟಿಸುತ್ತದೆ.

೨೫ ಮಾತ್ರೆಗಳ ಮೂಲತಃ ೩, ४, ೩, ४ ಮಾತ್ರೆಗಳ ನಡಿಗೆಯನ್ನು ಅರ್ಥಕ್ಕೆ, ಚಿತ್ರಕ್ಕೆ, ಭಾವಕ್ಕೆ, ಅನುಗುಣವಾಗಿ ೫, ೫, ४, ೩, ४, ४, ಆಗಿ ೩, ೨, ೨, ೩, ೭, ४, ४ ಆಗಿ ವಿವಿದ

ಸಂಯೋಜನೆಗಳಿರುವ ಲಯವಿನ್ಯಾಸಗಳನ್ನು ಈ ಕವಿ ನಿರ್ವಹಿಸುತ್ತಾರೆ. ಈ ವೈವಿಧ್ಯ ನಮ್ಮ ನಿರೀಕ್ಷೆಯನ್ನು ಮತ್ತೆ ಮತ್ತೆ ಮುರಿದು ಬೆರಗುಗೊಳಿಸುತ್ತದೆ.

ಎರಡನೆ ಚರಣದಲ್ಲಿ ಮಳೆ ಒಂದು ಮಸ್ಲಿನ್ ಪರದೆಯ ಹಾಗೂ, ಒಳಗೆ ಕುಳಿತಿರುವ ಮುಗುದೆಯ ಹಾಗೂ ಕಾಣಿಸುತ್ತದೆ. ಆಕೆ ಹೂಬಿಸಿಲ ಕರವಸ್ತ್ರದಲ್ಲಿ ತರತರದ ಹೆಣಿಗೆ ಮಾಡುತ್ತ ದೂರ ಹೋದವನು ಇಂದು ಬರುವನೇ ಎಂದು ನಿರೀಕ್ಷಿಸುತ್ತಿದ್ದಾಳೆ.

ಮೂರನೆಯ ಚರಣದಲ್ಲಿ ಮಳೆ ಮೋಡದ ಬಸ್ಸುಗಳಾಗಿ ಕಾಣಿಸುತ್ತದೆ. ಅದರ ತುಂಬ ಜನ ತುಂಬಿದ್ದಾರೆ. ಅವರೆಲ್ಲ ಯಾವುದೊ ಗಿರಿಶಿಖರದ ಜಾತ್ರೆಗೆ ಹೊರಟಿದ್ದಾರೆ. ಈ ಬಸ್ಸುಗಳು ಏಳುಕೊಳ್ಳದಲ್ಲಿ ನಿಲ್ಲುತ್ತವೆ. ನಾಲ್ಕನೆ ಚರಣದಲ್ಲಿ ಕವಿ ಗಾಳಿಯನ್ನು ಮಾತಾಡಿಸುತ್ತಾನೆ. ಗಾಳಿ ಏನನ್ನೋ ಹುಡುಕುತ್ತ ಬಿಸುಸುಯ್ಯುತ್ತಿದೆ. ಗಾಳಿ ತಣ್ಣಗಿರುವುದರಿಂದ ಈ ಕವಿ ಆ ಹಿಮಾಲಯದಿಂದ ನಿನ್ನನ್ನು ಬೀಸಿ ಒಗೆದರೆ ಇಲ್ಲಿಗೆ ಎಂದು ಕೇಳುತ್ತಾನೆ. ಸಪ್ತ ಸಾಗರಗಳನ್ನು ಸುತ್ತಿ ಬಂದಿರಬೇಕು. ಈಗ ಎಲ್ಲಿಗೆ ಹೊರಟಿದ್ದೀಯ ಎಂದು ಕವಿ ಗಾಳಿಯನ್ನು ಕೇಳುತ್ತಾನೆ.

ಮೊದಲ ಮೂರು ಚರಣಗಳಲ್ಲಿದ್ದ ರೈತ, ಮುಗುದೆ ಮತ್ತು ಯಾತ್ರಿಕರ ಹಾಗೆ ಇನ್ನೊಂದು ಚಿತ್ರವನ್ನು ನಾಲ್ಕನೆಯ ಚರಣದಲ್ಲಿ ನಿರೀಕ್ಷಿಸಿದ್ದ ನಮಗೆ, ಈ ಕವಿ ಗಾಳಿಗೆ ಪ್ರಶ್ನೆಗಳನ್ನು ಕೇಳುವುದು ಅನಿರೀಕ್ಷಿತವಾದ ತಿರುವಾಗುತ್ತದೆ. ನಮ್ಮ ನಿರೀಕ್ಷೆ ತಿರುವು ಮುರುವಾಗುವುದು ನಮ್ಮ ಬೆರಗನ್ನು ಹೆಚ್ಚಿಸುತ್ತದೆ. ನಾವು ಇನ್ನೊಂದು ರೂಪಕ ಬರುವುದಿಲ್ಲ ಅಂದುಕೊಂಡಾಗ ೫ನೇ ಚರಣದಲ್ಲಿ ಮಳೆ ನೇಕಾರನಾಗಿ ಕಾಣಿಸುತ್ತದೆ. ಮೋಡ ಬಿಳಿಯ ದಾರಗಳನ್ನು ನೂಲುತ್ತದೆ. ಗುಡ್ಡ ಮತ್ತು ಮರಡಿಗಳನ್ನೇ ಕುಕ್ಕಡಿ ಮಾಡಿಕೊಂಡು ಕೊಳ್ಳದ ತುಂಬ ತುಂಬುತ್ತದೆ. ಹಳ್ಳ ಹೊಳೆಗಳನ್ನೇ ಮಗ್ಗ ಮಾಡಿಕೊಡುತ್ತದೆ. ಗದ್ದೆ ಹೊಲ ತೋಟಕ್ಕೆ ಕೆಂಪು ಖಾದಿಯ ಶಾಲನ್ನು ಹೊಚ್ಚುತ್ತದೆ. ಹಳ್ಳ ಹೊಳೆಗಳ ಕೆಂಪು ಬಗ್ಗಡದ ನೀರು ಕೆಂಪು ಖಾದಿಯ ಶಾಲಾಗುತ್ತದೆ. ನಾವು ಈ ಕವಿತೆಯ ಕಲ್ಪನಾಶಕ್ತಿಗೆ ಮತ್ತೆ ಬೆರಗಾಗುತ್ತೇವೆ.

ಆರನೆಯ ಚರಣದಲ್ಲಿ ಕವಿ ನಮ್ಮನ್ನು ಪ್ರಶ್ನಿಸುತ್ತಾನೆ. ಅಥವಾ ತಾನೇ ಪ್ರಶ್ನೆ ಹಾಕಿಕೊಳ್ಳುತ್ತಾನೆ. ಮಳೆಗೆ ಬೇರೆ ಕೆಲಸವೇನಿದೆ ? ಬಂದೇ ಬರುತ್ತೆ. ತಟಕ್ಕನೆ ಹಸುರು ಮಧ್ಯದಲ್ಲಿ ಸೂರ್ಯನ ಸರ್ಚ್‌ಲೈಟ್ ಬೀಳುತ್ತೆ. ಅದು ಹನುಮ ತನ್ನ ಎದೆ ಸೀಳಿ ರಾಮಸೀತೆಯರನ್ನು ತೋರಿಸಿದ ಹಾಗೆ ಕಾಣುತ್ತೆ. ಆಕಾಶವೇ ಹರಿದು ಬಿದ್ದ ಹಾಗೆ ಕಾಣುತ್ತೆ.

ಐದನೆಯ ಚರಣದಲ್ಲಿ ಮಳೆಯನ್ನು ನೇಕಾರನನ್ನಾಗಿ ರೂಪಾಂತರಗೊಳಿಸಿದ ಕವಿ, ರೂಪಕಗಳ ಮೂಲಕವೇ ಮಾತಾಡುತ್ತಾನೆ ಅನ್ನಿಸಿದ ಕವಿ, ೬ನೇ ಚರಣದಲ್ಲಿ ರೂಪಕದಿಂದ ಉಪಮೆಗೆ ನಮ್ಮ ನಿರೀಕ್ಷೆಯನ್ನು ತಿರುಗಿಸುತ್ತಾನೆ. ಇಲ್ಲಿಂದ ಮುಂದೆ ನಮ್ಮ ನಿರೀಕ್ಷೆ ಬೇರೊಂದು ದಿಕ್ಕಿಗೆ ಹೊರಳಬೇಕಾಗುತ್ತೆ ಇಲ್ಲಿಂದ ಮುಂದೆ ಹಬ್ಬಗಳ ಸರಣಿ ಶುರುವಾಗುತ್ತೆ. ಕಾರಹುಣ್ಣಿಮೆ, ಪಂಚಮಿ ಬರುತ್ತವೆ. ಹೆಣ್ಣುಮಕ್ಕಳನ್ನು ತವರು ಕರೆಯುತ್ತೆ. ಶ್ರಾವಣಮಾಸ ಶುರುವಾಗುತ್ತೆ. ಅರಳು-ಮರಳಿನ ಕವಿ 'ಬಾರೊ ಸಾಧನಕೇರಿಗೆ' ಎಂದು ಕರೆಯುತ್ತಾನೆ. ಈ ಸಾಧನಕೇರಿ 'ಮಳೆಯು

ಎಳೆಯುವ ತೇರೂ' ಹೌದು. ಈ ವಿವರಗಳು ಬೇಂದ್ರೆಯವರ ಹಾಡನ್ನು, ಅವರ ಪಾಡನ್ನು, ಅವರ ವ್ಯಕ್ತಿತ್ವವನ್ನು ನಮ್ಮೆದುರು ನಿಲ್ಲಿಸುತ್ತವೆ.

ಆಮೇಲೆ ಗಣೇಶನ ಹಬ್ಬ

**ಗಣಪತಿಯು ಇಲಿಯೇರಿ ಭರ್ಜರಿ ವೇಷದಲ್ಲಿಯೆ ಬಂದನು**
**ಕರಿಕೆ ಪತ್ರೆಯ ಪೂಜೆ ಸಂದಿತು, ಕಡಬು ಹೋಳಿಗೆ ತಿಂದನು**

ಅದಾದ ಮೇಲೆ ಭಾರೀ ಮಳೆ ಸುರಿಯುತ್ತದೆ. ಸೀಗೆ ಹುಣ್ಣಿಮೆಯ ಹೊತ್ತಿಗೆ ಹಾಲು ತುಂಬಿದ ಜೋಳ ತಲೆಯೆತ್ತಿರುತ್ತದೆ. ಗೋಧಿ ಹೊಡೆಗಟ್ಟಿರುತ್ತದೆ. ಕಡಲೆಯ ಹೂವು ಮತ್ತು ಮಿಡಿ ಕಾಣಿಸಿಕೊಳ್ಳುತ್ತದೆ. ಕುಸುಬೆ ಹೂ ಜರದ ಪೀತಾಂಬರವಾಗಿ ಕಾಣಿಸುತ್ತದೆ. ದೀಪಾವಳಿಯ ಹಬ್ಬ ಬರುತ್ತದೆ.

ಹಬ್ಬಗಳ ಸಂಭ್ರಮವನ್ನು ವರ್ಣಿಸುತ್ತ ಮಳೆಯನ್ನು ಈ ಕವಿ ಮರೆತುಬಿಟ್ಟರೊ ಏನೊ ಅಂತ ಓದುಗರು ಯೋಚಿಸಿದರೆ, ಕವಿಗೆ ತಾನು ಈ ಕವಿತೆಯಲ್ಲಿ ಏನು ಮಾಡಲಿಕ್ಕೆ ಹೊರಟಿದ್ದೇನೆ ಅನ್ನುವುದು ಗೊತ್ತಿದೆ. ಇಡೀ ಕಾವ್ಯದ ಶಿಲ್ಪ ಅವರ ಕಣ್ಣೆದುರಿಗಿದೆ. ಅವರು ಪ್ರಾರಂಭಿಸಿದ್ದು ಎದುರಿಗೆ ಬೀಳುತ್ತಿರುವ ಮಳೆಯೇ ಆದರೂ, ಈ ಕವಿತೆಯ ಶೀರ್ಷಿಕೆ "ಧಾರವಾಡದಲ್ಲಿ ಮಳೆಗಾಲ" ಎನ್ನುವುದು ಅವರಿಗೆ ಗೊತ್ತಿದೆ. ಅವರು ಒಂದು ಮಳೆಯನ್ನು ವರ್ಣಿಸುತ್ತಿಲ್ಲ. ಒಂದು ಮಳೆಗಾಲದ, ಅದರಲ್ಲೂ ಧಾರವಾಡದ ಮಳೆಗಾಲದ ಅನುಭವವನ್ನು ಕಟ್ಟಿಕೊಡುತ್ತಿದ್ದಾರೆ. ಹಬ್ಬಗಳು ಮಳೆಗಾಲದ ಒಂದು ಭಾಗ ಎನ್ನುವುದು ನಮ್ಮ ಅನುಭವಕ್ಕೆ ಬರುತ್ತದೆ. ಆದರೆ ಈ ಕವಿಗೆ ಶುರುವಾದದ್ದು ಒಂದು ಮಳೆಯಿಂದ ಎನ್ನುವುದನ್ನು ಮರೆತ ನಾವು, ಇನ್ನೂ ಅದೇ ಮಳೆಯನ್ನೇ ನೋಡುತ್ತಿದ್ದೇವೆ ಎಂದು ಕವಿ ನಮ್ಮನ್ನು ಎಚ್ಚರಿಸುತ್ತಾರೆ. ಹೀಗೆ ಎಚ್ಚರಿಸುವುದು ಮತ್ತೊಂದು ವಿಸ್ಮಯೋದ್ಗಾರದಿಂದ.

**ಏನು ಈ ಗಿಡಬಳ್ಳಿ ಮರಗಳಿಗೆಲ್ಲ ಎಂತಹ ಜಳಕವು!**
**ಹಸುರು ಹಚ್ಚನೆ ನಿಮಿರಿ ನಿಂತಿಹೆ ನೆಲಕೆ ಹರ್ಷದ ಪುಳಕವು**

ಈ ಮಳೆಯ ಸ್ನಾನದಿಂದ ಭೂಮಿತಾಯಿ ಪುಳಕಗೊಂಡಿದ್ದಾಳೆ. ಅವಳ ರೋಮಾಂಚನ ಹಸುರು ಹಚ್ಚನೆ ನಿಮಿರಿ ನಿಂತಿರುವುದರಲ್ಲಿ ಕಾಣುತ್ತದೆ. ಭೂದೇವಿಗೆ ಸ್ನಾನವಾದ ಮೇಲೆ ಎಲ್ಲವೂ ಸ್ವಚ್ಛವಾಗಿ ಕಾಣಿಸುತ್ತದೆ. ಎಲ್ಲೂ ಕಸಕಡ್ಡಿ ಕಾಣಿಸುವುದಿಲ್ಲ. ಆದರೆ ಮಳೆ ಬಿದ್ದು ನೆಲ ಕೆಸರಾಗಿದೆ.

ಇಲ್ಲಿಯವರೆಗೆ ಪ್ರಕೃತಿಯ ವಿವರಗಳಲ್ಲಿ ತನ್ಮಯವಾಗಿದ್ದ ಮನಸ್ಸು ತನ್ನಿಂದ ಹೊರಗೆ ಬಂದಾಗ, ಕೆಸರನ್ನು ಕಂಡು, ಹೀಗೆ ಕೆಸರಾಗುವ ಹಾಗೆ ಊರನ್ನಿಟ್ಟುಕೊಂಡ ನಗರಸಭೆಯ ಬಗ್ಗೆ ಸಿಟ್ಟಿಗೇಳುತ್ತದೆ. ಆ ಸಿಟ್ಟನ್ನು ಅಲ್ಲಿಯೇ ಮರೆತ ಕೂಡಲೆ, ದಿನದಿನದ ಅಡಿಗೆಗೆ ಕಾಯಿಪಲ್ಲೆ ತರುವುದಕ್ಕೆ ಹೋದರೆ ಏನಾಗುತ್ತದೆಂದು ಕವಿ ಧಾರವಾಡದ ಜನರ ಅನುಭವವನ್ನು ಹೇಳುತ್ತಾರೆ. ಕೊಡೆ ಹಿಡಿದು ಮಾರ್ಕೆಟ್ಟಿಗೆ ಹೋಗಬೇಕು. ಪ್ಯಾಂಟು ಪಚಡಿಯಾಗುತ್ತದೆ. ಪಕ್ಕದಲ್ಲಿ ಕಾರು ಹೋದರೆ ಗೋದಿಯ ಕಿಚಡಿಯ ಹಾಗೆ ಕಾಣುವ ಕೆಂಪು ಕೆಸರು ಬಾಯಿಗೇ ಹಾರುತ್ತದೆ. ಆದ್ದರಿಂದ

ಕವಿ ಮತ್ತು ಕವಿಯ ಸ್ನೇಹಿತರು ಮನೆಯಿಂದ ಹೊರಗೆ ಹೋಗುವುದಿಲ್ಲ. ಅವರು ಮಳೆಯ ಪಂಜರದಲ್ಲಿ ಸೆರೆ ಸಿಕ್ಕಿರುವ ಸರ್ಕಸ್ ಹುಲಿಗಳ ಹಾಗೆ ಒಳಗಿದ್ದಾರೆ. ನಗರದ ಬದುಕಿನಿಂದ ಸಂಪೂರ್ಣವಾಗಿ ಬೇರೆಯಾಗಿರುವ ಹಳ್ಳಿಯ ಜೀವನ ಕವಿಗೆ ನೆನಪಾಗುತ್ತದೆ.

**ಅಲ್ಲಿ ಹೊಲಗದ್ದೆಯಲ್ಲಿ ಕೊಪ್ಪೆಯ ಹೊತ್ತು ಗೆಯ್ವರೆ ಕಲಿಗಳು.**

ಹಳ್ಳಿಯ ಜನ ಮಳೆಯಲ್ಲಿ ಕೊಪ್ಪೆಯನ್ನು ಹಾಕಿಕೊಂಡು ಹೊಲ ಗದ್ದೆಯಲ್ಲಿ ಕೆಲಸ ಮಾಡುತ್ತಾರೆ. ಅವರು ನಿಜವಾದ ವೀರರು ಅಂತ ಕವಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾನೆ. ಮತ್ತೆ ತಾನಿರುವ ಪರಿಸರಕ್ಕೆ ಕವಿಯ ಮನಸ್ಸು ಹಿಂತಿರುಗುತ್ತದೆ. ಬೂಟು ಮತ್ತು ಚಪ್ಪಲಿಯನ್ನು ಉಪಯೋಗಿಸುವ ಮಾಡದಲ್ಲಿ ಅವನ್ನು ಇಟ್ಟ ಕಡೆ ಅವು ಬುರುಸುಗಟ್ಟಿವೆ. ಇಂಥ ಥಂಡಿಯಲ್ಲಿ ಹೊರಗೆ ಹೋಗಬೇಕಾದರೆ ಸ್ವೆಟರಿನ ಮೇಲೆ ಕೋಟು ಹಾಕಿಕೊಂಡು, ಸ್ಕಾರ್ಫ್ ಕಟ್ಟಿಕೊಂಡು ಹೊರಡಬೇಕು.

ಬಿಸಿಲು ಕಾಣುವ ಹಾಗೆ ಇಲ್ಲ. ಬಿಸಿಲನ್ನು ಕಾಣುವುದು ಅಂದರೆ ಅದು ಬರಿಯ ಮನಸಿನ ಮಂಡಿಗೆ. 'ಗೋಧಿ ತರಲಾರದವ ಮನಸ್ಸಿನಲ್ಲೇ ಮಂಡಿಗೆ ತಿಂದ' ಅನ್ನುವ ಗಾದೆ ಕವಿಗೆ ನೆನಪಾಗಿರಬೇಕು. ಈ ಥಂಡಿಯಲ್ಲಿ ಕಾಫಿ, ದೋಸೆ, ಕರಿದ ಹಪ್ಪಳ, ಸಂಡಿಗೆ ಇದ್ದರೆ ಚೆನ್ನಾಗಿರುತ್ತೆ ಅನ್ನಿಸುತ್ತೆ. ಕವಿ ಹೀಗೆ ಏನೇನೋ ಯೋಚಿಸುತ್ತಿದ್ದರೆ ಕವಿಯ ಮನೆಯ ಬೆಕ್ಕು ಒಲೆಯ ಬದಿಯಲ್ಲಿ ಬೆಚ್ಚಗೆ ಮಲಗಿದೆ. ಕವಿಗೆ ಕಾಫಿ ದೋಸೆ ಬೇಕು ಅನ್ನಿಸಿರಬೇಕು. ಆದರೆ ಬೆಕ್ಕಿಗೆ ಕನಸಿನಲ್ಲಿ ಕೂಡ ಇಲಿಗಳು ಕಾಣುವುದಿಲ್ಲ. ಹಕ್ಕಿಗಳು ಗೂಡಿನಲ್ಲಿ ಸದ್ದು ಮಾಡುತ್ತಿಲ್ಲ. ದನಕರು ಮೈಮೇಲಿದ್ದ ನೀರನ್ನು ಕೊಡವಿಕೊಳ್ಳುತ್ತ, ನಡುಗುತ್ತ ಮನೆ ಸೇರುತ್ತವೆ. ಕವಿ ತನ್ನ ಮನೆಯಲ್ಲಿ ಒಬ್ಬನೇ ಕುಳಿತು ಗೆಳೆಯರ ಭೆಟ್ಟಿಗೆ ಕಾತರಿಸಿದ್ದಾನೆ. ನಮಗೆ ಕವಿ ಹೇಳುತ್ತಾನೆ:

**ಬಿಸೀ ಚುರುಮುರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ**
**ಮಕ್ಕಳೊಂದಿಗೆ ಕುಳಿತು, ಕುರುಕುರು ತಿಂದು ಹೊರಜಗ ಮರೆಯಿರಿ**
**ಅಷ್ಟು ಮಿಕ್ಕೀ ಬೇಸರಾದರೆ ರೇಡಿಯೋ ಕಿವಿ ತಿರುವಿರಿ**
**ರಾತ್ರಿಯಾಗಲು ಊಟ ತೀರಿಸಿ ಜೊತೆಗೆ ಬೆಚ್ಚಗೆ ಮಲಗಿರಿ.**

ಧಾರವಾಡದ ಮಳೆಗಾಲದಲ್ಲಿ ಕಾಣುವ ಚಿತ್ರಗಳ ಮೆರವಣಿಗೆ, ಕವಿಯ ಮನಸ್ಸಿನ ಬೇಸರವನ್ನು ಕಳೆಯುತ್ತವೆ. ಈ ಕವಿತೆ ಬರೀ ಮಳೆಗಾಲದ ಬಗ್ಗೆ ಅಲ್ಲ, ಇಲ್ಲಿ ಸುರಿಯುವ ಮಳೆ " ಬೇರೆ ಸುಗ್ಗಿಯ ಬಗೆವುದು". ಅನೇಕ ಚಿತ್ರಗಳು, ಅನೇಕ ಮನಃಸ್ಥಿತಿಗಳು ಮತ್ತು ಅನೇಕ ಮನಸ್ಥಿತಿಗಳನ್ನು ಅನೇಕ ಲಯ ವಿನ್ಯಾಸಗಳನ್ನು ನಮ್ಮ ಅನುಭವವನ್ನಾಗಿ ಮಾಡಿಕೊಡುವ ಈ ಕವಿತೆ ಕಟ್ಟುವಿಕೆ ಅನನ್ಯವಾಗಿದೆ. ಈ ಕವಿತೆಯ ಇನ್ನೊಂದು ವಿಶೇಷ ಗುಣವೆಂದರೆ ಪದಗಳು ಮಾತಾಗಿ ಮಾರ್ಪಟ್ಟಿವೆ. ಚೆನ್ನವೀರ ಕಣವಿಯವರ ದನಿಯಲ್ಲಿ ಮಾತಿನ ಸೊಗಸು ಜೀವನ ಪ್ರೀತಿಯಾಗಿ ಹೊರಹೊಮ್ಮಿದೆ.

**ಸುಮತೀಂದ್ರ ನಾಡಿಗ**

# ೨೧. ಯುಗಯುಗದ ಹಾಡು

ಯುಗ ಯುಗಕೂ ಉರುಳುತಿಹುದು
ಜಗದ ರಥದ ಗಾಲಿ,
ಹಗಲು ಇರುಳು ಮರಳಿ ಮಸೆದು
ಸಾಹಸ ಮೈತಾಳಿ.

ಕಾಡು-ನಾಡು, ದೇಶ-ಕೋಶ
ಭಾಷೆ-ಭಾವ ದಾಟಿ,
ಭೂಮಿ-ಬಾನು, ಬೆಂಕಿ-ನೀರು
ಗಾಳಿ, ರಾಟಿ-ಧಾಟಿ.

ನವ ಜನಾಂಗ ಮೂಡಿ, ಮೊಳಗಿ
ಬದುಕು ತಿದ್ದಿ ತೀಡಿವೆ;
ಸೂರ್ಯ, ಚಂದ್ರ, ಚಿಕ್ಕೆ ಕೋಟಿ
ಕಣ್ಣರಳಿಸಿ ನೋಡಿವೆ.

ಊರು-ಕೇರಿ, ಭೂಮಿ-ಸೀಮಿ
ಮೀರಿ ಬೆಳೆದ ಮಾನವ,
ನೂರು ತಾರೆಗಳಲಿ ಹುಡುಕು-
ತಿಹನು ವಿಶ್ವಗಾನವ.

ಸುತ್ತು ಮುತ್ತು ಭಯ, ಸಂಶಯ
ಕೊಳ್ಳಿ ದೆವ್ವ ಕುಣಿದಿವೆ;

ಮನ ಮನಗಳ ಮುಳ್ಳುಬೇಲಿ
ಮಮತೆ ದೂರ ತಳ್ಳಿವೆ.

ಯುಗಪುರುಷರ ಜಗುಲಿಗಿರಿಸಿ
ಕೈಯ ತೊಳೆದುಕೊಂಡೆವು.
ಬಯಲಾಟದ ವೇಷ ಕುಣಿದು
ಬೆಳಗು ಬರಲು ದಣಿದೆವು.

ಪ್ರತಿಪದವೂ ಪ್ರಗತಿಗೆಂದು
ಹದವಿಲ್ಲದೆ ಮಿದಿದೆವು;
ಕುದಿಯಿಲ್ಲದೆ ಎಸರಿಲ್ಲದೆ
ಕಸುಕಿಗೆ ಬಾಯ್ದೆರೆದೆವು.

ನಿನಗೆ ಬೇವು, ನನಗೆ ಬೆಲ್ಲ -
ನವಯುಗಾದಿ ಗಾದೆಯು;
ಕೂಡಿ, ಕುಟ್ಟಿ ಸವಿಯಲಿಲ್ಲ
ಯುಗ ಯುಗಗಳ ಹಾಡಿದು.

ದೂರ ದೂರ ಬೇರು ಚಾಚಿ
ಟೊಂಗೆ, ಟಿಸಿಲು ಮನುಕುಲ;
ತಾಯಿ ಬೇರು ಕಾಯಬೇಕು
ಹಣ್ಣಾಗಲಿ ಹಂಬಲ.

ಶುಭಾಶುಭದ ಫಲವ ಹೊತ್ತು
'ಶೋಭನ'ವಿದೊ ಬಂದಿದೆ,
ಇಳುಹಿಕೊಳ್ಳಿ ತಲೆಯ ಭಾರ
ಲಾಭ-ಹಾನಿ ಮುಂದಿದೆ.

೧

ಬುಡದಿಂದ ಹಿಡಿದು, ಚಾಚಿದ ಹರಿಹರಿಗಳ ತುಂಬ ನೇತು ಬಿದ್ದ ಧಾರವಾಡದ ಹಲಸಿನ ಮರವನ್ನು ನೋಡಿದಾಗಲೆಲ್ಲ ನನ್ನ ಪ್ರೀತಿಯ ಕವಿತೆಯೊಂದು ಹೀಗೆಯೇ ಇರಬೇಕೆಂದು ಬಹಳ ಸಲ ಅನಿಸಿದೆ. ಮೈತುಂಬ ಪ್ರತಿಮೆ ರೂಪಕಗಳ ಹೊತ್ತು, ಒಂದೊಂದು ಒಳ ತೊಳೆಯ ಹೊಸ ರುಚಿಯ ಪದಬಂಧ ಹೊಂದಿ ಮನಸ್ಸನ್ನು ಕವಿತೆ ತಣಿಸಬೇಕು. ಒಂದು ಓದು ಮತ್ತೊಂದು ಓದಿಗೆ ಹಾತೊರಿಸುವ ಶಕ್ತಿ ಪಡೆದಿರಬೇಕು. ನೆನಪಾದಾಗಲೆಲ್ಲ ಹೃದಯ ಮನಸ್ಸುಗಳನ್ನು ತಿಳಿಗೊಳಿಸಿ ತಣ್ಣನೆಯ ಜೀವ ತವಕ ತುಂಬಬೇಕು. ಇವೆಲ್ಲ ನಾನು ಪ್ರೀತಿಸುವ ಕವಿತೆಯ ಹಿಂದಿನ ಬಯಕೆಗಳು. ಅಲ್ಲಲ್ಲಿ ಅಪರೂಪಕ್ಕೆ ಇಂಥ ಬಯಕೆಗಳನ್ನು ಈಡೇರಿಸುವ ಕವಿತೆಗಳು ಸಿಗುತ್ತವೆ. ಈ ಪೈಕಿ ಹಿರಿಯ ಕವಿ ಚೆನ್ನವೀರ ಕಣವಿಯವರ ಯುಗ ಯುಗದ ಹಾಡು ಒಂದು. ('ನೆಲ-ಮುಗಿಲು' ಸಂಗ್ರಹ)

ಮತ್ತೆ ಮತ್ತೆ ಓದಿದಾಗಲೆಲ್ಲ ಇದರಲ್ಲಿಯ ಅರ್ಥ ಭಾವಗಳು ಹೊಸ ಪುಳಕದ ಆಳಕ್ಕೆ ಇಳಿಸಿ ಹೊಸ ಚೈತನ್ಯ ತುಂಬಿವೆ. ನಿರ್ಲಿಪ್ತತೆಯ ಹೊಳಪಿನ ಆವರಣದ ಈ ಕವಿತೆ ಬಹಳ ಕಾರಣಗಳಿಗಾಗಿ ನನಗೆ ಪ್ರಿಯವಾಗಿದೆ. ಬಂಡಾಯ ಸಾಹಿತ್ಯದ ನೆಲೆಯಿಂದ ಬರೆಯುತ್ತಿರುವ ನನ್ನಂಥವರಿಗೆ. ಈ ಕವಿತೆ ನಾನು ಬಯಸುವ, ನಂಬುವ ಹಾಗೂ ಬರೆಯಬೇಕೆನ್ನುವ ಕನಸುಗಳನ್ನು ತುಂಬಿಕೊಂಡಿರುವುದರ ಕಾರಣ ಕೂಡ ಈ ಮೆಚ್ಚುಗೆಯ ಹಿಂದೆ ಬೆಚ್ಚಗೆ ಅವಿತುಕೊಂಡಿರಬಹುದು.

ಒಂದು ಒಳ್ಳೆಯ ಕವಿತೆಯ ಹುಡುಕಾಟ ಕಾಲ ಮತ್ತು ಆ ಕಾಲದ ಕಾವ್ಯದ ಹಿನ್ನೆಲೆಯಿಂದ ಇರುತ್ತದೆ ಎಂದು ನನ್ನ ನಂಬುಗೆ. ಶುದ್ಧ ಕಾವ್ಯದ ಚಿಂತನೆ ಮಾಡುವುದು ಮುಂಬರುವ ಕಾಲದ ಕಾವ್ಯಪ್ರಿಯರಿಗೆ ಬಿಟ್ಟದ್ದು. ಕವಿಯ ಮತ್ತು ಓದುಗನ ಜಿಜ್ಞಾಸೆ ಬೇರೆ ಬೇರೆ ರೀತಿಯವು. ಓದುಗನಿಗೆ ಎದುರಿಗಿರುವ ಕವಿತೆ ಮಾತ್ರ ಸತ್ಯ. ಅದರ ಹಿಂದಿನ ಸೃಷ್ಟಿಕಷ್ಟದ ಕಥೆ ಆತನಿಗೆ ಬೇಕಿಲ್ಲ. ಕವಿಗೆ ತನ್ನ ತಳಮಳ ರೂಪ ಪಡೆಯುವ ಕವಿತೆ ಮತ್ತು ಅದರ ಕಷ್ಟಗಳ ಅರಿವು ಇರುತ್ತದೆ. ಕವಿತೆಯ ಒಳ ಅರ್ಥ ಸಂವೇದನೆಗಳನ್ನು ಧ್ಯಾನದಂತೆ ನಿಧಾನವಾಗಿ ಬಿಚ್ಚಿಕೊಳ್ಳುವ ಕವಿತೆ ಒಂದು ಮಾದರಿಯದು. ಒಂದೇ ಓದಿಗೆ ಬಿದ್ದುಹೋಗುವ ಕವಿತೆಗಳೇ ಹೆಚ್ಚಾಗಿರುವ ಈ ದಿನಗಳಲ್ಲಿ ಕೊನೆಗೂ ಉಳಿಯುವುದು ಕಾವ್ಯ ಎಂಬ ಮಾತಿನ ಮರ್ಮದ ಹುಡುಕಾಟಕ್ಕೆ ಮಾದರಿ 'ಯುಗ ಯುಗದ' ಕವಿತೆ. ಕೊನೆಗೂ ಉಳಿಯುವುದು, ಕಾವ್ಯ ಎಂದರೇನು ಎಂಬ ಪ್ರಶ್ನೆ ಕಾಡಿದಾಗ ಅದರ ಹುಡುಕಾಟದಲ್ಲಿಯೇ ಒಂದಿಷ್ಟು ಉತ್ತರಗಳನ್ನೂ ಕಾಣಬಹುದು. ಕಾಲದ ಎಲ್ಲ ಸಂವೇದನೆಗಳನ್ನು ಇದ್ದ ಭಾಷೆಯ ಕಟ್ಟಿನಿಂದ ಬಿಚ್ಚಿ, ಹೊಸ ಭಾಷೆಯ ಮೂಲಕ ಕಟ್ಟುವುದೇ ಹೊಸ ಕವಿತೆ ಇರಬಹುದೆ? ಅಥವಾ ಕವಿತೆ ಒಂದು ಕ್ಷಣ ಮನಹೊಕ್ಕ ಸಂಶಯದಂತೆ ಕಾಡಿದರೆ ಸಾಕು ಎಂದು ಕೈತೊಳೆದುಕೊಂಡು ಬಿಡಬಹುದೆ?

ಯುಗ ಯುಗದ ಹಾಡು ಕವಿತೆಯ ಹರವು ಬಹಳ ದೊಡ್ಡದು. ನಿಲ್ಲದ ಕಾಲದ ಚಕ್ರದ ಉರುಳುಗಳನ್ನು ತುಂಬಿರುವ ವಿಸ್ತಾರದ್ದು. ಜೀವನದ ಒಂದು ಪರಿಪಕ್ವ ಹಂತ ತಲುಪಿದಾಗ

ಮಾತ್ರ ಇಂಥ ಕವಿತೆಯನ್ನು ರಚಿಸಲು ಸಾಧ್ಯ. ಸುಮಾರು ಆರು ದಶಕಗಳ ಕಾಲ ಭಾವ ಮತ್ತು ಅನುಭವಗಳನ್ನು ಅತ್ಯಂತ ತಾಳ್ಮೆಯಿಂದ ಆಳವಾಗಿ ಪರಿಶೀಲಿಸಿ ಕಾವ್ಯ ತಪಸ್ಸು ಮಾಡಿದ ಚೆನ್ನವೀರಕಣವಿ ಅವರಂಥವರಿಂದ ಮಾತ್ರ ಇಂಥ ಕವಿತೆ ಬರೆಯಲು ಸಾಧ್ಯ. ಪ್ರವಾದಿ ಭಾಷೆ ಲಯ ಮೊರೆಯುವ ಈ ಕವಿತೆಯ ಆಳದಲ್ಲಿ ಜೀವವಾಹಿನಿಯ ಸೂಕ್ಷ್ಮ ಭಾವ, ಸಂವೇದನೆಗಳು ಓದುಗನನ್ನು ಸೆರೆ ಹಿಡಿಯುತ್ತವೆ.

ನಾಲ್ಕು ಸಾಲುಗಳ ಒಂಬತ್ತು ನುಡಿಗಂಟುಗಳ ಪ್ರತಿ ಭಾಗದಲ್ಲಿ ವಿಸ್ಮಯದ ಭಾವಲಹರಿಗಳು ಚೆಲ್ಲಿವೆ. ಮೊದಲಿನ ಪ್ರತಿ ಎರಡು ಸಾಲುಗಳು ದೈನಂದಿನ ಚಿತ್ರ ನೀಡಿದರೆ, ನಂತರ ಎರಡು ಸಾಲುಗಳು ಸಮಾಂತರವಾಗಿ ಅವ್ಯಕ್ತ ಅನುಭಾವ ನೀಡುವ ರೀತಿಯವು.

**ಯುಗ ಯುಗಕೂ ಉರುಳುತಿಹುದು**
**ಜಗದ ರಥದ ಗಾಲಿ,**
**ಹಗಲು-ಇರುಳು ಮರಳಿ ಮಸೆದು**
**ಸಾಹಸ ಮೈ ತಾಳಿ**

ರಥದ ಗಾಲಿ, ಹಗಲು, ಇರುಳು, ಮಸೆವ, ಉರುಳುವ ಚಿತ್ರ ಸ್ಥಾಪಿತವಾಗಿ ತನ್ನ ವ್ಯಾಪ್ತಿಯನ್ನು ದೈನಿಕದ ಒಳಗೆ ಸೆಳೆಯುತ್ತದೆ.

**ಕಾಡು-ನಾಡು, ದೇಶ-ಕೋಶ,**
**ಭಾಷೆ-ಭಾವ ದಾಟಿ**

ಎನ್ನುತ್ತ ಕಾಲಚಕ್ರದ ಮುಂದುವರಿಕೆಯಾಗಿ 'ರಾಟಿ ಧಾಟಿ'ಯಾಗುತ್ತದೆ.

**ನವ ಜನಾಂಗ ಮೂಡಿ, ಮೊಳಗಿ**
**ಬದುಕು ತಿದ್ದಿ ತೀಡಿವೆ;**

ಜೀವ ಜಗತ್ತಿನ ಹೊಸ ಆಶಾಭಾವ ಸಂಕೇತಿಸಿ ಕವಿಯ ಚಿಂತನೆಯ ಚಕ್ರ ಉರುಳುತ್ತದೆ. ಕವಿತೆಯ ಉದ್ದಕ್ಕೂ ಈ ಚಿಂತನೆ ಉರುಳು ಒಂದು ಚಿತ್ರ ಕೊಡುತ್ತಾ, ಅದಕ್ಕೆ ಜೋಡಣೆಯಾಗಿ ಮತ್ತೊಂದು ಹೊಸ ಚಿತ್ರವನ್ನು ಕೊಡುತ್ತ ಗುಂಗು ಹಿಡಿಸುತ್ತದೆ.

**ಊರು-ಕೇರಿ, ಭೂಮಿ-ಸೀಮಿ**
**ಮೀರಿ ಬೆಳೆವ ಮಾನವ,**
**ನೂರು ತಾರೆಗಳಲಿ ಹುಡುಕು-**
**ತಿಹನು ವಿಶ್ವಗಾನವ.**

ಇವೆಲ್ಲವುಗಳ ಜೊತೆಗೆ.

**ಸುತ್ತುಮುತ್ತು ಭಯ, ಸಂಶಯ,**
**ಕೊಳ್ಳಿದೆವ್ವ ಕುಣದಿವೆ;**
**ಮನಮನಗಳ ಮುಳ್ಳುಬೇಲಿ**
**ಮಮತೆ ದೂರ ತಳ್ಳಿವೆ**

ಬದುಕಿನ ವಿಶಿಷ್ಟ ಸನ್ನಿವೇಶ ಕವಿ ನೀಡುತ್ತಾರೆ.

ಮೊದಲೈದು ನುಡಿಗಳಲ್ಲಿ ಸಾಗುವ ಚಿಂತನೆಯ ಚಕ್ರ ಕೊನೆಯ ನಾಲ್ಕು ಭಾಗಗಳಲ್ಲಿ ಹೊಸ ದಿಕ್ಕಿನತ್ತ ಕಾಲದೆದುರು ಮನುಕುಲದ ಸೋಲುಗಳು ಚಿತ್ರಿತವಾಗಿವೆ. ಮನುಷ್ಯ ಸಹಜ ಸ್ವಾರ್ಥ ಲೋಭಗಳ ಗುಣ ಪ್ರತಿಪಾದಿಸುವ ಈ ಕೆಳಗಿನ ಸಾಲುಗಳನ್ನು ನೋಡಬಹುದು.

**ಬಯಲಾಟದ ವೇಷ ಕುಣಿದು**
**ಬೆಳಗು ಬರಲು ದಣಿದೆವು.**

***

**ಕುದಿಯಿಲ್ಲದೆ, ಎಸರಿಲ್ಲದೆ**
**ಕಸುಕಿಗೆ ಬಾಯ್ದೆರೆದೆವು.**

***

**ಕೂಡಿ, ಕುಟ್ಟಿ ಸವಿಯಲಿಲ್ಲ**
**ಯುಗ ಯುಗಗಳ ಹಾಡಿದು.**

ಇವುಗಳಿಗೆ ಕಾರಣವನ್ನು ಕವಿ ಈ ಕೆಳಗಿನಂತೆ ಕೊಡುತ್ತಾರೆ.

**ಯುಗಪುರುಷರ ಜಗುಲಿಗಿರಿಸಿ,**
**ಕೈಯ ತೊಳೆದುಕೊಂಡೆವು;**

***

**ಪ್ರತಿಪದವೂ ಪ್ರಗತಿಗೆಂದು**
**ಹದವಿಲ್ಲದೆ ಮಿದಿದೆವು;**

***

**ನಿನಗೆ ಬೇವು, ನನಗೆ ಬೆಲ್ಲ-**
**ನವಯುಗಾದಿ ಗಾದೆಯು ;**

ಅಂತಿಮವಾಗಿ ಜೀವ ಪರ ಕಾಳಜಿಗಳು ಆಶಾವಾದಿತ್ವದ ನೆಲೆಯಲ್ಲಿ ಕೊನೆಯ ನಾಲ್ಕು ಸಾಲುಗಳಲ್ಲಿ ಮೂಡಿವೆ.

**ದೂರ ದೂರ ಬೇರು ಚಾಚಿ**
**ಚೊಂಗೆ, ಟಿಸಿಲು ಮನುಕುಲ-**
**ತಾಯಿ - ಬೇರು ಕಾಯಬೇಕು**
**ಹಣ್ಣಾಗಲಿ ಹಂಬಲ.**

ಕವಿತೆಯ ಒಟ್ಟು ಮಂಥನ 'ಹಣ್ಣಾಗಲಿ ಹಂಬಲ' ಎಂಬುದು. ಇದಕ್ಕೊಂದು ತಾಯಿ-ಬೇರು ಇದೆ ಎಂಬುದು ಕವಿಯ ನಂಬುಗೆ.

ದೊಡ್ಡ ಹಣಿಗೆಯ ಈ ಕವಿತೆ ಇನ್ನೂ ಹೆಚ್ಚಿನ ಓದನ್ನು ಬಯಸುತ್ತ, ಅರ್ಥ ವಿಸ್ತಾರಗಳನ್ನು ತೆರೆದಿಡುವ ಶಕ್ತಿ ಹೊಂದಿರುವಂತಹದ್ದು. ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ದಿಕ್ಕಿನದು ಎನ್ನುವುದಕ್ಕಿಂತ ಮತ್ತೊಬ್ಬ ದೊಡ್ಡ ಕವಿಯ ಉತ್ಕೃಷ್ಟ ಕವಿತೆ ಇದೆಂದು ಹೇಳಬಹುದು. ಬೇಂದ್ರೆಯವರ ಕಾಲದ ಹಕ್ಕಿ ನೆಲಕ್ಕಿಳಿಯದೆ ಆಗಸದ ವಿಸ್ತಾರದಲ್ಲಿ ಕಣ್ಣಿಡುವಂತಹದ್ದು. ಕಣವಿಯವರ ಯುಗ ಯುಗದ ಹಾಡು ನೆಲ ಮುಗಿಲುಗಳನ್ನು ಏಕ ಕಾಲಕ್ಕೆ ಮುಟ್ಟುವಂತಹದ್ದು.

ಇಲ್ಲಿಯ ಹಲವು ದೇಶೀ ಪದ ಪ್ರಯೋಗಗಳು (ಎಸರಿಲ್ಲದೆ, ಕಸುಕಿಗೆ, ಮಿದಿದೆವ್ವ, ಜಗುಲಿ ಮುಂತಾದವುಗಳು) ಕವಿತೆಯಲ್ಲಿ ಸಮ್ಮಿಳಿತವಾದದ್ದು ವಿಶೇಷ. ಭಾವಗೀತೆಯೊಂದು ಈ ರೀತಿಯ ಚಿಂತನೆಯ ವಿಸ್ತಾರ ಪಡೆದದ್ದು ಅಪರೂಪವೆನ್ನಬಹುದು. ನವೋದಯದ ಗೀತ ಸಂಸ್ಕಾರ ಪಡೆದಿರುವ ಚೆನ್ನವೀರ ಕಣವಿಯವರ 'ಯುಗ ಯುಗದ ಹಾಡು' ಓದಿನಲ್ಲಿಯೂ ಹಾಡಿನಲ್ಲಿಯೂ ಒಂದೇ ಎತ್ತರವನ್ನು ಕಾಪಾಡಿಕೊಳ್ಳುವ ಅಪರೂಪದ ಕವಿತೆ.

**ಸತೀಶ ಕುಲಕರ್ಣಿ**

## ೨೨. ಕಾಲಪುರುಷನಲ್ಲಿ ಕವಿಗಳ ಕೋರಿಕೆ

ಏನಯ್ಯ ಕಾಲಪುರುಷ
ನಿನ್ನ ಮುಖದರುಶನವನೊಮ್ಮೆ ದಯಪಾಲಿಸಯ್ಯ.
ಕಣ್ತುಂಬ ನೋಡಿ, ನಿನ್ನ ರೂಪವನೊಮ್ಮೆ ಅಚ್ಚೊತ್ತಿಕೊಳ್ಳುವೆವು
ಹಣೆಯ ಪಾದಕೆ ಹಚ್ಚಿ ನಮಿಸುವೆವು
ಸಾಷ್ಟಾಂಗವೆರಗುವೆವು, ಆಯಿತೋ ?

ಈ ಸೃಷ್ಟಿ ಜೊತೆಗೇ ನಿನ್ನ ರಥವೂ ಹೊರಟು ಬಂದಿಹುದು-
(ಉರುಳುತಿದೆ ಕುರುಡು ಚಕ್ರ)
ನಮ್ಮಜ್ಜ ಮುತ್ತಜ್ಜರ ಕೈಗೆ ಕೋಲು ಕೊಟ್ಟು
ಕಣ್ಗೆ ಕನ್ನಡಕ ಹಚ್ಚಿ,
ಬೆನ್ನಿನಲಿ ಹೆಣಭಾರವಿಟ್ಟು
ಈಗ ನಮ್ಮ ಹೆಗಲಿಗೇ ಕೈ ಹಾಕಿ ನಡೆದಿರುವೆಯಲ್ಲ.
ಏನಯ್ಯ ಸಮಾಚಾರ?
ಇನ್ನೂ ಎಷ್ಟು ದೂರವಿದೆಯೋ ನಿನ್ನ ಪಾದಗಟ್ಟಿ?

ನೀನೇನು ತುಳಿದೆಯೋ, ಏನೇನು ಬೆಳೆದೆಯೋ
ಏನೆಲ್ಲ ಕೂಡಿಸಿ ಕಳೆದೆಯೊ
ಯಾರು ಎಲ್ಲ ಲೆಕ್ಕವ ಬರೆದು ಇಟ್ಟವರು ?
ಹೊಳೆವ ನಕ್ಷತ್ರಗಳ ಕಣ್‌ಬೆಳಕಿನಲ್ಲಿ
ನೀನಿಟ್ಟ ಖಾತೆ-ಕಿರ್ದಿಯನೊಮ್ಮೆ ತೆರೆಯಬೇಕು;
ಎಷ್ಟೊ ತಾರಗೆ ಇದ್ದಕಿದ್ದಂತೆ ಆರಿದವು.

ಇನ್ನೆಷ್ಟೊ ತಮ್ಮ ಬೆಳಕನು ಇಳೆಗೆ ಮುಟ್ಟಿಸಲು ಪಣತೊಟ್ಟವು.
ಆಕಾಶಗಂಗೆಯಲಿ ಕಿಕ್ಕಿರಿದು ತಿಕ್ಕಿ ಮುಕ್ಕಿದವು ಕೆಲವು.
ಇಂಥದರಲ್ಲಿ-
ನಮ್ಮ ಕೃತಿಗಳು ನಿನ್ನ ಒರೆಗಲ್ಲಿನಲಿ ನಿಂತು ಬದುಕಬೇಕಂತೆ !
ಎಲ್ಲ ವಿಮರ್ಶಕರ ತಲೆ ಮೇಲೆ ಹತ್ತಿ
'ಅತ್ಯತಿಷ್ಠದ್ದಶಾಂಗುಲಂ' ಆಗಿರುವೆಯಂತೆ.
ಬೇಡ ಮಹರಾಯಾ
ನಿನ್ನ ಒರೆಗಲ್ಲನ್ನು ಹೊರಗೆ ತೆಗೆಯಬೇಡ,
'ಕಾಲಪುರುಷಂಗೆ ಗುಣಮಣಮಿಲ್ಲಂಗಡ!'
ಎಂದು ನಮ್ಮಜ್ಜ ಮೊದಲೇ ಹೆದರಿಸಿದ್ದಾನೆ.
ಅದ ಕೇಳಿ ನಮ್ಮೊಡಲೊಳೂ 'ಗುಡುಗುಟ್ಟುಗುಂ ಗಡ!'

ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ
ಈ ಲೋಕದಲಿ ನಾನಾ ನಮೂನೆ ಲೋಹವಿರುವಾಗ?
ಗಟ್ಟಿ ಕಾಳುಗಳನ್ನೇ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ

ಎಲ್ಲವೂ ಹೊಟ್ಟೆಗೇ ಹೋಗುವಾಗ ?
ಇಗೋ
ನಮ್ಮ ಮನದಂಗಳದಿ ಬೆಳೆದಷ್ಟು ಕವಿತೆಗಳ
'ನಿನ್ನ ಮಡಿಲೊಳಗಿಡಲು ತಂದಿರುವೆವು'-
ತುಂಬಿ ಹರಿಯುವ ಹೊಳೆಯ ನೀರಿನಲಿ
ಇವುಗಳನು ಹಾಯಾಗಿ ತೇಲಿಸಪ್ಪ
ಸ್ವಾಮಿ ನಮ್ಮಪ್ಪ.
ನಮ್ಮ ಕಣ್ಮರೆಯಲ್ಲಿ ಬೇಕಾದ್ದು ಮಾಡಿಕೊ
ನಾವಂತು ಪಾರಾದೆವು.
ಸರಿ, ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು
ಪದ್ಯವ ಬರೆದು, ಕನ್ನಡಿ ಕಟ್ಟು ಹಾಕಿ
ತುಂಬು ಸಭೆಯೊಳು ಮಾನಪತ್ರ ಸಲಿಸುವೆವು.
ಇಲ್ಲದಿದ್ದರೆ ವೃಥಾ ತಲೆದಂಡ
ಅಲ್ಲವೆ ? ಅದಕಾಗಿ ಆಯುಷ್ಯದುದ್ದಕೂ ಚಿಂತೆ ಬೇಡ.
ಕಾಲಾಯ ತುಭ್ಯಂ ನಮಃ .

ಒಂದು ಕಾಲಕ್ಕೆ ಶ್ರೇಷ್ಠ ಕೃತಿ ಎಂದು ಪರಿಗಣಿತವಾದದ್ದು ಕೆಲ ಕಾಲಾನಂತರ ತನ್ನ ಸ್ಥಾನದಿಂದ ಚ್ಯುತವಾಗಬಹುದು. ಮಹಾಕೃತಿ ಎನಿಸಿದ್ದು ಸಾಮಾನ್ಯ ಕೃತಿ ಎಂದು ಸಿದ್ಧವಾಗಬಹುದು. ತದ್ವಿರುದ್ಧವಾಗಿ ಒಂದು ಕಾಲಕ್ಕೆ ತೀರಾ ಸಾಮಾನ್ಯ ಎನಿಸಿದ್ದು ಕಾಲಾಂತರದಲ್ಲಿ ಅತ್ಯಂತ ಮಹತ್ವದ ಕೃತಿಯೆಂದು ನಿರ್ಣಯಿತವಾಗಬಹುದು. ಸಾಹಿತ್ಯದ ಜಾತಕದಲ್ಲಿ ಕಾಲಾಂತರದಲ್ಲಿ ಯಾವ ಕೃತಿಯ ಸ್ಥಾನಮಾನ ಯಾವ ರೀತಿಯ ಏರಿಳಿತಗಳನ್ನು ಕಾಣಬಹುದೆಂಬುದನ್ನು ಯಾರೂ ಊಹಿಸಲೂ ಸಾಧ್ಯವಿರುವುದಿಲ್ಲ. ಇದಕ್ಕೆಲ್ಲ ಸಾಹಿತ್ಯ ಜಗತ್ತಿನಲ್ಲಿ ಸಾಕಷ್ಟು ನಿದರ್ಶನಗಳುಂಟು. ಸಾಹಿತ್ಯ ಕೃತಿಯೊಂದನ್ನು ಕುರಿತು ಅದರ ಮಹತ್ವ, ಅರ್ಥ ಸೌಂದರ್ಯ ಕುರಿತು ಎಷ್ಟೆಲ್ಲ ವ್ಯಾಖ್ಯಾನ, ವಿವರಣೆ, ವಿಶ್ಲೇಷಣೆ, ವಿಮರ್ಶೆಗಳು ಬಂದರೂ ಅಂತಿಮವಾಗಿ ಕಾಲರಾಯನೇ ದೊಡ್ಡ ವಿಮರ್ಶಕನೆಂದು ಎಲ್ಲರೂ ಏಕ ಕಂಠದಿಂದ ಒಪ್ಪಿದ್ದಾರೆ. ಕಾಲದ ಏರಿಳಿತದಲ್ಲಿ ಯಾವ ಕೃತಿ ತನ್ನ ಜನಪ್ರಿಯತೆ ಖ್ಯಾತಿಗಳನ್ನು ಸ್ಥಾನವನ್ನು ಉಳಿಸಿಕೊಂಡು ಬರುತ್ತದೋ ಅದೇ ಶ್ರೇಷ್ಠ ಎಂದು ನಿಷ್ಕರ್ಷೆಯಾಗಿದೆ. ಹಾಗಾಗಿ ಕಾಲರಾಯನೇ ಎಲ್ಲ ವಿಮರ್ಶಕರಿಗಿಂತ ದೊಡ್ಡ ವಿಮರ್ಶಕನೆಂದು ಸಾರ್ವಕಾಲಿಕವಾಗಿ ಒಪ್ಪಿತವಾಗಿದೆ.

ಇದು ಸಾಹಿತ್ಯ ಕೃತಿಗಳಿಗಷ್ಟೇ ಅಲ್ಲ; ಜಗತ್ತಿನ ಎಲ್ಲ ವಿದ್ಯಮಾನಗಳಿಗೂ ಸಮಾನವಾಗಿ ಅನ್ವಯಿಸುತ್ತದೆ. ಕಾಲ ಯಾವುದನ್ನು ಮುಂದಿನ ಜನಾಂಗಕ್ಕೆ ಉಳಿಸಿಕೊಡುತ್ತದೋ ಅದೇ ಗಟ್ಟಿ, ಶ್ರೇಷ್ಠ. ಅದು ಮಾತ್ರ ಉಳಿಯುತ್ತದೆ. ಶತಮಾನಗಳ ಉರುಳುವಿಕೆಯಲ್ಲಿ ಎಷ್ಟೋ ಕೃತಿಗಳೂ, ಘಟನೆಗಳೂ, ವ್ಯಕ್ತಿಗಳೂ ಹೇಳ ಹೆಸರಿಲ್ಲದಂತೆ ಕೊಚ್ಚಿ ಹೋಗಿಬಿಡುವುದುಂಟು. ಕಾಲದ ಈ ಅಬ್ಬರದಲ್ಲಿ ಕೆಲವು ಮಾತ್ರ ಅಗ್ನಿ ಪರೀಕ್ಷೆ ಸಂಕಷ್ಟಗಳ ಮೂಲಕ ಹಾದು ಬಂದು ಗಟ್ಟಿಯಾಗಿ ಉಳಿದು ತಮ್ಮನ್ನು ಚಿರಸ್ಥಾಯಿಗೊಳಿಸಿಕೊಳ್ಳುತ್ತವೆ. ಇದರ ಅರಿವಿದ್ದುದರಿಂದಲೇ ಭವಭೂತಿಯಂಥ ಕವಿಗೆ ಅವನ ಕಾಲದಲ್ಲಿ ಅವನ ಕೃತಿಯಲ್ಲಿ ಓದಿ ಮೆಚ್ಚುವ ಸಹೃದಯರು ಸಿಗದೆ "ಉತ್ಪತ್ಸ್ಯತೇಸ್ತಿ ಮಮ ಕೋಪಿ ಸಮಾನ ಧರ್ಮಾ. ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ" ಎಂದು ಕಾಲನಿಗೆ ಶರಣಾಗಿ ಒಂದು ರೀತಿಯಲ್ಲಿ ಹತಾಶೆಯಿಂದಲೇ ಸಮಾಧಾನ ತಾಳಬೇಕಾಯಿತು. ಆದ್ದರಿಂದಲೇ ಯಾರು ಎಷ್ಟೇ ವಿಮರ್ಶಕರಾದರೂ ಅವರೆಲ್ಲರ ತೀರ್ಮಾನಗಳನ್ನು ಅಪ್ರಸ್ತುತಗೊಳಿಸುತ್ತ ನಗಣ್ಯವಾಗಿಸುತ್ತ ಎಲ್ಲ ವಿಮರ್ಶಕರ ತಲೆ ಮೆಟ್ಟುವಂತೆ ಕಾಲ ನಿಷ್ಠುರ ವಿಮರ್ಶಕನಾಗಿಬಿಡುತ್ತಾನೆ. ಕಾಲರಾಯನಿಗೆ ಯಾವ ಪಕ್ಷಪಾತವೂ ಇಲ್ಲ. ತನ್ನದೇ ಆದ ತೀವ್ರ ರಾಗದ್ವೇಷಗಳಿಲ್ಲ. ಗಟ್ಟಿ ಕಾಳುಗಳನ್ನು ಉಳಿಸಿ ಟೊಳ್ಳನ್ನು ತೂರುವ ಕಾರ್ಯವನ್ನು ಅವನು ಮಾಡಿಯೇ ತೀರುತ್ತಾನೆ. ಹಾಗಾಗಿ ಕವಿ ಅಥವಾ ಲೇಖಕರಿಗೆ ಇರುವ ಮಾರ್ಗ ಕಾಲನಿಗೆ ಶರಣಾಗುವುದೊಂದೇ. ಕಾಲವನ್ನು ಕಡೆಗಣಿಸದೆ ತನ್ನ ಭೂತದ ಅರಿವು, ಭವಿಷ್ಯತ್ತಿನ ಎಚ್ಚರಗಳ ಇಕ್ಕಟ್ಟಿನಲ್ಲಿ ವರ್ತಮಾನದ ಬಿಂದುವಿನಲ್ಲಿ ಕೃತಿ ರಚನೆ ಮಾಡಬೇಕಾದ ತುರ್ತಿನಲ್ಲಿರುವ ಕವಿ ತನ್ನ ಮತ್ತು ಕೃತಿಯ ಸ್ಥಾನಮಾನಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ಇರಬೇಕಾಗುತ್ತದೆ. ಕವಿ ಕಣವಿಯವರ 'ನೆಲ ಮುಗಿಲು' ಸಂಗ್ರಹದ ಈ ಪದ್ಯದಲ್ಲಿ ಕಾಲದ ಅಪಾರ ಶಕ್ತಿ, ಅದರ ನಿರ್ಮಮತೆ,

ಅದರ ವಿನಾಶಕಾರಕ ಅಷ್ಟೇ ಅಲ್ಲ, ಸೃಷ್ಟಿಕಾರಕ ಶಕ್ತಿ ಮತ್ತು ಕಾಲದ ಬಗ್ಗೆ ಕವಿ ತಾಳಬೇಕಾದ ನಿಲುವು ಇವೆಲ್ಲವುಗಳನ್ನು ಅನ್ಯಾದೃಶವಾಗಿ ಬಿಂಬಿಸಲಾಗಿದೆ. ಕವಿ ಅಥವಾ ಕೃತಿಕಾರ ಕಾಲ ಪುರುಷನಿಗೆ ಶರಣಾಗುವುದು ಬಿಟ್ಟು, ಅನ್ಯಮಾರ್ಗವಿಲ್ಲ ಎಂಬುದನ್ನು, ಕೃತಿಯನ್ನು ರಚಿಸಿದ ಮೇಲೆ ಕವಿ ತಾಳಬೇಕಾದ ನಿರ್ಲಿಪ್ತತೆ ಇವುಗಳನ್ನು ನಿರ್ಣಾಯಕವಾಗಿ ಮನವರಿಕೆ ಮಾಡಿಕೊಡುವ ಕವಿತೆ ಇದಾಗಿದೆ. ಇದೀಗ ಪದ್ಯವನ್ನು ವಿವರವಾಗಿ ನೋಡಬಹುದು.

ಪ್ರಾರಂಭದ ಐದು ಸಾಲುಗಳಲ್ಲಿ ಕಾಲದ ವಿರಾಟ್ ಸ್ವರೂಪದ ಬಗ್ಗೆ ವಿವರಿಸುತ್ತ ಕಾಲವನ್ನು ಇಡಿಯಾಗಿ ಕಂಡವರು ಯಾರೂ ಇಲ್ಲದೆ ತನ್ನ ಮುಷ್ಟಿಗೆ ಸಿಕ್ಕಿದ್ದೆಷ್ಟೋ, ತನಗೆ ದಕ್ಕಿದ್ದೆಷ್ಟೋ ಅಷ್ಟಕ್ಕೆ ಅವನು ಭಾಗ್ಯಶಾಲಿ ಎಂಬ ಸ್ಥಿತಿಯಲ್ಲಿ ನಿನ್ನ ಸಕೃದ್ದರ್ಶನ ಮಾಡಿಸು ಎಂದು ಕವಿ ಕಾಲನಿಗೆ ಮೊರೆ ಇಡುತ್ತಾನೆ.

ಮುಂದಿನ ಆರೇಳು ಸಾಲುಗಳಲ್ಲಿ ಸೃಷ್ಟಿಯ ಜೊತೆ ಜೊತೆಗೇ ಸಾಗುತ್ತಾ ಬಂದ ಕಾಲ ಹೇಗೆ ತಲೆಮಾರುಗಳ ನಂತರ ತಲೆಮಾರುಗಳನ್ನು ಮುನ್ನಡೆಸಿಕೊಂಡು ಬಂದಿದೆ ಎಂಬುದರ ವಿವರಣೆ ಇದೆ. ಹಿಂದು, ಇಂದು, ಮುಂದಿನ ಎಲ್ಲ ತಲೆಮಾರುಗಳ ಜೊತೆಗೂ ಹೆಗಲಿಗೆ ಕೈ ಹಾಕಿ ನಡೆಯುವ, ನಡೆಸುವ ಸಾಮರ್ಥ್ಯ ಇರುವುದು ಕಾಲಕ್ಕೆ ಮಾತ್ರ. ಕಾಲ ಚಿರಯೌವ್ವನಿಗ, ಚಿರಂಜೀವಿ, ಉಳಿದವರೆಲ್ಲ ಒಂದೆರಡು ತಲೆಮಾರಿನವರ ಜೊತೆ ಮಾತ್ರ ಸಾಗಬಲ್ಲರು.

ಹನ್ನೆರಡರಿಂದ ಇಪ್ಪತ್ತೊಂಬತ್ತರವರೆಗಿನ ಸಾಲುಗಳಲ್ಲಿ ಕಾಲದ ಅನಂತತೆಯಲ್ಲಿ ಸೃಷ್ಟಿಯಲ್ಲಿ ಆಗಿ ಹೋದ ಅಸಂಖ್ಯ ಘಟನೆಗಳಷ್ಟೇ ಅಗಾಧವಾದ ಕಾಲನ ಸರ್ವವ್ಯಾಪಕತೆ ಮತ್ತು ಸರ್ವ ಶಕ್ತಿತ್ವಗಳ ಪ್ರಸ್ತಾಪ ಮಾಡುತ್ತಲೇ ಮನುಷ್ಯನ ಆಕಿಂಚನತ್ವವನ್ನು ಸಾರಿ ಹೇಳಲಾಗಿದೆ. ಕಾಲದ ಅನಂತತೆಯಲ್ಲಿ ಅದೆಷ್ಟೋ ನಕ್ಷತ್ರ ನೀಹಾರಿಕೆಗಳು ಇದ್ದಕ್ಕಿದ್ದಂತೆ ಮರೆಯಾದರೆ ಇನ್ನದೆಷ್ಟೋ ಹೊಸವು ಕಾಣಿಸಿಕೊಂಡಿರುತ್ತವೆ. ಕಾಲದ ಒಂದು ಬಿಂದುವಿನಲ್ಲಿ ಹುಟ್ಟಿದ ಕಾಲಬದ್ಧ ಸಾಹಿತ್ಯ ಕೃತಿಗಳು ಕಾಲಾತೀತವಾಗಿ ಉಳಿದು ಬರಬೇಕೆಂದರೆ ಅದೇನೂ ಸುಲಭದ ಮಾತಲ್ಲ. ಕಾಲಪುರುಷನಷ್ಟು ನಿಷ್ಠುರ ಹಾಗೂ ನಿರ್ದಯಿ ವಿಮರ್ಶಕ ಮತ್ತಾರು ಇಲ್ಲ. ಎಲ್ಲ ವಿಮರ್ಶಕರನ್ನು ಮೀರಿಸಿದ ವಿಮರ್ಶಕನಾಗಿ ಒಂದು ರೀತಿಯಲ್ಲಿ ಪುರುಷಸೂಕ್ತದಲ್ಲಿ ವರ್ಣಿತವಾಗಿರುವ ಪರಮಾತ್ಮನನ್ನು ಹೋಲುತ್ತ 'ಅದ್ಯತಿಷ್ಠತ್ ದಶಾಂಗುಲಂ' ಆಗಿರುವ ಇವನು ಸತ್ವಶಾಲಿಯಾದದ್ದಷ್ಟನ್ನೇ ಉಳಿಸಿ ಸತ್ವರಹಿತವಾದದ್ದನ್ನೆಲ್ಲ ಮುಳುಗಿಸಿಬಿಡುತ್ತಾನೆಂಬುದಕ್ಕೆ ಖಾತರಿ ಏನು ಇಲ್ಲ. ಏನು ಬೇಕಾದರೂ ಆಗಬಹುದು. ಮುದ್ದಣ ಉದ್ಗರಿಸಿದಂತೆ ಗುಣಮಣವಿಲ್ಲದ ಕಾಲ ಪುರುಷನ ನಿಕಷಕ್ಕೆ ಸಾಹಿತ್ಯ ಕೃತಿಗಳು ಒಡ್ಡಿಕೊಳ್ಳಬೇಕೆಂಬ ಕಟ್ಟು ಅಗತ್ಯವೆ ಎಂದು ಕವಿ ಅಸಹಾಯಕರೆಂಬಂತೆ ಕೇಳುತ್ತಾರೆ. ಕೃತಿ ಅತ್ಯಂತ ಶ್ರೇಷ್ಠವಾದದ್ದು. ಮಹಾನ್ ಆದದ್ದು ಮಾತ್ರ ಆಗಿರಬೇಕೆಂಬ, ಅಂಥದ್ದು ಮಾತ್ರ ಉಳಿದು ಬರಬೇಕೆಂಬ ಆಗ್ರಹವೇಕೆ? ಎಲ್ಲದಕ್ಕೂ ಅದರದರ ಯೋಗ್ಯತೆಗೆ ತಕ್ಕ ಸ್ಥಾನವಿದ್ದೇ ಇರುತ್ತದಲ್ಲವೆ ? ಲೋಕದಲ್ಲಿ ನಾನಾ ತೆರನ ಲೋಹಗಳಿರುವಾಗ ಅಪರಂಜಿಯೇ ಬೇಕೆಂಬ ಆಗ್ರಹವಾದರೂ ಏಕೆ ? ಎಂಬ ಅತ್ಯಂತ ವಾಸ್ತವ ತರ್ಕವನ್ನು ಕವಿ ಮುಂದಿಡುತ್ತಾರೆ. ಗಟ್ಟಿ ಟೊಳ್ಳು ಎಲ್ಲವೂ ಕಾಲಗರ್ಭದಲ್ಲಿ ಒಟ್ಟಿಗೆ ಸೇರಿ ಹೋಗುವಾಗ ಯಾವುದರದ್ದೇನು ಹೆಚ್ಚುಗಾರಿಕೆ?

ವಿಮರ್ಶಕ ಕಾಲನ ವಿಮರ್ಶೆಯ ಮುಂದೆ ನಿಲ್ಲಬಲ್ಲ ತಾಕತ್ತು ಯಾರಿಗಿದೆ ಎಂಬ ಮಾತು ಸಾಹಿತ್ಯ ಮತ್ತು ವಿಮರ್ಶೆಗಳ ಸಂಬಂಧದ ಬಗ್ಗೆ ಗಂಭೀರ ಚರ್ಚೆಗಳನ್ನು ಹುಟ್ಟು ಹಾಕುತ್ತದೆ. ಬೇಂದ್ರೆಯವರು ಬೇರೊಂದು ಸಂದರ್ಭದಲ್ಲಿ ಹೇಳಿದ 'ಲೀಲೆಯಲಿ ಯಾವುದೂ ವಿಫಲವಲ್ಲ' ಎಂಬ ಮಾತೇ ಇಲ್ಲಿಗೂ ಏಕೆ ಅನ್ವಯವಾಗಬಾರದು?' ಎಂದು ಕೇಳಬೇಕೆನಿಸುತ್ತದೆ.

ಆದ್ದರಿಂದಲೇ, ಕವಿತೆಯ ಕೊನೆಯ ಭಾಗದಲ್ಲಿ ಕಣವಿಯವರು ಕವಿಗಳ ಮಿತಿಯನ್ನು ಸಾಮರ್ಥ್ಯವನ್ನು ಪ್ರಾಂಜಲವಾಗಿ ಮಂಡಿಸುತ್ತಾರೆ. ಕವಿಗಳು ಮಾಡಬಹುದಾದದ್ದಾದರೂ ಇಷ್ಟೆ; ತನ್ನ ಮಾನಸ ಸೃಷ್ಟಿಯಾದ ಸಾಹಿತ್ಯ ಕೃತಿಯನ್ನು ಕಾಲದ ಪದತಲದಲ್ಲಿ ನಿಂತು ಅದರ ಮಡಿಲಲ್ಲಿ ಸಮರ್ಪಿಸುವುದಷ್ಟೇ. ಇದನ್ನು ತೇಲಿಸು, ಮುಳುಗಿಸಬೇಡ ಎಂದು ಮೊರೆ ಮಾತ್ರ ಇಡಬಲ್ಲ. ಅದೂ ತುಂಬಿ ಹರಿವ ಹೊಳೆಯಾದರೆ ಬಹು ದೂರದವರೆಗೆ, ಬಹುಕಾಲದವರೆಗೆ ಸಾಗಿಸಬಲ್ಲುದು. ತನ್ನ ಕೃತಿಯನ್ನು ಕಾಲ ಪ್ರವಾಹದಲ್ಲಿ ಬಹು ಕಾಲದವರೆಗೆ ಉಳಿಸು ಎಂಬ ಮೊರೆ ಇಲ್ಲಿದೆ. ಕಾಲ ಪ್ರವಾಹದಲ್ಲಿ ಉಳಿಯುವುದು ಮುಖ್ಯ. ಆನಂತರ ಅದರ ಬೆಲೆಗಟ್ಟುವಿಕೆ. ತನ್ನ ನಂತರ ತನ್ನ ಕೃತಿಗೆ ಏನಾಗುತ್ತದೆ ಎಂಬುದರ ಬಗ್ಗೆ ಅವನು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಕವಿ, ಸಾಹಿತಿ ಸಾಹಿತ್ಯ ಕೃತಿಯ ನಿರ್ಮಿತಿಯಷ್ಟಕ್ಕೆ ಮಾತ್ರ ಉತ್ತರದಾಯಿ. ಅದರ ಸ್ಥಾನಮಾನದ ಬಗ್ಗೆ, ಅದರ ಅಳಿವು ಉಳಿವಿನ ಬಗ್ಗೆ ತಲೆಕೆಡಿಸಿಕೊಳ್ಳದೆ ನಿರ್ಮಮತೆ ಮತ್ತು ನಿರ್ಲಿಪ್ತತೆಗಳನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ವಿ.ಸೀ. ಅವರ ಕವಿತೆಯ ಸಾಲಿನ ಉದಾಹರಣೆಯೂ - ಮಗಳನ್ನು ಹೆತ್ತು ಹೊತ್ತು ಬೆಳೆಸಿದ ತಂದೆ ತಾಯಿಗಳು ವರನ ಕಡೆಯವರಿಗೆ ಒಪ್ಪಿಸುವಾಗ ಇಲ್ಲಿಯವರೆಗಷ್ಟೇ ನಮ್ಮ ಹೊಣೆಗಾರಿಯಾಗಿತ್ತು. ಇನ್ನು ಮುಂದೆ ಇವಳ ರಕ್ಷಣೆ ಪೋಷಣೆ ಎಲ್ಲ ನಿಮಗೆ ಸೇರಿದ್ದು ಎಂದು ಹೇಳುವ ರೀತಿಯನ್ನು ನೆನಪಿಸುತ್ತದೆ. ಕಾಲರಾಯನೇ ನಿನಗೆ ನಮಸ್ಕಾರ ಎಂದು ಹೇಳುವುದಷ್ಟೇ ಕವಿಯ ಕೆಲಸ.

ಒಂದು ರೀತಿಯ ಲಘು ಹಾಸ್ಯದ ಧಾಟಿಯಲ್ಲೇ ಸಾಗುವ ಈ ಕವಿತೆ ಸಾಹಿತ್ಯ ಕೃತಿ. ಅದನ್ನು ಕುರಿತ ವಿಮರ್ಶೆ, ಕಾಲಾಂತರದಲ್ಲಿ ತನ್ನ ಕೃತಿಯ ಸ್ಥಾನಮಾನದ ಕುರಿತಾಗಿ ಕವಿ ತಾಳಬೇಕಾದ ನಿಲುವು ಇವುಗಳ ಬಗ್ಗೆ ನಮ್ಮನ್ನು ತೀವ್ರ ಚಿಂತನೆಗೆ ಹಚ್ಚುತ್ತದೆ. ಒಂದು ಕೃತಿಯನ್ನು ಕುರಿತು ವಿಮರ್ಶೆ ಎಷ್ಟೇ ವಸ್ತುನಿಷ್ಠ ಎಂದು ಹೇಳಿದರೂ ಅದರಲ್ಲಿ ವಿಮರ್ಶಕನ ವ್ಯಕ್ತಿಗತ ಪರಿಮಿತಿಗಳು, ಒಲವುಗಳು ಇರುವುದನ್ನು ಪೂರ್ತಿ ಅಲ್ಲಗಳೆಯಲಾಗದ ಸ್ಥಿತಿಯಲ್ಲಿ ಬಹುಶಃ ಕಾಲದ ತೀರ್ಪೆಂದೇ ಕೃತಿಯನ್ನು ಕುರಿತ ಅಂತಿಮ ತೀರ್ಪೆಂದು ಪರಿಗಣಿಸುವುದು ಯುಕ್ತವಾಗಬಹುದು. ಹಾಗಾಗಿ, ಕೃತಿಕಾರ ಕಾಲನಿಗೆ ಮೊರೆಯಿಡುವುದೇನೂ ಆಶ್ಚರ್ಯವಲ್ಲ; ಅಸಂಗತವೂ ಅಲ್ಲ. ಚೆನ್ನವೀರ ಕಣವಿ ಅವರ ಅನೇಕ ಕವಿತೆಗಳಲ್ಲಿ ಕಾಲದ ಅನನ್ಯಶೋಧ ಮೈದಾಳಿ ನಿಂತಿದೆ. 'ಕಾಲಪುರುಷನಿಗೆ ಕವಿಗಳ ಕೋರಿಕೆ ಕಣವಿ ಅವರ ಕಾವ್ಯಮೀಮಾಂಸೆಯ ಜಿಜ್ಞಾಸೆಯನ್ನು ಅರ್ಥಪೂರ್ಣವಾಗಿ ಧ್ವನಿಸಿದೆ.

ಆರ್. ಲಕ್ಷ್ಮೀ ನಾರಾಯಣ

# ೨೩. ಜಗದೇಕಮಲ್ಲ

ಯಾವುದಕ್ಕೂ ಇವಗೆ ಸಂಪೂರ್ಣ ಸ್ವಾತಂತ್ರ್ಯ-
ಬೇಕಾದಷ್ಟು ಉದ್ದ ನಾಲಗೆಯ ಹರಿಬಿಡಬಲ್ಲ.
ಯಾರೆಷ್ಟು ಒದರಿಕೊಂಡರೂ ಕೇಳಿಸದ ಲಂಬಕರ್ಣ,
ರಸ್ತೆಯಲಿ ಬದಿಗೆ ನಡೆದವರ ಮೇಲೆಯೇ
ಕಾರು ಹಾಯಿಸಬಲ್ಲ;
ಅದಕೆ ಬ್ರೇಕಿಲ್ಲ.
ಸೀದಾ ರಸ್ತೆ ಇವನೆಂದೂ ಕಂಡುದಿಲ್ಲ.
ಬೇಕಾದವರನೆತ್ತಿ ಮುಗಿಲಿಗೆ ತಲೆಯ ತಾಗಿಸಬಲ್ಲ
ಬೇಡಾದವರನೊತ್ತಿ ಪಾತಾಳಕ್ಕೆ-
ಪದ್ಮಾಸನವ ಹಾಕಿ ಕೂಡಬಲ್ಲ.

'ಜನತೆ ಜನತಾ' ಎಂದು ಬುಡುಬುಡಿಕೆ ಬಾರಿಸುತ
ದೇಶದ ಭವಿಷ್ಯವನು ಸಾರಬಲ್ಲ.
ಓಡುವವರಿಗೆ ಅಡ್ಡಗಾಲು ಹಾಕುತ ಮುಂದೆ
ಮುಗ್ಗರಿಸಿ ಬೀಳುವದ ನೋಡಬಲ್ಲ.
ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ.
ಎಮ್ಮೆಗಳ ಜೊತೆಯಲ್ಲಿ ರಾಡಿ ನೀರೊಳು
ಸಲೀಸು ಈಜಾಡಬಲ್ಲ.
ಕೊಂಬೆ ಕೊಂಬೆಗೆ ಜಗಿದು ಚಿಗುರು, ಹೂ, ಕಾಯಿಗಳ
ಕಡಿ ಕಡಿದು ಹಾಕಬಲ್ಲ.
ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ

ದೊಡ್ಡವರ ಬಾಲಕ್ಕೆ ಜೋತಾಡಬಲ್ಲ.
ಎಲ್ಲಿ ಏನಾದರೂ ಅನರ್ಥ ಸಂಭವಿಸಿದರೆ
ಅದರ ಅಡಿಗಲ್ಲಿವನ ಅಮೃತ ಹಸ್ತ
(ಎಲ್ಲದಕ್ಕೂ ಬರಿಯ ಹಲ್ಲು ಕಿಸ್ತ.)

ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ
ದೇಶದುದ್ಧಾರಕ್ಕೆ ದೇಹವನು ತೇಯಬಲ್ಲ;
ಮಂದಿ ಹೊಲಗಳ ನುಗ್ಗಿ ಮೇಯಬಲ್ಲ.
ಇವನಿಲ್ಲದೆಯೆ ಯಾವ ಸಭೆ ಸಮಾರಂಭಕ್ಕು
ಶೋಭೆಯಿಲ್ಲ.
ಇಲ್ಲ, ಪುರುಸೊತ್ತಿಲ್ಲ,
ಪಂಚೇತಿಯಿಂದ ಆ ವಿಧಾನಸೌಧದವರೆಗು
ಬಲೆ ಬೀಸಿ, ಬಕನಂತೆ ಕಾಯಬಲ್ಲ.
'ಎಲ್ಲ ಬಲ್ಲವರಿಲ್ಲ'
ಏಕಿಲ್ಲ? ಇವನಿಲ್ಲವೇ ನಮ್ಮ ಜಗದೇಕಮಲ್ಲ?
ಕಳಿಸಿರಿವನನು ಮೊದಲು ದೂರದ ಹಿಮಾಲಯಕೆ
ಅಲ್ಲಿಯೇ ಹಿಡಿದಿರಲಿ ಜಯಪತಾಕೆ.

ಯಾವುದನ್ನೇ ಕುರಿತು ಬರೆಯಲಿ, ಬೌದ್ಧಿಕ ಹಿಡಿತದೊಂದಿಗೆ ಉತ್ಕೃಷ್ಟವಾಗಿ ಬೆಸೆಯಲಾದ ಶಾಶ್ವತ ಭಾವಗೀತಾತ್ಮಕ ಗುಣದಿಂದ ಕನ್ನಡ ಕಾವ್ಯಾಸಕ್ತರ ಮನ ಸೂರೆಗೊಂಡಿರುವ ಕಣವಿಯವರ ಕಾವ್ಯವನ್ನು ವರ್ಣನಾತ್ಮಕ, ಧ್ಯಾನಾತ್ಮಕ, ಆತ್ಮನಿವೇದಕ ಎಂದು ಮುಂತಾಗಿ ಗುರುತಿಸಲಾಗಿದೆ. ಅದು ಯಾವುದೇ ರೂಪ ತಾಳಿರಲಿ, ವಸ್ತು ಎಷ್ಟೇ ವೈವಿಧ್ಯಮಯವಾಗಿರಲಿ, ತಾನು ಪ್ರೀತಿಸುವ ಜೀವನದ ಉತ್ಕಟ ಸ್ವೀಕೃತಿಯು ಅವರ ಕಾವ್ಯದ ಪೋಷಕ ಶಕ್ತಿಯಾಗಿ ಪರಿಣಮಿಸುತ್ತದೆ. ಕೆ. ರಾಘವೇಂದ್ರರಾವ್ ಅಭಿಪ್ರಾಯಪಡುವಂತೆ, ಕವಿ ಕಣವಿ ಅವರ ಪ್ರೀತಿಯ ಪರಿಕಲ್ಪನೆ ಪ್ರಮುಖವಾಗಿ ಸಂತೋಷವಾಗಿ ಬದುಕು ಸಾಗಿಸುವ ಮತ್ತು ಸುಖದುಃಖಗಳ ಏರಿಳಿತಗಳನ್ನು ಆದರದಿಂದ ಬರಮಾಡಿಕೊಳ್ಳುವದಾಗಿದೆ. ಕಟಕಿ ಮತ್ತು ವ್ಯಂಗ್ಯೋಕ್ತಿಗಳ ಪರಿಣತ ನಿರ್ವಹಣೆಯಿಂದ ಕೂಡಿದ ಅವರ ವಿಡಂಬನಾತ್ಮಕ ಧಾಟಿಯ ಕವನಗಳೂ ಅಂತರ್ವಾಹಿನಿಯಾಗಿ ಹರಿಯುತ್ತಿರುವ ಋಜು ಕಾಳಜಿಯ ರೂಪದಲ್ಲಿರುವ ಈ ಜೀವನ ಪ್ರೀತಿಯನ್ನು ಅಂತರ್ಗತಿಸಿಕೊಂಡಿವೆ. ಕಣವಿ ಕಾವ್ಯವನ್ನು ಸಿನಿಕ ಅಥವಾ ಕಹಿ ಅಭಿವ್ಯಕ್ತಿಯಾಗಿಸುವ ಅಪಾಯದಿಂದ ಪಾರುಗಾಣಿಸುವುದು ಲವಲವಿಕೆಯ ಹಾಸ್ಯ ಮತ್ತು ಚತುರೋಕ್ತಿಗಳಿಂದೊಡಗೂಡಿದ ಈ ಅಸಾಧಾರಣ ಗುಣವೆ. ಕಾವ್ಯದ

ಅತ್ಯುತ್ಕೃಷ್ಟ ವಾಚಕರಾಗಿರುವ ಕಣವಿ ತಮ್ಮ ಕವನಗಳನ್ನು ವಾಚಿಸುವಾಗ ಶ್ರೋತೃಗಳಿಗೆ ಇದು ವಿಶೇಷವಾಗಿ ಅನುಭವಕ್ಕೆ ಬರುತ್ತದೆ. ನಾನಂತೂ ಇಂಥ ಕಾವ್ಯವಾಚನಾಧಿವೇಶನಗಳನ್ನು ಆನಂದಿಸಿದ್ದಿದೆ.

ಇಂಥ ಕೆಲವು ಕವನಗಳು ಓದುಗನ /ಕೇಳುಗನ ಗಮನವನ್ನು ತಕ್ಷಣ ಸೆರೆಹಿಡಿಯುತ್ತವೆ. ಏಕೆಂದರೆ, ಅವು ಸಮಕಾಲೀನ ವಾಸ್ತವಗಳ, ವಿಶೇಷತಃ ನಮ್ಮ ದೈನಂದಿನ ಚರ್ಚೆಗೆ ಗ್ರಾಸವಾಗಿರುವ ರಾಜಕೀಯ ಸನ್ನಿವೇಶಗಳನ್ನು ಒಳಗೊಂಡಿರುತ್ತವೆ. ಓದುತ್ತ ಮುಂದುವರಿದಂತೆ ನಾವು ತದೇಕ ಸಮ್ಮತಿಯಿಂದ ತಲೆದೂಗುವೆವು. ಏಕೆಂದರೆ, ಕಣವಿ ಹೆಚ್ಚು ಕಡಿಮೆ ನಮ್ಮ ಮನದಾಳದ ವಿಚಾರಗಳನ್ನೆ ಧ್ವನಿಸುವರು- ಅವರು ಕಲ್ಪಿಸಿಕೊಂಡ ಸುಂದರ ಪ್ರತಿಮೆಗಳ ಮೂಲಕ ಓದಿದ ಯಾ ಆಲಿಸಿದ ನಂತರ ಈ ಪ್ರತಿಮೆಗಳು ನಮ್ಮ ಮನಃಪಟಲದ ಮೇಲೆ ಎಷ್ಟೋ ಕಾಲದವರೆಗೆ ಅಚ್ಚೊತ್ತಿರುವುವು.

ಇಂಥ ಕವನಗಳಲ್ಲಿಯೆ 'ನೆಲ-ಮುಗಿಲು' ಸಂಗ್ರಹದ"ಜಗದೇಕಮಲ್ಲ" ಬಹುಶಃ ಅತ್ಯುತ್ತಮವಾದುದು. ಖಂಡಿತವಾಗಿಯೂ ಕಣವಿ ಕಾವ್ಯಾಸಕ್ತರಲ್ಲಿ ಅತ್ಯಂತ ಜನಪ್ರಿಯವಾದುದು ಕೂಡ. ಕವನ ಎಷ್ಟೊಂದು ಅಡಕವಾಗಿ ನುಡಿಯುತ್ತಿದೆಯೆಂದರೆ ಪ್ರತಿಯೊಂದು ಸಾಲನ್ನು ಅರ್ಥೈಸುವ ಪ್ರಯತ್ನ ನಿರರ್ಥಕ ಪ್ರಯಾಸವಾಗಿಬಿಡುವ ಸಂಭವವುಂಟು. ನಿಜಕ್ಕೂ ಅಂಥ ಪ್ರಯತ್ನ ಕವಿಯ ಕಲೆಯ ಆಸ್ವಾದನೆಯಿಂದ ನಮ್ಮನ್ನು ದೂರ ಸೆಳೆಯುತ್ತದೆ. ಮೊದಲ ಸಾಲುಗಳೇ ಈ ಅಂಶವನ್ನು ಸಾಬೀತುಗೊಳಿಸುತ್ತವೆ:

**ಯಾವುದಕ್ಕೂ ಇವಗೆ ಸಂಪೂರ್ಣ ಸ್ವಾತಂತ್ರ್ಯ**
**ಬೇಕಾದಷ್ಟು ಉದ್ದ ನಾಲಗೆಯ ಹರಿಬಿಡಬಲ್ಲ**
**ಯಾರೆಷ್ಟು ಒದರಿದರೂ ಕೇಳಿಸದ ಲಂಬಕರ್ಣ**
**ರಸ್ತೆಯಲಿ ಬದಿಗೆ ನಡೆದವರ ಮೇಲೆಯೇ**
**ಕಾರು ಹಾಯಿಸಬಲ್ಲ;**
**ಆದಕೆ ಬ್ರೇಕಿಲ್ಲ.**

ಅಥವಾ ಮತ್ತೆ :

**ಎಲ್ಲಿ ಏನಾದರೂ ಅನರ್ಥ ಸಂಭವಿಸಿದರೆ**
**ಅದರ ಅಡಿಗಲ್ಲಿವನ ಅಮೃತಹಸ್ತ**
**(ಎಲ್ಲದಕ್ಕೂ ಬರಿಯ ಬಲ್ಲು ಕಿಸ್ತ)**

ಸವಿವರ ವ್ಯಾಖ್ಯಾನ ಅಪ್ರಸ್ತುತವೆಂದು ಹೇಳಿದ್ದು ಬಹುಶಃ ಸ್ವಲ್ಪ ಮುಂಚಿತವಾಯಿತೇನೋ ನಿಜ, ನಾಯಕನ ಪ್ರತಿಯೊಂದು ಚಿತ್ರ ಸಾಮಾನ್ಯ ಗ್ರಹಿಕೆಯಿಂದ ಹೊರಹೊಮ್ಮುವುದು. ಆದರೆ ಕಣವಿ ಅವರ ಹೆಗ್ಗಳಿಕೆ ಇರುವುದು ಧುತ್ತೆಂದು ಬಂದು ನಿಮ್ಮನ್ನು ಚಕಿತಗೊಳಿಸುವ ಸಾಲುಗಳಲ್ಲಿ ಮತ್ತು ಅವು ಹೊತ್ತು ತರುವ ಅರ್ಥಗರ್ಭಿತ ಗುದ್ದುಗಳಲ್ಲಿ. ನಾಯಕನ ಕಾರಿಗೆ ಬ್ರೇಕೇ ಇಲ್ಲವೆಂಬ

ಸಾಲಿನ ನಂತರ ಬರುವ ಸಾಲು ಇಂಥದ್ದು. ನಿಲ್ಲಿಸಲಾಗದ ಕಾರನ್ನು ನೋಡಿ ಓದುಗ ಪೆದ್ದುಪೆದ್ದಾಗಿ ನಗುತ್ತಿದ್ದಂತೆಯೆ ಅಥವಾ ಕಾವ್ಯವಾಚನಾಧಿವೇಶನದಲ್ಲಿ ಕೇಳುಗರು ಗಹಗಹಿಸಿ ನಗುತ್ತ ಚಪ್ಪಾಳೆ ತಟ್ಟುತ್ತಿದ್ದಂತೆಯೇ ಈ ಸಾಲು ಬರುತ್ತದೆ:

**ಸೀದಾ ರಸ್ತೆ ಇವನೆಂದೂ ಕಂಡುದಿಲ್ಲ**

ಈ ಸಾಲು ಎದ್ದು ಕುಳಿತುಕೊಳ್ಳುವಂತೆ ಹುಬ್ಬುಗಂಟಿಕ್ಕುವಂತೆ ಮಾಡುತ್ತದಷ್ಟೆ ಅಲ್ಲ, ವಿಚಾರ ಮಾಡಹಚ್ಚುವುದು. ಏಕೆಂದರೆ ಇದು ಅರ್ಥಗರ್ಭಿತವಾಗಿದೆ. ಬ್ರೇಕ್ ಇಲ್ಲದ ಕಾರು ಕಣ್ಮರೆಯಾಗಿ ಅದರ ಸ್ಥಾನದಲ್ಲಿ, ನಾಯಕನಾಗಿ ಕ್ರಮೇಣ ಮೇಲೇರುವಲ್ಲಿ- ಎಲ್ಲ ರೀತಿಯ ಕೆಟ್ಟ ದಾರಿಗಳಲ್ಲಿ ನಡೆಯುತ್ತ ಇನ್ನೂ ಮೇಲೇರುತ್ತಲೆ ಇರುವಲ್ಲಿ- ತನ್ನೆಲ್ಲ ಕಾರ್ಯಕ್ಷೇತ್ರಗಳಲ್ಲಿ ಎಂದೆಂದೂ ಸರಿದಾರಿ ಕೈಬಿಟ್ಟು ಅಡ್ಡದಾರಿ ಹಿಡಿದವನ ಜೀವನಚರಿತ್ರೆ ಇಡಿಯಾಗಿ ನಿಮ್ಮೆದುರು ತೆರೆದುಕೊಳ್ಳುತ್ತದೆ:

ಬ್ರಿಟಿಶ್ ಕಾವ್ಯ ಓದಿದವರಿಗೆ ಥಟ್ಟನೆ ನೆನಪಿಗೆ ಬರುವುದು ಟೀಕಾತ್ಮಕ ನ್ಯೂನೋಕ್ತಿಯ ಪರಾಕಾಷ್ಠೆಯಾಗಿರುವ ಈ ಕಟಕಿ: ಮ್ಯಾಕ್‌ಫ್ರೆಕ್‌ನೊ ಕುರಿತು ಡ್ರೈಡನ್ ಕವಿ ಮಾಡಿದ್ದು He never deviated into sense.

ರಾಜಕೀಯ ವಸ್ತುಸ್ಥಿತಿಯನ್ನು ಚಿತ್ರಿಸುವ ಈ ಕವನಗಳು ಅವರ ಕಾಳಜಿಗಳನ್ನು ತೋರ್ಪಡಿಸುತ್ತವಲ್ಲದೆ ಅವನ್ನು ಮೃದು ಕಟಕಿಯೊಂದಿಗೆ ನಿರ್ವಹಿಸುತ್ತವೆ ಎಂಬ ಕೆ. ರಾಘವೇಂದ್ರರಾಯರ ಅಭಿಮತಕ್ಕೆ ನನ್ನ ಸಹಮತವಿದೆ. - 'ಮೃದು' ಎಂಬ ಶಬ್ದವನ್ನು ಹೊರಗಿಟ್ಟು. ಕಣವಿ ಬಿರುನುಡಿಯಲೂ ಬಲ್ಲರು.

ಇದಕ್ಕಿಂತ ಬೇರೆ ಉದಾಹರಣೆ ಬೇಕೆ! :

**ಎಮ್ಮೆಗಳ ಜೊತೆಯಲ್ಲಿ ರಾಡಿ ನೀರೊಳು**
**ಸಲೀಸು ಈಜಾಡಬಲ್ಲ.**
**ಕೊಂಬೆ ಕೊಂಬೆಗೆ ಜಿಗಿದು ಚಿಗುರು ಹೂ, ಕಾಯಿಗಳ**
**ಕಡಿ ಕಡಿದು ಹಾಕಬಲ್ಲ.**
**ಗಿಳಿಗಿಂತ ಚನ್ನಾಗಿ ಮಾತಾಡಬಲ್ಲ,**
**ದೊಡ್ಡವರ ಬಾಲಕ್ಕೆ ಜೋತಾಡಬಲ್ಲ.**

ಅರ್ಧ ಡಜನ್ ಸಾಲುಗಳಲ್ಲಿ ನಾಯಕನನ್ನು ಮೂರು ಮಾನವೇತರ ಜೀವಿಗಳೊಂದಿಗೆ ಗುರುತಿಸಲಾಗಿದೆ. ಸ್ವಾರಸ್ಯವೆಂದರೆ, ಅವುಗಳಲ್ಲಿ ಒಂದು ಭೂಪ್ರಾಣಿ (ಕೊಚ್ಚೆ ಪ್ರಾಣಿ ಕೂಡ) ಎಮ್ಮೆ, ಮತ್ತೊಂದು ಮರಕೋತಿ, ಮಗುದೊಂದು ಗಾಳಿಪಕ್ಷಿ ಗಿಳಿ. ನಮ್ಮ ಇಂದಿನ ರಾಜಕಾರಣಿ ಮೊಟ್ಟಮೊದಲು ಪ್ರವೇಶಿಸುವುದು ಈಗಾಗಲೆ ನಿಜವಾಗಿಯೂ ಕೊಚ್ಚೆಯಾಗಿರುವ ರಂಗವನ್ನು. ಅದರಲ್ಲವನು ಮಂಗನಂತೆಯೇ ಸ್ವಲಾಭ, ಸಂತೋಷಕ್ಕಾಗಿ ಎಲ್ಲವನ್ನೂ ಹರಿದುಹಾಕಲು, ಕಡಿದುಹಾಕಲು ಕಲಿತುಕೊಳ್ಳುವನು. ರಾಜಕಾರಣಿಯ ನಯವಿನಯ ನಾಲಿಗೆ ಗಿಳಿ ಕಲಿತುಕೊಂಡ

ವಟವಟದಷ್ಟೆ ಅರ್ಥಹೀನವಾಗಿರುವುದು. ಆದರವನು ತನ್ನ ಸುತ್ತ ಸುವರ್ಣಪಂಜರ ನಿರ್ಮಿಸಿಕೊಳ್ಳುವನು, ಅತಿ ಮುದ್ದು ಮಾಡಿಸಿಕೊಳ್ಳುವನು, ತಾನು ಬೇಡಿದುದನ್ನೆಲ್ಲ ಗಿಟ್ಟಿಸಿಕೊಳ್ಳುವನು.

ಈ ಸಾಲುಗಳು :

**ಇವನಿಲ್ಲದೆಯೆ ಯಾವ ಸಭೆ ಸಮಾರಂಭಕ್ಕು**
**ಶೋಭೆಯಿಲ್ಲ.**

ವ್ಯಂಗ್ಯೋಕ್ತಿಗಳಾಗಿರುವಂತೆಯೆ ಕೆಳಗಿನ ಈ ಸಾಲುಗಳು:

**ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ**
**ದೇಶದುದ್ಧಾರಕ್ಕೆ ದೇಹವನು ತೇಯಬಲ್ಲ;**

ತೀಕ್ಷ್ಣ ಟೀಕೆಗಳಾಗಿವೆ.

ಕಣವಿಯವರು ಜಗದೇಕಮಲ್ಲನನ್ನು ಅವನ ವರ್ಣರಂಜಿತ ಕುರೂಪದಲ್ಲಿ ಪ್ರತಿಯೊಂದು ದೃಷ್ಟಿಕೋನದಿಂದ ನಮ್ಮೆದುರು ಬಣ್ಣಿಸುತ್ತಿದ್ದಂತೆಯೆ ನಾವು ಸಮ್ಮತಿಸುತ್ತ ತಲೆದೂಗುವೆವು. ಶ್ಲೇಷೆ ಮತ್ತು ಶಬ್ದಚಮತ್ಕಾರಗಳನ್ನು ಸವಿಯುವೆವು. ಕಣವಿಯವರು ತಮ್ಮ ಉದ್ದೇಶಿತ ಅಂಶವನ್ನು ಸಂಪೂರ್ಣವಾಗಿ ಸಾಧಿಸುವರು. ಕಲಾವಿದನಾಗಿ ಅದವರ ಲಕ್ಷ್ಯ ಕೂಡ. ಈ ನಾಯಕನನ್ನು ನಾವೇ ನಿರ್ಮಿಸಿದ್ದು ಎಂಬ ಬೆಳಕು ನಮಗೆ ಕ್ಷಣಮಾತ್ರದಲ್ಲಿ ಹೊಳೆದುಬಿಡುತ್ತದೆ. ಅವನಿಂದ ನಮ್ಮನ್ನು ಬಿಡಿಸಿಕೊಳ್ಳುವ ಬಗೆಯೆಂತು? ಅವನನ್ನು ಕೆಳಗಿಳಿಸುವದಸಾಧ್ಯ. ಏಕೆಂದರೆ, ಅದನ್ನವನು ಒಪ್ಪಲಾರ. ಅವನು ಹೋದರೆ ಇನ್ನೂ ಮೇಲಕ್ಕೆ ಹೋದಾನು! ಕೊನೆಯ ಎರಡು ಸಾಲುಗಳು ಒಂದು ಆಸೆಯ ಅಭಿವ್ಯಕ್ತಿಯಾಗಿರುವ ಜೊತೆಗೆ ಪ್ರೇರೇಪಣೆಯೂ ಆಗಿವೆ:

**ಕಳಿಸಿರಿವನನು ಮೊದಲು ದೂರದ ಹಿಮಾಲಯಕೆ**
**ಅಲ್ಲಿಯೇ ಹಿಡಿದಿರಲಿ ಜಯ ಪತಾಕೆ.**

ಕಣವಿ ಎಂದೂ ದಂತಗೋಪುರದ ಕವಿಯಲ್ಲ. ನಾಡು ನುಡಿಗಳ ಬಗೆಗೆ ಅಪಾರ ಪ್ರೀತಿಯಿರುವ, ಅವುಗಳ ಆದಿಯ ಘನತೆಯನ್ನು ಕಳೆಗುಂದಿಸುವುದನ್ನು ಸಹಿಸದ ಕ್ರಿಯಾಶೀಲರು ಅವರು. ಅವರ ಹಾಸ್ಯ ಮತ್ತು ಚತುರೋಕ್ತಿಗಳ ಉದ್ದೇಶ ಕ್ಷಣಿಕ ಮೆಚ್ಚುಗೆಯಲ್ಲ. ಅಸಂವೇದಿ ಮತ್ತು ಜಡ ಚೇತನಗಳನ್ನು ಜಾಗೃತಗೊಳಿಸಿ ಕ್ರಿಯೆಗಿಳಿಸುವ, ಸೌಮ್ಯವಾಗಿ ಆದರೆ ದೃಢವಾಗಿ ತಿವಿಯುವ ಅಸ್ತ್ರಗಳವು. ಮೇಲ್ನೋಟಕ್ಕೆ ಲಘುವಾಗಿ ಕಾಣುವ ಅವರ ಮಾತುಗಳ ಹಿಂದೆ ಗಟ್ಟಿ ಚಿಂತನೆಯಿದೆ. ವಿಶೇಷತಃ ಪ್ರಸ್ತುತ ಕವನ ಪೋಪ್ ಕವಿಯು ಚತುರೋಕ್ತಿ ಕುರಿತು ನೀಡಿರುವ ಸುಪ್ರಸಿದ್ಧ ವ್ಯಾಖ್ಯಾನಕ್ಕೆ ಉತ್ಕೃಷ್ಟ ಉದಾಹರಣೆಯಾಗಿದೆ.

True ..wit in nature to advantage .dressed
What oft was thought but never so well expressed

**ಸಿ.ವಿ. ವೇಣುಗೋಪಾಲ**

(ಇಂಗ್ಲೀಷ್‌ನಿಂದ ಅನುವಾದ: ಸದಾನಂದ ಕನವಳ್ಳಿ)

# ೨೪. ಕಾಲ ನಿಲ್ಲುವುದಿಲ್ಲ

೧

ಈ ಕಾಲನೆಂಬುವ ಪ್ರಾಣಿ
ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ;
ಎಲ್ಲೊ ತಲೆಮರೆಸಿಕೊಂಡು ಓಡಾಡುತ್ತಿದ್ದಾನೆ.
ಆಕಾಶದಲ್ಲಿ ಮಿಂಚಿ,
ಭೂಕಂಪದಲ್ಲಿ ಗದಗದ ನಡುಗಿ,
ಜ್ವಾಲಾಮುಖಿಯೊಳಗೆ ಸಿಡಿದು ನುಚ್ಚುನೂರಾಗಿ,
ನದಿನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು
ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ.
ಹಿಡಿಯಿರೋ ಅವನ...

ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ.
ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.
ತುಡಿವೆದೆಗೆ ಕಿವಿಗೊಟ್ಟು ಮಿಡಿವ ನಾಡಿಯ
ಹಿಡಿದು ನೋಡಿದ್ದೇವೆ;
ಒಳಹೊರಗೆ ಉಸಿರು ಆಡುತ್ತಿದೆ ನಿರಾಯಾಸ.
'ಬಯಲು ಆಲಯದೊಳಗೊ? ಆಲಯವು ಬಯಲೊಳಗೊ?'
ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ.
ಯಾರಿಗೂ ಅವಸರವಿಲ್ಲ ತಾನೆ ?

ಈ ಕುದುರೆಯೇರಿ, ಲಗಾಮು ಬಿಗಿ ಹಿಡಿದು
ಸವಾರಿ ಮಾಡುವುದಷ್ಟು ಸುಲಭವಲ್ಲ.
ನಮ್ಮೆದೆಯ ಮೇಲೇಯೇ ಕಾಲಿಟ್ಟು ಓಡಿಹೋಗುವುದ
ನಾವೆಷ್ಟು ಸಲ ಅನುಭವಿಸಿಲ್ಲ?
ಸೆಕೆಂಡು, ಮಿನಿಟು, ತಾಸುಗಳ ಹಾಸು -ಹೊಕ್ಕಿನಲಿ
ಅಲ್ಲೊಂದು ಇಲ್ಲೊಂದು ಬಣ್ಣದ ನೂಲು
ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು.
ಹೆಜ್ಜೆಯಿಟ್ಟಲ್ಲೆಲ್ಲ ಜೋಲಿ ಹಿಡಿದಿದೆ ಮಣ್ಣು
ಧುಮುಕುತಿದೆ ನೀರು.
ಮೈ ಸುತ್ತಿ ಒಳಹೊಕ್ಕು ನೋಡಿದೆ ಗಾಳಿ,
ಹದ್ದು ಮೀರಿದೆ ಬಯಲು-
ಬೆಳಕು-ಕತ್ತಲೆ ಕುಂಡದಲ್ಲಿ ಮುಳುಗೇಳುತಿಹೆವು ದಿನವೊಂದಕ್ಕು
ನಿದ್ದೆ ತಿಳಿದೆದ್ದಾಗ ಭೂಮಿಯಾಕಾಶಕ್ಕೆ ದೊಡ್ಡ ಬಿರುಕು.

೨

ಸದಾ ಅದೇ ಸೂರ್ಯಚಂದ್ರರ ಸುಪರಿಚಿತ ಮೋರೆ,
ನಮ್ಮಂತೆಯೇ ಅವರಿಗೂ ತಿರುಗುವುದೊಂದೆ ಹೋರೆ.
ಆದರೂ ಆಗೀಗ ಈಚೆಯ ದಡಕ್ಕು ಹಾಯುವುದು ಬೆಳಕಿನ ತೆರೆ.
ಒಡಮುರಿದೆದ್ದು ನಾಲ್ಕೂ ಕಡೆಗೆ ಕೈಚಾಚಿ
ನಿಂತಲ್ಲೆ ಬೇರು ಬಿಟ್ಟಿವೆ ವೃಕ್ಷ.
(ಅಗೆದು ನೋಡಲೆ ಬೇಕೆ?)
ಹರಡಿಕೊಂಡಿದೆ ಹಸಿರು ಸಂಸಾರ
ನಮಗು ಅದಕೂ ನಿತ್ಯ ಹೊಕ್ಕು ಬಳಕೆ.
ಆರು ಋತುಗಳು ಬಂದು ಆರೈಕೆ ಮಾಡುವವು
ಯಾವುದೋ ಹಾರೈಕೆ ಎದೆಯೊಳಿಟ್ಟು;
ತತ್ತಿಯೊಡೆದು ರೆಕ್ಕೆ ಬಲಿತಾಗ ಹಾರುವವು ಗೂಡು ಬಿಟ್ಟು.
ದೂರದಲ್ಲಿಯೆ ಸಾಲು ನಿಂತ ಪರ್ವತ ಶಿಖರ
ಆಗಿಲ್ಲ ಭೂಮಿಗೆ ಭಾರ.

ತೇಲುತಿವೆ ಅಂತರಾಳದಲಿ ನೂರು ಗೋಲ.
ಸೋತು ತಲೆಬಾಗಿಲ್ಲ ಆಕಾಶ,
ಮೂಲೆ ಹಿಡಿದು ತೂಕಡಿಸಿಲ್ಲ ಗಾಳಿ,
ಒಳಗು ಹೊರಗೂ ಹರಿದು ಸ್ವಚ್ಛವಾಗಿದೆ ನೀರು
ಆಣೆಕಟ್ಟಿಗೂ ಕೆಳಗೆ ಆರುಪಾರು.

ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿ ಕಾಯ್ದು, ಕಾರಿನಲಿ ತೂರಿ,
ಹಡಗ ಬಿಟ್ಟು ವಿಮಾನದಲಿ ಹಾರಿ
ಗೋಲಗಳ ಮೇಲೆ ದಾಳಿ ಮಾಡಿದ್ದೇವೆ.
ಮೈಕಿನಲಿ ಕೊಕ್ಕೊಕ್ಕೋ ಕೂಗಿ, ತುರಾಯಿ ಕುಣಿಸಿ
ಬೆಳಗಾಯಿತೆಂದು ಭ್ರಮಿಸಿದ್ದೇವೆ.
ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು
ಅಡ್ಡಾದಿಡ್ಡಿ ಜಗ್ಗುತಿದೆ,
ಜೊತೆಗಿರುವ ಸಾದು ಎತ್ತಿನ ಕೂಡ ಕಾದಾಟ.
ಹೌದು, ನಾವೆಲ್ಲ ಹೊಸಬರೆ;
ಅಜ್ಜ ಮುತ್ತಜ್ಜರಿಗೆ ಮಂಗಳಾರತಿ ಮಾಡಿ
ಕೈಯಲ್ಲಿ ಗಂಟೆ ಹಿಡಿದಿದ್ದೇವೆ.
ನೈವೇದ್ಯಕ್ಕೆ ಪಾಕವೇ ಸಿದ್ಧವಾಗಿಲ್ಲ, ಆಗಲೇ
ಪ್ರಸಾದ ಹಂಚಿದ್ದೇವೆ.
ಎದುರಿಗಿದ್ದದ್ದೆಲ್ಲ ಆದಲು ಬದಲು ಕಂಚೀಬದಲು
ಹುಡುಕುತ್ತಿದ್ದೇವೆ ಕಣ್ಮುಚ್ಚಿ; ಇವರ ಬಿಟ್ಟವರಾರು?

೩

ದಿನವು ಬಿಸಿ ಬಿಸಿ ಅನ್ನ ದೇಹಕ್ಕೆ ಹಿತ.
ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು,
ಹಳಸಿದನ್ನವ ನಾಯಿ ಕೂಡ ಮೂಸುವುದಿಲ್ಲ. ಅದೆ
ಅಕ್ಕಿ, ಜೋಳ, ಗೋಧಿಗಳಿಂದ ವಿಧವಿಧದ ಪಕ್ವಾನ್ನ
ಗಮಗಮಿಸುವದು. ಉಪ್ಪು, ಕಾರ, ಹುಳಿ, ಸಿಹಿ

ತಕ್ಕಷ್ಟು, ಬದಲಾವಣೆಯೇ ಬಾಳಿನೊಗ್ಗರಣೆ.
ಬಾಡಿಸಿಕೊಳ್ಳಲೆಂದೆ ಉಪ್ಪಿನಕಾಯಿ.
(ಕದ ತಿನ್ನುವವಗೆ ಹಪ್ಪಳ ಈಡೆ?)
ಮಿತಿ ಮೀರಿದರೆ ಎಂಥ ಸುಗ್ರಾಸವೂ ಅಜೀರ್ಣ.
ಕುದಿಯುವುದು, ಮಿದಿಯುವುದು, ಹೊಂದಿ
ಹದಗೊಳ್ಳುವುದು; ಬದುಕಿನಲಿ ಎಲ್ಲರಿಗು ತೆರೆದ ದಾರಿ.
ಶ್ರುತಿಗೂಡಿದಾಗ ಹೊಮ್ಮುವುದು ಹಾಡಿನ ಲಹರಿ
ಗಾಳಿಯ ಬೆನ್ನಮೇಲೆ ಮೋಡದ ಸವಾರಿ.

ಗುಡುಗಿರಲಿ, ಮಿಂಚಿರಲಿ, ಮುಂಗಾರಿಗಾರು ಕಾತರಿಸಿಲ್ಲ?
ಉರಿವ ಬೇಸಗೆ ಚಿಗುರು ಚಿಣ್ಣರನು ಎತ್ತಿ ಆಡಿಸಿಲ್ಲ?
ಥಂಡಿಯ ಮುಸುಗಿನಲ್ಲು ಬೆಚ್ಚಗೆ ಕನಸು ಕಂಡಿಲ್ಲ ?
ಬೆಂಗಾಡಿನಂಗಾಂಗದಲ್ಲು ತುಂಗಭದ್ರೆಯು ತುಂಬಿ ಹರಿದಿಲ್ಲ?

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು.
ಕಂದ, ವೃತ್ತಗಳ ಝರಿ ತೊರೆಯ ನಡುವೆ
ಹಸುರಿಗೆ ಗದ್ಯದುದ್ಯಾನ;
ಹದಿನೆಂಟು ಬಣ್ಣನೆಯ ಹುಲ್ಲುಗದ್ದೆಯ ನಡುವೆ
ಚಂಪುವಿನ ತಂಪುಕೊಳ.
ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಹಾರಿ ಬಂಡಿ.
ಭಾವ-ಗೀತ ಒಪ್ಪಿದರೆ ಚೆಂದ ವಧೂವರ ಜೋಡಿ.
ಒಲೆ ಹೂಡಿದ ಮೇಲೆ ಆದರ ಬಿಸಿ ತಾಗುವುದು
ಕುದ್ದು ಹಣ್ಣಾಗುವುದು ನೂರು ಅನುಭವದ ನವ್ಯ ಪಾಕ.

ಬಗಲಗಸೆ ಅಂಗಿಯಿಂದ ಬುಶ್‌ಕೋಟಿನವರೆಗೂ
ತೊಟ್ಟು ಕಳಚಿದ್ದೇವೆ.
ಮಾಡಿ ಉಂಡಿದ್ದೇವೆ ನಮನಮಗೆ ಸೇರಿದ ಅಡಿಗೆ.
ಇರಬಹುದು ಇದರಲ್ಲಿ ಕೆಲಭಾಗ ಜೀವನಸತ್ವ ಕಡಮೆ.
ಇದ್ದ ಶಕ್ತಿಯಲಿ ತುಸು ದೂರ ನಡೆದಿದ್ದೇವೆ.
ರೂಢಿಯಾಗಿದೆ ಒಬ್ಬೊಬ್ಬರಿಗು ಒಂದೊಂದು ಬಗೆಯ ನಡಿಗೆ.
ಮುಖ್ಯ ಬೇಕಾದದ್ದು ಜೀವಂತ ಗತಿ, ಹೊಸ ನೆತ್ತರಿನ ಕೊಡುಗೆ.

**ಕಾಲ ನಿಲ್ಲುವುದಿಲ್ಲ; ನಾವು ಕೂಡುವುದಿಲ್ಲ.**
**ಮಳೆ ಬಂದರೂ ಕಾಮನ ಬಿಲ್ಲು ಮೂಡುವದೆಂಬ ನಿಯಮವಿಲ್ಲ.**
**ಹಗಲಿರುಳು ಗಾಲಿಯಲಿ ಸೋಲು-ಗೆಲುವಿನ ಕೀಲು ಭದ್ರ.**
**ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು**
**ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ.**
**ಗೆದ್ದವರಿಗಿದ್ದಯಿದೆ ಬೆಳ್ಳಿಯ ಥಾಲು.**
**ಸೋತವರ ಸೊತ್ತು**
**ಗೆದ್ದವರನಳೆವ ಜಗದೆಲ್ಲ ಅನುಭವದ ಪಾಲು.**

ಕಾಲದ ಬಗೆಗಿನ ಕಲ್ಪನೆ ಬದಲಾಗುವುದಕ್ಕೆ ವಿಜ್ಞಾನದ ಕೊಡುಗೆ ಪ್ರಭಾವಕಾರಿಯಾದ ಪಾತ್ರ ವಹಿಸಿದೆ. ಇದರ ಪರಿಣಾಮವಾಗಿ ಕಾಲ ಕೇವಲ ಒಂದು ಅಮೂರ್ತ ಕಲ್ಪನೆ ಎಂಬ ಭಾವನೆ ಬುಡಮೇಲುಗೊಂಡಿದೆ. ಕಾಲ ಇವೊತ್ತಿಗೂ ಆಮೂರ್ತವಾದದ್ದೇ-ವ್ಯವಹಾರ ಜಗತ್ತಿನಲ್ಲಿ. ಆದರೂ ಇಡೀ ಕಾಲವನ್ನು ತಂತಾನೆ ಕುರಿತು ಚಿಂತಿಸುವಾಗ, ಅದು ಮೂರ್ತತೆಯನ್ನು ಪಡೆಯುತ್ತದೆ. ನಮ್ಮಲ್ಲಿ 'ಕಾಲ' ಹಿಂದಿನಿಂದಲೂ ಋತು ತತ್ವವನ್ನು ಪ್ರತಿನಿಧಿಸುವ ಒಂದು ಅಂಶವಾಗಿ, ಮೂರ್ತ ಸ್ವರೂಪ ಪಡೆದಿದೆ. ಕಾಲವನ್ನು ವ್ಯಕ್ತಿರೂಪದಲ್ಲಿ ಪ್ರತಿಮಿಸುವುದು. ಪುರಾಣ ಸಂಪ್ರಾದಯಕ್ಕೆ ಸಹಜವಾದರೂ, ಕಾಲವನ್ನು ಹರಿಯುವ ನದಿಗೆ ಹೋಲಿಸುವುದು ಅಪರೂಪವೇನಲ್ಲ. ಆದರೆ ಕಾಲದೇಶಗಳು ಪರಸ್ಪರ ವಿನಿಮಯಗೊಳ್ಳಬಹುದೆಂಬ ವೈಜ್ಞಾನಿಕ ಸತ್ಯದ ಬೆಳಕಿನಲ್ಲಿ ಕಾಲವನ್ನು ಅರ್ಥೈಸುವ ಪ್ರಯತ್ನ ಹೆಚ್ಚು ಕುತೂಹಲಕಾರಿಯಾಗಿರುವುದು ಸಹಜ.

ಶ್ರೀ ಕಣವಿಯವರ 'ಕಾಲ ನಿಲ್ಲುವುದಿಲ್ಲ' ಕವಿತೆ, "('ನೆಲ-ಮುಗಿಲು' ಸಂಗ್ರಹ) ಮೇಲಿನ ಅನೇಕ ಅಂಶಗಳನ್ನು ಒಳಗೊಳ್ಳುತ್ತದೆ. ಅದಕ್ಕಿಂತ ಹೆಚ್ಚಾಗಿ, ಈ ಅಂಶಗಳನ್ನು ಕೇವಲ ತಾರ್ಕಿಕವಾಗಿ ನೋಡುವ ಬದಲು, ಬದುಕಿನ ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡುತ್ತದೆ. ಹೀಗೆ ಮಾಡುವಾಗ ಕಾಲ ಮತ್ತು ಬದುಕಿನ ನಡುವಿನ ಪರಸ್ಪರ ಸಂಬಂಧ ವಿವರಗೊಳ್ಳುತ್ತಾ ಹೋಗುತ್ತದೆ. ಪರಿಣಾಮವಾಗಿ 'ಕಾಲ ನಿಲ್ಲುವುದಿಲ್ಲ' ಒಂದು ಉತ್ತಮ ಕವಿತೆಯ ಲಕ್ಷಣವನ್ನು ಪಡೆದಿದೆ ಎಂದು ಧಾರಾಳವಾಗಿ ಹೇಳಬಹುದು.

೧

'ಕಾಲ ನಿಲ್ಲುವುದಿಲ್ಲ' ಎನ್ನುವ ಮಾತಿನಲ್ಲಿ ಕಾಲದ ಬಗೆಗಿನ ಗುಣ-ಚಲನ ಗುಣ ಒಪ್ಪಿಕೊಳ್ಳಲಾಗಿದೆ. ಇದೊಂದು ಮಾನವಿಕ ಮೌಲ್ಯವೆನ್ನುವುದು 'ಈ ಕಾಲನೆಂಬುವ ಪ್ರಾಣಿ ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ' - ಎಂಬ ಮಾತಿನಲ್ಲಿ ದೃಢೀಕರಿಸಲಾಗಿದೆ. ಮುಂದಿನ ಸಾಲಿನ ಮಾತುಗಳಿಂದ-

**'ಎಲ್ಲೋ ತಲೆ ಮರೆಸಿಕೊಂಡು ಓಡಾಡುತ್ತಿದ್ದಾನೆ'**

ಇಲ್ಲಿನ 'ಪ್ರಾಣಿ' ಲಾಘವವಾಗಿ ಬಳಕೆಯಾದ ಪದ ಎನ್ನುವುದು ಸ್ಥಿರವಾಗುತ್ತದೆ. ಈತ ಈ ಮನುಷ್ಯ ಪ್ರಾಣಿ'ಯಂತಹ ಪ್ರಾಣಿ 'ಅಣುವಿನಲ್ಲಿ ಅಣುವೂ ಮಹತ್ತಿನಲ್ಲಿ ಮಹತ್ತೂ' ಆಗಬಲ್ಲಂತಹ ವ್ಯಕ್ತಿತ್ವದವನು ಎಂಬುದು, ಮುಂದಿನ ಸಾಲುಗಳಲ್ಲಿ ಧ್ವನಿತವಾಗುತ್ತದೆ. ಆದರೆ ಈ ಐದು (ಸಾಲು ೪ ರಿಂದ ೮) ಸಾಲಿನ ವಿವರಣೆಗಿಂತ, ಕವನದ ಮೂಲಧೋರಣೆಯನ್ನೂ, ಕವನದ ಮೂಲದ್ರವ್ಯಕ್ಕೆ ಚಾಲನೆಯನ್ನೂ ಕೊಡುತ್ತದೆ. ಒಂದು ತುಂಡು ಸಾಲು-

**'ಹಿಡಿಯಿರೋ ಅವನ...'**

ಈ ಸಾಲಿನಲ್ಲಿಯ 'ಸಮಷ್ಟಿ ಧ್ವನಿ' (ಹಿಡಿಯಿರೋ)ಯನ್ನು ಗಮನಿಸಿದಾಗ, ಕವಿ ಇಲ್ಲಿ ವೈಯಕ್ತಿಕವಾಗಿ ಮಾತಾಡುತ್ತಿಲ್ಲ; ಒಂದು ಸಮಾಜದ ಅಥವಾ ಒಂದು ನಾಗರಿಕತೆಯ ಮುಖವಾಣಿಯಾಗಿದ್ದಾನೆ ಎಂಬ ಅಂಶ ಹೊರಬರುತ್ತದೆ.

ಎರಡನೆಯ ಪ್ಯಾರಾದ ಆರಂಭದ ಸಾಲುಗಳಲ್ಲಿ ಮನುಷ್ಯ ಹೇಗೆ ಕಾಲವನ್ನು ಹಿಡಿದು ನಿಲ್ಲಿಸಲು ಯತ್ನಿಸಿದ್ದಾನೆನ್ನುವುದು ವರ್ಣಿತವಾಗಿದೆ.

**ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು**
**ಹೆಣಗಿದ್ದೇವೆ**

-ವಸ್ತು ಸ್ಥಿತಿಯ ಸರಳ ನಿರೂಪಣೆಯಾಗಿದೆ, ಆದರೆ

**ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು**
**ಒದೆಸಿಕೊಂಡಿದ್ದೇವೆ.**

ಎನ್ನುವಲ್ಲಿ ಕಾಲನ ಪರ್ಯಾಯವಾಗಿ, 'ಕತ್ತೆಯ ಕಾಲು' ಸೂಚಿತವಾಗಿದೆ, ಈ 'ಕತ್ತೆಯ ಕಾಲು' ತಾತ್ವಿಕ ಕಾಲದ ಕೂಡ ಯಾವುದೇ ಸಂಬಂಧ ಪಡೆಯದಿದ್ದರೂ, ಪರಿಸರದ ಒತ್ತಡದಿಂದಾಗಿ, ಅದು ಕಾಲನಿಗೆ ಪರ್ಯಾಯವಾದ ವಸ್ತುವಾಗುವಷ್ಟು ಪ್ರಭಾವಕಾರಿಯಾಗಿದೆ. 'ಕಾಲ'ಕ್ಕೆ ಪರ್ಯಾಯಪದವಾದ 'ಹೊತ್ತು' ಆಡುಮಾತಿನಲ್ಲಿನ ತನ್ನ ಅರ್ಥವಿಸ್ತಾರದಿಂದಾಗಿ, ಅಲ್ಲದೆ 'ಕತ್ತೆಯ ಕಾಲು' ಎಂಬಲ್ಲಿನ ಘಾತದ ಪೂರ್ವ ಸ್ಥಾನದಲ್ಲಿದ್ದು ಹೊತ್ತಿಗೂ ಕತ್ತೆಗೂ ಒಂದು ಬಗೆಯ ಅವಿನಾಭಾವ ಸ್ಥಾಪಿತವಾಗುತ್ತದೆ. ಹೊತ್ತು ಕತ್ತೆಯಾಗುವ ಈ ಸಂದರ್ಭದಲ್ಲಿ ಹೊತ್ತು ಎನ್ನುವ ಮಾತಿನ ಇನ್ನೊಂದು ಅರ್ಥವೂ (ಹೊರು ಹೊತ್ತು) ಹೊಳೆದು, ಹಿಂದಿನ ಸಾಲುಗಳ 'ಗಾಣವಾಡಿ'ಸುವ ಮತ್ತು 'ಹೆಣಗು'ವ ಕ್ರಿಯೆಗೆ ಹೊಸ ಅರ್ಥ ಗಾಂಭೀರ್ಯ ಸ್ಫುರಿಸುತ್ತದೆ. ಇಷ್ಟಲ್ಲದೆ 'ಒದೆಸಿಕೊಂಡಿದ್ದೇವೆ' ಎನ್ನುವ ಮಾತು, ಕಾಲ ಯಾರನ್ನೂ ಸುಮ್ಮನೆ ಬಿಡುವಂಥದ್ದಲ್ಲ ಎನ್ನುವುದಕ್ಕೆ ಸಾಕ್ಷಿಯಾಗುತ್ತದೆ.

ಇಲ್ಲಿಂದ ಮುಂದಿನ ಘಟ್ಟ ಆರಂಭವಾಗುತ್ತದೆ. ಇಲ್ಲಿ ಅಂತರ್ಮುಖತೆ ದೊರಕಿಸಿಕೊಳ್ಳುವ ರೀತಿ ಹದವಾಗಿದೆ-

**ಒಳ ಹೊರಗೆ ಉಸಿರು ಆಡುತ್ತಿದೆ ನಿರಾಯಾಸ**

ಇದು ನಿರಾಯಾಸವಾಗಿ ಸಾಗುವ ಕ್ರಿಯೆಯಾದರೂ, 'ತುಡಿವೆದೆ' ಮತ್ತು 'ಮಿಡಿವ ನಾಡಿ'ಯ ಸಂಪರ್ಕವಿಲ್ಲದೆ, ಈ ಜ್ಞಾನ ಮೂಡಲಾರದು. ಅಲ್ಲದೆ, ಈ 'ನಿರಾಯಾಸ' ಎನ್ನುವುದು ನಿಷ್ಕ್ರಿಯ ಸ್ಥಿತಿ ಅಲ್ಲ, ಒಳ ಹೊರಗೆ ಉಸಿರು ಆಡುವುದರಿಂದ, ಅಂದರೆ ನಿರಂತರವಾದ ಕ್ರಿಯೆಯಿಂದ, 'ನಿರಾಯಾಸ' ಫಲಿಸುತ್ತದೆ. ಈ 'ನಿರಾಯಾಸ' ಆಗಗೊಳಿಸುವ ಇನ್ನೊಂದು ಅಂಶವೂ ಇದೆ-

**ಬಯಲು ಆಲಯದೊಳಗೊ ? ಆಲಯವು ಬಯಲೊಳಗೊ?**

ಮೂಲಭೂತ ಪ್ರಶ್ನೆಯಾದದ್ದರಿಂದ, ಇದು ಕಾಲ ದೇಶಗಳಷ್ಟೇ ಅಥವಾ ದೇಶವನ್ನೂ ಒಳಗೊಂಡ ಕಾಲದಷ್ಟೇ ಹಳೆಯದು. ಉಸಿರು ಆಡಬೇಕಾದರೆ, ಒಳಹೊರಗಿನ ಅಸ್ತಿತ್ವವಿಲ್ಲದೆ ಸಾಧ್ಯವಿಲ್ಲ. ಆದರೆ ಒಳಹೊರಗಿನ ಪ್ರಶ್ನೆಯೊಂದಿಗೇ ಯಾವುದು ಮೂಲ, ಯಾವುದು ಮುಖ್ಯ ಎಂಬ ಸಮಸ್ಯೆ ಉಂಟಾಗುತ್ತಿದೆ. ಕಾಲದಿಂದ ಬಂಧಿತವಾದದ್ದು, ಕಾಲದ ಬಂಧಕ್ಕೆ ಒಳಗಾದದ್ದು-ಎರಡರಲ್ಲಿ ಯಾವುದು ನಿಜವಾದ ಅಸ್ತಿತ್ವ ಪಡೆದಿದೆ? ಕವಿ ಇದನ್ನು ಉತ್ತರಿಸುವ ಗೋಜಿಗೆ ಹೋಗುವುದಿಲ್ಲ.

**ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ.**

ಎಲ್ಲ ಸಮಸ್ಯೆಗಳಿಗೂ ಕಾಲನೇ ತಕ್ಕ ಉತ್ತರ ಏನೆಂಬುದು ಮನುಷ್ಯನ ಅರಿವಿಗೆ ಬರುವುದು ಅಸಾಧ್ಯವೇ ಸರಿ. ಆದ್ದರಿಂದಲೇ ಆ ಬಗ್ಗೆ ಅವಸರಪಡುವುದೂ ಬೇಡ. ಯಾಕೆಂದರೆ, ಅವಸರ ಪಟ್ಟುದಾದರೆ, ಜೀವನದ ಅನುಭವ ಸಂಪತ್ತನ್ನೇ ಕಳೆದುಕೊಳ್ಳಬೇಕಾಗುತ್ತದೆ. ಅಲ್ಲದೆ ಅದನ್ನು ಹಾಗೆ ಕಳೆದುಕೊಳ್ಳಲು ಯಾರು ಸಿದ್ಧವಾಗಿಯೂ ಇಲ್ಲ. ಅದ್ದರಿಂದ,

**ಯಾರಿಗೂ ಅವರಸವಿಲ್ಲ ತಾನೆ ?**

ಎನ್ನುವ ಮಾತಿನಲ್ಲಿ ಸಾಂತ್ವನಕ್ಕಿಂತ ಹೆಚ್ಚಾಗಿ, ವಾಸ್ತವಾಂಶದ ನಿರೂಪಣೆಯೇ ಇದೆ.

'ಈ ಕುದುರೆಯೇರಿ' ಎಂದು ಆರಂಭವಾಗುವ ಸಾಲಿನಿಂದ ಹಿಡಿದು, ಮೊದಲ ಭಾಗದ ಕೊನೆಯ ಸಾಲಿನವರೆಗೂ, ಕಣ್ಣಿಗೆ ಕಟ್ಟುವ ಚಿತ್ರ ನಾಗಾಲೋಟದ ಕುದುರೆಯ ಓಟದ ಚಿತ್ರ; ಇಲ್ಲಿನ ವೈಪರೀತ್ಯವೆಂದರೆ, ಸವಾರನಾಗಲೆಳೆಸುವ ಮನುಷ್ಯ ತಾನೇ ವಾಹನವೂ ಆಗುವುದು. ಆದರೆ ಈ ಓಟದ ಚಿತ್ರ 'ಸೆಕೆಂಡು, ಮಿನಿಟು, ತಾಸುಗಳ ಹಾಸು ಹೊಕ್ಕಿನಲಿ' ಮರೆಯಾಗಿ ಬಿಡುವುದೂ ಸಹ ಕಾಲ ನಮ್ಮನ್ನು ಯಾವ ಯಾವ ಕಡೆ ಹೇಗೆ ಹೇಗೆ ಸುತ್ತುಗಟ್ಟಿದೆ ಎಂಬ ಬಿಡಿಸಲಾಗದ ಸಮಸ್ಯೆಗೆ ಕನ್ನಡಿ ಹಿಡಿದಂತಿದೆ. ಕಾಲದೊಂದಿಗೆ ಉಳಿದ ನಾಲ್ಕು ಭೂತಗಳು (ಮಣ್ಣು, ಗಾಳಿ, ನೀರು, ಬಯಲು) ಬದುಕನ್ನು 'ಬೆತ್ತಲೆ ಬದುಕಿಗೆ ಬಣ್ಣದ ನೂಲು ಸುತ್ತಿ ತೋರಿಸುತ್ತಿದೆ ಡೌಲು.'

ಕೊನೆಯ ಎರಡು ಸಾಲುಗಳಲ್ಲಿನ ಬೆಳಕು-ಕತ್ತಲೆ ಮತ್ತು ಭೂಮಿ -ಆಕಾಶಗಳ ದ್ವಂದ್ವ ಭಾವನೆ, ಈ ಮೊದಲಿನ ಬಯಲು-ಆಲಯ ಮತ್ತು ಸವಾರ- ವಾಹನಗಳ ದ್ವಂದ್ವ ಕಲ್ಪನೆಯನ್ನು

ನೆನಪಿಗೆ ತಂದು, ಬದುಕಿನ ಆಳದ ದ್ವಿಧಾವೃತ್ತಿಗೆ, ಕವನದ ಆಳದಲ್ಲಿ ಕಂಡುಬರುವ ದ್ವಿಧಾವೃತ್ತಿಗೆ -ಚಲಿಸುವ ಕಾಲವನ್ನು ಹಿಡಿಯುವ ಭಾವನೆಗೆ - ಒತ್ತನ್ನು ಕೊಡುತ್ತದೆ.

ಹೀಗೆ ಮೊದಲನೆಯ ಭಾಗ ಕಾಲನ ವ್ಯಾಪ್ತಿಯ ಹಲವು ಹತ್ತು ಬಗೆಯನ್ನು ವಿವರಿಸುತ್ತದೆ. ಎರಡನೆಯ ಭಾಗ,

**ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು**

ಎಂಬ ಸ್ಥಾಯೀಭಾವ ಸುತ್ತ ಹೆಣೆದ ರೂಪಕಗಳಿಂದ ಸಮೃದ್ಧವಾಗಿದೆ. ಆದರೆ ಕವಿತೆ ಅಲ್ಲಿಗೇ ನಿಲ್ಲುವುದಿಲ್ಲ. ಕವನದ ಆರಂಭದಲ್ಲಿ ತೊಡಗಿದ 'ಹಿಡಿಯಿರೋ ಅವನ ... ಎಂಬ ಸವಾಲು, ತನ್ನದೇ ಆದ ಕಾವ್ಯಾತ್ಮಕವಾದ ತಿರುವನ್ನು ಪಡೆದು

**'ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ'**

ಎಂಬ ನಿಲುಗಡೆ ತಲುಪುತ್ತದೆ. ಮೊದಲಿನ ಸವಾಲಿನ, ಮನೋಭಾವ ಹೇಗೆ ಬದಲಾಗಿದೆ ಎಂಬುದನ್ನು ಗಮನಿಸುವ ದಿಕ್ಕಿನಲ್ಲಿ 'ಪಂದ್ಯಾಟ' ಎಂಬ ಮಾತನ್ನು ವಿಶೇಷವಾಗಿ ಲಕ್ಷಿಸಬೇಕು, ಅಲ್ಲದೆ 'ಪಂದ್ಯಾಟ'ವಾದದ್ದರಿಂದಲೇ, ಇಲ್ಲಿ ಆಡುವವರಿಗಷ್ಟೇ ಅಲ್ಲದೆ, ನೋಡುವವರಿಗೂ ಜಾಗವಿದೆ.

ಕವಿತೆ ಆರಂಭವಾದದ್ದೇ ಕಾಲವನ್ನು ಸೆರೆಹಿಡಿದು ನಿಲ್ಲಿಸಬೇಕೆಂಬ ಧೋರಣೆಯಿಂದ. ಕವನದ ಕೊನೆಯ ಸಾಲುಗಳಲ್ಲಿ ಆ ಧೋರಣೆ ಮಾಯವಾಗಿ, ಒಂದು ಬಗೆಯ ಒಪ್ಪಂದ ಮನೋಭಾವ ವ್ಯಕ್ತವಾಗುತ್ತದೆ. ಇಲ್ಲಿನ ಪ್ರಕಾರ, ನೋಡುವವರಿಗೆ 'ಸಂತಸಪಡುವ ಭಾಗ್ಯ'ವಷ್ಟೇ ಅಂತಿಮವಾದ ತೀರ್ಮಾನವಲ್ಲ. ಸೋತರೆ ಇನ್ನೂ ಹೆಚ್ಚಿನ ಪಾರಿತೋಷಕವಿದೆ-

**ಸೋತವರ ಸೊತ್ತು**
**ಗೆದ್ದವರನಳೆವ ಜಗದೆಲ್ಲ ಅನುಭವದ ಪಾಲು**

ಈ ತೀರ್ಮಾನಕ್ಕೆ ಕವಿ ಬರುವುದು, ಸ್ವಂತ ಮುಲಾಜಿನಿಂದಲ್ಲ. ಕವಿಯ ಪಾಲಿಗೆ ಇದೊಂದು ಸಾರ್ವತ್ರಿಕ ಅನುಭವ; ಸಾರ್ವತ್ರಿಕ ಅಭಿಪ್ರಾಯದಿಂದ ಮೇಲೆ ರೂಪಿತವಾದದ್ದೂ ಸಹ. ಅಲ್ಲದೆ ಮೊದಲಿನ ಬೆಳಕು ಕತ್ತಲಿನ ದ್ವಿಧಾವೃತ್ತಿಯನ್ನು ಪ್ರತಿಬಿಂಬಿಸುವ ಹಗಲಿರುಳುಗಳು ಇಲ್ಲಿ ಗಾಲಿಗಳಾಗಿ, ಸಮತೋಲವನ್ನು ಸಾಧಿಸುವ ಸಾಧನಗಳಾಗಿವೆ; ಮೇಲಾಗಿ ಈ ಗಾಲಿಗಳಿಗೆ ಸೋಲು ಗೆಲುವುಗಳು ಕೀಲುಗಳಾಗಿವೆಯೇ ಹೊರತು, ಗುರಿ ಆಗಿಲ್ಲ. ಆದುದರಿಂದಲೇ ಈ ಕಾಲನೊಂದಿಗಿನ ಓಟದ (ಅವನನ್ನು ಹಿಡಿಯಲು ಬೆಂಬತ್ತುವ ಪ್ರಯತ್ನದಲ್ಲಿ) ಪಂದ್ಯದಲ್ಲಿ ಸೋಲುಗೆಲುವುಗಳಿಗೆ ಮೀರಿದ, ಓಡುವುದರಲ್ಲೇ ಸಾತತ್ಯ ಪಡೆಯುವ ಗುರಿಯೊಂದನ್ನು ಕವಿ ಕಂಡುಕೊಂಡಿದ್ದಾನೆ. ಈ ಬಗೆಯ ಬದಲಾವಣೆಯ ಹಿಂದಿನ ಮೂಲಭೂತ ತುಡಿತ-

**ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು**

೨

ಎರಡನೆಯ ಭಾಗ ಪ್ರಾರಂಭವಾಗುವುದೇ 'ಸೂರ್ಯಚಂದ್ರರ ಸುಪರಿಚಿತ ಮೋರೆ'ಯ ಪ್ರಸ್ತಾಪದಿಂದ, ಈ 'ಅಮಾನವ' ಪ್ರಪಂಚ ಅರ್ಥವಾಗುವುದು ನಮ್ಮ ಪ್ರಪಂಚದ ಮೇಲೆ ಅದು ಉಂಟುಮಾಡುವ ಪರಿಣಾಮದಿಂದ. ಈ ಪರಿಣಾಮ ಉಂಟಾಗುವುದಾದರೂ, ಇಬ್ಬರಿಗೂ ಸಹಜಗುಣವಾಗಿರುವ 'ತಿರುಗುವಿಕೆಯಿಂದ', ಈ 'ತಿರುಗುವುದೊಂದೇ' ಇಬ್ಬರ 'ಹೋರೆ'ಯನ್ನೂ ನಿರ್ಧಾರ ಮಾಡುವುದು.

ಕವಿ ಈ ಮಾನವ ಮತ್ತು ಅಮಾನವ ಪ್ರಪಂಚವನ್ನು ಎರಡು ಬೇರೆ ಬೇರೆ ಜಗತ್ತುಗಳೆಂದೇ ನೋಡುತ್ತಾನೆ-

**ಆಗೀಗ ಈಚೆಯ ದಡಕ್ಕು ಹಾಯುವುದು ಬೆಳಕಿನ ತೆರೆ.**

ಇಲ್ಲಿನ 'ಹಸಿರು ಸಂಸಾರ'ದೊಂದಿಗೂ ನಮಗೆ 'ನಿತ್ಯ ಹೊಕ್ಕು ಬಳಕೆ' ಎನ್ನುವಾಗ, ಮತ್ತೆ ಮಾನವ ಹಾಗೂ ಪ್ರಕೃತಿ ಪ್ರಪಂಚಗಳು ಬೇರೆ ಎಂಬುವ ಅಂಶ ಧ್ವನಿಸುತ್ತದೆ. ಮೊದಲ ಪ್ಯಾರಾದ ಕೊನೆಗೆ ಬರುವ ಹೊತ್ತಿಗೆ ನಮಗೆ ವ್ಯಕ್ತವಾಗುವುದು ಪ್ರಕೃತಿಯ ವಿವಿಧ ಅಂಗಗಳ ನಡುವಣ ಸಾಮರಸ್ಯ.

ಎರಡನೆಯ ಪ್ಯಾರಾದಲ್ಲಿ 'ಹೌದು ನಾವೆಲ್ಲ ಹೊಸಬರೆ' ಎಂಬ ಹೊಸ ಬೆಳವಣಿಗೆಯೊಂದು ಕಾಣಿಸುತ್ತದೆ.

**'ಎದುರಿಗಿದ್ದದ್ದೆಲ್ಲ ಅದಲು ಬದಲು ಕಂಚೀ ಬದಲು**
**ಹುಡುಕುತ್ತಿದ್ದೇವೆ ಕಣ್ಮುಚ್ಚಿ; ಇವರ ಬಿಟ್ಟವರಾರು?'**

ಇದೊಂದು ಮೂಲಭೂತ ಪ್ರಶ್ನೆ. ಜೀವನದಾದ್ಯಂತ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳಲು ಯತ್ನಿಸುವುದೇ, ಬದುಕನ್ನು ಅರ್ಥೈಸಲೆಳೆಸುವ ಹಾದಿಯಲ್ಲಿ 'ದೊಡ್ಡ ಘಟ್ಟ, 'ಮಾನವ-ಅಮಾನವ', ಕಾಲದ ಸಮಸ್ಯೆಯೊಂದಿಗೇ ಅಭೇದ್ಯವಾಗಿರುವುದು, ಒಟ್ಟು ಕವನದ ಧೋರಣೆಯನ್ನು ಸಾಬೀತುಗೊಳಿಸುವಲ್ಲಿ ನೆರವಾಗಿದೆ...

ಮುಂದಿನ ಪ್ಯಾರಾ ಬದುಕಿನ ವಿವಿಧ ಚಟುವಟಿಕೆಗಳ ವರ್ಣನೆ ಮಾಡುತ್ತಾ ಹೋಗುತ್ತದೆ. ಆದರೆ ಕವನಕ್ಕೆ ಹೊಸ ಕಸುವು ಬರುವುದು, ನಾಲ್ಕನೆಯ ಪ್ಯಾರಾದ

**ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು**

ಎಂಬ ಮಾತಿನಿಂದ, ವರ್ತನೆ ಎಂಬ ಮಾತಿಗೆ ನಡವಳಿಕೆ ಎಂಬ ಅರ್ಥವಲ್ಲದೆ, ನಿತ್ಯದ ವ್ಯವಹಾರ ಎಂಬ ಅರ್ಥವೂ ಹಳೆಯ ಮೈಸೂರು ಭಾಷೆಯಲ್ಲಿದೆ. ಕವಿ, ಪರಿವರ್ತನೆಯನ್ನು ಸಮರ್ಥಿಸುವಲ್ಲಿ ಕನ್ನಡ ಸಾಹಿತ್ಯ ನಡೆದು ಬಂದ ವಿವಿಧ ಘಟ್ಟಗಳನ್ನು ಸೂಚ್ಯವಾಗಿ ಬಳಸಿಕೊಂಡಿದ್ದಾನೆ. ಆದರೆ ಜೀವನದ ಪಾಕ ಸಿದ್ಧಗೊಳ್ಳುವ ಬಗ್ಗೆ ಹೇಳಿರುವ

**ಕುದ್ದು ಹಣ್ಣಾಗುವುದು ನೂರು ಅನುಭವದ ನವ್ಯಪಾಕ.**

ಎಂಬ ಮಾತು ಹೆಚ್ಚು ಅರ್ಥಪೂರ್ಣವಾಗಿದೆ. ಹಾಗೆಯೇ ಮುಂದಿನ ಪ್ಯಾರಾದ-

**ರೂಢಿಯಾಗಿದೆ ಒಬ್ಬೊಬ್ಬರಿಗೂ ಒಂದೊಂದು ಬಗೆಯ ನಡಿಗೆ,**
**ಮುಖ್ಯಬೇಕಾದದ್ದು ಜೀವಂತ ಗತಿ, ಹೊಸ ನೆತ್ತರಿನ ಕೊಡುಗೆ.**

ಆದರೂ ಇವೆಲ್ಲ ಕೇವಲ ಉಪಮಾನ ಭರಿತ ವಿವರಣೆ; ಪ್ರತಿಮಾಬಲದ ನಿರೂಪಣೆ, ಕವಿತೆ ಮತ್ತೊಮ್ಮೆ ತಾತ್ವಿಕ ಮಟ್ಟಕ್ಕೆ ಏರುವುದು ಕೊನೆಯ ಪ್ಯಾರಾದಲ್ಲಿ, ಇಲ್ಲಿನ,

**'ಕಾಲ ನಿಲ್ಲುವುದಿಲ್ಲ, ನಾವು ಕೂಡುವುದಿಲ್ಲ'**

ಎಂಬ ಹೇಳಿಕೆ 'ಹಿಡಿಯಿರೋ ಅವನ .... ಎಂಬ ಮೊದಲ ಸವಾಲಿನ ಆರ್ಭಟ ನೀರಾಗಿ ಕರಗಿ ಹೋಗಿರುವುದನ್ನು ಧ್ವನಿಸುತ್ತದೆ. ಕಾಲದೆದುರು ಸೆಣಸುವುದು ಲಾಭದಾಯಕವಲ್ಲ ಎನಿಸಿದರೂ, ಮನುಷ್ಯ ಸುಮ್ಮನೆ ಕೂಡುವುದಿಲ್ಲ ಎನ್ನುವುದು ಅವನ ಹೋರಾಟದ ಗುಣವನ್ನು ತೋರಿಸುತ್ತದೆ. ಹೀಗೆ ಕವಿತೆ, ಒಂದರ್ಥದಲ್ಲಿ, ಹೊರಟ ಜಾಗಕ್ಕೇ ಮರಳಿ ಬರುತ್ತದೆ.

ಇಡೀ ಕವಿತೆಯನ್ನು ಇನ್ನೊಮ್ಮೆ ಗಮನಿಸಿದಾಗ, ಈ ಕೆಲವು ಅಂಶಗಳು ಹೊರಬೀಳುತ್ತವೆ.

೧. ಕಾಲವನ್ನು ತಾತ್ವಿಕ ದೃಷ್ಟಿಯಿಂದ ಗಮನಿಸಿದಾಗ, ಈ ಕೆಲವು ಅಂಶಗಳು ಹೊರಬೀಳುತ್ತವೆ. ಕವನದಲ್ಲಿ ಅದೊಂದೇ ಮುಖ್ಯವಾದ ಅಂಶವಾಗಿಲ್ಲ.

೨. ಕಾಲವನ್ನು ಬದುಕಿಗೆ ಅನ್ವಯಿಸಿ ನೋಡುವಾಗ ಕವಿ, ಕಾಲ ಮತ್ತು ಬದುಕುಗಳ ದ್ವಂದ್ವವನ್ನು ವಿವಿಧ ಮಟ್ಟಗಳಲ್ಲಿ ಗ್ರಹಿಸುತ್ತಾನೆ.

೩. ಕಾಲನೊಂದಿಗೆ ಸೆಣಸುವುದು ಅಸಾಧ್ಯವಲ್ಲವಾದರೂ, ಕಾಲನೊಂದಿಗಿನ ಸೆಣಸಾಟದಲ್ಲಿ ಮನುಷ್ಯ ತಕ್ಕಮಿತಿಯನ್ನು ಅರಿತುಕೊಳ್ಳಬೇಕಾಗಿದೆ.

೪. ಕಾಲದ ಬಗೆಗಿನ ವಿವೇಚನೆ, ಮಾನವಜೀವನದ ಬಗೆಗಿನ ವಿವೇಚನೆ ಬೇರೆ ಬೇರೆಯಾಗಿರಲು ಸಾಧ್ಯವಿಲ್ಲ- ಎರಡೂ ಒಂದರಲ್ಲಿ ಒಂದು ಮಿಳಿತವಾಗಿವೆ.

೫. ರೂಪಕ ಸಮೃದ್ಧವಾದ ಭಾಷೆಯನ್ನು ಬಳಸುವ ಗೀಳಿನಲ್ಲಿ, ಕೆಲವೊಮ್ಮೆ ಕವಿ ಮೈಮರೆತಿರುವುದುಂಟು;

**"ಬಗಲಗಸೆ ಅಂಗಿಯಿಂದ ಬುಶ್‌ಕೋಟಿನವರೆಗು**
**ತೊಟ್ಟು ಕಳಚಿದ್ದೇವೆ"**

ಹಾಗೆಯೇ

**(ಕದ ತಿನ್ನುವವಗೆ ಹಪ್ಪಳ ಈಡೆ?)** ಇತ್ಯಾದಿ ಇತ್ಯಾದಿ.

೬. ಕವಿತೆಯ ಸಾವಯವ ಹಾಗೂ ಸಮಗ್ರ ಶಿಲ್ಪದ ದೃಷ್ಟಿಯಿಂದ ಕವಿತೆಯಲ್ಲಿ ಬೆಳವಣಿಗೆಯ ಅಂಶಗಳು ಹೆಚ್ಚಾಗಿಲ್ಲ.

೭. ಕಾಲದಂತಹ ಅಮೂರ್ತ ಕಲ್ಪನೆಯನ್ನು ಅವಲಂಬಿಸಿ ಬರೆದ ಕವಿತೆಯಾದರೂ, ಕವಿತೆಯ ವ್ಯಾಪ್ತಿ ದೈನಂದಿನ ಚಟುವಟಿಕೆಗಳನ್ನೂ ಒಳಗೊಂಡಿದೆ.

೮. ವ್ಯಂಗ್ಯ ಮತ್ತು ಕಟಕಿಗಳಿಂದ ಮುಕ್ತವಾದ ಮೊದಮೊದಲ ನವ್ಯ ಕವಿತೆಗಳಲ್ಲಿ 'ಕಾಲ ನಿಲ್ಲುವುದಿಲ್ಲ' ಒಂದಾಗಿದೆ.

೯. ಕಣವಿಯವರ ಅನೇಕ ಮುಖ್ಯ ಕವಿತೆಗಳಂತೆ ಮಾನವ-ಅಮಾನವ ಲೋಕಗಳ ನಡುವೆ ಕುರಿತ ಚಿಂತನೆ ಇಲ್ಲಿಯೂ ಹಾದು ಬಂದಿದೆ.

೧೦. ಕವಿತೆ ಸ್ವಯಂಪೂರ್ಣವಾಗಿದ್ದರೂ, ಕಣವಿಯವರ ಕಾವ್ಯಜೀವನದ ಪ್ರಮುಖ ಘಟ್ಟಕ್ಕೆ ಸೇರಿದೆ. ಆದ್ದರಿಂದಲೇ ಅಭ್ಯಾಸಯೋಗ್ಯವಾಗಿದೆ.

ವೇಣುಗೋಪಾಲ ಸೊರಬ

೨

ಕಾಲದ ವಾಸ್ತವ ರೂಪಗಳ ಬಗ್ಗೆ ಗಾಢ ತಿಳಿವಿದ್ದೂ, ತನ್ನ ಸಮಚಿತ್ತ ಕಳೆದುಕೊಳ್ಳದ ಅನುಭವ ವಿನ್ಯಾಸದ ಈ ಕ್ರಮ ತಮ್ಮ ಪೂರ್ಣ ಯಶಸ್ಸನ್ನು ಸಾಧಿಸಿದ್ದು 'ಕಾಲ ನಿಲ್ಲುವುದಿಲ್ಲ' ಕವನದಲ್ಲಿ. ' ಕಾಲ ಪುರುಷನಲ್ಲಿ ಕವಿಗಳ ಕೋರಿಕೆ'ಯಲ್ಲಿಯಂತೆಯೇ ಇಲ್ಲಿ ಕೂಡಾ ನವಿರಾದ ಹಾಸ್ಯದಿಂದ, ಆಪ್ತಧಾಟಿಯಿಂದ ಕವನ ಪ್ರಾರಂಭವಾಗುತ್ತದೆ. ಈ ಕಾಲದ ಅನುಭವದ ಬೇರೆ ಬೇರೆ ಮುಖಗಳನ್ನು ಕವನ ಮುಂದೆ ಶೋಧಿಸುತ್ತದೆಯಾದರೂ ಇಲ್ಲಿ ಮನುಷ್ಯ ಕಾಲದ ಜೊತೆಗೆ ಇಟ್ಟುಕೊಂಡಿರುವ ಸಂಕೀರ್ಣ ಸಂಬಂಧದ ಒಂದು ಮುಖವನ್ನು ಹೇಳುತ್ತದೆ. ಆಳವಾದ ಪ್ರಭಾವ ಬೀರಿಯೂ ಕೈಗೆ ಸಿಗದಿರುವ ಸಂಬಂಧ ಇದು. ಹಿಡಿತಕ್ಕೆ ಸಿಕ್ಕದಿದ್ದರೂ ಈತನ ಪ್ರಭಾವ ಎಷ್ಟೊಂದು ?

ಈ ಕಾಲನೆಂಬುವ ಪ್ರಾಣಿ
ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ;
ಎಲ್ಲೊ ತಲೆ ಮರೆಸಿಕೊಂಡು ಓಡಾಡುತ್ತಿದ್ದಾನೆ
ಆಕಾಶದಲ್ಲಿ ಮಿಂಚಿ,
ಭೂಕಂಪದಲ್ಲಿ ಗದಗದ ನಡುಗಿ,
ಜ್ವಾಲಾಮುಖಿಯೊಳಗೆ ಸಿಡಿದು ನುಚ್ಚು ನೂರಾಗಿ,
ನದಿ ನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು
ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ.
ಹಿಡಿಯಿರೊ ಅವನ...

ಈ ಮಾತನ್ನು ಹೇಳಿದರೂ ಕವಿಗೆ ತಿಳಿದಿದೆ; ಇದನ್ನು ಹಿಡಿಯುವುದು ಸಾಧ್ಯವೇ ಇಲ್ಲ ಎಂಬುದು. ಆಳವಾದ ಪ್ರಭಾವ ಬೀರಿಯೂ ಕೈಗೆ ಸಿಕ್ಕದಿರುವ ಈ ಕಾಲವನ್ನು ಹಿಡಿಯಲು ಮನುಷ್ಯ ಹೆಣಗಿದ ಗತಿ ಅವನ ಇತಿಹಾಸದ ಒಂದು ಮುಖ್ಯಭಾಗ ತಾನೆ. ಬಹಳ ಸಾರಿ ಆತ ತನ್ನ ನಾಗರಿಕತೆಯ ಯಶಸ್ಸನ್ನು ಅಳೆಯುವುದು ಕೂಡಾ ಕಾಲವನ್ನು ಗೆಲ್ಲುವ ಸಾಮರ್ಥ್ಯದ ಮೇಲೆಯೇ. ಆತ ಕಾಲವನ್ನು ಗೆಲ್ಲಲು ಪ್ರಯತ್ನಪಟ್ಟರೂ ತನ್ನ ವಾಸ್ತವತೆ ಆದರ್ಶಗಳ ನಡುವೆ ಇರುವ ಅಂತರವನ್ನು ಮತ್ತಷ್ಟು ವ್ಯಗ್ರವಾಗಿ ಕಾಣುತ್ತಾನೆ. ಕೆಳಗಿನ ಸಾಲುಗಳ ಅನುಭವ ಹೇಳುವುದು ಇದನ್ನೆ.

**ಹೆಜ್ಜೆ ಇಟ್ಟಲ್ಲೆಲ್ಲ ಜೋಲಿ ಹಿಡಿದಿದೆ ಮಣ್ಣು**
**ಧುಮುಕುತಿದೆ ನೀರು,**
**ಮೈಸುತ್ತಿ ಒಳಹೊಕ್ಕು ನೋಡಿದೆ ಗಾಳಿ,**
**ಹದ್ದು ಮೀರಿದೆ ಬಯಲು-**
**ಬೆಳಕು-ಕತ್ತಲೆ ಕುಂಡದಲ್ಲಿ ಮುಳುಗೇಳುತಿಹೆವು ದಿನವೊಂದಕ್ಕು**
**ನಿದ್ದೆ ತಿಳಿದೆದ್ದಾಗ ಭೂಮಿಯಾಕಾಶಕ್ಕೆ ದೊಡ್ಡ ಬಿರುಪು.**

ಕವನದ ಎರಡನೆಯ ಭಾಗ ಕೂಡಾ ಇತಿಹಾಸದ ಚೌಕಟ್ಟಿನಲ್ಲಿ ಕಾಲ ಮತ್ತು ಮನುಷ್ಯನ ಸಂಬಂಧವನ್ನು ವಿಶ್ಲೇಷಣೆ ಮಾಡುತ್ತದೆ. ಮೊದಲನೆಯ ಭಾಗದಲ್ಲಿ ಕೊನೆಯಾದಂತೆ ಇಲ್ಲಿ ಕೂಡಾ ನಿರರ್ಥಕತೆಯ ಅರಿವು ಬಂದು ಮುಟ್ಟುತ್ತದೆ. ಇತಿಹಾಸದ ಚೌಕಟ್ಟಿನಲ್ಲಿ ಮನುಷ್ಯ ಮತ್ತು ಕಾಲದ ಸಂಬಂಧ ಅರ್ಥಪೂರ್ಣವಾದದ್ದಲ್ಲ ಎಂಬ ನಿಲುವಿಗೆ ಮತ್ತೆ ಕವನ ಬಂದು ನಿಲ್ಲುತ್ತದೆ.

**ಎದುರಿಗಿದ್ದದ್ದೆಲ್ಲ ಅದಲುಬದಲು ಕಂಚೀ ಬದಲು**
**ಹುಡುಕುತ್ತಿದ್ದೇವೆ ಕಣ್ಮುಚ್ಚಿ;ಇವರ ಬಿಟ್ಟು ಇವರಾರು?**

ಕಾಲವನ್ನು ಭಾವನಿಷ್ಠ ದೃಷ್ಟಿಕೋನದಿಂದ ಅರ್ಥೈಸುವ ಪ್ರಯತ್ನದಿಂದಾಗಿ ಒಂದು ಬಗೆಯ ನೆಲೆಗಳನ್ನು ಕೂಡಾ ಇಲ್ಲಿ ಖಚಿತವಾಗಿ ನಿರ್ವಚಿಸಿಕೊಳ್ಳಲಾಗಿದೆ. ಈ ದರ್ಶನವೇ ಈ ಸಾಲುಗಳ ಸಾರ.

**ಕಾಲ ನಿಲ್ಲುವುದಿಲ್ಲ, ನಾವು ಕೂಡುವುದಿಲ್ಲ;**
**ಮಳೆ ಬಂದರೂ ಕಾಮನಬಿಲ್ಲು ಮೂಡುವುದೆಂಬ ನಿಯಮವಿಲ್ಲ.**
**ಹಗಲಿರುಳು ಗಾಲಿಯಲಿ-ಸೋಲು ಗೆಲುವಿನ ಕೀಲು ಭದ್ರ.**
**ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು**
**ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ.**
**ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಥಾಲು.**
**ಸೋತವರ ಸೊತ್ತು**
**ಗೆದ್ದವರನಳೆವ ಜಗದಲ್ಲ ಅನುಭವದ ಪಾಲು.**

ಕಡೆ ಸಾಲುಗಳು ತುಂಬ ಕುತೂಹಲಕಾರಿಯಾದ ಅನುಭವವನ್ನು ನೀಡುತ್ತವೆ. ಅನುಭವವನ್ನು ಘೋಷಣೆಯಾನ್ನಾಗಿಸಿ, ತೆಳ್ಳಗೆ ಮಾಡುವ ಪರಿವರ್ತನಶೀಲ ಕೆಲಸ ಇಲ್ಲಿ ನಡೆಯುವುದಿಲ್ಲ. ಹೀಗಾಗಿ ಕಣವಿಯವರ ಕಾವ್ಯ ಅರಿವಿನಿಂದ ವ್ಯಕ್ತಿತ್ವಕ್ಕೆ ಬರುವ ಪರಿಣತಿಯನ್ನು ಹೇಳುತ್ತದೆ. ಭಾವನಿಷ್ಠ ಕಾಲವನ್ನು ನಿರ್ಮಾಣ ಮಾಡಿಕೊಂಡಾಗ ಕಾಲದ ಜೊತೆಗಿನ ಅನುಭವದಲ್ಲಿ ಸೋಲು ಗೆಲುವುಗಳ ಪರಿಕಲ್ಪನೆಗಳೇ ಮಾಯವಾಗುತ್ತವೆ. ಈ ರೀತಿಯ ಸೋಲು-ಗೆಲುವುಗಳಿಂದ ಬಾಧಿತವಾಗದೆ ಉಲ್ಲಾಸವನ್ನು ಉಳಿಸಿಕೊಳ್ಳುವುದು ನಿಜಕ್ಕೂ ದೊಡ್ಡ ಆಧ್ಯಾತ್ಮಿಕ ನಿಲುವೇ. ಆದರೆ ಜೀವನದ ಹೋರಾಟದಿಂದ ವಿಮುಖವಾದ ನಿಲುವಲ್ಲ ಇದು. ಇದಕ್ಕೆ ಸಾಕ್ಷಿ ಕವನದಲ್ಲಿ ಸೋತವರ ಪರವಾಗಿರುವ ಮಾನವೀಯ ದನಿ. ಹೀಗೆ, ಕಾಲವನ್ನು ಕುರಿತ ಈ ಕವನದಲ್ಲಿ ಕಣವಿಯವರ ಕಾವ್ಯ ವ್ಯಕ್ತಿತ್ವದ ಮುಖ್ಯ ಮೌಲ್ಯಗಳು ಪರಿಣಾಮಕಾರಿಯಾಗಿ ಮೂಡಿವೆ.

ಕಾಲದಂಥ ಮೂಲಭೂತ ಅನುಭವಕ್ಕೆ ಎದುರಾಗುವಾಗ ಯಾವ ನಿಗೂಢ ಆಧ್ಯಾತ್ಮಿಕ ವ್ಯವಸ್ಥೆಯನ್ನೂ ಆಶ್ರಯಿಸದೆ, ವಸ್ತುನಿಷ್ಠ ಕಾಲಕ್ಕೆ ಪ್ರತಿಸ್ಪಂದಿಸುವಾಗ ಜೀವ ಚೈತನ್ಯವನ್ನು ಒರೆಸಿ ಹಾಕುವ ಭಯಕ್ಕೆ ಆಸ್ಪದ ಕೊಡದೆ ತಮ್ಮ ಮಾರ್ದವತೆ, ಲಾಲಿತ್ಯ, ಭಾವಗೀತಾತ್ಮಕತೆಯನ್ನು ಉಳಿಸಿಕೊಂಡದ್ದು ಕಣವಿಯರ ಸೃಜನಶೀಲತೆ ಪಕ್ವಗೊಂಡಿರುವ ಕ್ರಮವನ್ನು ಸೂಚಿಸುತ್ತದೆ. ಜೀವನದ ಸಮಸ್ತ ಸವಾಲುಗಳಿಗೆ ಪ್ರತಿಸ್ಪಂದಿಸುತ್ತಲೇ ತಮ್ಮ ಸೃಜನಶೀಲತೆಯನ್ನು ಉಳಿಸಿಕೊಳ್ಳಬೇಕಾದ ಭಾರತದ ಈಗಿನ ಚಾರಿತ್ರಿಕ ಸಂದರ್ಭದಲ್ಲಿ ಕಣವಿಯರ ಕಾವ್ಯಮಾರ್ಗ ಉದಾರವಾದಿ ಮಾನವತಾ ಧೋರಣೆಯನ್ನು ಹೊಂದಿಯೂ ಅರ್ಥಪೂರ್ಣ ಕಾವ್ಯ ರಚಿಸಬಲ್ಲ ಸಾಧ್ಯತೆಯನ್ನು ಇದು ತೋರಿಸುತ್ತದೆ. ಸಾಂಪ್ರದಾಯಿಕತೆ ಮತ್ತು ಪ್ರಗತಿಪರತೆ ಎರಡೂ ಆಕ್ರಮಣಶೀಲ ಪ್ರವೃತ್ತಿಯ ಮೂಲಕವೇ ತಮ್ಮ ಒಳದ್ರವ್ಯವನ್ನು ಕಾಪಾಡಿಕೊಳ್ಳುತ್ತಿರುವ ಈ ಹೊತ್ತಿನಲ್ಲಿ ಈ ರೀತಿಯ ಲಿಬರಲ್ ಕಾವ್ಯ ನಿಜಕ್ಕೂ ಕುತೂಹಲಕಾರಿಯಾದದ್ದಾಗಿದೆ. ಏಕೆಂದರೆ, ಮೇಲಿನೆರಡೂ ಕಾವ್ಯ ಮಾರ್ಗಗಳಲ್ಲಿ ತಮ್ಮೊಳಗೇ ಸೇರಿಸಿಕೊಳ್ಳಲಾಗದೆ ಹೋದ ಅನೇಕ ಅರ್ಥಪೂರ್ಣ ಅಂಶಗಳನ್ನು ನಾವು ಇಲ್ಲಿ ಕಾಣಲು ಸಾಧ್ಯವಿದೆ.

ಡಿ. ಆರ್. ನಾಗರಾಜ

## ೩

'ಕಾಲ ನಿಲ್ಲುವುದಿಲ್ಲ' ಎಂಬುದು ದಿನ ಬಳಕೆಯ ಅನುಭವದ ಮಾತು. ಕಾಲ ಮತ್ತು ಚಲನೆಗಳು ಅನ್ಯೋನ್ಯ ಸಂಬಂಧ. (ಅಚಲವಾದುದು ಮಾತ್ರ ಕಾಲಾತೀತವಾಗುವುದು ಸಾಧ್ಯ). ಕಾಲದ ಚಲನೆಯನ್ನು ಎರಡು ಬಗೆಗಳಲ್ಲೂ ಅಳತೆ ಮಾಡಬಹುದು. ರೇಖಾತ್ಮಕವಾಗಿ (linear) ಮತ್ತು ವೃತ್ತಾಕಾರ (circular) ವಾಗಿ. ಒಂದು ವಸ್ತುವು ಇಷ್ಟು ದೂರ ಚಲಿಸಲು ಇಂತಿಷ್ಟು ಕಾಲ

ತೆಗೆದುಕೊಳ್ಳುತ್ತದೆಯೆನ್ನಬಹುದು. ಅಥವಾ ಇಂತಿಷ್ಟು ಸುತ್ತು ಹಾಕಿದರೆ ಇಷ್ಟು ಕಾಲವಾಯಿತು ಎನ್ನಬಹುದು- ಗಡಿಯಾರದ ಮುಳ್ಳುಗಳು ಸೆಕೆಂಡು, ನಿಮಿಷ, ಗಂಟೆಗಳನ್ನೂ ತೋರಿಸುವ ಹಾಗೆ, ಅಂತೂ ಕಾಲ ಮತ್ತು ಚಲನೆಗಳು ಒಂದನ್ನು ಬಿಟ್ಟು ಮತ್ತೊಂದಿಲ್ಲ.

ಹಗಲು ರಾತ್ರಿಗಳ ಆವರ್ತನದಿಂದ ಮಾತ್ರವಲ್ಲದೆ ಶಿಶಿರ ವಸಂತಾದಿ ಋತು ಪರಿವರ್ತನೆಯಿಂದಾಗಿ ಜೀವ ಜಗತ್ತಿನ ಮೇಲೆ ಉಂಟಾಗುವ ಪರಿಣಾಮಗಳ ರೂಪದಲ್ಲಿ ಕಾಲ ಚಲನೆಯನ್ನು ಗುರುತಿಸಲಾಗುತ್ತದೆ.

ಕಾಲ ಚಲನೆಯನ್ನು ಸ್ಥೂಲವಾಗಿ, ಸೂಕ್ಷ್ಮವಾಗಿ, ಸೂಕ್ಷ್ಮಾತಿಸೂಕ್ಷ್ಮವಾಗಿ ಗುರುತಿಸುತ್ತಿರುವಾಗಲೆ, ಚಲಿಸುವ ಕಾಲವನ್ನು ಹಿಡಿದು ನಿಲ್ಲಿಸುವ ಆಸೆಯೂ ಮನುಷ್ಯನಲ್ಲಿ ಬೆಳೆದುಬಂದಿದೆ. ಈ ಹೆಬ್ಬಯಕೆಗೆ ಕಡೆಯ ಪಕ್ಷ ಪುರಾಣಯುಗಗಳಷ್ಟು ಪ್ರಾಚೀನತೆಯಿದೆ.

ಕಣವಿಯವರ ಕವಿತೆಯು ಕಾಲದ ಚಲನೆಯನ್ನು ಮಾತ್ರವಲ್ಲದೆ ಅದರ ಪರಿಣಾಮಗಳನ್ನು ಕಾಲದ ಬಗೆಗಿನ ಮನುಷ್ಯ ಭಾವನೆಗಳನ್ನು ವೈಯಕ್ತಿಕ ನೆಲೆಯಲ್ಲಿ ಹಾಗೂ ಸಮಷ್ಟಿಯ ನೆಲೆಯಲ್ಲಿ ಅಭಿವ್ಯಕ್ತಿಸುತ್ತದೆ. ಅಲ್ಲದೆ, ಕವಿತೆಯು ಮುಂದುವರಿದಂತೆ ಅದು ಸಾಹಿತ್ಯ ಪರವಾದ ಅರ್ಥವನ್ನೂ ಪಡೆದುಕೊಳ್ಳುತ್ತದೆ.

ಕವಿತೆ ಆರಂಭವಾಗುವುದು -

**ಕಾಲನೆಂಬುವ ಪ್ರಾಣಿ**
**ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ;**
**ಎಲ್ಲೋ ತಲೆ ಮರೆಸಿಕೊಂಡು ಓಡಾಡುತ್ತಿದ್ದಾನೆ**

ಎಂಬ ಸಿಟ್ಟಿನ ಮಾತುಗಳಿಂದ. ಅವನು (ಅದು) ಆಕಾಶದಲ್ಲಿ ಮಿಂಚಿ, ಭೂಕಂಪದಲ್ಲಿ ನಡುಗಿ, ಜ್ವಾಲಾಮುಖಿಯೊಳಗೆ ಸಿಡಿದು, ನದಿನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು ಮನುಷ್ಯರೆದೆಯಲ್ಲಿ ತುಡಿವ ತಬಲವಾಗಿದ್ದಾನೆ ಹಿಡಿಯಿರೋ ಅವನ... ಇದು ಬೇಡಿಕೆಯಾಗಬಹುದು. ಅಪ್ಪಣೆಯಾಗಬಹುದು. ವಿಡಂಬನೆಯೂ ಆಗಬಹುದು. ಏಕೆಂದರೆ

**ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು**
**ಹೆಣಗಿದ್ದೇವೆ**

ಎಂದು ಆರಂಭವಾದ ಎರಡನೆ ಪಾದವು ಕಾಲವನ್ನು ಹಿಡಿದು ನಿಲ್ಲಿಸುವ ವ್ಯರ್ಥ ಪ್ರಯತ್ನಗಳನ್ನು ವರ್ಣಿಸುತ್ತಲೇ,

**ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ,**
**ಯಾರಿಗೂ ಅವಸರವಿಲ್ಲ ತಾನೆ?**

ಎಂಬ ಸಾಂತ್ವನದಲ್ಲಿ ಕೊನೆಗೊಳ್ಳುತ್ತದೆ.

**ಈ ಕುದುರೆಯೇರಿ ಲಗಾಮು ಬಿಗಿಹಿಡಿದು**
**ಸವಾರಿ ಮಾಡುವುದಷ್ಟು ಸುಲಭವಲ್ಲ**

ಎಂಬ ಸೋಲಿನ ನಡುವೆಯೂ ಕೆಲವು ಆಶಾಕಿರಣಗಳನ್ನು ಗುರುತಿಸಲಾಗಿದೆ.

**ಸೆಕೆಂಡು, ಮಿನಿಟು, ತಾಸುಗಳ ಹಾಸುಹೊಕ್ಕಿನಲಿ**
**ಅಲ್ಲೊಂದು ಇಲ್ಲೊಂದು ಬಣ್ಣದ ನೂಲು**
**ಚೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು**

'ಡೌಲು' ಶಬ್ದವು ಆಡಂಬರ ಸೂಚಕವಾಗಿದ್ದ ಹಾಗೆಯೇ ಸಂತೋಷ ಸಂಭ್ರಮಗಳನ್ನೂ ಸೂಚಿಸಬಹುದು. ಬೆಳಕು ಕತ್ತಲೆಗಳಲ್ಲಿ ಮುಳುಗೇಳುತ್ತ ಯಾವಾಗಲಾದರೊಮ್ಮೆ ನಿದ್ದೆ ಹರಿದು ಎಚ್ಚರಗೊಂಡರೆ ಭೂಮಿಗೂ ಆಕಾಶಕ್ಕೂ (ವಾಸ್ತವಕ್ಕೂ - ಕಲ್ಪನೆಗೂ) ಇರುವ ಅಂತರ ತಿಳಿಯುತ್ತದೆ.

ಕವಿತೆಯ ಎರಡನೆಯ ಭಾಗ ಆರಂಭವಾಗುವುದು ಕಾಲ ಚಲನೆ ಮತ್ತು ಅದರ ಪರಿಣಾಮಗಳ ಪ್ರಸ್ತಾಪದಿಂದ. ಸೂರ್ಯ ಚಂದ್ರರದು ನಮಗೆ ಸುಪರಿಚಿತವಾದ ಮೋರೆಗಳು; ಅವರಿಗೂ ನಮ್ಮ ಹಾಗೆ ನಿರಂತರ ಚಲನೆಯೊಂದೆ ಕೆಲಸ. ಅವರ ಕರ್ತವ್ಯಪಾಲನೆಯಿಂದಾಗಿ ಇಹಲೋಕಕ್ಕೂ ಬೆಳಕಿನ ತೆರೆ ಹಾಯುತ್ತದೆ. ನಿರಂತರ ಕಾಲ ಚಲನೆಯ ನಡುವೆಯೂ 'ಅಚರ' 'ಅಚಲ' ವಸ್ತುಗಳಿವೆ; ಅವು ಜೀವ ಜಗತ್ತಿಗೆ ಆಲಂಬನೆಯಾಗಿವೆ. ವೃಕ್ಷಗಳು ನಿಂತಲ್ಲೇ ಬೇರುಬಿಟ್ಟು ಹಸಿರು ಸಂಸಾರವನ್ನು ಹರಡಿಕೊಂಡಿವೆ. ಆರು ಋತುಗಳು ಬಂದು ಇವುಗಳಿಗೆ ಆರೈಕೆ ಮಾಡುತ್ತವೆ-ಯಾವುದೋ ಹಾರೈಕೆ ಎದೆಯೊಳಿಟ್ಟು! (ಮರಗಳ ಮೇಲೆ ಬೀಡುಬಿಟ್ಟ ಹಕ್ಕಿಗಳ) ಮೊಟ್ಟೆಯೊಡೆದು, ರೆಕ್ಕೆ ಬಲಿತಾಗ ಗೂಡು ಬಿಟ್ಟು ಹಾರುತ್ತವೆ. ದೂರದಲ್ಲಿ ಸಾಲಾಗಿ ನಿಂತ ಪರ್ವತ ಶಿಖರಗಳಿವೆ; ಗೋಲಗಳ ಭಾರಕ್ಕೆ ಸೋತು ಆಕಾಶ ತಲೆ ಬಾಗಿಲ್ಲ. ಗಾಳಿ ಮೂಲೆ ಹಿಡಿದು ತೂಕಡಿಸಿಲ್ಲ. ಅಣೆಕಟ್ಟೆಗಳನ್ನು ಕಟ್ಟಿ ಹರಿವ ನೀರಿಗೆ ತಡೆ ಹಾಕಿದ್ದರೂ ಆಳದಲ್ಲಿ ಅಂತರ್ಜಲವು ಅನಿರ್ಬಂಧಿತವಾಗಿದೆ.

ಮುಂದಿನ ಸಾಲುಗಳಲ್ಲಿ ಸಾರಿಗೆ ವ್ಯವಸ್ಥೆಯ ಪ್ರಗತಿಯನ್ನೂ ಪ್ರಸ್ತಾಪಿಸಲಾಗಿದೆ. ಎತ್ತಿನ ಬಂಡಿ, ಬಸ್ಸು, ಕಾರು, ಹಡಗುಗಳಲ್ಲಿ ಸಾಗಿ ಬಂದು, ವಿಮಾನದಲ್ಲಿ ಹಾರಿ, ಈಗೀಗ ಆಕಾಶ ಕಾಯಗಳ ಮೇಲೂ ದಾಳಿಯಿಟ್ಟಿದ್ದಾನೆ ಮನುಷ್ಯ. ಈ ಎಲ್ಲ ಸಾಧನೆಗಳಿಂದಾಗಿ, ಮುಂಜಾವದ ಕೋಳಿ ಕೂಗಿದೊಡನೆ, ಮೈಕಿನಲ್ಲಿ ಧ್ವನಿವರ್ಧಿಸಿ, ಬೆಳ್ಳಂಬೆಳಕಾಯಿತೆಂದು ಭ್ರಮಿಸಿರುವುದೂ ಉಂಟು. ಇನ್ನು ಮುಂದಿನ ಸಾಲುಗಳಲ್ಲಿ ಕಾಲಗತಿಯೊಡನೆ ಸಹಜವಾಗಿ ಸಂಭವಿಸುವ ಹೊಸ ಮತ್ತು ಹಳೆಯ ತಲೆಮಾರುಗಳ ಸಂಘರ್ಷವನ್ನು ವಿಶಿಷ್ಟ ರೀತಿಯಲ್ಲಿ ಚಿತ್ರಿಸಲಾಗಿದೆ-

ಹೊಸತಾಗಿ ಹೂಡಿದ ಪ್ರಾಯದ ಹೋರಿ ಮುಸುಗುಡುತ್ತ, ತನ್ನ ಸಮಕ್ಕೆ ಬಂಡಿಯನ್ನೆಳೆಯಲಾರದ ಸಾಧು ಎತ್ತನ್ನೂ ಅಡ್ಡಾದಿಡ್ಡಿ ಜಗ್ಗುತ್ತಿದೆ. ಹೊಸ ಕಾಲದ ತರುಣರು ಅಜ್ಜಂದಿರ ಮುಖಕ್ಕೆ ಮಂಗಳಾರತಿ ಮಾಡಿ ಕೈಲಿ ಗಂಟೆ ಹಿಡಿದಿದ್ದಾರೆ. ನೈವೇದ್ಯಕ್ಕೆ ಇನ್ನೂ ಅಡಿಗೆ

ಸಿದ್ಧವಾಗದಿದ್ದರೂ ಆಗಲೆ ಪ್ರಸಾದ ಹಂಚಿದ್ದಾರೆ. ಎದುರಿಗಿದ್ದುದೆಲ್ಲ ಅದಲು ಬದಲು ಕಂಚೀಬದಲು; ಇವರ ಬಿಟ್ಟು ಅವರಾರು ಎಂದು ಹುಡುಕುವ ಕಣ್ಣಾಮುಚ್ಚಾಲೆಯಾಟ ನಡೆಯುತ್ತಿದೆ.

ಈಗ ಕವಿತೆಯ ಮೂರನೆ ಭಾಗಕ್ಕೆ ಬರುತ್ತೇವೆ :

ಹೌದು; ಹೊಸತು ಬಿಸಿಬಿಸಿಯಾದುದೆಂದರೆ ಎಲ್ಲರಿಗೂ ಇಷ್ಟ. ಮುಂಜಾವದಡಿಗೆ ಸಂಜೆಗಾಗಲೆ ಹಳಸು; ಹಳಸಿದನ್ನವ ನಾಯಿ ಕೂಡ ಮೂಸುವುದಿಲ್ಲ. ಆದ್ದರಿಂದ ಅದೇ ಅಕ್ಕಿ, ಜೋಳ, ಗೋಧಿ ಮೊದಲಾದ ಸಾಮಗ್ರಿಗಳಿಗೆ ತಕ್ಕ ಪ್ರಮಾಣದಲ್ಲಿ ಉಪ್ಪು, ಕಾರ, ಹುಳಿ, ಸಿಹಿಗಳನ್ನೂ ಬೆರೆಸಿ ಗಮಗಮಿಸುವ ಪಕ್ವಾನ್ನವನ್ನೂ ತಯಾರಿಸಬೇಕು. 'ಬದಲಾವಣೆಯೆ ಬಾಳಿನೊಗ್ಗರಣೆ' ನಂಚಿಕೊಳ್ಳಲು ಉಪ್ಪಿನಕಾಯಿಯಿದ್ದರೆ ಊಟ ಮತ್ತಷ್ಟು ರುಚಿ! ಆದರೆ ಒಗ್ಗರಣೆಯಾಗಲಿ, ಉಪ್ಪಿನಕಾಯಾಗಲಿ ಅತಿಯಾಗಬಾರದು. 'ಮಿತಿಮೀರಿದರೆ ಎಂಥ ಸುಗ್ರಾಸವೂ ಅಜೀರ್ಣ'. ಕುದಿಯುವ, ಮಿದಿಯುವ, ಹೊಂದಿ ಹದಗೊಳ್ಳುವ ದಾರಿ ಎಲ್ಲರಿಗೂ ತೆರೆದಿದೆ. ಹೊಂದಾಣಿಕೆಯಿಂದ ಶ್ರುತಿಗೂಡಿದಾಗ 'ಗಾಳಿಯ ಬೆನ್ನ ಮೇಲೆ ಮೋಡದ ಸವಾರಿ' ಮಾಡಿದಷ್ಟು ಸುಲಲಿತವಾಗಿ ಹಾಡಿನ ಲಹರಿ ಹೊಮ್ಮುತ್ತದೆ.

ಬದುಕಿನ ಉಬ್ಬರವಿಳಿತಗಳನ್ನನುಭವಿಸುತ್ತ ಕಾಲಗತಿಯಲ್ಲಿ ಸಾಗುವಾಗ ಶುಭದ ದಿನ ನಿರೀಕ್ಷಿಸುವ ಸಂಭ್ರಮವನ್ನೂ ಕವಿ ವಿಜೃಂಭಿಸುತ್ತಾರೆ. ಗುಡುಗಿರಲಿ, ಮಿಂಚಿರಲಿ ಯಾರು ತಾನೆ ಮುಂಗಾರಿಗಾಗಿ ಕಾತರಿಸಿಲ್ಲ? ಬೇಸಗೆಯಲ್ಲಿ ಚಿಗುರ ಚಿಣ್ಣರನ್ನೂ ಎತ್ತಿ ಆಡಿಸಿಲ್ಲ? ಥಂಡಿಯ ಮುಸುಕಿನಲ್ಲಿ ಬೆಚ್ಚನೆ ಕನಸುಗಳನ್ನು ಯಾರು ಕಂಡಿಲ್ಲ? ಬೆಂಗಾಡಿನಲ್ಲಿ ತುಂಗಭದ್ರೆಯು ತುಂಬಿ ಹರಿದಿಲ್ಲವೆ ? - ಈ ಪ್ರಶ್ನೆಗಳಲ್ಲಿಯೆ ಶುಭ ನಿರೀಕ್ಷೆಯ ಇತ್ಯಾತ್ಮಕ ಅರ್ಥಗಳು (Positive statement) ಅಡಗಿವೆಯೆಂಬುದನ್ನು ವಿವರಿಸಬೇಕಾಗಿಲ್ಲ. ಕಾಲಚಲನೆಯನ್ನು ಸಾಮಾಜಿಕ ನೆಲೆಯಲ್ಲಿ, ವೈಯಕ್ತಿಕ ನೆಲೆಯಲ್ಲಿ ವರ್ಣಿಸುತ್ತಿರುವಾಗಲೆ ಮಾತುಗಳು ಸಾಹಿತ್ಯ ಪರವಾದ ಅರ್ಥವನ್ನೂ ಪಡೆದುಕೊಳ್ಳುವುದು ಈಗಾಗಲೇ ಅರಿವಿಗೆ ಬಂದಿದೆ. ಈ ಅರ್ಥವು ಮತ್ತಷ್ಟು ನಿರ್ದಿಷ್ಟವಾಗುವುದು ಮುಂದಿನ ಸಾಲುಗಳಲ್ಲಿ -

**ಕಂದವೃತ್ತಗಳ ಝುರಿ ತೊರೆಯ ನಡುವೆ**
**ಹಸುರಿಗೆ ಗದ್ಯದುದ್ಯಾನ;**
**ಹದಿನೆಂಟು ಬಣ್ಣನೆಯ ಹುಲ್ಲುಗದ್ದೆಯ ನಡುವೆ**
**ಚಂಪುವಿನ ತುಂಪುಕೊಳ**

ಇವುಗಳ ಬದಿಯಲ್ಲೆ ನಿಬ್ಬಣ ಹೊರಟ ಕಮಾನು ಬಂಡಿಯಂತೆ ಸಾಗುವ ಹಾಡುಗಬ್ಬಗಳು; ಚಂದದ ವಧೂವರರ ಜೋಡಿಯಂತೆ ತೋರುವ 'ಭಾವ-ಗೀತಗಳು; ಈಗೀಗ 'ನವಪಾಕ' (ನವ್ಯಪಾಕ) ತಯಾರಿಸಲು ಒಲೆ ಹೂಡಿದ್ದಾಗಿದೆ. ಇನ್ನಷ್ಟೆ ಬಿಸಿ ತಾಗಿ, ನೂರು ಅನುಭವಗಳು ಕುದ್ದು ಪಕ್ವವಾಗಬೇಕಾಗಿದೆ. ಹೀಗೆ ಸುದೀರ್ಘ ಕಾಲದ ಕನ್ನಡ ಸಾಹಿತ್ಯದ ರುಚಿ-ಅಭಿರುಚಿಗಳಲ್ಲೂ

ಬದಲಾವಣೆಗಳಾಗಿವೆ. ನಮನಮಗೆ ಇಷ್ಟವಾದ ಅಡಿಗೆ ಮಾಡಿ ಉಂಡಿದ್ದೇವೆ; ಮಾಡಿದ ಅಡಿಗೆಯಲ್ಲಿ ಕೆಲ ಭಾಗ 'ಜೀವನ ಸತ್ವ' ಕಡಿಮೆ ಇರಬಹುದು, 'ಇದ್ದ ಶಕ್ತಿಯಲಿ ತುಸುದೂರ ನಡೆದಿದ್ದೇವೆ'. ಒಬ್ಬೊಬ್ಬರಿಗೆ ಒಂದೊಂದು ಬಗೆಯ ನಡಿಗೆ ಅಭ್ಯಾಸವಾಗಿದೆ. ಮುಖ್ಯ ಬೇಕಾದದ್ದು ಜೀವಂತಗತಿ; ಅಲ್ಲದೆ ಆಗಾಗ ಹೊಸ ನೆತ್ತರಿನ ಕೊಡುಗೆಯಾಗುತ್ತಿರಬೇಕು.

ಕವಿತೆಯು ತನ್ನ ಕೊನೆ ಹೆಜ್ಜೆಯಿಡುವುದು 'ಕಾಲ ನಿಲ್ಲುವುದಿಲ್ಲ' ಎಂಬ ಶೀರ್ಷಿಕೆಯ ಪುನರಾವರ್ತನೆಯಾಗಿ 'ನಾವು ಕೂಡುವುದಿಲ್ಲ' ಎಂಬಲ್ಲಿಂದ ಮುಂದಿನ ಮಾತುಗಳು ಪ್ರಾಯಶಃ 'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು' ತಾಕಲಾಟವನ್ನು ಒಳಗೊಂಡಿರುವಂತೆ ತೋರುತ್ತದೆ. ನಾವು, ಎಂದರೆ ಭಿನ್ನಮಾರ್ಗಗಳಲ್ಲಿ ಬರೆಯುತ್ತಿರುವ ಕವಿಗಳು ಒಂದೇ ದಾರಿಗೆ ಬರುವಂತಿಲ್ಲ. ಇನ್ನು 'ಮಳೆ ಬಂದರೂ ಕಾಮನಬಿಲ್ಲು ಮೂಡುವುದೆಂಬ ನಿಯಮವಿಲ್ಲ' ಎಂಬ ನೆಲೆಗೆ, ತಮ್ಮ ಕಾವ್ಯದಲ್ಲಿ (ನವ್ಯದ) ವರ್ಣ ಚಮತ್ಕಾರ ಬರಲಾರದೆಂಬ ಸೂಚನೆಯಿರಬಹುದು. ಕಣವಿಯವರ ಕವಿತೆಗಳಲ್ಲಿ ನವ್ಯ ಸಾಹಿತ್ಯದಲ್ಲಿ ವ್ಯಾಪಕವಾಗಿರುವ 'ಕಾಮ'ದ ಪ್ರಸ್ತಾಪವು ಇಲ್ಲವೇ ಇಲ್ಲವೆನ್ನುವಷ್ಟು ಅಪರೂಪವೆನಿಸುವುದರಿಂದ ಇಲ್ಲಿ ಕಾಮ+ಬಿಲ್ಲು ಎಂದು ಬಿಡಿಸಿ, ಕಾಮದ ಮೇಲೆ ಒತ್ತು ಕೊಡಬೇಕಾದ ಅಗತ್ಯವಿಲ್ಲವೆನಿಸುತ್ತದೆ. ಏನಿದ್ದರೂ ಈ ಪಂಕ್ತಿಯ ಅರ್ಥ ನನ್ನ ಮಟ್ಟಿಗೆ ಅಸ್ಫುಟವಾಗಿಯೆ ಉಳಿದಿದೆ. ಮುಂದಿನ ಸಾಲುಗಳಿಗೆ ಹೋಗೋಣ: ಹಗಲಿರುಳು ಸೋಲು ಗೆಲುವಿನ ಗಾಲಿಗಳ ಮೇಲೆ ಸಾಗುತ್ತಿರುವಾಗ ಬಂಡಿಯ ಕೀಲು ಭದ್ರವಾಗಿರುವಂತೆ ನೋಡಿಕೊಳ್ಳುವುದು ಅಗತ್ಯ. ಕವಿಕರ್ಮವನ್ನು ಒಂದು ಸ್ಪರ್ಧೆಯೆಂದು ಪರಿಗಣಿಸುವುದಾದರೆ, ಪಂದ್ಯದಲ್ಲಿ ಹೆಸರು ನೊಂದಾಯಿಸುವ, ಭಾಗವಹಿಸುವ ಅವಕಾಶ ಎಲ್ಲರಿಗೂ ಇದೆ. ಸ್ಪರ್ಧೆಯಲ್ಲಿ ಭಾಗವಹಿಸದೆ ನಿಂತು ನೋಡುವವರಿಗೆ ಸಂತೋಷಪಡುವ ಭಾಗ್ಯವಿದೆ. ಗೆದ್ದವರಿಗೆ ಬೆಳ್ಳಿಯ ಫಲಕ; ಸೋತವರಿಗೆ ಗೆದ್ದವರನ್ನು ಅಳೆಯುವ (ವಿಮರ್ಶೆ ಮಾಡುವ?) ಅವಕಾಶ; ಅಲ್ಲದೆ ಜಗದ ಎಲ್ಲ ಅನುಭವದ ಪಾಲು. ನಿಜ: ಮಾನ್ಯ ಡಿ.ವಿ. ಗುಂಡಪ್ಪನವರು ಹೇಳುತ್ತಾರೆ-

"ಜಟ್ಟಿ ಕಾಳಗದಿ ಗೆಲ್ಲದೊಡೆ ಗರಡಿಯ ಸಾಮು
ಪಟ್ಟು ವರಸೆಗಳೆಲ್ಲ ವಿಫಲವೆನ್ನುವೆಯೇಂ?
ಮುಟ್ಟಿ ನೋಡವನ ಮೈಕಟ್ಟು ಕಬ್ಬಿಣಗಟ್ಟಿ
ಗಟ್ಟಿತನ ಗರಡಿ ಫಲ ಮಂಕುತಿಮ್ಮ"

ನವ್ಯ ಕಾವ್ಯದ ಜೊತೆಗೆ ಕಣವಿಯವರ ಸಂಬಂಧವು ಅನ್ಯೋನ್ಯವಾದುದೇನೂ ಆಗಿರಲಿಲ್ಲ. ಕಾಲ ನಿಲ್ಲುವುದಿಲ್ಲ ಕವಿತೆಯಲ್ಲಿ ಬರುವ 'ನಾವು ಕೂಡುವುದಿಲ್ಲ' ಎಂಬ ಮಾತು ಈ ಅಭಿಪ್ರಾಯವನ್ನೂ ಸೂಚಿಸುತ್ತಿರಬಹುದೆಂದು ಆಗಲೆ ಹೇಳಿದ್ದಾಗಿದೆ. ಆದರೆ ನವ್ಯಕಾವ್ಯದ ಸವಾಲನ್ನು ಕಣವಿಯವರು ತಮ್ಮದೇ ಆದ ರೀತಿಯಲ್ಲಿ ಸ್ವೀಕರಿಸಿದರು. ತಮ್ಮ ಕಾವ್ಯದ ಮೂಲ ಸತ್ವಗಳಾದ ಮಾರ್ದವತೆ, ಮಾನವೀಯತೆಗಳನ್ನು ಬಿಟ್ಟುಕೊಡಲಿಲ್ಲ ನಿದರ್ಶನಕ್ಕೆ-

ಕುದಿಯುವದು ಮಿದಿಯುವುದು ಹೊಂದಿ
ಹದಗೊಳ್ಳುವುದು ಬದುಕಿನಲಿ ಎಲ್ಲರಿಗೂ ತೆರೆದ ದಾರಿ
ಶ್ರುತಿಗೂಡಿದಾಗ ಹೊಮ್ಮುವುದು ಹಾಡಿನ ಲಹರಿ
ಗಾಳಿಯ ಬೆನ್ನ ಮೇಲೆ ಮೋಡದ ಸವಾರಿ-

ಎಂಬ ಸಾಲುಗಳನ್ನು ನೋಡಬಹುದು. ಕಣವಿಯವರ ಜೀವನ ದೃಷ್ಟಿ ಆಶಾವಾದ-

ಗುಡುಗಿರಲಿ ಮಿಂಚಿರಲಿ, ಮುಂಗಾರಿಗಾರು ಕಾತರಿಸಿಲ್ಲ?
ಉರಿವ ಬೇಸಗೆ ಚಿಗುರು ಚಣ್ಣರನು ಎತ್ತಿ ಆಡಿಸಿಲ್ಲ?
ಥಂಡಿಯ ಮುಸುಗಿನಲ್ಲು ಬೆಚ್ಚಗೆ ಕನಸು ಕಂಡಿಲ್ಲ?
ಬೆಂಗಾಡಿನಂಗಾಂಗದಲ್ಲು ತುಂಗಭದ್ರೆಯು ತುಂಬಿ ಹರಿದಿಲ್ಲ?

ಎಂದು ಪ್ರಶ್ನಿಸುತ್ತಾರೆ ಕವಿ.

ಮಾಡಿ ಉಂಡಿದ್ದೇವೆ ನಮನಮಗೆ ಸೇರಿದ ಅಡಿಗೆ
ಇರಬಹುದು ಇದರಲ್ಲಿ ಕೆಲ ಭಾಗ ಜೀವನಸತ್ವ ಕಡಿಮೆ

ಕಣವಿಯವರ ಕವಿತೆಗಳಲ್ಲಿ 'ಜೀವಸತ್ವವಿಲ್ಲ'ವೆಂದು ಆಕ್ಷೇಪಿಸಿದ ನವ್ಯ ವಿಮರ್ಶಕರಿಗೆ ಕೊಟ್ಟ ಉತ್ತರದಂತಿದೆ ಮೇಲಿನ ಮಾತುಗಳು.

ನವ್ಯಕಾವ್ಯದಲ್ಲಿ ಸರ್ವೇಸಾಮಾನ್ಯವಾಗಿ ಗೋಚರಿಸುವ ನಿಗೂಢ ಕಳವಳ. ಶೂನ್ಯತಾ ಭಾವಗಳು ಕಣವಿಯವರಲ್ಲಿ ಬಹು ಅಪರೂಪ. ಅಂತೆಯೆ ಅವರು-

ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ,
ಯಾರಿಗೂ ಅವಸರವಿಲ್ಲ ತಾನೆ?

ಎಂಬ ಸಾಂತ್ವನದ ಮಾತಾಡುತ್ತಾರೆ, ಪ್ರಶಾಂತಚಿತ್ತವನ್ನೂ ಪ್ರಕಟಿಸುತ್ತಾರೆ. ವಿವರವಾದ ವರ್ಣನೆಗಳಿಂದ ಹೇಗೋ ಹಾಗೆ 'ಅನುಕ್ತಿ'ಯಿಂದಲೂ ಉದ್ದೇಶಿತ ಅರ್ಥವನ್ನು ಸಾಧಿಸುವ ಚಾತುರ್ಯ ಈ ಕವಿಯಲ್ಲಿದೆ.

ಆರು ಋತುಗಳು ಬಂದು ಆರೈಕೆ ಮಾಡುವವು
ಯಾವುದೋ ಹಾರೈಕೆ ಎದೆಯೊಳಿಟ್ಟು;
ತತ್ತಿಯೊಡೆದು ರೆಕ್ಕೆ ಬಲಿತಾಗ ಹಾರುವುದು ಗೂಡು ಬಿಟ್ಟು

ಮೇಲಿನ ಮೂರು ಸಾಲುಗಳಲ್ಲಿ ಎಲ್ಲಿಯೂ 'ಮರಗಳ ಮೇಲೆ ಬೀಡುಬಿಟ್ಟ ಹಕ್ಕಿಗಳು' ಎಂಬ ಮಾತು ಬಂದಿಲ್ಲ; 'ಮರಗಳಿಂದಲೇ ತತ್ತಿಯೊಡೆದು ರೆಕ್ಕೆ ಬಲಿತು ಹಾರುವುವು' ಎನ್ನುವಂತೆ ಕವಿ ವರ್ಣಿಸಿದ್ದಾರೆ. ಇದು ವಿಶೇಷ. (ಹೋಲಿಸಿ: ಗಿಡಗಂಟಿಯ ಕೊರಳೊಳಗಿಂದ ಹೊರಟಿತು ಹಕ್ಕಿಗಳ ಹಾಡು ... -ದ.ರಾ. ಬೇಂದ್ರೆ)

ನವ್ಯಕಾವ್ಯವು ತೆರೆದು ತೋರಿಸಿದ ಕಾವ್ಯ ಸಾಧ್ಯತೆಗಳಲ್ಲಿ ಕೆಲವನ್ನಾದರೂ ಕಣವಿಯವರು ತಮ್ಮ ರಚನೆಗಳಲ್ಲಿ ಅಳವಡಿಸಿಕೊಂಡರೆಂಬುದು ನಿಸ್ಸಂದೇಹ. ನವ್ಯ ಕಾವ್ಯದಿಂದ ರೂಪುಗೊಂಡ ಮುಕ್ತ ಛಂದಸ್ಸು, ಗದ್ಯಲಯ, ಆಡುಮಾತಿನ ಪ್ರಯೋಗಗಳು ವ್ಯಂಗ್ಯ, ವಿಡಂಬನೆಗಳು; ಉದ್ಧರಣ ವಾಕ್ಯಗಳು; ಆವರಣದಲ್ಲಿ ಉಪಸ್ಕಂಧಗಳು -ಇವೆಲ್ಲ ಯಥಾಶಕ್ತಿ ವ್ಯಂಜಕ ಸಾಮಗ್ರಿಗಳಾಗಿ ಬಳಕೆಯಾಗಿವೆ.

ಸಾಮಾನ್ಯವಾಗಿ ಈ ಕವಿ ಬರೆಯುವುದು ಕರ್ನಾಟಕದಾದ್ಯಂತ ವಿದ್ಯಾವಂತರು ಬಳಸುವ ಶಿಷ್ಟ ಭಾಷೆಯಲ್ಲಿ, ಅಪರೂಪವಾಗಿ ಉತ್ತರ ಕರ್ನಾಟಕದ ಆಡು ಮಾತುಗಳು 'ಕರ್ಮಣಿ ಸರದೊಳ್ ಚಂಬವಳಮಂ ಕೋದಂತೆ' ಪ್ರಯೋಗವಾಗುತ್ತವೆ. ಕೊಲ್ಲಾರಿ ಬಂಡಿ, ಹೋರೆ, ಢಾಲು ಮೊದಲಾದ ಶಬ್ದಗಳನ್ನೂ ಇಲ್ಲಿ ಗಮನಿಸಬಹುದು.

'ಕಾರ್ಯವಾಸಿ ಕತ್ತೆ ಕಾಲ್ಕಟ್ಟು' (ಹೇಗಾದರೂ ನಿನ್ನ ಕೆಲಸ ಸಾಧಿಸಿಕೊ) ಎಂಬುದು ಗಾದೆ ಮಾತು; 'ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು/ ಒದೆಸಿಕೊಂಡಿದ್ದೇವೆ' ಎಂದು ಇಲ್ಲಿ ಆ ಗಾದೆ ಮಾತು ಹೊಸ ತಿರುವು ಪಡೆದಿದೆ. 'ನಿಂತಲ್ಲೆ ಬೇರುಬಿಟ್ಟು ವೃಕ್ಷ' ಎಂಬುದರ ಜೊತೆ ಆವರ್ತದಲ್ಲಿ "ಅಗೆದು ನೋಡಲೇಬೇಕೆ" ಎಂಬ ಪ್ರಶ್ನೆ; 'ಬಾಡಿಸಿಕೊಳ್ಳಲೆಂದೆ ಉಪ್ಪಿನಕಾಯಿ' ಮತ್ತು 'ಮಿತಿ ಮೀರಿದರೆ ಸುಗ್ರಾಸವೂ ಅಜೀರ್ಣ'ಗಳ ನಡುವೆ 'ತಿನ್ನುವವನಿಗೆ ಹಪ್ಪಳ ಈಡೆ ?' ಎಂಬ ಪ್ರಶ್ನೆ ಇವೆಲ್ಲ ನವ್ಯದ ಚಮತ್ಕಾರಗಳು.

ನೈವೇದ್ಯಕ್ಕೆ ಪಾಕವೇ ಸಿದ್ಧವಾಗಿಲ್ಲ.

ಆಗಲೇ ಪ್ರಸಾದ ಹಂಚಿದ್ದೇವೆ - ಎಂಬಲ್ಲಿನ ವಿಡಂಬನೆ ತೀಕ್ಷ್ಣವಾಗಿದೆ.

'ಭಾಷೆಯಲ್ಲಿ ಭಾವಾಭಿನಯ' ಎಂಬುದು ನವ್ಯ ವಿಮರ್ಶಕರಿಗೆ ಬಹುಪ್ರಿಯವಾದ ಕಾವ್ಯ ತಂತ್ರ. ಪ್ರಸ್ತುತ ಕವಿತೆಯಲ್ಲಿ, 'ಹಿಡಿಯಿರೋ ಅವನ...' ಎಂಬಲ್ಲಿಂದ ಹೊರಟು ಕಡೆಗೆ 'ಅವನೆ ಎಲ್ಲ ಬಗೆಹರಿಸತ್ತಾನೆ! ಯಾರಿಗೂ ಅವಸರವಿಲ್ಲ ತಾನೆ?' ಎಂಬಲ್ಲಿಗೆ ಬರುವ ವೇಳೆಗೆ, ಕಾಲವನ್ನು ಅಟ್ಟಿಸಿಕೊಂಡು ಉಸಿರುಕಟ್ಟಿ ಓಡೋಡಿ ಬಂದು, ಆಯಾಸದಿಂದ ನಿಟ್ಟುಸಿರುಬಿಟ್ಟ, ದಣಿವಾರಿಸಿಕೊಳ್ಳುವ ಕ್ರಿಯೆಯು ತನ್ನಿಂದ ತಾನೆ ಅಭಿನೀತವಾಗುವಂತೆ ತೋರುತ್ತದೆ.

ಕಣವಿಯವರ ಈ ಕವಿತೆಯು ಮೊದಲಿನಿಂದ ಕಡೆಯವರೆಗೆ ಕಾಲ ಚಲನೆಯ ಒಂದು ಚಿತ್ರವನ್ನು ಬೆಳೆಸುತ್ತ ಹೋಗುತ್ತದೆ. ಈ ಚಿತ್ರವನ್ನು ಬಿಡಿಬಿಡಿ ಭಾಗಗಳಾಗಿ ವಿಂಗಡಿಸಿ. ಅರ್ಥವನ್ನೂ ವಿವರಿಸಬಹುದು. ಆದರೆ ಇಡೀ ಕವಿತೆಯನ್ನು ಒಂದು ಪ್ರಕ್ರಿಯೆಯಾಗಿ ನೋಡಬೇಕು. ಆಗ ಅದು ಕವಿತೆಯ ಶೀರ್ಷಿಕೆಗೆ ಮಾತ್ರ ಸೀಮಿತವಾಗಿರದೆ, ಪರಸ್ಪರ ಸಂಯೋಜನೆಗೊಂಡ ಹಲವು ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಕಾಲವನ್ನು ಕುರಿತು ಕಣವಿಯವರು ಇನ್ನೂ ಒಂದೆರಡು ಕವಿತೆಗಳನ್ನೂ ರಚಿಸಿದ್ದಾರೆ. ಇದೇ ಸಂಕಲನ (ನೆಲಮುಗಿಲು)ದಲ್ಲಿ 'ಕಾಲ ಪುರುಷನಲ್ಲಿ ಕವಿಗಳ

ಕೋರಿಕೆ' ಎಂಬ ಕವಿತೆಯೊಂದಿಗೆ ಇವುಹಳ ಜೊತೆ ಹೋಲಿಸಿ ನೋಡಿದಾಗ ಕೂಡ 'ಕಾಲ ನಿಲ್ಲುವುದಿಲ್ಲ' ಹೆಚ್ಚು ಯಶಸ್ವಿಯಾದ ಕವಿತೆಯೆನಿಸುತ್ತದೆ.

ವಸ್ತುವಿನ ಆಯ್ಕೆ, ಹಲವು ಆಯಾಮಗಳನ್ನು ಪಡೆಯುವ ಅಭಿವ್ಯಕ್ತಿ ಸಾಮರ್ಥ್ಯಗಳ ಮೂಲಕ ನವೋದಯ ಭಾವಗೀತೆಗಳಲ್ಲಿ ತಮ್ಮ ಛಾಪು ಮೂಡಿಸಿ, ನವ್ಯನವ್ಯೋತ್ತರಗಳಲ್ಲಿ ಕೃಷಿ ಮಾಡಿ ಇಂದಿಗೂ ಶ್ರೀ ಚೆನ್ನವೀರ ಕಣವಿಯವರು ನವೋದಯ ಕಾವ್ಯಪರಂಪರೆಯನ್ನು ಮುಂದುವರೆಸಿಕೊಂಡು ಬರುತ್ತಿರುವುದು ಹೆಮ್ಮೆಯ ಸಂಗತಿ. ಕಣವಿಯವರ ಕಾವ್ಯದ ಬೆಳವಣಿಗೆಯ ಒಂದು ಹಂತದ ದಾಖಲೆಯಾಗಿ ಕೂಡ 'ಕಾಲ ನಿಲ್ಲುವುದಿಲ್ಲ' ಒಂದು ಮುಖ್ಯ ಕವಿತೆಯೆಂಬುದರಲ್ಲಿ ಸಂದೇಹವಿಲ್ಲ.

**ಕೆ.ಎಲ್. ಗೋಪಾಲಕೃಷ್ಣಯ್ಯ**

## ೨೫. ಕಾಣಿಕೆ

ಎಣಿಸದಿದ್ದರು ಕಾಲ ಉರುಳುವದು, ಚಿಕ್ಕೆಗಳ
ಗಣಿಸದಿದ್ದರು ಬೆಳಕು ತುಡಿಯುವುದು. ತಂತಾನೆ
ನೆಲದಾಳದಲ್ಲಿ ಹದಗೊಂಡ ಬೀಜದ ಮೊಳಕೆ
ಮಣ್ಣ ಬಿರಿದೇಳುವುದು;ಚೈತ್ರ ವೈಶಾಖಗಳ
ಸೂತ್ರವಾಡಿಸಿದಂತೆ ಚಿಗುರುವುದು ಮೋಟುಮರ.
ಹೊಳೆಯ ದಾಟದ ಮೇಲೆ ಕೊಳೆಯ ತೊಳೆವವರಾರು?
ಈಜಿದರೆ ಈಜುವುದು ಹರಿವ ನೀರಿನ ಎದುರು;
ಮೋಜಲ್ಲ-ಸೋಜಿಗದ ಬದುಕು-ಗಾಜುಗೋಪುರ.
ಸೂಜಿಯ ಮೊನೆಗೆ ದಾರಿಬಿಡು, ದಾರವಾಡುವುದು
ಹೂವಿನ ಕಸೂತಿ; ಮಾವು ತಳಿತರೆ ಕೋಗಿಲೆಯ
ಕುಕಿಲು ಸಾರ್ಥಕ. ನೆಲಕುದುರಿ ಬಿದ್ದ ಹಣ್ಣೆಲೆಯ
ಮಣ್ಣು ಗೊಬ್ಬರಮಾಡಿ ತನ್ನೊಳಗೆ ರುಬ್ಬುವುದು;
ಹೂವು -ಹಣ್ಣೂ ಗಿಡದ ಎಡೆಬಿಡದ ಕಾಣಿಕೆ.
ಸಾವು-ನೋವೂ ನಮ್ಮ ದಿನದ ಹೊಂದಾಣಿಕೆ.

ಸುನೀತಗಳು ಶ್ರೀ ಚೆನ್ನವೀರ ಕಣವಿಯವರ ಇಷ್ಟಾರ್ಥ ಸಿದ್ಧಿಗಳು. ಅವರಂತೆ ಕನ್ನಡದಲ್ಲಿ ತಮ್ಮ ಭಾವಕ್ಕೆ ಸುನೀತಗಳನ್ನು ದಕ್ಕಿಸಿಕೊಂಡವರು ಕಡಿಮೆ. ಕಳೆದ ಆರು ದಶಕಗಳಿಂದ ಅವರ ಕಾವ್ಯ ಜೀವನದ ಅವಿಭಾಜ್ಯ ಅಂಗವಾಗಿ ಸುನೀತವು ಮುಂದುವರಿದಿದೆ, ಇದು ಅಚ್ಚರಿ ಮತ್ತು ಅಪರೂಪದ ಸಂಗತಿ. ಬೇರೆ ಭಾಷೆಯ ಕಾವ್ಯ ಛಂದಸ್ಸನ್ನು ಕನ್ನಡದ್ದೇ ಎನ್ನುವ ಹಾಗೆ ಅದರ ಮೈಮನಸ್ಸನ್ನವರು ಕಟ್ಟಿದ್ದಾರೆ. ಹಾಗೂ ಕನ್ನಡಕ್ಕೆ ಹೊಸ ಶೈಲಿಯೊಂದನ್ನು ಒದಗಿಸಿದ್ದಾರೆ. ಅನ್ಯಭಾಷೆಯೊಂದರ ಕಾವ್ಯ ಛಂದಸ್ಸನ್ನು ತರುವಾಗ ಎದುರಾಗುವ ಕಷ್ಟಗಳು ಎಂಥವೊ? ಇಂಥ ಕಷ್ಟಗಳನ್ನೆಲ್ಲ ಅರಿತು ಇದರ ಸುಖವನ್ನು ಮಾತ್ರ ಕಾಣಿಸುವ ತವಕ ಅವರ ಸುನೀತದ ಶೈಲಿಯಲ್ಲಿದೆ. ಒಂದು ಭಾಷೆಗೂ ಆ ಭಾಷೆಯಲ್ಲಿ ಹುಟ್ಟಿಕೊಂಡಿರುವ ಛಂದಸ್ಸಿಗೂ ಗಾಢವಾದ ನಂಟು ಇರುತ್ತದೆಂಬುದು ಸುಳ್ಳಲ್ಲ. ಆದರೆ ಯಾವುದೇ ಛಂದಸ್ಸು ಇನ್ನೊಂದು ಭಾಷೆಗೆ ಹೋಗಲಾರದಷ್ಟು

ಸಂಪರ್ಕದಲ್ಲಿ ಹೊಸ ಲಕ್ಷಣಗಳನ್ನು ಮೈಗೂಡಿಸಿಕೊಳ್ಳುತ್ತದೆ. ಅಷ್ಟೇ ಯಾಕೆ ಒಂದೇ ಭಾಷೆಯ ವಿವಿಧ ಕವಿಗಳಲ್ಲೂ ಅದು ಬಗೆಬಗೆಯಾಗಿ ಅರಳುವುದುಂಟು. ಅಂದರೆ, ಛಂದಸ್ಸಿಗಿರುವ ಈ ಫ್ಲೆಕ್ಸಿಬಲ್ ಗುಣವನ್ನು ಮರೆಯದೇ ವಿವಿಧ ಭಾಷೆಗಳಲ್ಲಿ ಅದು ಮೂಡಿನಿಂತ ಕ್ರಮವನ್ನು ಅರಿಯಬೇಕಾಗಿದೆ. ಇಲ್ಲವಾದರೆ ಸಾನೆಟ್ ನಮ್ಮದಲ್ಲ ಅನ್ನುವ ಸಂಗತಿಯೇ ಮುಖ್ಯವಾಗಿ, ಸಾನೆಟ್ ಹೇಗೆ ನಮ್ಮದಾಯಿತು ಅನ್ನುವ ಸಂಗತಿ ಹಿಂದೆ ಸರಿಯುತ್ತದೆ. ಈ ಎರಡನೆಯದನ್ನು ಪರಿಶೀಲಿಸುವ ಅನಿವಾರ್ಯತೆಯನ್ನು ಕಣವಿಯವರ ಸುನೀತಗಳು ಉಂಟುಮಾಡಿದ್ದು ಒಂದು ಸಾಧನೆಯೆಂದು ನಾನು ನಂಬಿರುವೆ. ನಮ್ಮದಲ್ಲದ ಛಂದಸ್ಸನ್ನು ನಾವು ಬಳಸಬಾರದೆಂದರೆ ಕೆಲಮಟ್ಟಿಗೆ ನಮ್ಮ ಕಾವ್ಯ ಭಾಷೆ ಬಡವಾಯಿತೆಂದೇ ಅರ್ಥ. ಉದ್ದಕ್ಕೂ ಕನ್ನಡ ಕಾವ್ಯ ಬೇರೆ ಬೇರೆ ಭಾಷೆಗಳ ಛಂದಸ್ಸುಗಳೊಂದಿಗೆ ಒಡನಾಟವಿಟ್ಟುಕೊಂಡು ಬೆಳೆದು ಬಂದ ಚರಿತ್ರೆ ನಮ್ಮ ಕಣ್ಣೆದುರಿಗಿದೆ. ಇದನ್ನೆಲ್ಲ ತಾಳ್ಮೆಯಿಂದ ಅರಿತು ಕನ್ನಡ ಕಾವ್ಯದ ಯಶಸ್ಸನ್ನು ಪರಿಶೀಲಿಸಬೇಕಾಗಿದೆಯೇನೋ!

ಕಣವಿಯವರ ಸುನೀತಗಳಲ್ಲಿ ಜೀವನ ಪ್ರೀತಿಯ ಕ್ಷಣಗಳಿವೆ. ವ್ಯಕ್ತಿ, ನಿಸರ್ಗ, ಘಟನೆ ಇಂಥ ಕ್ಷಣಗಳನ್ನು ಕಾಣಿಸಲು ಮೂಲ ಬಿಂದುಗಳಾಗಿ ಒದಗಿವೆ.

ನನ್ನೆದುರು ಅವರ 'ಕಾಣಿಕೆ' ('ನೆಲ-ಮುಗಿಲು' ಸಂಗ್ರಹ) ಎಂಬ ಸುನೀತವಿದೆ. ನಿಸರ್ಗ ಮತ್ತು ಜೀವನದ ತಾತ್ವಿಕತೆಯನ್ನವರು ಇದರಲ್ಲಿ ಶೋಧಿಸುತ್ತಿದ್ದಾರೆ. ಈ ಶೋಧನೆ ಇವೆರಡರ ಕ್ರಿಯೆಯನ್ನನುಸರಿಸಿ ನಡೆದಿದೆ. ಒಂದರಲ್ಲಿ ಕ್ರಿಯೆ ಸಹಜವೆನ್ನುವಂತೆ ಕಾಣುತ್ತಿದ್ದರೆ, ಇನ್ನೊಂದರಲ್ಲಿ ನಡೆಸಬಹುದಾದದ್ದು, ಪ್ರಯತ್ನಪೂರ್ವಕವಾದದ್ದು ಎಂಬರ್ಥವನ್ನು ತೋರುತ್ತಿದೆ. ಕಣವಿಯವರು ವ್ಯಕ್ತಿಗಳ ಕುರಿತು ಬರೆದ ಸುನೀತಗಳನ್ನು ಗಮನಿಸಬೇಕು, ಅವರೆಲ್ಲ ಅಪಾರ ಪರಿಶ್ರಮದಿಂದ ಬದುಕನ್ನು ಮುಗಿಸಿಕೊಂಡವರು. ಮನುಷ್ಯನ ಪ್ರಯತ್ನಶೀಲತೆಯನ್ನು ಯಾವಾಗಲೂ ಒಂದು ಆದರ್ಶವನ್ನಾಗಿ ಕಣವಿಯವರ ಕಾವ್ಯ ನಂಬಿದೆ. ಅಂಥ ನಂಬಿಕೆ ಇಲ್ಲೂ ಮುಂದುವರಿದಿದೆ. ಕಾಲ ಉರುಳುತ್ತಿದೆ, ಚಿಕ್ಕೆಗಳು ಬೆಳಕು ಕಾಣಿಸುತ್ತಿವೆ, ಮಣ್ಣ ಸೇರಿದ ಬೀಜ ಮೊಳಕೆಯೊಡೆದು ಹೊರಚಾಚುವುದು, ಚಿಗುರುತ್ತಿರುವ ಮೋಟುಮರ ಕಾಲದ ಸ್ವರೂಪವನ್ನು ತಿಳಿಸುತ್ತಿದೆ. ಇದೆಲ್ಲ ತಂತಾನೇ ಸಹಜವಾಗಿ ನಡೆಯುತ್ತಿದೆ. ನಿಸರ್ಗ ತನಗೆ ತಾನೇ ರೂಪಿಸಿಕೊಂಡ ಸಹಜ ಚಲನೆಯಿದು. ಸೃಷ್ಟಿ ರಹಸ್ಯದ ಗುಣಗಳನ್ನು ಕವಿತೆ ಸೆರೆಹಿಡಿದಿದೆ. ನಾಲ್ಕು ಅಂಶಗಳ ಮೂಲಕ ಈ ರಹಸ್ಯವನ್ನು ಕಾಣಿಸಲಾಗಿದೆ. ಈ ನಾಲ್ಕರಲ್ಲಿ ಕಾಲವೊಂದೇ ಅಮೂರ್ತವಾದದ್ದು. ಉಳಿದ ಚಿಕ್ಕೆ, ಬೀಜ, ಮೋಟುಮರ ಮೂರ್ತವಾದವುಗಳು.

ಇಷ್ಟೆಲ್ಲ ಸ್ಪಷ್ಟ ಚಿತ್ರಣ ಕೊಟ್ಟ ನಂತರ ದಿಢೀರ್ ಅಂತ ಒಂದು ಪ್ರಶ್ನೆ ಸುನೀತದಲ್ಲಿ ಎದುರಾಗಿದೆ; 'ಹೊಳೆಯ ದಾಟಿದ ಮೇಲೆ ಕೊಳೆಯ ತೊಳೆವವರಾರು?'. ತೊಳೆದವರು ಯಾರು ? ಎಂಬ ಪ್ರಶ್ನೆಯೇ ಹೊಳೆಯು ಕೊಳೆಯಾಗಿರುವುದನ್ನು ತಿಳಿಸುತ್ತಿದೆ. 'ಈಜಿದರೆ ಈಜುವುದು ಹರಿವ ನೀರಿನ ಎದುರು' ಎಂಬ ಸಾಲು ಸಾಹಸವನ್ನು ಇದಿರುಗೊಳ್ಳುವ ಉತ್ಸಾಹವನ್ನು ಕಾಣಿಸುವುದರ ಜೊತೆಗೆ ಒಂದು ಇಕ್ಕಟ್ಟನ್ನೂ ಕೂಡ ಸೂಚಿಸುತ್ತಿದೆಯೇನೋ; ಹರಿವ ನೀರಿನ ಎದುರು ಈಜುವ ಸ್ಥಿತಿ ಬದುಕಿಗೆ ಒದಗಿದೆ. ಇದನ್ನು ನಾವೇ ಸೃಷ್ಟಿಸಿಕೊಂಡದ್ದೊ ಅಥವಾ ನಿಸರ್ಗವೇ ಕರುಣಿಸಿದ್ದೊ

ತಿಳಿಯುತ್ತಿಲ್ಲ. ಒಟ್ಟಾರೆ ಇಂಥದ್ದೊಂದು ಸ್ಥಿತಿಯಂತೂ ನಿರ್ಮಾಣವಾಗಿದೆ. ಈ ಸವಾಲು ಕಣ್ಣೆದುರು ಇದ್ದಾಗಲೂ ಬದುಕನ್ನು ಭ್ರಮೆಯಾಗಿಸಿಕೊಳ್ಳುತ್ತಿದ್ದೇವೆಯೇ? ಎಂಬ ಅನುಮಾನ ಕೂಡ ಇಲ್ಲಿ ಸುಳಿದಾಡಿದೆ. 'ಮಾವು ತಳಿತರೆ ಕೋಗಿಲೆಯ ಕುಕಿಲು ಸಾರ್ಥಕ' ಮಾವು ಮತ್ತು ಕೋಗಿಲೆಯ ನಡುವೆ ಒಂದು ಅವಿನಾಭಾವ ಸಂಬಂಧವಿದೆಯೆಂದು ನಾವೆಲ್ಲ ಭಾವಿಸಿದ್ದೇವೆ. ಕವಿತೆಯಲ್ಲಿ ಇವೆರಡರ ನಡುವಿನ ಈ ಸಾರ್ಥಕ ಸಂಬಂಧ ನೆಮ್ಮದಿಯ, ಸಂಭ್ರಮದ ಸೂಚನೆಯನ್ನು ನೀಡುತ್ತಿದೆ. ಎಲ್ಲ ಸಂಬಂಧಗಳು ಹೀಗೆ ಸಾರ್ಥಕವಾಗಬೇಕೆಂಬ ಅಭೀಪ್ಸೆಯು ಕವಿತೆಯ ಒಡಲಲ್ಲಿದೆ. ನಿಸರ್ಗದಲ್ಲಿ ಈ ಸಾರ್ಥಕ ಸಂಬಂಧವು ಸಹಜವಾಗಿ ಘಟಿಸಿದರೆ, ಮನುಷ್ಯ ಜೀವನದಲ್ಲಿ ಇದು ಪ್ರಯತ್ನಪೂರ್ವಕವಾಗಿ ಆಗಬೇಕಾದದ್ದು ಎಂಬ ನಂಬಿಕೆಯನ್ನು ಕವಿತೆ ಮರೆತಿಲ್ಲ.

**'ಹೂವು-ಹಣ್ಣೂ ಗಿಡದ ಎಡೆಬಿಡದ ಕಾಣಿಕೆ**
**ಸಾವು-ನೋವೂ ನಮ್ಮ ದಿನದ ಹೊಂದಾಣಿಕೆ'**

ಬಿದ್ದ ಹಣ್ಣೆಲೆಯನ್ನು ಗೊಬ್ಬರವಾಗಿ ಪರಿವರ್ತಿಸಿಕೊಳ್ಳುವ ನಿಸರ್ಗದ ಅರಿವಿನಿಂದ ಕಲಿಯದೆ ಹೋದರೆ ಸಾವು-ನೋವುಗಳೆ ನಮ್ಮ ನಿತ್ಯ ಸಂಗಾತಿಗಳಾಗಿಬಿಡುತ್ತವೇನೋ, ನಿಸರ್ಗದ ಪಾಸಿಟಿವ್ ಅಂಶಗಳನ್ನು ಹೇಳುತ್ತಿರುವ ಕವಿತೆ ಬದುಕಿನ ನೆಗೆಟಿವ್ ಅಂಶಗಳನ್ನು ಯಾಕೆ ಇದುರಾಗಿ ಇಡುತ್ತಿದೆಯೋ ? ಬಹುಶಃ ಬದುಕನ್ನು ಗಾಜುಗೋಪುರವಾಗಿ ಭಾವಿಸಿಕೊಂಡಿದ್ದುದರ ವ್ಯಂಗ್ಯಕ್ಕಿರಬಹುದೆ? ಕವಿತೆಯ ಸಾಲುಗಳ ನಡುವೆ ಕೊಂಚಮಟ್ಟಿಗೆ ಅಸಂಗತತೆಯು ಇದೆ. ಅಲ್ಲದೆ, ಸಾವು-ನೋವಿನ ಹೊಂದಾಣಿಕೆಯಲ್ಲೆ ದಿನ ದೂಡುತ್ತಿರುವ ಮನುಷ್ಯನ ಕಾಣಿಕೆ ಏನು? ಎಂಬ ಪ್ರಶ್ನೆಯೂ ಕವಿತೆಯ ಒಳಗೆ ಇರುವಂತಿದೆ. ನಿಸರ್ಗದಿಂದ ಕಲಿಯಬೇಕಾದದ್ದು ಅಪಾರವಾಗಿದೆಯೆಂಬ ಎಚ್ಚರವನ್ನು ಕಣವಿಯವರ ಸುನೀತಗಳು ಪ್ರಕಟಿಸುತ್ತಲೇ ಬಂದಿವೆ. ಈ ಎಚ್ಚರ ಪ್ರಸ್ತುತ ಸುನೀತದಲ್ಲೂ ಇದೆ.

ಅವರ ಕವಿತೆಗಳಲ್ಲಿ ಸಂಭವಿಸುವ ಇನ್ನೊಂದು ಅಂಶವಿದೆ; ನೋಡಿ ನೆಲಕುದುರಿ ಬಿದ್ದ ಹಣ್ಣೆಲೆಯನ್ನು ಮಣ್ಣು ಗೊಬ್ಬರ ಮಾಡಿ ತನ್ನೊಳಗೆ ರುಬ್ಬುವುದು ಎಂದು ಹೇಳುವಾಗ 'ರುಬ್ಬುವುದು' ಎಂಬ ಪದ ಹಿಂಸೆಯ ದ್ಯೋತಕವಲ್ಲ, ಹೊಸ ಹುಟ್ಟನ್ನು ಪಡೆದುಕೊಳ್ಳುವುದರ ಸಂಕೇತ. ಹಾಗೆಯೇ 'ಸೂಜಿಯ ಮೊನೆ' ಎಂಬ ಶಬ್ದ ಕೂಡ. ಯಾವ ಶಬ್ದ ಮೇಲ್ನೋಟಕ್ಕೆ ಹಿಂಸೆಯನ್ನು ಸಂಕೇತಿಸಬಲ್ಲುದೊ, ಅಂಥ ಶಬ್ದಕ್ಕೆ ಕಣವಿಯವರು ಜೀವನ ಮೌಲ್ಯಗಳ ಕವಚಧಾರಣೆ ಮಾಡುತ್ತಾರೆ. ಶಬ್ದಕ್ಕಂಟಿದ ಹಿಂಸಾಮುಖವನ್ನು ಕಳಚುವ ಕ್ರಿಯೆ ಅವರ ಕವಿತೆಗಳಲ್ಲಿ ಯಾವಾಗಲೂ ಕಂಡುಬರುವ ಸಂಗತಿ. 'ಶಬ್ದ'ವಷ್ಟೇ ಅಲ್ಲ, ಜೀವನ ಕುರಿತ ಅವರ ಧೋರಣೆ ಕೂಡ ಇದೇ ಆಗಿದೆ.

ನಾನು ನೊದಲೇ ಹೇಳಿದಂತೆ, ಕಣವಿಯವರ ಕಾವ್ಯ ವ್ಯಕ್ತಿತ್ವ ಮೊದಲಿನಿಂದಲೂ ಬದುಕಿನ ಆಗು ಹೋಗುಗಳನ್ನು ಮನುಷ್ಯ ಪ್ರಯತ್ನದ ಫಲವೆಂದು ನಂಬುತ್ತಾ ಬಂದಿದೆ. ದುಡಿಯುವುದು, ಬೆಳೆಯುವದು, ಮಾಗುವುದು ಇವೆಲ್ಲ ಸಾರ್ಥಕ ಬದುಕಿನ ಗುಟ್ಟುಗಳಾಗಿ ಅವರಿಗೆ ಕಂಡಿವೆ. ಈ ಅರ್ಥದಲ್ಲಿ ಕಣವಿಯವರು ಕೂಡ ಸಮಾಜವಾದಿ ಕವಿಗಳೆ.

ವಿಕ್ರಮ ವಿಸಾಜಿ

# ೨೬. ಬಿಸಮಿಲ್ಲಾರ ಶಹನಾಯಿವಾದನ ಕೇಳಿ

ಒಂದೆ ಉಸಿರಿಗೆ ಹಸಿರ ಹೊಮ್ಮಿಸುವ;ನೂರು ಬಗೆ
ಭಾವ ಕುಸುಮವನೆತ್ತಿ ಗಾಳಿಸುಳಿಯಲಿ ಹೀಗೆ
ನರುಗಂಪ ತೇಲಿಸುವ; ಹಂಬಲದ ಸವಿದನಿಗೆ
ತುಂಬಿ ಆಲಿಸುವ; ಮನಸಿನ ಹಂಬಲದ ಸವಿದನಿಗೆ
ಕನಸು-ಕಾಮನಬಿಲ್ಲ ವರ್ತುಳವ ರಚಿಸಿ, ನೆಲ-
ಮುಗಿಲನೊಂದು ಸಲ ಬಂಧಿಸಿ ಜೀವ ಸ್ಪಂದಿಸುವ;
ಮೋಡದೊಡಲಿಗೆ ಮಿಂಚು ಸಂಚರಿಸಿ ಹನಿಗರೆವ
ರಾಗ ಲಹರಿಯ ತೊರೆಗಳೋಡಿ ತಬ್ಬಿವೆ ಕಡಲ.
ಕೋಟಿ ಮೈಲಂತರದ ನೀಹಾರಿಕೆಯ ನಾಡಿ-
ಮಿಡಿತ ತಟ್ಟಿತು ಕಿವಿಗೆ; ನಾದದ ಕೂದಲೆಳೆಯಲಿ
ಪೃಥ್ವಿತೂಗಿರೆ, ಸೂರ್ಯಚಂದ್ರರಿಗು ಜೋಕಾಲಿ.
ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ.
ಹೊಕ್ಕಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ
ಆಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ.

ಚೆನ್ನವೀರ ಕಣವಿಯವರ 'ನೆಲ-ಮುಗಿಲು' ಕವನಸಂಗ್ರಹದಲ್ಲಿಯ ಬಿಸಮಿಲ್ಲಾರ ಶಹನಾಯಿವಾದನ ಕೇಳಿ' ಒಂದು ಅಪರೂಪದ ಸಾನೆಟ್. ಇದರಲ್ಲಿ ವಸ್ತು ವಿವರ ಮತ್ತು ಸಾನೆಟ್ ಛಂದೋರೂಪಗಳು ಪರಸ್ಪರ ಕೈಹಿಡಿದು ನಡೆದಿವೆ. ಇವು ಒಂದಕ್ಕೊಂದು ಮೈ ತಗುಲಿಸಿಕೊಂಡು, ಮೈ ಪಡೆದಿರುವ ಕ್ರಮ ವಿಶಿಷ್ಟ ಬಗೆಯದಾಗಲು ಕಾರಣವಾಗಿದೆ.

ಕವಿತೆಯಲ್ಲಿ ಎರಡು ಸೃಷ್ಟಿ ಲೋಕಗಳಿವೆ. ಮೊದಲನೆಯ ಸೃಷ್ಟಿಲೋಕವು ಇಡಿಯಾದ ಜಗತ್ತಿನಿಂದ ಬಿಡಿ ರೂಪಕಗಳು ಮೈ ಪಡೆದಿರುವ ಬಗೆ, ಎರಡನೆಯ ಸೃಷ್ಟಿ ಲೋಕವು ಆ ಬಿಡಿ ರೂಪಕಗಳಿಂದ ಅನುಸೃಷ್ಟಿ ಪಡೆದಿರುವ ರೀತಿ. ಸೃಷ್ಟಿಯ ಬೃಹತ್ ಜಾಲದಲ್ಲಿ ಹಸಿರು, ಹೂವು, ದುಂಬಿ, ಕಾಮನಬಿಲ್ಲು, ಮೋಡಗಳು ಬಿಡಿ ರೂಪಕಗಳು. ಈ ಬಿಡಿ ರೂಪಕಗಳು ಕ್ರಮವಾಗಿ

ತಂಪು, ಸೌಂದರ್ಯ, ನಾದ, ವರ್ಣವೈವಿಧ್ಯ ಮತ್ತು ಸೆಳೆಮಿಂಚುಗಳನ್ನು ಅನುಸೃಷ್ಟಿ ಮಾಡುತ್ತವೆ. ಇದು ಕವಿತೆಯ ಎರಡು ಸ್ತರಗಳನ್ನು ವ್ಯಂಜಿಸುತ್ತದೆ. ಈ ಹಿನ್ನೆಲೆಯಲ್ಲಿ ಕವಿತೆಯನ್ನು ಓದಿದರೆ ಇಡೀ ಕವಿತೆಯು 'ಅನುಸೃಷ್ಟಿ'ಯ ನೆಲೆಯನ್ನು ಕುರಿತು ಚಿಂತಿಸುತ್ತದೆ. ಈ 'ಅನುಸೃಷ್ಟಿ'ಯ ವಿವರಗಳು ನಾದದ ಹುಟ್ಟಿನಲ್ಲಿ ತಳುಕು ಹಾಕಿಕೊಂಡಿರುವುದು ವಿನಾಕಾರಣವಲ್ಲ. 'ನಾದ'ವು ಬೆಳಕಾಗುವ ಪರಿ ಕವಿತೆಯ ಹಲವು ಆಶಯಗಳಲ್ಲಿ ಒಂದು. ನಾದದ ಮುಖಾಂತರ ಪೃಥ್ವಿಯ, ಸೂರ್ಯಚಂದ್ರರ, ಕೋಟಿ ನೀಹಾರಿಕೆಗಳ ಪಾತಾಳ ಗವಿಗಳ ರಹಸ್ಯವನ್ನು ಅರಿಯಲು ಸಾಧ್ಯವಾಗಿದೆ. ಕವಿತೆಗೆ ಇಟ್ಟಿರುವ ಶೀರ್ಷಿಕೆಯಲ್ಲಿ ಎರಡು ಬಗೆಯ ಆಶಯಗಳಿವೆ. ಮೊದಲನೆಯದು 'ಶಹನಾಯಿವಾದನ ಕೇಳಿದ್ದು', ಎರಡನೆಯದು 'ಶಹನಾಯಿವಾದನ ಕೇಳಿ' ಆಗಿರುವ ಪರಿ. ಅಂದರೆ, ನಾದದ ಮುಖಾಂತರ ಲೋಕವನ್ನು ತಿಳಿಯುವ ಬಗೆ ಮತ್ತು ಲೀಲೆ. ಹೀಗಾಗಿ, ಕವಿತೆಯ ಮೊದಲ ಹನ್ನೆರಡು ಸಾಲುಗಳು ಈ ಸೃಷ್ಟಿ ರಹಸ್ಯದ ನೆಲೆಗಳನ್ನು ತಿಳಿಯುವ ಪ್ರಯತ್ನ ಮಾಡುತ್ತಿದ್ದರೆ ಕೊನೆಯ ಎರಡು ಸಾಲುಗಳು ಥಳಕ್ಕನೆ ಸೃಷ್ಟಿಯ ನಿರಂತರಂತೆಯ ಸೊಬಗಿನ ಲೀಲೆಯನ್ನು ಏಕಕಾಲಕ್ಕೆ ಹಿಡಿದಿಡುತತ್ತವೆ.

ಕವಿತೆಯಲ್ಲಿ ಸೃಷ್ಟಿ ರಹಸ್ಯವನ್ನು 'ನಾದ'ದ ಮುಖಾಂತರ ಕೇಳುವ ಹಾಗೂ ಅರಿಯುವ ಪ್ರಯತ್ನವೂ ಉಂಟಷ್ಟೆ. ಕವಿತೆಗೆ ಶಕ್ತಿ ಬಂದಿರುವುದು ಅಲ್ಲಿಂದಲೇ. ಭೂಮಿಯ ಉಸಿರು ಹಸುರನ್ನು ಹೊಮ್ಮಿಸುತ್ತದೆ. ಈ ಹಸುರಿನ ಗಿಡಗಳಿಂದ ನೂರಾರು ಬಗೆಯ ಹೂಗಳು ಅರಳುತ್ತವೆ. ಇವು ಗಾಳಿಸುಳಿಯಲ್ಲಿ ನರುಗಂಪನ್ನು ತೇಲಿಸುತ್ತವೆ. ಈ ನರುಗಂಪಿನ ಜಾಡನ್ನು ಹಿಡಿದು 'ತುಂಬಿ'ಯು ಬರುತ್ತದೆ. ಆಗ ಸೃಷ್ಟಿಯು ಕಾಮನಬಿಲ್ಲನ್ನು ಹೆಣೆಯುತ್ತದೆ. ಆಮೇಲೆ ಮಿಂಚು ಸುಳಿದು ಮೋಡದಿಂದ ಮಳೆ ಸುರಿಸುತ್ತದೆ. ಭೂಮಿಗೆ ಬಿದ್ದ ನೀರು ತೊರೆಗಳನ್ನು ಸೇರುತ್ತದೆ. ಈ ತೊರೆಗಳು ಕಡಲನ್ನು ತಬ್ಬಲು ಓಡುತ್ತವೆ. ಇದು ಸೃಷ್ಟಿಯ ಕ್ರಮಲೀಲೆ. ಕವಿತೆಯೂ ಕೂಡ ನಾದದ ಈ ಬಗೆಯ ನಿರಂತರತೆಯನ್ನು ವ್ಯಂಜಿಸುತ್ತದೆ. ನಾದವು ಶ್ರೋತೃವಿನಲ್ಲಿ ಉಂಟುಮಾಡುವ ರೀತಿಯೂ ಈ ಬಗೆಯದೇ. ನಾದದ ಸೃಷ್ಟಿ ಎಷ್ಟು ಲೀಲೆಯೋ ಅದರ ಅನುಭವವೂ ಒಂದು ಲೀಲೆಯೇ. ಈ ನಾದದ ಅನುಭವವನ್ನು ವ್ಯಕ್ತಪಡಿಸುವುದು ಕಡುಕಷ್ಟ. ಕವಿ ಇದನ್ನು "ನಾದದ ಕೂದೆಲೆಳೆಯಲಿ ಪೃಥ್ವಿ ತೂಗಿರೆ ಸೂರ್ಯ ಚಂದ್ರರಿಗೂ ಜೋಕಾಲಿ" ಎಂದು ವರ್ಣಿಸುತ್ತಾರೆ.

ಕವಿತೆಯನ್ನು ತಿಳಿಯಲು ಕೆಲವು ತಾಂತ್ರಿಕ ವಿವರಗಳು ನಮಗೆ ನೆರವಾಗುತ್ತದೆ. ಇವು ನಮ್ಮನ್ನು ಕವಿತೆಯ ಬಾಯಿಗೆ ಕರೆದೊಯ್ದು ನಿಲ್ಲಿಸುತ್ತವೆ. ಆದರೆ, ಅದರಾಚೆಗೆ ಸೇರಬೇಕಾದುದು 'ಅನುಸೃಷ್ಟಿ'ಯ ನೆಲೆಯಿಂದಲೆ. ಇಡೀ ಕವಿತೆ ಸೃಷ್ಟಿ-ಅನುಸೃಷ್ಟಿ ರೂಪಕಗಳ, ಕವಿ-ಸಹೃದಯರ, ಭಾವಯಿತ್ರಿ ಮತ್ತು ಕಾರಯಿತ್ರಿ ಪ್ರತಿಭೆ ಇಮ್ಮಗ್ಗಲುಗಳ ಸ್ವರೂಪವನ್ನು ಕುರಿತದ್ದಿದೆ. ಕವಿತೆಯ ಒಳಗಿರುವ 'ತುಂಬಿ' ಈ ಬಗೆಯ ಸಹೃದಯನ ಪ್ರತಿಭೆಯ ಸಂಕೇತವೂ ಆಗಿದೆ. "ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ" ಎಂದು ಕವಿ ಹೇಳುವುದು ಈ ಬಗೆಯ ಹೊಸದರ್ಶನದ ಫಲವಾಗಿಯೇ. 'ವಾದನ'ವನ್ನು ಕೇಳಿದ್ದು ಎಷ್ಟು ಸತ್ಯವೋ 'ವಾದನ ಕೇಳಿ' ಆಗುವುದು ಅಷ್ಟೇ ಸತ್ಯ ಕೂಡ. ಕವಿತೆಯಲ್ಲಿ ಮೈದಾಳಿರುವ ಪ್ರತಿಮೆಗಳು, ರೂಪಕಗಳು ಹೊಸ ಸೊಬಗನ್ನೆ ಪ್ರದಾನ ಮಾಡಿವೆ. ಅರ್ಥವಿಶದತೆ, ಸಂಕ್ಷಿಪ್ತತೆಗಳು ಕವಿತೆಯ ನೇಯ್ಗೆಯಲ್ಲಿ ಮೈಗೂಡಿ ಬಂದಿವೆ. ಕವಿತೆಯ ಕೊನೆಗೆ

"ಹೊಕ್ಕುಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ" ಎನ್ನುವ ಸಾಲಲ್ಲಿ ಹೊಕ್ಕುಳ ಬಳ್ಳಿಯನ್ನು ಕಳಚಿಕೊಂಡು ಒಂದು ಸೃಷ್ಟಿಯ ನೆಲೆಯಿಂದ ಮತ್ತೊಂದು ಸೃಷ್ಟಿಯ ನೆಲೆಗೆ ಸಾಗುವುದು ಅರ್ಥಪೂರ್ಣವಾಗಿದೆ. ಈ ಬಗೆಯ ಸೃಷ್ಟಿ ಕಾರ್ಯ ನಿರಂತರ. 'ಮುಗಿಯೆ ಶಹನಾಯಿ' ಎಂಬ ಸಾಲಲ್ಲಿ ಈ ಬಗೆಯ ಸೃಷ್ಟಿಕಾರ್ಯ ನಿರಂತರ. 'ಮುಗಿಯೆ ಶಹನಾಯಿ' ಎಂಬ ಸಾಲಲ್ಲಿ ಈ ಬಗೆಯ ನಿರಂತರತೆಯ ಫಲವನ್ನು ಕವಿತೆ ಸೂಚಿಸುತ್ತಿದೆ. ಸಾನೆಟ್ಟಿನ ಕೊನೆಯ ಸಾಲಿನಲ್ಲಿ ಈ ಬಗೆಯ ನಿರಂತರತೆಯ ಫಲವನ್ನು ಕವಿತೆ ಸೂಚಿಸುತ್ತಿದೆ. ಸಾನೆಟ್ಟಿನ ಕೊನೆಯ ಸಾಲಿನಲ್ಲಿ ಹೇಗೋ ಕಾರಯಿತ್ರಿ ಪ್ರತಿಭೆಯ ಸಫಲ ಕ್ರಿಯೆಯೂ ಕೂಡ. "ಆಗಸದ ಚಿಪ್ಪೊಡೆದು ಜೀವ ತೆರೆಯಿತುಬಾಯಿ". ಕವಿತೆ ಇಲ್ಲಿಗೆ ತಾಂತ್ರಿಕವಾಗಿ ನಿಲ್ಲುತ್ತದೆ. ಆದರೆ, ಕವಿತೆಯ 'ಧ್ವನಿ'ಯು ಸಹೃದಯ ಅಥವಾ ಶ್ರೋತೃವಿನಲ್ಲಿ ಮುಂದುವರೆಯುತ್ತದೆ.

ಮಲ್ಲೇಪುರಂ ಜಿ. ವೆಂಕಟೇಶ

೨

ನಾದದ ಮೋಡಿಗಳಾದ ಒಂದು ಅಪೂರ್ವ ಕ್ಷಣದಲ್ಲಿ ಅನುಭಾವದ ನೆಲೆಗಳನ್ನು ಸ್ಪರ್ಶಿಸಿ ಬಂದ ರೋಮಾಂಚನವನ್ನು ಈ ಕವಿತೆ ಕಾಣಿಸುತ್ತದೆ. ನಾವು ಉಂಟು ಮಾಡಿದ ಸಂಚಲನವನ್ನು ಮೂರ್ತಗೊಳಿಸುವುದು ಹೇಗೆ? ಆ ಅನುಭವದ ನಾದದ ಜೊತೆಗೆ ಬಗೆ ಬಗೆ ಹರಿಯುತ್ತ ಒಂದು ಚೈತನ್ಯಮಯ ವಿಶ್ವವನ್ನೇ ಮನದೊಳಗೆ ಸೃಷ್ಟಿಸಿಬಿಟ್ಟಿದೆ. ಆ ಲೋಕದ ಅನುಭಾವವನ್ನು ಹೇಳಲು ಈ ಲೋಕದ ಪ್ರತಿಮೆಗಳೇ ಬೇಕು.

ನಾದದ ಬೀಜ ಮನದೊಳಗೆ ಇಳಿದದ್ದೇ ತಡ ಒಂದೇ ಉಸಿರಿಗೆ ಥಟ್ಟನೆ ಹಸಿರು ಹೊಮ್ಮಿಬಿಟ್ಟಿದೆ! ಖಾಲಿ ಮನದಂಗಳವೆಲ್ಲ ಸೃಷ್ಟಿಸಂಭ್ರಮದಿಂದ ತೂಗುತ್ತದೆ. ನೂರಾರು ಬಗೆಯ ಭಾವಗಳು ಹೂವಾಗಿ ಅರಳಿ ತಮ್ಮ ಕುಸುಮವನೆತ್ತಿ ಗಾಳಿಗೊಡ್ಡಿವೆ. ಆ ಗಾಳಿಯಲೆ ಅವುಗಳ ನರುಗಂಪನ್ನು ಧರಿಸಿ ಆ ವಾತಾವರಣವನ್ನೇ ಗಂಧಮಯಗೊಳಿಸಿದೆ. ನಾದವು ಅದರ ಪಾಡಿಗೆ ಬೆಳೆಯುತ್ತ ಹೋಗುವ ಇತ್ತ ಮನದಲ್ಲಿ ಸೃಷ್ಟಿಶೀಲ ಸಾಧ್ಯತೆಗಳೂ ಥಟ್ಟನೆ ಬಿಚ್ಚಿಕೊಂಡು ಬೆಳೆಯುತ್ತ ಹೋಗುವ ಬಗೆಯೇ ವಿಸ್ಮಯ. ನೂರೆಂಟು ಭಾವಗಳು ಬೆರೆತ ಆ ಉನ್ಮತ್ತ ಸ್ಥಿತಿಯನ್ನು ಏನೆನ್ನಬೇಕು ? ಅಲ್ಲಿ ನಾದದ ನರುಗಂಪು ವ್ಯಾಪಿಸಿಕೊಂಡು ಎಲ್ಲವನ್ನೂ ನಾದಮಯಗೊಳಿಸಿದೆ. ಅದರ ಸವಿಯನ್ನು ಹೀರಿ ಮನದುಂಬಿದ ದುಂಬಿಯಂತಾಗಿದ್ದಾನೆ ಕೇಳುಗ.

ಮನಸ್ಸಿನ ಮಧ್ಯ ಬಿಂದುವು ತನ್ನ ಸುತ್ತಲೂ ಕನಸು-ಕಾಮನಬಿಲ್ಲುಗಳ ವರ್ತುಲ ರಚಿಸಿಕೊಳ್ಳುತ್ತಿದೆ. ಕನಸಲ್ಲಿ ಬೆರೆತಂಥ ಬಣ್ಣಗಳಾವುವು ? ಹೇಳಲಾಗದು. ಅದು ಅನುಭವಕ್ಕೆ ಮಾತ್ರ ಗೊತ್ತು. ಕಾಮನಬಿಲ್ಲು ಬಯಕೆಗಳಿಗೆ, ಮೋಹಕ್ಕೆ, ರಾಗಕ್ಕೆ, ಅಮೂರ್ತ ಚೆಲುವಿಗೆ ಮೂರ್ತದ ಮೈಯಾಗಿ ಮೂಡುತ್ತದೆ. ಅದು ಸ್ವರ್ಗೀಯ ಬೆರಗು. ಕನಸಿನಂತೇ ಕೈಗೆ ಸಿಗದೇ ಕಾಡುವ ಅಮೂರ್ತ ಹಂಬಲ. ಆ ಕಾಮನಬಿಲ್ಲು ನೆಲಮುಗಿಲುಗಳಲನ್ನೇ ತನ್ನ ಮಾಂತ್ರಿಕ ಸ್ಪರ್ಶದಿಂದ ಬಂಧಿಸಿಬಿಟ್ಟಿದೆ. ಆಗ ದ್ವೈತವಳಿದು ಅದ್ವೈತ ಸಂಭವಿಸಿದೆ. ನಾದದ ಪ್ರಭಾವ

ವಲಯದಲ್ಲಿ ವಿಭಜನೆಯಿಲ್ಲ. ಅದರ ಅಖಂಡ ಅನುಭೂತಿಯಲ್ಲಿ ಸಿಗುವುದು ಸಂಪೂರ್ಣ ಆನಂದ. ಆ ಆನಂದಕ್ಕೆ ಜೀವಮೂಲವು ಮಿಡಿದಿದೆ. ಪರವಶಗೊಂಡಿದೆ. ಆದ್ದರಿಂದ ಇಹಪರಗಳನ್ನು ಒಟ್ಟಿಗೆ ತಂದು ಕಟ್ಟುವುದೂ ನಾದಕ್ಕೆ ಸಾಧ್ಯ.

ಮೋಡದೊಡಲಿಗೆ ಮಿಂಚು ಸಂಚರಿಸಿದಂತೆ ಅನಿರೀಕ್ಷಿತವಾಗಿ ಮೂಡಿದ ಆನಂದ ಕೆಲವು ಕ್ಷಣಗಳಾದ್ದಾದರೂ ಅದು ಮಾಡಿದ ಪರಿಣಾಮ ಅಗಾಧವಾದುದು. ಆ ಮಿಂಚು ರಾಗದಲ್ಲೂ ಮೂಡಿ, ಆ ರಾಗದಿಂದ ಸಂಚಲಿಸಿದ ಭಾವದಲ್ಲೂ ಮೂಡಿ ಮರೆಯಾಗುತ್ತದೆ. ಹಾಗಾಗಿ ಎರಡು ನೆಲೆಯಲ್ಲೂ ಸೃಷ್ಟಿಕ್ರಿಯೆ ನಡೆಯುತ್ತದೆ. ಆ ಮಿಂಚಿನ ಸ್ಪರ್ಶದಿಂದ ಹನಿಗರೆದು ಮಳೆಯಾದ ರಾಗಲಹರಿ ತೆರೆತೆರೆಯಾಗಿ ಚಲಿಸುತ್ತ ಕಡಲನ್ನೇ ತಬ್ಬಿ ನಿಂತಿದೆ. ಭವ್ಯತೆಯ ದಿವ್ಯದರ್ಶನವನ್ನು ಮಾಡಿಸಿದೆ.

ಅನುಭವವು ವಿಸ್ತರಿಸುತ್ತ ತನ್ನ ಭವ್ಯ ಅಪಾರತೆಯಿಂದ ಇಂದ್ರಿಯಾತೀತ ನೆಲೆಗೆ ಸಾಗುವುದು ಕವಿತೆಯಲ್ಲಿ ಸಾಧ್ಯವಾಗಿದೆ. ಅದು ಸಾಧ್ಯವಾದುದು ನಾದದ ಅಖಂಡತೆಯಿಂದ. ಆ ನಾದ ಭೂಮಿಯಾಚೆಗೂ ಮೈ ಚಾಚಿದೆ. ಇಂದ್ರಿಯಗಳ ಗ್ರಹಿಕೆಯ ಸೀಮೆಯನ್ನು ವಿಸ್ತರಿಸಿದೆ.

**ಕೋಟಿ ಮೈಲಂತರದ ನೀಹಾರಿಕೆಯ ನಾಡಿ**
**ಮಿಡಿತ ತಟ್ಟಿತು ಕಿವಿಗೆ. ನಾದದ ಕೂದಲೆಳೆಯಲಿ**
**ಪೃಥ್ವಿ ತೂಗಿರೆ ಸೂರ್ಯಚಂದ್ರರಿಗು ಜೋಕಾಲಿ**
**ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ**

ಎಂಬ ಸಾಲುಗಳು ಅದನ್ನು ಥಟ್ಟನೆ ಅರಿವಿಗೆ ಬರುವಂತೆ ಮಾಡುತ್ತವೆ. ಸೂಕ್ಷ್ಮವಾದ ಚೈತನ್ಯದ ಸಂವೇದನೆಯ ಪರಿ ಅದು. ಅದರ ಅಭಿವ್ಯಕ್ತಿ ಕೂಡ ಕವಿತೆಯಲ್ಲಿ ಅಷ್ಟೇ ಸೂಕ್ಷ್ಮವಾಗಿ, ಶಕ್ತಿಶಾಲಿಯಾಗಿ ಪಡಿ ಮೂಡಿದೆ. ನಾದದ ಸೂಕ್ಷ್ಮತೆಗೆ ಅದೆಷ್ಟು ಶಕ್ತಿಯಿದೆ ಎಂದರೆ, ಅದರ ಕೂದಲೆಳೆಯಲ್ಲಿ ಇಡೀ ವಿಶ್ವವೇ ಜೋಕಾಲಿಯಾಡುತ್ತದೆ! ಆ ನಾದ ಇಡೀ ಬ್ರಹ್ಮಾಂಡವನ್ನೇ ತಟ್ಟಿ ಮಲಗಿಸುವ ಜೋಗುಳವಾಗಿದೆ. ಅಲ್ಲಿ ಸೂರ್ಯ ಚಂದ್ರರೂ ಮಗುವಾಗಿಬಿಟ್ಟಿದ್ದಾರೆ! ಇಡೀ ವಿಶ್ವವೇ ನಾದದಲ್ಲಿ ಮುಳುಗಿ ವಿಸ್ಮಿತವಾಗಿದೆ. ಇದರಿಂದ ಕಾಣದ ಬೆಳಕನ್ನು ಕಾಣುವುದು, ಅತೀತವಾದದ್ದನ್ನು ಅನುಭವಿಸುವುದು ಸಾಧ್ಯವಾಗಿದೆ. ಪಾತಾಳಗವಿಗೆ ನೂರು ಬೆಳಕಿಂಡಿಗಳು ತೆರೆದುಕೊಂಡ ಅನುಭವ ಅದೇ ಆಗಿದೆ. ನಾದವು ಬೆಳಕಾಗುವ ಬಗೆ ಇದು.

ಶಹನಾಯಿಯ ನಾದ ನಿಂತಾಗ, ಒಂದು ಸಲ ಈ ಅನುಭಾವದ ಕೊಂಡಿ ಕಳಚಿದ್ದು ಹೊಕ್ಕಳ ಬಳ್ಳಿ ಕಳಚಿದಂಥ ಆಘಾತ. ಸೃಷ್ಟಿಯು ಜೀವಪಡೆದು ಸ್ವತಂತ್ರವಾಗುವಾಗ ಈ ಆಘಾತ ಅನಿವಾರ್ಯ. ಒಂದು ಸೃಷ್ಟಿಯ ನೆಲೆಯಿಂದ ಮತ್ತೊಂದು ಸೃಷ್ಟಿಯ ನೆಲೆಗೆ ಸಾಗುವ ಅನಿವಾರ್ಯತೆಯಿದು. ಅವೆರಡರ ಮಧ್ಯೆ ಇರುವ ಸ್ತಬ್ಧತೆಯಿದು. ನಿಜಕ್ಕೂ ಆ ನಾದ ನಿಂತಿರುವುದಿಲ್ಲ. ಅದು ಸಹೃದಯನ ಪ್ರತಿಸೃಷ್ಟಿಯಲ್ಲಿ ನಿರಂತರವಾಗುತ್ತದೆ.

**ಗೀತಾ ವಸಂತ**

# ೨೭. ಹಳಕಟ್ಟಿಯವರು

ಯಾವುದೊ ಅಮೃತಗಳಿಗೆ, ನಿಮ್ಮ ದೃಷ್ಟಿಗೆ ಬಿತ್ತು
ಹೂತಿಟ್ಟ ಹೊನ್ನಗಣಿ! ತೋಡದಿರಿ ಹಗಲಿರುಳು
ಮೈಮರೆತು; ಹೊರದೆಗೆದು ಹೇರಿದಿರಿ ಬಂಡಿ ಬಂಡಿ
ಚಿನ್ನದ ಅದಿರು ; ಹಿಂಗಿತು ಹಸಿವು ನೀರಡಿಕೆ.
ತಾಳೆಗರಿ ಗರಿಯೊಡೆದು ಮರಮರವೇರಿ ಕುಕಿಲಿ
ಬೆಳಕನೆಚ್ಚರಿಸಿದವು; ನಡುವೆ ಮೂಡಿತು ಶರಣ-
ರನುಭಾವ ಮಂಟಪದ ಮಾಣಿಕ್ಯದೀಪ್ತಿ, ನಡೆ-
ನುಡಿಯ ಜ್ಯೋತಿರ್ಲಿಂಗ! 'ತನ್ನರಿವೆ ಗುರು' ಎಂಬ
ವಚನ ಕೊಟ್ಟಿರಿ. ನಿಮಗೊ? ಶೂನ್ಯ-ಸಂಪಾದನೆ.
ರುಮಾಲದ ಕಟ್ಟು ಬಿಚ್ಚಿಲ್ಲ, ತೆಗೆದಿಲ್ಲ ಇಟ್ಟ
ಕನ್ನಡಕ, ಉಡುಗಿಲ್ಲ ಉಟ್ಟ ಧೋತರ ಮಡಿಯು.
ಮೆಲುದನಿ -ಮಾತು ಭಕುತಿ ಬಳ್ಳಿಗೆ ಬಿಟ್ಟ ಕುಡಿಯು,
ಗೋಳ-ಗುಮ್ಮಟ ತಾನೆ ತಲೆ ಬಾಗಿಸಿತು ನಿಮಗೆ,
ಏಳು ಸಲ ಕರೆದರೂ ಎಚ್ಚರಾಗದು ನಮಗೆ.

'ನೆಲ-ಮುಗಿಲು' ಸಂಗ್ರಹದ ಕಣವಿಯವರ ಈ ಕವನಕ್ಕೆ ಒಂದು ನಿರ್ದಿಷ್ಟವಾದ, ಸಾಪೇಕ್ಷಿತವಾದ ಮತ್ತು ಖಚಿತವಾದ ಪರಿಭಾಷೆಯಿದೆ.

ಫ.ಗು. ಹಳಕಟ್ಟಿಯವರ ಜೀವನದ, ಸಾಧನೆಯ ಪರಿಚಯವಿರುವವರು ಬಹುಶಃ ಈ ಕವನಕ್ಕೆ ಒಂದು ಶೀರ್ಷಿಕೆಯನ್ನು ಬಯಸಲಾರರು ಅಥವಾ ನಿರೀಕ್ಷಿಸಲಾರರು. ಫ.ಗು. ಹಳಕಟ್ಟಿಯವರ ಬಗ್ಗೆ ಏನನ್ನೂ ತಿಳಿಯದವರು ಸೂಕ್ಷ್ಮ ಸಂವೇದಿಗಳಾಗಿದ್ದರೆ ಸಾಕು. ಈ ಕವನದ ಮೂಲಕ 'ಕರಿಯನ್ನು ಕನ್ನಡಿಯಲ್ಲಿ ಕಂಡಂತೆ' ಸಮಗ್ರವನ್ನು ಸಂಕ್ಷಿಪ್ತವಾಗಿಯಾದರೂ

ಅರ್ಥೈಸಿಕೊಳ್ಳಬಲ್ಲರು! ಪ್ರಸ್ತುತ ಕವನ ವ್ಯಕ್ತಿಯೊಬ್ಬರನ್ನು ಕುರಿತ ಸೂಕ್ತವಾದ ಕಾವ್ಯಾತ್ಮಕ ವಿಶ್ಲೇಷಣೆ. ಆಧುನಿಕ ಕನ್ನಡ ಕಾವ್ಯ ತಾನೇ ರೂಪಿಸಿಕೊಂಡ ಒಂದು ಕಾವ್ಯಪದ್ಧತಿ ಇದು.

ಹಳಕಟ್ಟಿಯವರನ್ನು ಕಣವಿಯವರು ಅವರ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಕಾಣುತ್ತಿರುವುದು ಸಹಜವಾಗಿದೆ. ಆದರೆ ಈ ಕವನ ಒಂದು ವ್ಯಕ್ತಿಚಿತ್ರವಾಗಿ ಇಲ್ಲಿ ಮುಖ್ಯವಾಗುತ್ತಿರುವುದು ಒಂದು ನವೀನ ಮೀಮಾಂಸಕ ವಿಧಾನವನ್ನು ಪ್ರಯೋಗಿಸಿ ಮಾಡಿರುವ ಕವನ ರಚನೆಯ ದೃಷ್ಟಿಯಿಂದ. ಇದರ ಜೊತೆಗೆ ಈ ಕವನ ಒಬ್ಬ ವ್ಯಕ್ತಿಯನ್ನು ಸಾಪೇಕ್ಷಿತ ಸಾಧನೆಯ ಮೂಲಕವೇ ಮತ್ತೊಂದು ಅರ್ಥವನ್ನು ಒದಗಿಸಿ ಪ್ರಚುರಪಡಿಸಿರುವುದರಿಂದ, ಇಲ್ಲಿ ಬಳಸಿರುವ 'ಅನುಭಾವ ಮಂಟಪ', 'ಜ್ಯೋತಿರ್ಲಿಂಗ..' ಇತ್ಯಾದಿ ಶಬ್ದಗಳು ನಿಘಂಟಿನ ಮತ್ತು ಶರಣರ ಪಾರಿಭಾಷಿಕದ ಆಚೆಗೂ ಹೋಗಿ ನೇರವಾಗಿ ಹಳಕಟ್ಟಿಯವರ ಜೀವನ ಸಾಧನೆಯ ಹಿನ್ನೆಲೆಯಲ್ಲಿ ಪ್ರತಿಪದಗಳೂ ವಿಭಿನ್ನವಾದ ಅರ್ಥದಲ್ಲಿ ಸಾರ್ಥಕ ಪಡೆಯುತ್ತವೆ. ಈ ಚರಿತ್ರೆ ಏಕಕಾಲಕ್ಕೆ ಹಳಕಟ್ಟಿಯವರ ನುಡಿಚಿತ್ರವೂ ಆಗುತ್ತದೆ; ಅವರ ಸಾಧಿತ ವ್ಯಕ್ತಿತ್ವದ ಕಾವ್ಯಾತ್ಮಕ ವಿಶ್ಲೇಷಣೆಯೂ ಆಗುತ್ತದೆ.

ಒಬ್ಬ ವ್ಯಕ್ತಿಯನ್ನು ಆತನ ಬದುಕಿನ ಸಾಧನೆಯ ಮೂಲಕ ಅದರಲ್ಲೂ ಖಚಿತ ಮತ್ತು ಸೂಕ್ತ ಪರಿಭಾಷೆಯ ಮೂಲಕ ಪರಿಭಾವಿಸುವ ದೃಷ್ಟಿಯಿಂದ ಈ ಕವನ ಮುಖ್ಯವಾಗುತ್ತದೆ.

'ಒಂದು ಕಾಲದಲ್ಲಿ ಕಣವಿಯವರು ಬರೆದಷ್ಟು ಸಾನೆಟ್‌ಗಳನ್ನು ಇನ್ನಾರು ಬರೆಯಲಿಲ್ಲ' - ಎಂಬ ಕಾವ್ಯ ಪ್ರಯೋಗ ಪ್ರಶಂಸೆಗೆ (ಜಿ.ಎಸ್. ಶಿವರುದ್ರಪ್ಪ 'ಚೆಂಬೆಳಕು') ಒಳಗಾಗಿದ್ದಾರೆ. ಕಣವಿಯವರೇ, 'ನನ್ನ ಮನಸ್ಸನ್ನಾಕರ್ಷಿಸಿದ... ಕಾವ್ಯ ಪ್ರಕಾರ' (-ಸಾನೆಟ್) ಎಂದಿದ್ದಾರೆ. ಕಣವಿಯವರಿಗೆ ವ್ಯಕ್ತಿಚಿತ್ರ ಮೂಡಿಸುವುದಕ್ಕೆ ಬಹುಶಃ ಸಾನೆಟ್ ಇಷ್ಟವಾದ ಪ್ರಕಾರ. ಅವರ ಇಷ್ಟ ಮತ್ತು ಆಕರ್ಷಣೆ ಯಥೋಚಿತವಾದುದೇ. ಸಾನೆಟ್ ಬಗ್ಗೆ ವರ್ಡ್ಸ್‌ವರ್ತ್ - 'ಇದರ ಕೀಲಿಯಿಂದ ಷೇಕ್ಸ್‌ಪಿಯರ್ ತನ್ನ ಹೃದಯ ಬೀಗವನ್ನು ತೆರೆದ. ಪೆಟ್ರಾರ್ಕ್‌ನ ಹೃದಯದ ನೋವಿಗೆ ಈ ಕಿರುವೀಣೆಯ ಮಾಧುರ್ಯ ಸಂತೈಕೆಯನ್ನು ನೀಡಿತು. ಈ ಕೊಳಲನ್ನು ಟೌಸ ಸಾವಿರ ಸಲ ಊದಿದ. ದೇಶಾಂತರ ಪ್ರಾಪ್ತಿಯ ಅಳಲನ್ನು ಕೆಮೊನ್ಸ್ ಇದರಿಂದ ಹೋಗಲಾಡಿಸಿಕೊಂಡ. ಡಾಂಟೆ ತನ್ನ ದರ್ಶನದ ಹುಟ್ಟುಗಳನ್ನು ಅಲಂಕರಿಸಿದ ಹಾರಗಳಲ್ಲಿ ಇದೂ ಒಂದು ಪರಿಪೂರ್ಣವಾಗಿ ರಂಜಿಸಿತು. ಈ ಮಿಣುಕು ಹುಳುವಿನ ದೀಪ, ಮ್ಲಾನವಾಗಿದ್ದ ಸ್ಪೆನ್ಸರನನ್ನು ಕತ್ತಲೆಯ ಹಾದಿಯನ್ನು ದಾಟಿ ಅಪ್ಸರೆಯರ ಲೋಕಕ್ಕೆ ಬರುವಂತೆ ಆಹ್ವಾನಿಸಿತು. ಮಿಲ್ಟನ್‌ನ ಪಥದಲ್ಲಿ ಮಂಜು ಕವಿದಾಗ ಆತನ ಕೈಯಲ್ಲಿ ಇದು ಭೇಟಿಯಾಯಿತು. ಈ ಭೇಟಿಯಿಂದ ಅವನು ಆತ್ಮವನ್ನು ಜಾಗೃತಗೊಳಿಸುವ ಧ್ವನಿಯನ್ನು ಹೊಮ್ಮಿಸಿದ' (ಡಾ. ಎಸ್. ಪ್ರಭುಶಂಕರ, ಕನ್ನಡದಲ್ಲಿ ಭಾವಗೀತೆ, ೧೯೬೬, ಪುಟ-೨೦-೨೧) ಎನ್ನುತ್ತಾನೆ. ಸಾನೆಟ್ - ಒಂದು ಆಕರ್ಷಕ ಕಾವ್ಯ ಪ್ರಕಾರವಾಗಿ ಕಣವಿಯವರನ್ನು ಸೆಳೆದಿರುವುದು ಮತ್ತು ವ್ಯಕ್ತಿಯೊಬ್ಬನನ್ನು ಸರಿಯಾದ ಕಣ್ಣೆಲೆಯಲ್ಲಿಟ್ಟು ಕಾಣಲು ಈ ಕಾವ್ಯ ಪ್ರಕಾರ ಅವರಿಗೆ ಒಗ್ಗಿರುವುದು ಈ ಹಿನ್ನೆಲೆಯಲ್ಲಿ ಉಚಿತವಾಗಿದೆ. ಕನ್ನಡ ಕವಿಗಳು ಈ ಪ್ರಕಾರವನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದಾರೆ. ಕಣವಿಯವರ ಪ್ರಯೋಗಪ್ರಿಯತೆಗೆ ಒಂದು ಭಿನ್ನವಾದ

ಅಭಿಜ್ಞೆಯಿದೆ. ಪ್ರಸ್ತುತ ಸಂದರ್ಭದಲ್ಲಿ ಪ್ರಾಸರಹಿತವಾದ ಸಾನೆಟ್ ಬರೆದದ್ದು ಮತ್ತು ಕೊನೆಯ ಎರಡು ಸಾಲುಗಳನ್ನು ಸಾರವತ್ತಾಗಿ ಪ್ರಾಸಬದ್ಧವಾಗಿಸುವುದು - ಇಲ್ಲಿಯ ವಿಶೇಷ.

'ಒಂದು ಭಾವ, ಭಾವಕ್ಕಿಂತ ಆಲೋಚನೆ ಇವುಗಳನ್ನು ಹದಿನಾಲ್ಕು ಪಂಕ್ತಿಗಳಲ್ಲಿ ಅಡಕವಾಗಿ ಇಡುವುದಕ್ಕೆ ಇದರಲ್ಲಿ (ಸಾನೆಟ್) ಪ್ರಯತ್ನ ನಡೆಯಿತು. ಇಲ್ಲಿ ಕವಿ ತಾನೇ ನೇರವಾಗಿ ನುಡಿಯುತ್ತಾನೆ; ತನ್ನದೇ ಭಾವ ಆಲೋಚನೆಗಳಿಗೆ ಅಭಿವ್ಯಕ್ತಿಯನ್ನು ನೀಡುತ್ತಾನೆ, ಯಾವ ಸಂಕೋಚಕ್ಕೂ ಎಡೆಗೊಡದೆ ಓದುಗನನ್ನೂ ತನ್ನ ಅಂತರಂಗಕ್ಕೆ ಎಳೆದುಕೊಳ್ಳುತ್ತಾನೆ' - ಸ್ಮಾರ್ಟ್‌ನು ಸಾನೆಟ್ ಬಗ್ಗೆ ಹೇಳುವ ಈ ಮಾತು (ಅದೇ...) ಮತ್ತಷ್ಟು ಪ್ರಯೋಗಶೀಲ ಗುಣಗಳ ಮೂಲಕ ಕಣವಿಯವರಿಂದ ಯಶಸ್ಸು ಪಡೆದಿದೆ.

'ಹಳಕಟ್ಟಿಯವರು'- ಕವನ ಅವರು ನಿಧನರಾದ (೧೯೬೪)ವರ್ಷದಲ್ಲಿ ಬರೆದದ್ದು. ಈ ಕವನಕ್ಕೆ ಸಾಹಿತ್ಯದ ಮಹತ್ವವಿರುವುದರ ಜೊತೆಗೆ, ಚಾರಿತ್ರಿಕ ಮಹತ್ವವೂ ಇದೆ. ಈ ಕವನ ಕಾಲಾಂತರದಲ್ಲಿ 'ಚಾರಿತ್ರಿಕ ಸ್ಮಾರಕ'ವಾಗಿ ಪರಿಗಣಿಸಲ್ಪಡುವುದು ಒಂದು ವಿಶೇಷ. ಕಾಲಾಂತರದ ಗ್ರಹಿಕೆಯಲ್ಲಿ ಇದು ನಿರಂತರವಾಗಿ ಪಡೆಯುವ ಸ್ಮರಣೆ- ಮುಖ್ಯವಾಗುತ್ತಿರುವುದಕ್ಕೆ ಒಂದು ಬಹುಮುಖ್ಯ ಅಂಶವೆಂದರೆ, ಆ ವ್ಯಕ್ತಿಯನ್ನು ಆತನ ಸಾಹಿತ್ಯ ಬದುಕಿನ ಕಾರ್ಯಫಲಗಳ ಖಚಿತ ಪಾರಿಭಾಷಿಕ ಶಬ್ದಗಳ ಮೂಲಕವೇ ಗ್ರಹಿಸುತ್ತಿರುವುದು, ಹೀಗಾಗಿ ೧೯೬೪ರಿಂದ ಈ ಕವನ ಹಂತ ಹಂತವಾಗಿ ಭಿನ್ನ ಅರ್ಥವನ್ನೋ ಭಿನ್ನ ಚಿಂತನೆಯನ್ನೋ ಭಿನ್ನ ಅಭಿಪ್ರಾಯವನ್ನೋ ಮೂಡಿಸುತ್ತಾ ಹೋಗುತ್ತಿರುವುದು (ಅಥವಾ ಹೋಗುವುದು) ಈ ಕವನದ ಶ್ರೇಷ್ಠತೆಯನ್ನು ಎತ್ತಿ ಹೇಳುತ್ತದೆ (ಎಂದು ನನ್ನ ಅನಿಸಿಕೆ), ಹಳಕಟ್ಟಿಯವರನ್ನು ಜೀವನ ಸಾಧನೆಯ ಮೂಲಕ ಗುರುತಿಸಿ ಸಮಕಾಲೀನವಾಗುತ್ತಿದ್ದಂತೆಯೇ ಚಾರಿತ್ರಿಕ ಗ್ರಹಿಕೆಯಲ್ಲಿ ಪ್ರಮುಖವೆಂದು ಪರಿಗಣಿತವಾಗುತ್ತಿರುವುದನ್ನು ಇಲ್ಲಿ ಗಮನಿಸಬೇಕು.

ಈ ಕವನದಲ್ಲಿ ವಿಷಯ ಬದಲಾಗುತ್ತಿಲ್ಲ; ಆದರೆ ಭಾವ ಬದಲಾಗುತ್ತಿದೆ. ಬದಲಾಗುತ್ತಿರುವ ಭಾವದ ಹಿನ್ನೆಲೆಯಲ್ಲಿ ಐದು ಭಾಗಗಳನ್ನು ಮಾಡಬಹುದು.

'ಯಾವುದೋ ಅಮೃತ ಗಳಿಗೆ... ಹಿಂಗಿತು ಹಸಿವು, ನೀರಡಿಕೆ' - ಮೊದಲ ಭಾಗ 'ತಾಳೆ ಗರಿ ಗರಿಯೊಡೆದು ... ನುಡಿಯ ಜ್ಯೋತಿರ್ಲಿಂಗ'- ಎರಡನೆಯ ಭಾಗ. 'ತನ್ನರಿವೆ ಗುರು..' 'ಶೂನ್ಯ ಸಂಪಾದನೆ' -ಮೂರನೆಯ ಭಾಗ. 'ರುಮಾಲದ ಕಟ್ಟುಬಿಚ್ಚಿಲ್ಲ... ಬಿಟ್ಟ ಕುಡಿಯು....' ನಾಲ್ಕನೆಯ ಭಾಗ, 'ಗೋಳ-ಗುಮ್ಮಟ ತಾನೆ... ಎಚ್ಚರಾಗದು ನಮಗೆ' - ಐದನೆಯ ಭಾಗ. ಮೊದಲನೆಯ ಭಾಗದಲ್ಲಿ - ಶ್ರಮಸಂಸ್ಕೃತಿ; ಎರಡನೆಯ ಭಾಗದಲ್ಲಿ - ಪರಿಣಾಮ; ಮೂರನೆಯ ಭಾಗದಲ್ಲಿ -ಫಲಶ್ರುತಿ; ನಾಲ್ಕನೆಯ ಭಾಗದಲ್ಲಿ - ಶಿಸ್ತು, ಸಂಯಮ, ಕಾರ್ಯಬಾಹುಲ್ಯ ಮತ್ತು ಐದನೆಯ ಭಾಗದಲ್ಲಿ- ಸಾಧಾರಣೀಕರಣ, ಸಮೂಹವನ್ನು ಅಭಿಮುಖೀಕರಿಸುವ ಚಿಂತನೆಗಳಿವೆ.

ಇಲ್ಲಿ ಬಳಕೆಯಾಗಿರುವ 'ಶರಣರನುಭಾವ ಮಂಟಪ', 'ಮಾಣಿಕ್ಯದೀಪ್ತಿ' 'ನಡೆ-ನುಡಿ', 'ಜ್ಯೋತಿರ್ಲಿಂಗ', 'ತನ್ನರಿವೆ ಗುರು', 'ಶೂನ್ಯ ಸಂಪಾದನೆ' - ಇವು ಶರಣ ಪರಿಭಾಷೆಯ ಅರ್ಥದ

ಗೊಡವೆಗೆ ಹೋಗುವುದಕ್ಕಿಂತಲೂ ಹಳಕಟ್ಟಿಯವರ ಶೋಧ ಗುಣಕ್ಕೆ ಹೊಂದಿಕೊಳ್ಳುವಂಥವುಗಳು. ಹೀಗೆಯೇ 'ಹಳಕಟ್ಟಿಯವರು' ಕವನದಲ್ಲಿ ಬಂದಿರುವ ಶರಣ ಪರಿಭಾಷೆಯ ಶಬ್ದಗಳು ಸಾಂದರ್ಭಿಕವಾಗಿ ಸಮರ್ಥ ಬಳಕೆಯನ್ನು ಪ್ರತಿಪಾದಿಸುತ್ತವೆ. 'ಶೂನ್ಯ-ಸಂಪಾದನೆ' - ಶರಣಪರಂಪರೆಯ ಒಂದು ಗಮನಾರ್ಹ ಜೀವನ ಸಿದ್ಧಾಂತವನ್ನು ಸಾರುತ್ತಿರುವಂತೆಯೇ ಆ ಜೀವನ ಸಿದ್ಧಾಂತಕ್ಕೆ ಜ್ವಲಂತರಾಗಿ ಬದುಕಿದ ಹಳಕಟ್ಟಿಯವರನ್ನು ಸಾಕ್ಷಿಯಾಗಿರಿಸಿದೆ. ಅಲ್ಲದೇ 'ಹೊನ್ನಗಣೆಯನ್ನು ಕಂಡು ಚಿನ್ನದ ಅದಿರನ್ನು ಬಂಡಿ ಬಂಡಿ ಹೇರಿ ತುಂಬಿದರೂ ದಕ್ಕಿದ್ದು ಮಾತ್ರ 'ಶೂನ್ಯ-ಸಂಪಾದನೆ' ಎಂಬ ಆಧುನಿಕ ಮಾನದಂಡಗಳಿಂದ ಮೌಲ್ಯಗಳು ಸಾಮಾಜಿಕವಾಗಿ ಪಡೆಯುತ್ತಿರುವ ಪರಿಣಾಮವನ್ನೂ ಹೇಳುತ್ತಿದೆ.

ಅಮೃತಗಳಿಗೆಯಲ್ಲಿ 'ಹೂತಿಟ್ಟ ಹೊನ್ನ ಗಣೆ'ಯನ್ನು ಹಗಲಿರುಳು ತೋಡಿ 'ಚಿನ್ನದ ಅದಿರ'ನ್ನು ತೆಗೆದು ಹಸಿವು ನೀರಡಿಕೆಗಳನ್ನು ಆರಿಸಿಕೊಂಡರು. ಆದರೆ ದಕ್ಕಿದ್ದು ಮಾತ್ರ 'ಶೂನ್ಯ-ಸಂಪಾದನೆ!' ಚಿನ್ನದ ಅದಿರು ನೀಡಿದ್ದು 'ಶೂನ್ಯ-ಸಂಪಾದನೆ' ಎನ್ನುವುದು ಶ್ರಮ ಸಂಸ್ಕೃತಿಯ ಹಳಕಟ್ಟಿಯವರ ಇಚ್ಛೆ - ಉದ್ದೇಶಕ್ಕೆ ಸರಿಹೊಂದುವಂಥದ್ದೇ! ಅವರದು (ಜ್ಞಾನದ) ಹಸಿವು-ನೀರಡಿಕೆ ಅವರ ಶ್ರಮ ಭೌತಿಕ ಸಂಪಾದನೆಗಲ್ಲ ಎಂಬುದೂ! ಅದೇ ವೇಳೆಗೆ ವ್ಯವಹೃತಗೊಂಡಿರುವ ಆಧುನಿಕ ಸಮಾಜದಲ್ಲಿ, 'ಶೂನ್ಯ-ಸಂಪಾದನೆ' ಎಂಬುದು ತಕ್ಕುದಾದದ್ದಲ್ಲ ಎಂಬುದೂ ಇಲ್ಲಿ ಸರಿಯೇ!

ಎರಡನೆಯ ಭಾಗದಲ್ಲಿ ಗಮನ ಸೆಳೆಯುತ್ತಿರುವ ಮತ್ತೊಂದು ಅಂಶವೆಂದರೆ, 'ತಾಳೆ ಗರಿ ಗರಿಯೊಡೆದು ಮರಮರವೇರಿ ಕುಕಿಲಿ ಬೆಳಕನೆಚ್ಚರಿಸಿದವು'- ಎಂಬ ವಾಕ್ಯ. ತಾಳೆಗರಿ - ಇಲ್ಲಿ ಒಂದು ವಸ್ತು ಅಥವಾ ಐತಿಹಾಸಿಕ ಸಾಮಗ್ರಿ ಅಷ್ಟೇ ಆಗಿಲ್ಲ; ಅದೊಂದು ಜ್ಞಾನದ ಬೆಳಕಿನ ಕಿರಣವೂ ಆಗಿದೆ! ಆ ತಾಳೆಗರಿ ಗರಿಯೊಡೆದು ಮರವೇರಿದೆ; ಏರಿ, ಕುಕಿಲಿಡುತ್ತಿದೆ (ಕೋಗಿಲೆಯಂತೆ ಕೂಗುವುದು). ವಾಸ್ತವವಾಗಿ ಕೋಗಿಲೆಯ ಕೂಗು ಸಂಗೀತಕ್ಕೆ ಸಂಬಂಧಿಸಿದ್ದುದು. ಅದು ಹಾಡುವ 'ಕುಹೂ ಕುಹೂ' ಪಂಚಮ ರಾಗದಲ್ಲಿದೆ. ಕೋಳಿಯ ಕೂಗು ಬೆಳಗಿಗೆ ಸೂಚನೆಯಾಗಿದೆ. ಆದರೆ ಇಲ್ಲಿ ಕೋಗಿಲೆಯು 'ಕುಕಿಲಿ' ಬೆಳಕನ್ನು ಎಚ್ಚರಿಸಿದೆ. ಈ ಬೆಳಕು ಲೌಕಿಕವಾದುದಲ್ಲ! ಅದು ಅಲೌಕಿಕ; ಜ್ಞಾನಕ್ಕೆ ಸಂಕೇತವಾಗಿರುವಂಥದ್ದು. ಇದು ಕಣ್ಣಿಂದ ನೋಡುವಂಥದ್ದಲ್ಲ. ಚಕ್ಷುವಿಗೆ ಗೋಚರಿಸುವಂಥದ್ದು! ಹೀಗಾಗಿ ಇಲ್ಲಿ ಬರುವ ಬೆಳಕು ಸೂಚಕ ಶಬ್ದಗಳಾದ 'ಮಾಣಿಕ್ಯದೀಪ್ತಿ', 'ಜ್ಯೋತಿರ್ಲಿಂಗ'ಗಳು ಕೋಗಿಲೆ ಸಾರಿ ಹೇಳುತ್ತಿರುವ ಬೆಳಕಿನ ಎಚ್ಚರಿಕೆಯ ರೂಪಕಗಳಾಗಿವೆ. ಆದ್ದರಿಂದಲೇ ಶರಣರ ಮತ್ತು ಹಳಕಟ್ಟಿಯವರ ಸಾಧನೆಯ ಜೊತೆಗೆ ಈ ಶಬ್ದಗಳು ಮತ್ತೊಂದು ಅರ್ಥವನ್ನು ಪಡೆಯುತ್ತದೆ.

ತಾಳೆಗರಿ ಗರಿಯೊಡೆದು ಮರವೇರುವುದು, ಅದು ಕೋಗಿಲೆಯಂತೆ ಕೂಗಿ ಜ್ಞಾನದ ಬೆಳಕಿನ ಸೂಚನೆ ಕೊಡುತ್ತಿರುವುದು, ಈ ಮಧ್ಯೆ ಮಾಣಿಕ್ಯದ ದೀಪ್ತಿ... ಇತ್ಯಾದಿಗಳನ್ನು ನುಸುಳುವುದು -

ಇವು ಹಳಕಟ್ಟಿ ಶರಣರು, ವಚನಸಾಹಿತ್ಯ ಮತ್ತು ಸಾಧಿತ ಬದುಕು ಇವುಗಳನ್ನು ಸಮರ್ಥವಾಗಿ ಕಟ್ಟಿಕೊಡುತ್ತವೆ.

ಹಳಕಟ್ಟಿಯವರ ಕಾರ್ಯಬಾಹುಲ್ಯತೆಯನ್ನು, ತಾದಾತ್ಮ್ಯವನ್ನು, 'ರುಮಾಲದ ಕಟ್ಟು ಬಿಚ್ಚಿಲ್ಲ, ತೆಗೆದಿಲ್ಲ ಇಟ್ಟ ಕನ್ನಡಕ...' ಎಂದು ಹೇಳುತ್ತಲೆ ಅವರ ಶಿಸ್ತಿನ ಬದುಕಿನ ಬಗ್ಗೆ ಮನನ ಮಾಡಲಾಗಿದೆ. ಹಳಕಟ್ಟಿಯವರನ್ನು ಈ ಎರಡೂ ಭಿನ್ನಭಾವ ಚಿಂತನೆಯಲ್ಲಿ ಮನ ಮುಟ್ಟಿಸುವುದರ ಜೊತೆಜೊತೆಗೆ ವ್ಯಕ್ತಿತ್ವದ ಪರಿಚಯದ ಗಾಢತೆಯನ್ನು ಸೂಕ್ಷ್ಮವಾಗಿ ಹೇಳುತ್ತಿರುವುದು ಇಲ್ಲಿ ಮುಖ್ಯ. 'ತೆಗೆದಿಲ್ಲ ಇಟ್ಟ ಕನ್ನಡಕ ... ಇವು ಸಾಂಸ್ಕೃತಿಕ ಕಾಳಜಿಯನ್ನು ಸಾಂಸ್ಕೃತಿಕ ಕರ್ತವ್ಯವನ್ನು ಕಾವ್ಯಾತ್ಮಕವಾಗಿ ಗ್ರಹಿಸುವ ವಿಧಾನ. ಕಾವ್ಯ-ಇನ್ನೊಂದು ಅರ್ಥದ ಕಡೆಗೆ ಚಿಂತಿಸುತ್ತಿರುವುದು ಅಂದರೆ ಪ್ರಜ್ಞಾವಂತ ಓದುಗನ ಮನದಲ್ಲಿ ಮೂಡುವ ಚಿತ್ರಕ್ಕೆ ನೆರವು ನೀಡುತ್ತಿರುವುದು ಇಲ್ಲಿ ಮುಖ್ಯ.

ಇಡೀ ಕವನದಲ್ಲಿ ಕಣವಿಯವರು ಯಾವುದಕ್ಕೂ ತಡಕಾಡಿಯೇ ಇಲ್ಲ. ತಮ್ಮ ಯಥಾರೀತಿಯ ಸಮೃದ್ಧ, ಅಕೃತಕ, ಅನುಭವದ ಕಾಣ್ಕೆಯ ಭಾಷೆಯಲ್ಲಿಯೇ ಸಿದ್ಧಗೊಳಿಸಲಾಗಿದೆ. ಕನ್ನಡದ ಓದುಗನಿಗೆ ಮತ್ತು ವಿಮರ್ಶಕನಿಗೆ ಕಣವಿಯವರು ತಮ್ಮನ್ನೂ ಅರಿಯುವ ನಿರಾಡಂಬರ ಭಾಷೆಯಲ್ಲಿಯೇ ಈ ಕವನವೂ ಇದೆ.

ಪು.ತಿ.ನ. ಬಗ್ಗೆ,

'ತುಂಬಿದುದು ತುಳುಕಿ ಹೋಗದ ಹಾಗೆ ತುಟಿಯಂಚಿನಲ್ಲಿ ನಗು....' ಎಂದು ಬರೆಯುವಾಗ ಸ್ನಿಗ್ಧ ಮಗುವಿನ ಚಿತ್ರ ನೆನಪಾಗುತ್ತದೆ.

ತೀನಂಶ್ರೀ ಬಗ್ಗೆ (ನಿಧನರಾದಾಗ)

'ಕನ್ನಡದ ಕಲಶ ತುಳುಕಿತ್ತೇ? ಕೈಯ ಹೊತ್ತಗೆ ಜಾರಿ, ಸರಸ್ವತಿಯ ವಜ್ರದ ಓಲೆ ಕಳಚಿತ್ತೇ?' - ವಿದ್ವತ್ತಿನ ಜೀವವೊಂದು ಅಂತ್ಯಗೊಂಡದ್ದನ್ನು ಯಥೋಚಿತವಾಗಿ ವರ್ಣಿಸಿದ್ದುಂಟು.

ಹಳಕಟ್ಟಿ ಮತ್ತು ಅಂಥ ನಾಡಿನ ಸಾಧಕರ ಬಗ್ಗೆ ಒಂದು ಲೇಖನ ಬರೆಯುವ ಮೊದಲು ಇಂಥದ್ದೊಂದು ಸಾನೆಟ್ ಬರೆದು ಪ್ರಸ್ತುತಪಡಿಸುತ್ತಿರುವುದು ನಮಗೆ ಏಕೆ ಮುಖ್ಯವಾಗುತ್ತದೆ ಎಂದರೆ, ಹದಿನಾಲ್ಕು ಸಾಲುಗಳ ಈ ಸಾನೆಟ್ ಕಾಲಾಂತರದಲ್ಲಿ ಇತಿಹಾಸದ ಒಬ್ಬ ವ್ಯಕ್ತಿಯ ಸಾಹಿತ್ಯಕ ಸ್ಮಾರಕವಾಗುತ್ತಿರುವುದರಿಂದಲೇ, ಅಂದರೆ ಒಬ್ಬ ವ್ಯಕ್ತಿಯನ್ನು ಕುರಿತ ಸಿದ್ಧ ಕವಿಯೊಬ್ಬನ ಸೂಕ್ಷ್ಮ ಸಂವೇದನೆಯ ಪ್ರತಿಸ್ಪಂದನವಿದು!

ಪ್ರಸ್ತುತ ಸಾನೆಟ್ ಕೊನೆಯ ಸಾಲುಗಳು.

'ಗೋಳ -ಗುಮ್ಮಟ ತಾನೆ ತಲೆ ಬಾಗಿಸಿತು ನಿಮಗೆ,
ಏಳು ಸಲ ಕರೆದರೂ ಎಚ್ಚರಾಗದು ನಮಗೆ!

ವಾಸ್ತವವಾಗಿ ಕವಿ ಕಣವಿ ಓದುಗರನ್ನು ಮುಖಾಮುಖಿಯಾಗುತ್ತಿರುವುದು ಕೊನೆಯ ಈ ಎರಡು ಸಾಲುಗಳಲ್ಲಿ. ಕಣವಿಯವರ ಅತ್ಯಂತ ಮೆಚ್ಚಿನ ಸಾನೆಟ್ಟಿನ ಸಾಲುಗಳೆಂದರೆ, ಕೊನೆಯ ಎರಡು ಸಾಲುಗಳು. ಆ ಎರಡು ಸಾಲುಗಳನ್ನು ಅವರು ಅವಶ್ಯವಾಗಿ ಪ್ರಾಸಬದ್ಧಗೊಳಿಸುತ್ತಾರೆ. ಬಿ.ಎಂ. ಶ್ರೀಯವರು ಹಳಕಟ್ಟಿಯವರನ್ನು 'ವಚನಗುಮ್ಮಟ' ಎಂದಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. 'ಕಟ್ಟಡ (ಸ್ಥಾವರ) ಗುಮ್ಮಟಕ್ಕಿಂತಲೂ 'ವ್ಯಕ್ತಿ (ಜಂಗಮ) ಗುಮ್ಮಟ'ಕ್ಕೆ ಕೊಟ್ಟ ಪ್ರಥಮ ಪ್ರಾಶಸ್ತ್ಯವೇ ಇಲ್ಲಿ 'ಗೋಳ-ಗುಮ್ಮಟ' ತಾನೇ ತಲೆ ಬಾಗಿಸಿತು' ಎಂದೂ ಶ್ರಮ ಸಂಸ್ಕೃತಿಯನ್ನು ಬದುಕಿನ ಧೋರಣೆಯಾಗಿಸಿಕೊಂಡು ಹಳಕಟ್ಟಿ ಬಿಟ್ಟು ಹೋಗಿರುವ ಕಾರ್ಯಗಳನ್ನು ಮುಂದುವರಿಸಬೇಕಾಗಿರುವ ಹೊಣೆಗಾರಿಕೆಯನ್ನು ಕೊನೆಯಲ್ಲಿ ಮನನ ಮಾಡಲಾಗಿದೆ. ಎರಡೂ ಗುಮ್ಮಟಗಳು ಹಳಕಟ್ಟಿಯವರಿಗೆ ಶರಣಾಗಿವೆ; ಎಚ್ಚರಗೊಳ್ಳಬೇಕಾದ ಮುಂದಿನ ಪೀಳಿಗೆ ಪರಂಪರೆಯಲ್ಲಿ ಸ್ಥಾನ ಪಡೆಯಬೇಕಾದುದು ಇಲ್ಲಿ ಮುಖ್ಯವಾಗುತ್ತಿದೆ.

**ಮೃತ್ಯುಂಜಯ ರುಮಾಲೆ**

# ೨೮. ಎಪ್ಪತ್ತರ ಬೇಂದ್ರೆ

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
ತುಂಬಿ - ತಲೆಯಾಡಿಸುತ, ಯಾವುದೋ ಒಳದನಿಗೆ
ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ
ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ! ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟ; ಅರಗಳಿಗೆ-
ಹೊರ-ಒಳಗೆ ತುಂಬಿ ತುಳುಕುವ ಬೆಡಗು. ಕಡಲ ಗುಟು-
ಕರಿಸಿ, ಚಿಕ್ಕೆಗಳ ಮುಕ್ಕಳಿಸುವರು; ತಟ್ಟನೆ ಒಗಟು
ಒಡೆಯುವ ಒಡಪು-ನುಡಿ: ಕುಡಿಮಿಂಚು ಬಾನ ಗುಡಿಗೆ.
ಇಪ್ಪತ್ತೋ? ಎಪ್ಪತ್ತೋ? ಮುಪ್ಪತ್ತು ಮುಂದೆ ನಡೆ;
ಅಂಬಿಕಾತನಯನಿಗೆ ದತ್ತು ಕೊಟ್ಟಂದು ಇವ -
ರೊಪ್ಪತ್ತು. ಜಗದಂಬೆ - ಹಡಲಿಗೆ ಹೊತ್ತು ಕುಣಿವ -
ಗೆಲ್ಲಿ ಪುರಸತ್ತು? ಹಣ್ಣಾದ ಕೇದಿಗೆಯ ಹೊಡೆ;
ಚೂಪಾದ ಗರಿ : ಹುಷಾರಿ ; ಕಂಪಿಗೆಲ್ಲಿಯ ಕೊರತೆ;
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

'ಕವಿಗೆ ಕವಿ ಮುನಿವಂ' - ಇದು ಒಂದು ಪ್ರಾಚೀನ ಹೇಳಿಕೆ. ಈ ಮಾತಿನಲ್ಲಿ ಸತ್ಯಾಂಶವಿದ್ದರೂ 'ಕವಿಗೆ ಕವಿ ಮಣಿವಂ' - ಎಂಬ ಗೌರವಪ್ರಜ್ಞೆ ಮಾತ್ರ ಕವಿ ಸಮಾಜದಲ್ಲಿ ಆರೋಗ್ಯಪೂರ್ಣ ವಾತಾವರಣವನ್ನು ನಿರ್ಮಿಸಬಲ್ಲದು. ಈ ಮನೋಧರ್ಮದಿಂದಾಗಿ ಕವಿಯಿಂದ ಕವಿ ಪೂಜೆ ಜರುಗಿ ಇಬ್ಬರೂ ಕೃತಾರ್ಥರಾಗುತ್ತಾರೆ. ಈ ಹಿನ್ನೆಲೆಯಲ್ಲಿ ಕಣವಿಯವರ 'ಎಪ್ಪತ್ತರ ಬೇಂದ್ರೆ' ಕವನ ಅರ್ಥಪೂರ್ಣವೆನಿಸುತ್ತದೆ. ('ಎರಡು ದಡ' ಸಂಗ್ರಹ : ೧೯೬೯)

ಬೇಂದ್ರೆಯವರನ್ನು ಕುರಿತು ಬಹಳ ಜನ ಬಹಳಷ್ಟು ಬರೆದಿದ್ದಾರೆ. ಆದರೆ ಅವರ ನೇರ 'ಉತ್ತರಾಧಿಕಾರಿ' ಕವಿಯೊಬ್ಬನ ಈ ಕವಿತೆ ಸಾಹಿತ್ಯಿಕವಾಗಿ ಬೆಲೆಯುಳ್ಳ ಬರವಣಿಗೆ ಎನಿಸುವುದಲ್ಲದೆ ಐತಿಹಾಸಿಕವಾಗಿಯೂ ಬೆಲೆಯುಳ್ಳ ದಾಖಲೆಯೆನಿಸುತ್ತದೆ. ಬೇಂದ್ರೆ, ಕಣವಿ ಒಂದೇ ಸಮಯದ ಒಂದೇ ಪ್ರದೇಶದ ಕವಿಗಳು. ಮೂಲತಃ ರಮ್ಯ ಸಂಪ್ರದಾಯದವರಾಗಿದ್ದರೂ ಕಣವಿ ಅದನ್ನು ದಾಟಿ ನವ್ಯದಲ್ಲಿಯೂ ನೆಲೆಯೂರಿ ನಿಂತವರು, 'ಅಂಬಿಕಾತನಯದತ್ತ'ರನ್ನು ಆದ್ಯಂತವಾಗಿ ವ್ಯಾಖ್ಯಾನಿಸುವುದು ಕಣವಿಯವರಿಗೆ ಸಾಧ್ಯವಾಗಬಹುದಾಗಿದೆ.

'ಎಪ್ಪತ್ತರ ಬೇಂದ್ರೆ' ಒಂದು ಸಾನೆಟ್. ರಸಿಕ-ರಂಗ, ಲಾಲಬಹಾದ್ದೂರ ಶಾಸ್ತ್ರೀ, ತೀ.ನಂ.ಶ್ರೀ. ಮೊದಲಾದ ವ್ಯಕ್ತಿಚಿತ್ರಗಳನ್ನು ಸಾನೆಟ್‌ನಲ್ಲಿ ಕಣವಿಯವರು ಕೆತ್ತಿದ್ದರೂ ವ್ಯವಸಾಯ ದೃಷ್ಟಿಯಿಂದ ತಮಗೆ ತೀರ ಹತ್ತಿರದ ಬೇಂದ್ರೆಯವರನ್ನು ಕುರಿತು ಏನು ಹೇಳುತ್ತಾರೆ? ಎಂದು ನಾವು ಆತುರರಾಗುತ್ತೇವೆ. ಈ ಆತುರಕ್ಕೆ ಉತ್ತರವಾಗಿದೆ ಈ ಕವಿತೆ.

ಸಾನೆಟ್ ೮+೬ ಸಾಲುಗಳಲ್ಲಿ ಮೈಮುರಿದು ನಡುವೆ ಬಂಧ. ಪಳಚ್ಚನೆ ಹೊಳೆದ ಒಂದು ವಿಚಾರ ಎಂಟು ಸಾಲಿನವರೆಗೆ ಮೈಬಿಚ್ಚಿಕೊಳ್ಳುತ್ತಾ ಬಂದು ಒಂಬತ್ತನೆಯ ಸಾಲಿನಿಂದ ಬೇರೊಂದು ದಿಕ್ಕು ಹಿಡಿದು ಪೂರ್ಣಗೊಳ್ಳುವುದು, ಇದರ ಲಕ್ಷಣ. ಇದಕ್ಕೆ ಅನುಗುಣವಾಗಿ ಈ ಪದ್ಯ 'ಕುಡಿಮಿಂಚು ಬಾನ ಗುಡಿಗೆ' ಎಂಬಲ್ಲಿ ಒಂದು ಘಟ್ಟವನ್ನು ಮುಟ್ಟಿ ಮುಂದೆ ಇನ್ನೊಂದು ಘಟ್ಟವನ್ನೇರಿ ನಡೆಯುತ್ತದೆ.

ಈ ಕವನ ಪ್ರಾರಂಭವಾಗುವುದೇ 'ಮಿಂಚು', 'ನಾದ', 'ನೀರು'ಗಳಿಂದ ವಿಜೃಂಭಿಸುವ ಅಪೂರ್ವ ಮಳೆಗಾಲ ಪ್ರತಿಮೆಯಿಂದ, ಕಣ್ಣನ್ನು ಮಿಂಚಿಸಿ ನೂರು ಹಂಚಿಕೆಗಳಿಂದ ತುಂಬಿದ ತಲೆಯನ್ನು ತೂಗುತ್ತ, ಒಳದನಿಗೆ ನಾದ ಕೂಡಿಸಿ ನೆಲಕೆ ನೀರು ಬರಿಸುವ ಹಾಗೆ ಬೇಂದ್ರೆಯವರು ಈ ಕವನರಂಗದ ಮೇಲೆ ಒಮ್ಮೆಲೆ ಬಂದುಬಿಡುತ್ತಾರೆ.

ಧಾರವಾಡದಲ್ಲಿ ತಿರುಗಾಡುವ ಬೇಂದ್ರೆಯವರ ಈ ಚಿತ್ರ ಕನ್ನಡ ಸಾಹಿತ್ಯಕ್ಕೆ ಬಂದ ಕವಿ ಬೇಂದ್ರೆಯವರನ್ನೂ ಸಂಕೇತಿಸುತ್ತದೆ. ಷಟ್ಪದಿಯ ಬೀಜಗಳು ಸತ್ವಹೀನವಾಗಿ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಕ್ಷಾಮಸ್ಥಿತಿ ನೆಲೆಯೂರಿದಾಗ ಬಂದವರು, ಬೇಂದ್ರೆಯವರು. ಹೀಗಾಗಿ ಅವರು ಮಳೆಗಾಲವಾಗಿಯೇ ಬರಬೇಕಾಗುತ್ತದೆ, ಬಂದರು. ಇವರ ಬರುವಿಕೆ ದಾಹದಿಂದ ಬಳಲುತ್ತಲಿದ್ದ 'ನೆಲಕೆ ನೀರು ಬರಿಸು'ತ್ತದೆ. ಈ ನೀರು ಒಮ್ಮೆ ಬೇಂದ್ರೆ ಮಳೆಯಾಗಿ ಸುರಿದುದರ ಫಲವೆನಿಸಿದರೆ, ಇನ್ನೊಮ್ಮೆ ಅವರು ನೆಲವೊದ್ದು ಊಟೆಯಾಗಿಸಿದುದರ ಫಲವೆನಿಸುತ್ತದೆ. 'ನೆಲವೊದ್ದು ನೀರು ತರಿಸುವ' ಬೇಂದ್ರೆಯವರ ತಾಕತ್ತನ್ನು ಇಲ್ಲಿ ಸರಿಯಾಗಿಯೇ ಗುರುತಿಸಲಾಗಿದೆ.

ಬೇಂದ್ರೆಯವರು ಮಿಂಚು, ನಾದಗಳನ್ನು ಹೊತ್ತುಕೊಂಡೇ ಅಂದರೆ ದಾರ್ಶನಿಕ ಶಕ್ತಿ ಮತ್ತು ಕವಿತಾ ಶಕ್ತಿಗಳನ್ನು ಮೇಳವಿಸಿಕೊಂಡೇ ಇಲ್ಲಿ ಬಂದಿದ್ದಾರೆ. ಇಲ್ಲಿಯ 'ಬೀಸುಗಾಳಿಯ ಜೊತೆಗೆ ಬಂದರದೋ ಬೇಂದ್ರೆ' ಎಂಬ ಮಾತು ಅವರು ಪಶ್ಚಿಮದ ಹೊಸ ಗಾಳಿಯೊಂದಿಗೆ ಬಂದರೆಂದೂ ಒಮ್ಮೆಲೆ ಗಾಳಿಯಂತೆ ನುಗ್ಗಿ ಬಂದರೆಂದೂ ಸೂಚಿಸುತ್ತದೆ.

ಈ ಚಿತ್ರ ನಿಂತೂ ನಿಲ್ಲದೆ ಮುಂದುವರಿದು, ಬಂದ ಬೇಂದ್ರೆಯವರು ನಿಂತು ಸಾಹಿತ್ಯಕ್ರಿಯೆಯಲ್ಲಿ ತೊಡಗಿಕೊಂಡ ರೀತಿಯನ್ನು ಬಿಡಿಸಿ ಹೇಳುತ್ತದೆ. ಕಣವಿಯವರ ದೃಷ್ಟಿಯಲ್ಲಿ ಬೇಂದ್ರೆಯವರ ಮಾತು ಮಾಂತ್ರವೇನೋ ನಿಜ. ಆದರೆ ಆ ಮಾತಿನೊಂದಿಗೆ ಕೈ ಮೈಗಳೂ ಮಾತನಾಡುವಲ್ಲಿ ಮಾತು 'ಮಾಟ'ವಾಗಿ ಮಾಂತ್ರಿಕನ ಆಟಕ್ಕೆ ತಿರುಗುತ್ತದೆ. ಆಗ - ಅರೆಗಳಿಗೆಯಲ್ಲಿಯೇ ತುಂಬುವುದು, ತುಳುಕುವುದು, ಗುಟುಕರಿಸುವುದು, ಮುಕ್ಕಳಿಸುವುದು, ಒಗಟು ಒಡೆಯುವುದು-ಏನೆಲ್ಲ ಕ್ರಿಯೆಗಳು ಜರುಗಿ ಹೋಗುತ್ತವೆ. ಪಳಪಳನೆ ನಡೆದುಹೋಗುವ ಈ ಕ್ಷಣಾರ್ಧ ಘಟನೆ ಸಹೃದಯನ ಕಣ್ಣು ಕುಕ್ಕಿಸುವಲ್ಲಿ ಆತ ತಾನಾಗಿಯೇ ಒಂದು ಮಾತಿನಲ್ಲಿ "ನುಡಿ; ಕುಡಿಮಿಂಚು ಬಾನಗುಡಿಗೆ" ಎಂದು ಒಪ್ಪಿಕೊಳ್ಳುತ್ತಾನೆ. ಬೇಂದ್ರೆ ಅವರ ಮಾತುಗಾರಿಕೆಯೇ ಮಿಂಚಿನಂತಹದು; 'ಮಿಂಚಿ ಮಾಯವಾಗು'ವಂತಹುದು. ಇಲ್ಲಿ ನೀರಾಗಿ ಬಂದು ದಾಹ ತಣಿಸಿದ ಬೇಂದ್ರೆ, ಮಿಂಚಾಗಿ ನಿಂದು ಕನ್ನಡದ ಗುಡಿ ಅಲಂಕರಿಸಿದ ಒಂದು ಚಿತ್ರ ಸಿದ್ಧವಾಗುತ್ತದೆ.

ಈಗ ಇನ್ನೊಂದು ಚಿತ್ರ; ಇದು ಪ್ರಾರಂಭವಾಗುವುದೇ "ಇಪ್ಪತ್ತೋ? ಎಪ್ಪತ್ತೋ?" ಎಂಬ ಸಂದೇಹದಿಂದ. ಈ ಮಾತು ಎಪ್ಪತ್ತು ವರ್ಷ ತುಂಬಿದ್ದರೂ ಬೇಂದ್ರೆಯವರ ಇಪ್ಪತ್ತರ ತಾರುಣ್ಯವನ್ನು ಸೂಚಿಸುತ್ತದೆ. ತರುವಾಯದ "ಮುಪ್ಪತ್ತು ಮುಂದೆ ನಡೆ" ಎಂಬ ವಾಕ್ಯದಲ್ಲಿ ಕವಿಗೆ ಶತಾಯುಷ್ಯವನ್ನು ಕೋರಲಾಗಿದೆ. ಇಲ್ಲಿಯೇ

**ಅಂಬಿಕಾತನಯನಿಗೆ ದತ್ತು ಕೊಟ್ಟಂದು ಇವ-**
**ರೊಪ್ಪತ್ತು; ಜಗದಂಬೆ -ಹಡಲಿಗೆ ಹೊತ್ತು ಕುಣಿವ -**
**ಗೆಲ್ಲಿ ಪುರಸತ್ತು?**

ಎಂಬ ಸಾಲುಗಳಿವೆ. ಇಲ್ಲಿ ಕಾವ್ಯನಾಮವಾದ 'ಅಂಬಿಕಾತನಯದತ್ತ'ನಿಗೆ ದತ್ತು ಕೊಡಲಾದ ಕವಿಯಿವರು ಎಂಬ ಅರ್ಥವನ್ನು ಎಳೆಯಲಾಗಿದೆ. ಲೌಕಿಕ ತಂದೆಯಿಂದ ಕವಿ ಧರಿಸಿ ಮಾಂಸಪಿಂಡ ಪ್ರತಿಭಾಪಿಂಡವಾಗುವುದು ಆತನು ದೈವೀಪುರುಷನಿಗೆ ದತ್ತು ಹೋದಾಗ ಮಾತ್ರ. ಬೇಂದ್ರೆಯವರು ದತ್ತು ಹೋದುದು, ಅಂಬಿಕಾತಯನಿಗೆ; ದತ್ತು ಸ್ವೀಕರಿಸಿದ ಆ ಅಂಬಿಕಾತನಯ ಷಣ್ಮುಖನೋ ಗಜಮುಖನೋ ಸಂದೇಹ. ಒಬ್ಬ ದೇವಸೈನ್ಯದ ಹರಿಕಾರ, ಇನ್ನೊಬ್ಬ ವ್ಯಾಸಪ್ರತಿಭೆಯ ಲಿಪಿಕಾರ. ಸಾಹಿತ್ಯ ಸಂದರ್ಭ ಕಾರಣವಾಗಿ ಬೇಂದ್ರೆ ದತ್ತು ಹೋದುದು ಈ ಲಿಪಿಕಾರನಿಗೆ ಎಂದು ಹೇಳುವುದೇ ಯೋಗ್ಯ. 'ವೀರನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ" ತತ್ವವನ್ನು ಒಪ್ಪಿಕೊಂಡವರು ಬೇಂದ್ರೆಯವರು ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ದತ್ತು ಹೋದ ಕ್ಷಣದಿಂದ ಬೇಂದ್ರೆ "ಒಪ್ಪತ್ತು". ಈ ಪದ ಒಂದು ವ್ರತದ, ಸಾಹಿತ್ಯ ವ್ರತದ ಸಂಕೇತವಾಗಿದೆ.

ಬೇಂದ್ರೆ "ಜಗದಂಬೆ-ಹಡಲಿಗೆ ಹೊತ್ತು ಕುಣಿವ" ಕವಿ. ತಲೆಯಲ್ಲಿ ಹಡಲಿಗೆ, ಕಾಲಲ್ಲಿ ಕುಣಿತ. ಹಡಲಿಗೆ ದೈವೀಶಕ್ತಿಯ ಪ್ರತೀಕವಾದರೆ ಕುಣಿತ ಅದರ ಅಭಿವ್ಯಕ್ತಿಯ ಪ್ರತೀಕ. ಹೀಗೆ ಕಾವ್ಯಶಕ್ತಿ-ಕಾವ್ಯಾಭಿವ್ಯಕ್ತಿಗಳನ್ನು ಸಮನ್ವಯಿಸಿಕೊಂಡ ಈ ಕವಿಗೆ 'ಎಲ್ಲಿ ಪುರಸತ್ತು?" ಎಂಬ

ಮಾತು, ಅವರ ಸಾಹಿತ್ಯಕೃಷಿ ನಿರಂತರತೆಯನ್ನು ಸೂಚಿಸುತ್ತದೆ. ಮೇಲೆ ಹೇಳಿದ ಎಲ್ಲ ಕೋನಗಳನ್ನು ಕೇಂದ್ರವಾಗಿ ನಿಂತು ಬಂಧಿಸಿವೆ.

**ಹಣ್ಣಾದ ಕೇದಿಗೆಯ ಹೊಡೆ;**
**ಚೂಪಾದ ಗರಿ: ಹುಷಾರಿ ; ಕಂಪಿಗೆಲ್ಲಿಯ ಕೊರತೆ ?**
**ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.**

ಎಂಬ ಸಾಲುಗಳು. ಇದು ಇಡೀ ಪದ್ಯಕ್ಕೆ ಅರ್ಥಪೂರ್ಣ ಕೊನೆಯನ್ನು ಒದಗಿಸಿದೆ. ಎಪ್ಪತ್ತರ ಬೇಂದ್ರೆಯವರಲ್ಲಿ " ಹಣ್ಣಾದ ಹೊಡೆ"ಯನ್ನು ಕಣವಿ ಕಂಡಿದ್ದಾರೆ; ಈಗ ಬೇಂದ್ರೆ ಮಾಗಿದ ಒಂದು ಜಾನಪದ ಹೂವು ಎಂದು ಸೂಚಿಸಿದ್ದಾರೆ. ಇಲ್ಲಿ ಜಾನಪದ ಹೂವಾದ ಕೇದಿಗೆ ಜಾನಪದ ಕವಿಯಾಗಿ ಬೇಂದ್ರೆಯವರ ಕವಿತ್ವವನ್ನು ಸಮರ್ಥವಾಗಿ ಪ್ರತಿಮಿಸಿದೆ. ಬೇಂದ್ರೆಯವರ ಕವಿತ್ವವೇ "ಪರಿಮಳಕೆಗರಿ ಮೂಡಿತೋ " ಎಂಬ ಮಾದರಿಯದು.

ಇಲ್ಲಿಯ "ಚೂಪಾದ ಗರಿ; ಹುಷಾರಿ;" ಮತ್ತು "ಕಂಪಿಗೆಲ್ಲಿಯ ಕೊರತೆ;" ಎಂಬ ಮಾತುಗಳು ಬೇಂದ್ರೆಯವರ ಎರಡು ಗುಣವಿಶೇಷಗಳನ್ನು ಪ್ರತಿನಿಧಿಸುತ್ತವೆ. ಅವು; ಬೇಂದ್ರೆಯವರ 'ವಾಕ್' ಖಡ್ಗಧಾರಾ ತೀಕ್ಷ್ಣ. 'ಅರ್ಥ' ತವನಿಧಿಯ ಭಂಡಾರ. ಕೇದಿಗೆಯೊಂದಿಗಿನ ಸರಸದ ಹಸ್ತ ಕೇಡಿನಂತೆ ಬೇಂದ್ರೆಯೊಂದಿಗಿನ ಸರಸದ ಪರಿಣಾಮ. ಮೈಮರೆತು ಮಾತನಾಡಿದರೆ ಮುಳ್ಳಾಗಿ ತಿವಿಯುವ ಅವರು, ಮನದೆರೆದು ಮಾತನಾಡಿದರೆ ಗಂಧವಾಗಿ ಪರಿಮಳಿಸುತ್ತಾರೆ. ಹೀಗಾಗಿ ಅವರನ್ನು ತುಂಬ ಎಚ್ಚರಿಕೆಯಿಂದ ಬಳಸಿಕೊಳ್ಳಬೇಕೆಂದು ಇಲ್ಲಿಯ ಸೂಚನೆ.

"ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ" ಇದು ಅಂಬಿಕಾತನಯದತ್ತ ಸೂತ್ರ. ಇಲ್ಲಿ ಅವರ ಸಾಧನೆ, ಸಿದ್ಧಿಗಳ ವ್ಯಾಖ್ಯೆಯಿದೆ. ಸಾಧನಕೇರಿ ನಿವಾಸಿ ಬೇಂದ್ರೆ ಕವಿತೆ ಬರೆಯುವುದು ನಿಜ. ಆದರೆ ಸಾಧನಕೆ ಏರಿ ನಡೆದ ಕಾರಣವಾಗಿ ಅವರ ನುಡಿಯೆಲ್ಲ ಕವಿತೆಯಾಗಲೇಬೇಕು, ಕವಿತೆಯಾಗಿದೆ ಎಂಬುದು ಕಣವಿಯವರ ಗಟ್ಟಿ ನಂಬಿಕೆ.

ಹೀಗೆ ತನ್ನ ಹತ್ತಿರದ, ತನ್ನ ಮೇಲೆ ಪ್ರಭಾವ ಬೀರಿದ ಕವಿಯನ್ನು ಹಲವು ದಿಕ್ಕುಗಳಲ್ಲಿ ನಿಂತು ನಿರೀಕ್ಷಿಸಿದುದರ ಫಲಗಳೆಲ್ಲ ಇಲ್ಲಿ ಸಫಲ ಕವನವನ್ನಾಗಿಸಿವೆ. "ಚೂಪಾದ ಗರಿ; ಹುಷಾರಿ;" ಎಂದು ನಮಗೆ ಹೇಳುವಂತೆ ತಾವೂ ಎಚ್ಚರವಹಿಸಿ ಒಂದೊಂದಾಗಿ ಗರಿ ಬಿಡಿಸುತ್ತ ಕೇದಿಗೆಯ ಗಂಧವನ್ನು ಗುರುತಿಸಿದ್ದಾರೆ. ಹೀಗಾಗಿ ಗಂಧವೇ ಗರಿ ಹೊಡೆಯುತ್ತ ಬಂದ ರೀತಿಯ ಈ ಕವನವೇ ಇಡಿಯಾಗಿ ಒಂದು "ಕೇದಿಗೆಯ ಹೊಡೆ".

ಎಂ.ಎಂ. ಕಲಬುರ್ಗಿ

# ೨೯. ಲಾಲಬಹದ್ದೂರ ಶಾಸ್ತ್ರಿ

ನಮ್ಮ ಮಧ್ಯೆ ಇವನಿದ್ದನೆಂದರೆ ನಂಬುವೆಯ
ಇಷ್ಟು ಸಾದಾ ಸೀದಾ ಮನುಷ್ಯ ? ಬಡತನದ
ಪಲ್ಲಕ್ಕಿ ಹೊತ್ತು ಮೆರೆಸಿದ ಪ್ರಾಮಾಣಿಕತೆಯ.

ಹೆಂಡತಿ ಮಕ್ಕಳಿಗೆ ಆಸ್ತಿ ಸಂಪಾದಿಸದ
ಮನೆಯಿರದ ಪ್ರಧಾನಿ; ಇವನೆಂಥ ಭಾರತೀಯ?
ಬಂದದ್ದು ರಂಜಿಯ ಮಾಡಿ ರಾಟೆ ತಿರುಗಿಸಿದ.

ಗದ್ದುಗೆಯನೇರಿದರು ಕಾಣಿಸಿಕೊಳದ, ಕಿರಿಯ.
ಬಾಜಾಬಜಂತ್ರಿಯ ನಿಲಿಸಿ ಸಹಜ ತಂತಿಯ ಮಿಡಿದ
ಎಲ್ಲರಿಗು ಕಿವಿಗೊಟ್ಟು ತನ್ನ ಒಳ ದನಿ ಮರೆಯ.

ಮಹಾಪೂರವ ಧೀರ ತೆಪ್ಪದಲಿ ದಾಟಿಸಿದ;
ಮಾಯಿಸಿದ ಮೈಮೇಲೆ ಬಂದು ಬಿದ್ದವರ ಗಾಯ,
ಯಾರಿಗೂ ಸಿಗದ ಬಿಳಿ ಪಾರಿವಾಳವ ಹಿಡಿದ.

ಮಧ್ಯರಾತ್ರಿಯಲಿಂತು ಕೊರೆದು ಮಿಂಚಿನ ಗೆರೆಯ
ಮರೆಯಾದ ; ದಡಕ್ಕೆ ಮುಟ್ಟಿಸಿದ ಹೊತ್ತ ಹೊರೆಯ

ಕವಿತೆ ಸಮಕಾಲೀನ ಸಂವೇದನೆಗಳ ಕಲಾತ್ಮಕ ಅಭಿವ್ಯಕ್ತಿಯಾಗಿರುವಂತೆಯೇ ಸಾರ್ವಜನಿಕ ಅನುಭವಗಳ ವಿಚಾರದ ಸ್ಪಂದನವೂ ಆಗಿರುತ್ತದೆ. ಕಣವಿಯವರು ಸಮಕಾಲೀನ ರಾಷ್ಟ್ರನಾಯಕರ ಬಗ್ಗೆ ಬರೆದ ಸುನೀತಗಳಲ್ಲಿ 'ಲಾಲ ಬಹದ್ದೂರ ಶಾಸ್ತ್ರಿ' ಸುನೀತ ವಿಶಿಷ್ಟವಾಗಿದೆ. 'ಎರಡು ದಡ'

ಸಂಕಲನದಲ್ಲಿ ಮೊದಲು ಪ್ರಕಟವಾದ ಈ ಸುನೀತ ಭಾರತದ ಪ್ರಧಾನಿಯಾಗಿದ್ದ ಲಾಲಬಹದ್ದೂರ ಶಾಸ್ತ್ರಿ ರಷ್ಯಾ ದೇಶದ ತಾಷ್ಕೆಂಟಿನಲ್ಲಿ ನಿಧನರಾದಾಗ ಬರೆದ ಶೋಕಗೀತೆಯೂ ಆಗಿದೆ. ಈ ಸುನೀತದ ರಾಚನಿಕ ಸ್ವರೂಪ ಕವಿತೆಯ ಶಿಲ್ಪ ವಿನ್ಯಾಸದ ದೃಷ್ಟಿಯಿಂದ ಮಹತ್ವಪೂರ್ಣವಾದದ್ದು. ಕವಿ ನೇರವಾಗಿ ನಮ್ಮೊಡನೆ ಸಂವಾದಕ್ಕಿಳಿಯುತ್ತಾರೆ. ಕವಿತೆಯ ಆರಂಭದಲ್ಲಿ ನಮ್ಮ ಮಧ್ಯೆ ಇವನಿದ್ದನೆಂದರೆ ನಂಬುವೆಯಾ ಎಂಬ ಪ್ರಶ್ನಾರ್ಥಕ ವಾಕ್ಯವಿದೆ. ಈ ವಾಕ್ಯದ ಮೂಲಕ ನಮ್ಮ ನಂಬಿಕೆಯನ್ನು ಕವಿ ಪ್ರಶ್ನಿಸುತ್ತಾರೆ. ನಮ್ಮ ಮಧ್ಯೆ ಇವನಿದ್ದಾನೆಂದರೆ ನೀನು ನಂಬುವುದು ಕಷ್ಟ. ಅಥವಾ ನಮ್ಮ ಮಧ್ಯ ಇವನಿದ್ದನೆಂದರೆ ನಾನು ನೀನು ಇಬ್ಬರೂ ನಂಬುವುದು ಆಗುವುದಿಲ್ಲ. ಹೀಗೆ ಈ ಪ್ರಶ್ನೆ ಬೆಳೆಸುತ್ತ ಹೋಗಬಹುದು. ಯಾಕೆಂದರೆ 'ಇವನು ಸೀದಾ ಸಾದಾ ಮನುಷ್ಯ' ಇಂದಿನ ರಾಷ್ಟ್ರ ಜೀವನದಲ್ಲಿ ರಾಜಕೀಯ ಕ್ಷೇತ್ರದಲ್ಲಿರುವವರು ಇಷ್ಟು ಸೀದಾ ಸಾದಾ ಇರಲು ಸಾಧ್ಯವಿಲ್ಲ. ನೇರ ನಡೆನುಡಿಯ ಸಾಮಾನ್ಯ ವ್ಯಕ್ತಿ ಅಸಾಮಾನ್ಯ ವ್ಯಕ್ತಿ ಅಸಾಮಾನ್ಯರಾಗಿ ಇರುವುದಕ್ಕೆ ಉತ್ತಮ ನಿದರ್ಶನವೇ ಲಾಲಬಹದ್ದೂರ ಶಾಸ್ತ್ರಿ. ರಾಜಪ್ರಭುತ್ವ ಹೋಗಿ ಪ್ರಜಾಪ್ರಭುತ್ವ ಬಂದಿರುವುದರ ವೈಶಿಷ್ಟ್ಯದ ಮೂರ್ತ ಸ್ವರೂಪವೇ ಲಾಲಬಹದ್ದೂರಶಾಸ್ತ್ರಿ ಆಗಿದ್ದಾರೆ. ಅವರು ಭಾರತದ ಸಾಮಾನ್ಯ ಜನತೆಯ ನಿಜವಾದ ಪ್ರತಿನಿಧಿಯಾಗಿದ್ದಾರೆ. ಭಾರತ ಎದುರಿಸುತ್ತಿರುವ ಜ್ವಲಂತ ಸಮಸ್ಯೆ ಬಡತನ. ಯಾವ ಸರಕಾರ ಬಂದರೂ ಬಡತನ ನಿರ್ಮೂಲನೆ ಅಸಾಧ್ಯವೆಂಬ ಪರಿಸ್ಥಿತಿಯಲ್ಲಿ ಲಾಲಬಹದ್ದೂರಶಾಸ್ತ್ರಿ ಪ್ರಾಮಾಣಿಕತೆಯನ್ನು ಹೊತ್ತು ಮೆರೆಸಿದವರು. ಕಣವಿಯವರ ವ್ಯಕ್ತಿಗಳಲ್ಲಿ ಮತ್ತೆ ಮತ್ತೆ ವಿನಯ, ಪ್ರಾಮಾಣಿಕತೆ, ಮೋಸ, ವಂಚನೆಗಳು ಸಾಮಾನ್ಯವಾಗಿವೆ. ಭಾರತದ ರಾಜಕೀಯ ವ್ಯಕ್ತಿಗಳ ಭ್ರಷ್ಟಾಚಾರಗಳು ಕಲುಷಿತ ವಾತಾವರಣ ಮನಸ್ಸನ್ನು ಘಾಸಿಗೊಳಿಸಿವೆ. ಅದನ್ನು ಅವರು ವಿಡಂಬನೆಯ ಮೂಲಕ ಪ್ರಕಟಿಸುತ್ತ ಬಂದಿದ್ದಾರೆ. ಈ ಸುನೀತದಲ್ಲಿಯೂ ಕವಿಯ ವಿಡಂಬನೆಯ ಧ್ವನಿ ಪೂರ್ಣ ಮಾತು.

**ಹೆಂಡತಿ ಮಕ್ಕಳಿಗೆ ಆಸ್ತಿ ಸಂಪಾದಿಸದ**
**ಮನೆಯಿರದ ಪ್ರಧಾನಿ ; ಇವನೆಂಥ ಭಾರತೀಯ?**

ಎಂದು ಕವಿ ಕೇಳುತ್ತಾರೆ. ಭಾರತದಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಅಧಿಕಾರದ ಚುಕ್ಕಾಣಿ ಹಿಡಿದ ಜನಪ್ರತಿನಿಧಿಗಳು ಪ್ರಾಮಾಣಿಕರೂ, ನಿಜವಾದ ಜನಸೇವಕರೂ, ಪರಿಶುದ್ಧ ಚರಿತ್ರರೂ ಆಗಿರಬೇಕು. ಆದರೆ ಇಂದು ರಾಜಕೀಯಕ್ಕೆ ಬರುವವರು ಎಂದರೆ ಅಧಿಕಾರ, ಹಣ, ಆಸ್ತಿ, ಮನೆ ಮಾಡುವುದಕ್ಕೆ ಎಂದೇ ಅರ್ಥ ವ್ಯಾಪಕವಾಗಿ ಕೇಳಿಬರುತ್ತದೆ. ಪ್ರಧಾನಿಯಿಂದ ಹಿಡಿದು ಕೆಳಗಿನ ಸಾಮಾನ್ಯ ಗುಮಾಸ್ತನವರೆಗೆ ಆಸ್ತಿ ಮನೆ ಹಣ ಮಾಡುವ ವ್ಯಾಪಾರ ಎದ್ದು ಕಾಣುತ್ತದೆ. ಇಂಥ ವಿಷಮಯ ಪರಿಸರದಲ್ಲಿ ಲಾಲಬಹದ್ದೂರ ಶಾಸ್ತ್ರಿ ಹೆಂಡತಿ ಮಕ್ಕಳಿಗೆ ಆಸ್ತಿ ಮನೆ ಸಂಪಾದನೆ ಮಾಡದ, ಉಳಿಯಲು ಸ್ವಂತ ಮನೆಯಿರದ ಪ್ರಧಾನಿಯಾಗಿದ್ದರು. ಇವನೆಂಥ ಭಾರತೀಯ ? ಎಂದು ವ್ಯಂಗ್ಯವಾಗಿ ಕವಿ ಪ್ರಶ್ನಿಸುತ್ತಾರೆ. ಗಾಂಧಿಯುಗದ ಮೌಲ್ಯಗಳ ಪ್ರತಿನಿಧಿಯಾಗಿ ಉಳಿದ

ಲಾಲಬಹದ್ದೂರ ಶಾಸ್ತ್ರಿ ಅವರು ತಮಗಾಗಿ ಏನನ್ನೂ ಮಾಡಿಕೊಳ್ಳದೆ ದೇಶಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡಿದ ಮಹಾನುಭಾವರು. ಅವರು 'ಬಂದದ್ದು ಹಂಜಿ. ಮಾಡಿ ರಾಟೆ ತಿರುಗಿಸಿದವರು' ಎಂದು ಶಾಸ್ತ್ರಿಯವರ ಇಡೀ ವ್ಯಕ್ತಿತ್ವವನ್ನು ಸಾರವತ್ತಾಗಿ ಸೂಚಿಸುತ್ತಾರೆ.

ಕಣವಿಯವರ ಸುನೀತಗಳಲ್ಲಿ ವ್ಯಕ್ತಿಗಳನ್ನು ವ್ಯಕ್ತಿತ್ವವನ್ನು ಕವಿತೆಯಲ್ಲಿ ಚಿತ್ರಿಸುವ ವಿಶಿಷ್ಟ ಕಲೆಗಾರಿಕೆ ಗಮನಾರ್ಹವಾದದ್ದು. ಅವರು ವ್ಯಕ್ತಿಯ ಆಂತರಿಕ ಮತ್ತು ಬಾಹ್ಯ ವ್ಯಕ್ತಿತ್ವವನ್ನು ಕವಿತೆಯಲ್ಲಿ ಸೆರೆಹಿಡಿಯುವ ರೀತಿ ಅತ್ಯಂತ ಮನೋಜ್ಞವಾದದ್ದು, ಲಾಲಬಹದ್ದೂರ ಶಾಸ್ತ್ರಿ ಪ್ರಧಾನಿ ಗದ್ದುಗೆಯನ್ನೇರಿದರೂ ಕಾಣಿಸಿಕೊಳ್ಳದ ಕಿರಿಯರಾಗಿದ್ದರು. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬಂತೆ ಅವರಿದ್ದರು. ತಾನು ಭಾರತದ ಪ್ರಧಾನಿ ಎಂಬ ಅಹಂಕಾರ ಅವರಲ್ಲಿರಲಿಲ್ಲ. ಯಾವಾಗಲೂ ಆತ್ಮ ಪ್ರಶಂಸೆ, ಅಹಂಕಾರ, ಅಧಿಕಾರ ದಾಹದಿಂದ ಕೂಡಿರುವ ವ್ಯಕ್ತಿಗಳೇ ನಮಗೆ ಕಾಣಿಸುವಾಗ ಲಾಲಬಹದ್ದೂರ ಶಾಸ್ತ್ರಿ ಅದಕ್ಕೆ ಒಂದು ಅಪವಾದವಾಗಿದ್ದರು. ಸುತ್ತ ಇರುವ ಭಟ್ಟಂಗಿಗಳಿಂದ ಅವರು ದೂರವಿದ್ದರು. 'ಬಾಜಾಬಜಂತ್ರಿಯ ನಿಲಿಸಿ ಸಹಜ ತಂತಿಯ ಮಿಡಿದ' ಎಂಬ ವಾಕ್ಯ ಅರ್ಥಪೂರ್ಣವಾಗಿದೆ. ಅಹಂಕಾರದ ಲವಲೇಶವೂ ಇರದ ಸೊಕ್ಕು ಪ್ರತಿಷ್ಠೆಗಳಿಂದ ದೂರ ಇದ್ದು ಸಹಜತೆ, ಸರಳತೆ, ಪಾರದರ್ಶಕತೆಗೆ ಅವರು ಇನ್ನೊಂದು ಹೆಸರಾಗಿದ್ದರು. ಕಣವಿಯವರು ಲಾಲಬಹದ್ದೂರ ಶಾಸ್ತ್ರಿಯವರ ವ್ಯಕ್ತಿತ್ವದ ಇನ್ನೊಂದು ಗುಣವನ್ನು ಮಾರ್ಮಿಕವಾಗಿ ಹೇಳಿದ್ದಾರೆ. ಜನರ ಮಧ್ಯೆ ನಿಂತು ಜನರ ಸಮಸ್ಯೆ ದುಃಖ ದುಮ್ಮಾನಗಳಿಗೆ ಸ್ಪಂದಿಸಿ ಎಲ್ಲರ ಅಭಿಪ್ರಾಯಗಳನ್ನು ಕಿವಿಗೊಟ್ಟು ಆಲಿಸುವವರು. ಹಾಗೆಯೇ 'ತನ್ನ ಒಳದನಿ ಮರೆಯ' ಅಂದರೆ ತಮ್ಮ ಪ್ರಾಮಾಣಿಕ ನಿಲುವುಗಳನ್ನು ಎಂದೂ ಬಿಟ್ಟು ಕೊಡುತ್ತಿರಲಿಲ್ಲ. ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಳ್ಳದ ಸ್ವಭಾವದವರು ಎಂದೂ ಅರ್ಥವಾಗುತ್ತದೆ.

ಕವಿತೆಯ ಮುಂದಿನ ಸಾಲುಗಳ ಅವರ ಆಡಳಿತ ನೈಪುಣ್ಯವನ್ನು ವರ್ಣಿಸುತ್ತವೆ. ಭಾರತ ಅನೇಕ ಸಮಸ್ಯೆಗಳ ರಾಷ್ಟ್ರ. ಏರುತ್ತಿರುವ ಜನಸಂಖ್ಯೆ, ಆಹಾರದ ಸಮಸ್ಯೆ. ಬಡತನ, ನಿರುದ್ಯೋಗ ಮುಂತಾದ ಸಮಸ್ಯೆಗಳ ಮಹಾಪೂರವನ್ನು ಧೀರರಾಗಿ ತೆಪ್ಪದಲಿ ದಾಟಿಸಿದವರು. ಅವರು ಸಮಸ್ಯೆಯ ಗಂಡಾಂತರಗಳನ್ನು ಉಪಾಯದಿಂದ ಬಿಡಿಸುವ ಮುತ್ಸದ್ದಿಯಾಗಿದ್ದರು. ಅವರು ರಾಜಕಾರಣಿಯಾಗಿರದೆ ರಾಜನೀತಿಜ್ಞರೂ ಆಗಿದ್ದರು. ಆದ್ದರಿಂದಲೇ ಜನತೆಯ ಮೈಮೇಲೆ ಬಿದ್ದ ಗಾಯಗಳನ್ನು ಅವರು ಮಾಯಿಸಿದವರು.

ಸುನೀತದ ಮುಂದಿನ ಸಾಲು 'ಯಾರಿಗೂ ಸಿಗದ ಬಿಳಿ ಪಾರಿವಾಳವ ಹಿಡಿದ' ಭಾರತದ ಪ್ರಧಾನಿಯಾಗಿದ್ದ ಲಾಲಬಹುದ್ದೂರ ಶಾಸ್ತ್ರಿ ಅಹಿಂಸೆ, ಶಾಂತಿಯ ಪ್ರತಿಪಾದಕರಾಗಿದ್ದರು. ಯುದ್ಧವಿರೋಧಿ ನೀತಿಯನ್ನು ಪ್ರಬಲವಾಗಿ ಮಂಡಿಸುತ್ತಿದ್ದ ಅವು ಆಕ್ರಮಣಕಾರಿಗಳಾಗಿದ್ದ ಪಾಕಿಸ್ತಾನೀಯರ ಗಾಯವನ್ನೂ ಮಾಯಿಸಿದವರು. ರಷ್ಯಾ ದೇಶದ ತಾಷ್ಕೆಂಟಿನಲ್ಲಿ ಶಾಂತಿ ಒಪ್ಪಂದದ ಮಾತುಕತೆ ಪೂರೈಸಿದರು. ಉಭಯ ದೇಶಗಳ ಮಧ್ಯ ಕವಿದ ಕತ್ತಲೆಯನ್ನು ಹೋಗಲಾಡಿಸಿ ತಾವು

ಸಾವನ್ನಪ್ಪಿ ಮರೆಯಾದರು. ಪ್ರಧಾನಿಯಾಗಿ ತಮ್ಮ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಿದರು ಎಂಬುದನ್ನು ಮುಂದಿನ ಪ್ರತಿಮೆಯಲ್ಲಿ ಕಂಡರಿಸಿದ್ದಾರೆ.

**ಮಧ್ಯರಾತ್ರಿಯಲಿಂತು ಕೊರೆದು ಮಿಂಚಿನ ಗೆರೆಯ**
**ಮರೆಯಾದ; ದಡಕ್ಕೆ ಮುಟ್ಟಿಸಿದ ಹೊತ್ತ ಹೊರೆಯ**

ಆದರ್ಶ ಮೌಲ್ಯನಿಷ್ಠ ವ್ಯಕ್ತಿಯ ವ್ಯಕ್ತಿತ್ವವನ್ನು ಚಿತ್ರಿಸುತ್ತಲೇ ರಾಜಕೀಯ ರಂಗದಲ್ಲಿರುವವರಿಗೆ ಲಾಲಬಹದ್ದೂರ ಶಾಸ್ತ್ರಿ ಮಾದರಿಯಾಗಿದ್ದಾರೆ ಎಂಬ ವಿಚಾರವೂ ಈ ಸುನೀತದಲ್ಲಿದ್ದು ಭಾಷೆ, ಅಭಿವ್ಯಕ್ತಿ ಹಾಗೂ ಶಿಲ್ಪ ಸೌಂದರ್ಯ ದೃಷ್ಟಿಯಿಂದಲೂ ವಿಶಿಷ್ಟವಾಗಿದೆ.

(ಮೂರು ಸಾಲುಗಳ ನಾಲ್ಕು ಚರಣಗಳು ಹಾಗೂ ಪ್ರತಿಯೊಂದರಲ್ಲಿ ಒಂದು ಮತ್ತು ಮೂರನೆಯ ಸಾಲಿನಲ್ಲಿ ಅಂತ್ಯಪ್ರಾಸವಿರುವ ಹೊಸ ಪ್ರಯೋಗವನ್ನು ಇಲ್ಲಿ ಕಾಣಬಹುದು.)

**ಜಿ.ಎಂ. ಹೆಗಡೆ.**

# ೩೦. ತೀ.ನಂ. ಶ್ರೀಯವರ ಪಯಣ

ಮೈಸೂರು-ಧಾರವಾಡದ ಉತ್ತರೋತ್ತರಕೆ
ಸಂದಿತು ಹರಕೆ. ದಿಲ್ಲಿಯನು ದಾಟ ಕಲಕತ್ತೆ;
ಕನ್ನಡದ ಕಲಶ ತುಳುಕಿತ್ತೆ? ಕೈಯ ಹೊತ್ತಗೆ
ಜಾರಿ, ಸರಸತಿಯ ವಜ್ರದ ಓಲೆ ಕಳಚಿತ್ತೆ ?

ಕಲ್ಪವೃಕ್ಷದೆಳನೀರು, ಬಾಗಿರುವ ಗೊನೆಬಾಳೆ,
ವಸಂತದ ಚಂದನ ಗಂಧ, ಒಲುಮೆ ಹೂಮಾಲೆ,.
ಸ್ನೇಹದೂದುಬತ್ತಿಯ ನವುರು, ನರುದಂಬುಲದ
ರುಚಿ-ಶುಚಿಗೊಳಿಸಿ, ನಸುನಗೆಯ ರೇಶಿಮೆ ವಸ್ತ್ರ
ಹೊದಿಸಿ, ನುಡಿಯ ಕನ್ನಡಿ ನೋಡಿ, ತಿದ್ದಿ ತೀಡಿ,
ಜನಪದದ ಭಾವ-ಬುದ್ಧಿಯ ಬೃಹತ್ ಕೋಶದಲಿ
ಪ್ರೀತಿ ಪಾಥೇಯವನು ಕೈಕೊಂಡು ಬಲುದಿನದ
ಪಯಣಕ್ಕೆ ಹೊರಟುಬಿಟ್ಟರು: ನಮ್ಮ ತೀ.ನಂ.ಶ್ರೀ.

ಇಂದಿಲ್ಲ ನಾಳೆ ಬಂದು, 'ಎಲ್ಲಿಗೆ ಬಂತು ಕೆಲಸ?'
ಎಂದಾರು; ಈ ಗುಡಿಗೆ ಯಾರಿಡಬೇಕು ಕಳಸ ?

ಆಧುನಿಕ ಕನ್ನಡದ ಹಿರಿಯ ಮತ್ತು ಅತ್ಯಂತ ಸಮರ್ಥ ಕವಿಗಳಲ್ಲೊಬ್ಬರಾದ ಚೆನ್ನವೀರ ಕಣವಿಯವರ ಕಾವ್ಯವಾಙ್ಮಯದಲ್ಲೊಂದು ಪ್ರಶಸ್ತವಾದ ಭಾಗ, ಸಾನೆಟ್ಟುಗಳು; ಅದರಲ್ಲೂ, ಸಹೃದಯರ ಲಕ್ಷ್ಯ ಸೆಳೆಯುತಕ್ಕವು ವ್ಯಕ್ತಿ ಚಿತ್ರಗಳು. ಅಷ್ಟೊಂದು ಸಂಖ್ಯೆಯಲ್ಲಿ ವ್ಯಕ್ತಿ ಚಿತ್ರಗಳನ್ನು ಕೊಟ್ಟ ಕವಿ ನಮ್ಮಲ್ಲಿ ಮತ್ತೊಬ್ಬರು ಇರಲಿಕ್ಕಿಲ್ಲ!

ಕುಶಲ ರೂವಾರಿಯಂತೆ ಉತ್ತಮವಾದ ಕುಸುರಿ ಕೆಲಸ ಮಾಡಬಲ್ಲ ಕಣವಿ, ಆಯಾ ವ್ಯಕ್ತಿಯ ಒಳಗು ಹೊರಗುಗಳನ್ನು ಹದಿನಾಲ್ಕೇ ಸಾಲುಗಳಲ್ಲಿ ಸೂಚ್ಯವಾಗಿ ಸೆರೆಹಿಡಿದು, ನಮ್ಮ

ಕಣ್ಣಮುಂದೆ ನಿಲ್ಲಿಸಿಬಿಡುತ್ತಾರೆ. ಕವನದ ಕಡೆಯಲ್ಲಿ ನಿಯತವಾಗಿ, ಅನಿರೀಕ್ಷಿತವಾಗಿ ಬರುವ ತಿರುವು ವಿಸ್ಮಯಕರ ಎನ್ನಬೇಕು!

ಪ್ರಕೃತ, 'ತೀ.ನಂ.ಶ್ರೀ ಅವರ ಪಯಣ' ಎಂಬ ಕವನವನ್ನು ಇಲ್ಲಿ ಸ್ವಲ್ಪ ಅವಲೋಕಿಸಬಹುದು:('ಎರಡು ದಡ' ಸಂಗ್ರಹ)

ಶೀರ್ಷಿಕೆಯೆ ಅರ್ಥಪೂರ್ಣವಾಗಿದೆ. 'ಪಯಣ' ಅಂತಿಮ ಪ್ರಯಾಣವನ್ನು ಅಥವಾ ಪ್ರಸ್ಥಾನವನ್ನು ಮಾತ್ರ ಹೇಳುತ್ತಿಲ್ಲ. ಬದುಕಿನುದ್ದಕ್ಕೂ ತೀ.ನಂ.ಶ್ರೀ. ಜ್ಞಾನ ಪಥಿಕರಾಗಿದ್ದರು; ಯಾತ್ರಿಕರಾಗಿದ್ದರು; ಕಾವ್ಯ, ಶಾಸ್ತ್ರ ಪರ್ಯಟನದಲ್ಲಿ ಸದಾ ತೊಡಗಿದ್ದರು. ಅವರ ಜೀವನವೆ ಒಂದು ನಿಡು ಪಯಣವಾಗಿತ್ತು ಎಂಬುದನ್ನು ಕಣವಿ ಶೀರ್ಷಿಕೆಯಲ್ಲಿ ಧ್ವನಿಸಿದ್ದಾರೆ.

ಮೈಸೂರು ಹಾಗೂ ಧಾರವಾಡ ತೀ.ನಂ.ಶ್ರೀ ಯವರ ವ್ಯಾವಹಾರಿಕ ಕಾರ್ಯಭೂಮಿಕೆಗಳಾಗಿದ್ದುವು. ಆದರೆ ವಾಸ್ತವವಾಗಿ ಅವರದು ಕರ್ನಾಟಕಕ್ಕೆ, ಅಷ್ಟೇಕೆ, ಭಾರತಕ್ಕೆ ಸೀಮಿತವಾದ ವ್ಯಕ್ತಿತ್ವವಲ್ಲ; ಸೀಮೋಲ್ಲಂಘನ ಮಾಡಿದ ಸತ್ತ್ವ;

**ಮೈಸೂರು-ಧಾರವಾಡ ಉತ್ತರೋತ್ತರಕೆ**
**ಸಂದಿತು ಹರಕೆ. ದಿಲ್ಲಿಯನು ದಾಟಿ ಕಲಕತ್ತೆ**; ....

'ಉತ್ತರ' ಶಬ್ದಕ್ಕೆ ಒಂದು ದಿಕ್ಕು, ಮೇಲಾದುದು (ಮೀರಿದುದು) ಎಂಬ ಎರಡೂ ಅರ್ಥಗಳಿವೆ. ತೀ.ನಂ.ಶ್ರೀ ಮೈಸೂರು, ಧಾರವಾಡಗಳನ್ನು ದಾಟಿ, 'ಉತ್ತರೋತ್ತರ'ಕ್ಕೆ ಸಾಗಿದರು. ಅಂತಿಮವಾಗಿ ಅವರ ಆತ್ಮ 'ಲೋಕೋತ್ತರ'ವಾಯಿತು! ಆದರೆ ಲೋಕದಲ್ಲೂ ಅವರು ಉಳಿದಿದ್ದಾರೆ, ಕೃತಿರೂಪದಲ್ಲಿ. (ಕಡೆಯ ಎರಡು ಸಾಲುಗಳನ್ನು ಇಲ್ಲಿಗೂ ಅನ್ವಯಿಸಿಕೊಳ್ಳಬೇಕು.).

ಮಹಾವಿದ್ವಾಂಸರಾದ ತೀ.ನಂ.ಶ್ರೀ ಅವರ ನಿಧನ ಕನ್ನಡಕ್ಕೆ ಮಾತ್ರವಲ್ಲ. ಸರಸ್ವತಿಗೆ ಕೂಡ ದೊಡ್ಡ ನಷ್ಟ ಎಂಬುದನ್ನು ಈ ಸಾಲುಗಳು ವ್ಯಂಜಿಸಿ, ಅವರ ಎತ್ತರವನ್ನು ಗುರುತಿಸುತ್ತವೆ; ಹಿರಿಮೆಯನ್ನು ಬಿತ್ತರಿಸುತ್ತವೆ.;

**ಕನ್ನಡದ ಕಲಶ ತುಳುಕಿತ್ತೆ ? ಕೈಯ ಹೊತ್ತಗೆ**
**ಜಾರಿ, ಸರಸತಿಯ ವಜ್ರದ ಓಲೆ ಕಳಚಿತ್ತೆ ?**

ಕಲಶ ತುಳುಕುವುದು, ಹೊತ್ತಗೆ ಜಾರುವುದು, ಓಲೆ ಕಳೆಚುವುದು-ಒಂದೊಂದೂ ವಿಶೇಷಾರ್ಥ ಗರ್ಭಿತ.

ಮುಂದೆ ತೀ.ನಂ.ಶ್ರೀ ಅವರ ವ್ಯಕ್ತಿತೆಯನ್ನು ಸೂಕ್ಷ್ಮವಾಗಿ, ನವುರಾಗಿ - 'ನವುರು' ಎಂಬ ನುಡಿ ಕವನದಲ್ಲೆ ಬಂದಿದೆ- ಚಿತ್ರಿಸುತ್ತಾರೆ ಕಣವಿ. 'ಒಲುಮೆ' (ಕವನ ಸಂಚಯವೊಂದರ ಹೆಸರು), 'ಪಾಥೇಯ' (ನೀಡು ಪಾಥೇಯವನು) 'ಬಲುದಿನದ ಪಯಣ' ("ಬಲುದಿನದ ಪಯಣಕ್ಕೆ

ಹೊರಟಿರುವೆ. ನಲ್ಲೆ") ಎಂಬ ಉಕ್ತಿಗಳು ತೀ.ನಂ.ಶ್ರೀ. ಅವರವೇ; ಅವುಗಳ ಮೂಲಕವೆ ಕವಿ ಅವರನ್ನು ನಿಚ್ಚಳವಾಗಿ ಕಂಡು ಕಂಡರಿಸಿದ್ದಾರೆ:

ಕಲ್ಪವೃಕ್ಷದೆಳನೀರು, ಬಾಗಿರುವ ಗೊನೆ-ಬಾಳೆ
ವಸಂತದ ಚಂದನಗಂಧ, ಒಲುಮೆ ಹೂಮಾಲೆ,
ಸ್ನೇಹದೂದುಬತ್ತಿಯ ನವುರು, ನರುದಂಬುಲವ
ರುಚಿ-ಶುಚಿಗೊಳಿಸಿ, ನಸುವಗೆಯ ರೇಶಿಮೆ ವಸ್ತ್ರ
ಹೊದಿಸಿ, ನುಡಿಯ ಕನ್ನಡಿ ನೋಡಿ, ತೀಡಿ ತಿದ್ದಿ,
ಜನಪದರ ಭಾವ- ಬುದ್ಧಿಯ ಬೃಹತ್ ಕೋಶದಲಿ
ಪ್ರೀತಿ ಪಾಥೇಯವನು ಕೈಕೊಂಡು ಬಲುದಿನದ
ಪಯಣಕ್ಕೆ ಹೊರಟುಬಿಟ್ಟರು: ನಮ್ಮ ತೀ.ನಂ.ಶ್ರೀ.

ವಸಂತದ ಚಂದನಗಂಧ, ಹೂಮಾಲೆ, ಊದುಬತ್ತಿ ನರುದಂಬುಲ ರೇಶಿಮೆ ವಸ್ತ್ರ-ಮುಂತಾದ ಉಕ್ತಿಗಳು ತೀ.ನಂ. ಶ್ರೀಯವರ ಆಕರ್ಷಕ ರಸಿಕ ವ್ಯಕ್ತಿತ್ವಕ್ಕೆತ್ತಿದ ರೂಪಕಾರತಿಗಳು! ಅವರಲ್ಲಿ ರುಚಿ, ಶುಚಿ ಎರಡೂ ಮೇಳವಿಸಿದ್ದವು ಎಂಬುದು ಮುಖ್ಯ. ಅಂತೆಯೇ, ಭಾವ, ಬುದ್ಧಿ ಎರಡೂ ಸಂಗಮಿಸಿದ್ದವು. ಕನ್ನಡಿಗರಲ್ಲಿ ಎರಡನ್ನೂ ಬೆಳೆಸುವುದಕ್ಕಾಗಿ ಅವರು ಶ್ರಮಿಸಿದರು. "ಎತ್ತಣಿಂದೆತ್ತ ಸಂಬಂಧ?" ಎನ್ನಬಹುದಾದ ಕಾವ್ಯ, ಕಾವ್ಯಮೀಮಾಂಸೆ, ಭಾಷಾವಿಜ್ಞಾನಗಳನ್ನು ಒಂದೇ ಸೂತ್ರದಲ್ಲಿ ಕೋದು, ಕೊರಳಿಗೆ 'ಹೂಮಾಲೆ' ಮಾಡಿಕೊಂಡಿದ್ದವರು ತೀ.ನಂ.ಶ್ರೀ!

'ಕಲ್ಪವೃಕ್ಷದೆಳನೀರು', 'ಬಾಗಿರುವ ಬಾಳೆಗೊನೆ' ಎಂಬ ಆರಂಭದ ರೂಪಕಗಳನ್ನು ಪ್ರತ್ಯೇಕವಾಗಿ ಪರಿಗಣಿಸಬೇಕು. ತೆಂಗಿನ ಮರ ಎತ್ತರವಾಗಿರುತ್ತದೆ; ನೇರವಾಗಿರುತ್ತದೆ. ಬಾಳೆಯಾದರೋ ಬಾಗಿರುತ್ತದೆ. ತೀ.ನಂ. ಶ್ರೀ ಯವರ ಧೀಮಂತಿಕೆ, ದಿಟ್ಟತನ, ಅಂತೆಯೇ ವಿನಯ ಇಲ್ಲಿ ಸೊಗಸಾಗಿ ಪ್ರತೀತವಾಗುತ್ತವೆ.

ತೀ.ನಂ.ಶ್ರೀ ನಿಜವಾಗಿ ನಿರ್ಗಮಿಸಿದರೆ? ಇಲ್ಲ! ಅವರದು 'ಬಲುದಿನದ ಪಯಣ' ಅಷ್ಟೇ. ಆದ್ದರಿಂದ,

ಇಂದಿಲ್ಲ ನಾಳೆ ಬಂದು, 'ಎಲ್ಲಿಗೆ ಬಂತು ಕೆಲಸ?'
ಎಂದಾರು; ಈ ಗುಡಿಗೆ ಯಾರಿಡಬೇಕು ಕಳಸ?

'ಕೆಲಸ' ಎಂದರೆ, ಕನ್ನಡದ ಕೆಲಸ. ಕನ್ನಡದ ಅದ್ವಿತೀಯ ದುಡಿಮೆಗಾರರಲ್ಲಿ ಒಬ್ಬರು. ತೀ.ನಂ.ಶ್ರೀ; ಇತರರಿಂದಲೂ ಅದೇ ದುಡಿಮೆಯನ್ನು ಅವರು ನಿರೀಕ್ಷಿಸುತ್ತಾರೆ. ಕನ್ನಡದ ಗುಡಿಗೆ ಕಳಸವಿಟ್ಟ ಮಹನೀಯರಲ್ಲಿ ಅವರೊಬ್ಬರು; ಅಥವಾ ಅವರೇ ಒಂದು ಕಳಸವಾದವರು. ಸದ್ಯಕ್ಕೆ ಆ ಕಳಸ ಕಳಚಿದೆ. ('ಕನ್ನಡದ ಕಲಶ ತುಳುಕಿತ್ತೆ?' ಎಂಬ ಪ್ರಾರಂಭದ ಪ್ರಶ್ನೆಯನ್ನು ಜ್ಞಾಪಿಸಿಕೊಳ್ಳಬಹುದು.)

ಸ್ವಾರಸ್ಯವೆಂದರೆ, ಕಡೆಯ ಎರಡು ಪಂಕ್ತಿಗಳಲ್ಲಿ ಸಾಧಾರಣೀಕರಣವಿರುವುದು. ಅವು ತೀ.ನಂ. ಶ್ರೀಯವರಿಗೆ ಮಾತ್ರ ಅನ್ವಯಿಸುವ ಮಾತುಗಳಲ್ಲ - ಕನ್ನಡಕ್ಕೆ ಕಲಶಪ್ರಾಯರಾದ ಯಾವ ಹಿರಿಯರೂ ಕೇಳಬಹುದಾದ ಪ್ರಶ್ನೆ: "ಎಲ್ಲಿಗೆ ಬಂತು ಕೆಲಸ?" ಉತ್ತರಿಸುವುದು ಕಷ್ಟ ಇಂದಿಗೂ!

ಮನೋಜ್ಞವಾದ, ತಕ್ಕಮಟ್ಟಿಗೆ, ಸಂಕೀರ್ಣವಾದ, ಸಂಕ್ಷಿಪ್ತ ವಾಗಿಯಾದರೂ ತೀ.ನಂ.ಶ್ರೀಯವರ ಪೂರ್ಣಚಿತ್ರವೊಂದನ್ನು ನೀಡುವ ಸುನೀತ 'ತೀನಂಶ್ರೀಯವರ ಪಯಣ' ಅದು ನಿಸ್ಸಂದೇಹವಾಗಿ ಸಾರ್ಥಕ ಸಂವಹನ!

ಪಿ.ಪಿ.ಕೆ.

## ೩೧. ಮಂದಿ

ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ
ನಗರದೊಳ ಹೊರಗೆ; ನೋಡುತ್ತ ಮೇಲೆ ಕೆಳಗೆ.
ಆಯಕಟ್ಟಿನ ಜಾಗದಲ್ಲಿ ಕಾದಿದ್ದಾರೆ; ಬಸ್ಸಿಗೆ, ಬಡತಿಗೆ.
ಮನೆಯೊಡತಿ ಹೇಳಿದ್ದನೆಲ್ಲ ನೆನಪಿಗೆ ತಂದು, ಹಿಗ್ಗಿ
ಒಳ ನುಗ್ಗಿ, ಬಗ್ಗಿ ಕುಳಿತು ಅಥವಾ ಬಾಗಿ ನಿಂತು
ಗಂಟೆ ಬಡಿದೊಡನೆ ತಿಕೀಟಿನ ಹಾಸಲು ಮುಗಿದು
ಕೈಯೂರಿ ಎದ್ದು ಇಳಿಯುತ್ತಾರೆ ದಬದಬ ಕೆಳಗೆ.
ಈ ನಡುವೆ ಅವರಿವರ ಭೆಟ್ಟಿ; ಒಂಟಿಕೈಯೆತ್ತಿ
ಪರಿಚಯದ ಬಿಟ್ಟಿ ಭಾಷಣ ಕುಟ್ಟಿ, ನುಚ್ಚು
ತವುಡಿನ ಚೀಲ ಹೊತ್ತು ಹೊರಡುತ್ತಾರೆ.

ಪೇಟೆಯಲಿ ಸಾಮಾನು ವಿಪರೀತ ತುಟ್ಟಿ-
ರೊಟ್ಟಿಯ ಕೂಡ ಬದನೆಕಾಯಿ ಪಲ್ಲೆ, ಎಳೆ ಸವುತೆಕಾಯಿ;
ಸವುಳುಗಜ್ಜುರಿ ಬೇಡ, ಇರಲಿ ಉಳ್ಳಾಗಡ್ಡಿ.
ಕೆಂಪು ಧೂಳಿನ ಬೆವರಿನಲ್ಲಿ ಪೌಡರಿನ ವಾಸನೆ.
ಕಾರು, ಸ್ಕೂಟರು, ಫಟ ಫಟೀ ಗಾಡಿ; ನಾಯಿ
ಬೆನ್ನತ್ತಿದಂತೆ ಓಡುತ್ತಾರೆ; ಓಡುವದೆ ರೂಢಿ.
ಕಣ್ಣು ಮಿಟುಕಿಸಿ ಝಗ್ಗನಲ್ಲಲ್ಲಿ ಟ್ಯೂಬ್‌ಲೈಟು -
ಕತ್ತೆತ್ತಿ ಹೊಗೆಯಾಡಿಸಿದವು ಬೀಡಿ, ಸಿಗರೇಟು,
ಅಂಗಡಿಯ ಅಂಗಾಂಗದಲ್ಲು ಕಣ್ಣಾಡಿಸಿರಲು
ಕಾಜಿನ ಕಪಾಟಿನಲ್ಲಿಟ್ಟ ಗೊಂಬೆ ಗೋಣಾಡಿಸಿತು.
ನಾಲಗೆಯ ಅಂಟಂಟಿಗೆರಡು ಪೆಪ್ಪರಮಿಂಟು
ಚಪ್ಪರಿಸುತ್ತ ಬಂದ ದಾರಿಯಲಿ ಹೊರಡುವರು.

ಮಿಂಚು ದೀಪದ ಕೆಳಗೆ ಹುಡುಗ-ಹುಡುಗಿಯರ ಚಕಚಕ
ನಡಿಗೆ, ಪಾರ್ಕಿನಲಿ ಗುಬ್ಬಿ, ಗಿಳಿ, ಗೊರವಂಕಗಳ ಚಿಲಿಪಿಲಿ ಕೇಕೆ.
ವಿರಾಮವಾಗಿ ಗಾಳಿಯ ಕುಡಿದು, ಹೆಜ್ಜೆಯೆಣಿಸುತ್ತ
ಹೊರಟ ಪಿಂಚಣಿದಾರ: ಹಿಡಿದು ಪ್ರಶ್ನೆಯ ಬಡಿಗೆ.
ಗಂಟಲು ಹರಿದುಕೊಂಡು ಚೀರಿದೆ ಹೊಟಲಿನ ರೇಡಿಯೋ-
ಸಿಂಗಲ್ ಚಹಾ ಕುಡಿದು, ಹೊತ್ತಾಯ್ತು ಹೋಗಬೇಕಯ್ಯ ಮನೆಗೆ.
ಕತ್ತಲಾದರೆ ಬಂದು ಮುತ್ತುವವು ಗುಂಗಾಡು.
ದಟ್ಟ ಕಾಡಿನ ನಟ್ಟ ನಡುವಣ ಗವಿಗೆ ಬ್ಯಾಟರಿ ಬಿಟ್ಟು
ಹಗಲು ಕಾಣದ ಬಾವಿಯಲ್ಲಿ ಮುಳುಗಿ, ಎಚ್ಚರದಪ್ಪಿ-
ಬೆಳಗಿನಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು
ಇಸ್ತ್ರಿ ಬಟ್ಟೆಯ ತೊಟ್ಟು ಹೊರಡಬೇಕು;
'ಬಟ್ಟೆ ಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು'

ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ
ನನಗೆಲ್ಲಿ ಬೇರೆ ಹಾದಿ ?

ಹಿರಿಯ ಕವಿ ಶ್ರೀ ಚೆನ್ನವೀರಕಣವಿ ಅವರ ಕೆಲವು ಪ್ರಾತಿನಿಧಿಕ ಕವನಗಳಲ್ಲಿ 'ಮಂದಿ' ಕವಿತೆಯೂ ಒಂದು. ('ಎರಡು ದಡ' ಸಂಗ್ರಹ) ಆಧುನಿಕ ಮನುಷ್ಯನ ಬದುಕಿನ ಸಂಕೀರ್ಣತೆಯನ್ನು ಅನನ್ಯವೆಂಬಂತೆ ಸೆರೆಹಿಡಿದ ಕವಿತೆ ಇದಾಗಿದೆ. ನಮ್ಮ ಸಮಕಾಲೀನ ಬದುಕನ್ನು ಇಡಿಯಾಗಿ ಪರಿಭಾವಿಸುವ, ಪರಿಶೀಲಿಸುವ ಸಂವೇದನಾಶೀಲ ಸಮಗ್ರ ದೃಷ್ಟಿಕೋನ ಇಲ್ಲಿ ಎದ್ದು ಕಾಣುವ ಅಂಶ. 'ಮಂದಿ' ಕವಿತೆ ತೋರಿಕೆಗೆ ತೀರಾ ಸರಳವೆಂಬಂತೆ ಕಂಡುಬಂದರೂ ಓದುತ್ತಾ ಹೋದಂತೆ ಅರ್ಥದ ವಿಭಿನ್ನ ಸ್ತರಗಳು ಬಿಚ್ಚಿಕೊಳ್ಳುತ್ತವೆ. ಗದ್ಯಕ್ಕೆ ಸಮೀಪದ ಆಡುಮಾತಿನ ಲಯದಲ್ಲಿರುವ ಈ ಕವಿತೆ ನಮ್ಮನ್ನು ಸಂವಾದಕ್ಕೆ ಸೆಳೆದುಕೊಳ್ಳಬಲ್ಲ ಶಕ್ತಿಯನ್ನು ಪಡೆದಿದೆ.

ನಗರದ ಯಾಂತ್ರಿಕ ಬದುಕು, ಕಡಿದು ಬೀಳುವ ಮಾನವ ಸಂಬಂಧ, ಗಲಿಬಿಲಿ ಗಡಿಬಿಡಿ, ಜಂಗಮಚರ್ಯೆ, ಬದುಕಿನ ನಿಷ್ಠುರತೆ, ವ್ಯಕ್ತಿ ಸಮಾಜ ಸಂಬಂಧ, ಸ್ವಂತಿಕೆಯ ಹಂಬಲ ಹೀಗೆ ಭಿನ್ನ ಭಿನ್ನ ಭಾವಗಳು ಪ್ರಸ್ತುತ ಕವಿತೆಯಲ್ಲಿ ಮೈಪಡೆದುಕೊಂಡಿವೆ. ಇದೇ ಬಗೆಯ ಸೂಕ್ಷ್ಮ ಜಿಜ್ಞಾಸೆ ಕಣವಿ ಅವರ 'ನಗರದಲ್ಲಿ ನೆರಳು', 'ಮನುಷ್ಯಪ್ರಾಣಿ', 'ದಾರಿ' ಮೊದಲಾದ ಕವಿತೆಗಳಲ್ಲಿ ಕಾಣಿಸಿಕೊಂಡಿದೆ. ಆದರೂ ಆಕೃತಿ ಹಾಗೂ ಅಭಿವ್ಯಕ್ತಿಯಲ್ಲಿ ಇಲ್ಲಿ ಕವಿ ತೋರಿರುವ ಶ್ರದ್ಧೆ ಹಾಗೂ ಹೊಸತನ ಈ ಕವಿತೆಯ ವೈಶಿಷ್ಟ್ಯ.

ಮಂದಿ ಎಂದರೆ ಜನ, ಜನತೆ, ವ್ಯಕ್ತಿ ಮನುಷ್ಯರ ಸಮುದಾಯ, ಪ್ರಜೆ, ವ್ಯಕ್ತಿ ಸಮೂಹ, ಗುಂಪು ಎಂಬೆಲ್ಲ ಅರ್ಥಗಳಿವೆ. ಜನ ಶಬ್ದ ನಪುಂಸಕ ಲಿಂಗ. ಮಂದಿಗೂ ಅದೇ ತೆರನಾದ ಅರ್ಥ. ಇದೊಂದು ನಾಮಪದವೂ ಹೌದು. ಜನ ಮರುಳೊ ಜಾತ್ರೆ ಮರುಳೋ ಎಂಬ ಗಾದೆಯೂ ಉಂಟಲ್ಲ. ಮಂದಿ ಎಂದರೆ ಗುಂಪು, ಎಂಬ ಅರ್ಥದಲ್ಲೇ ಕವಿತೆಯಲ್ಲಿ ಬಳಕೆಯಾಗಿದೆ. ಇವರಿಗೆ ಹೆಸರಿಲ್ಲ, ಅವರದೇ ಆದ ವ್ಯಕ್ತಿತ್ವವೂ ಇಲ್ಲ ಎಂಬ ಧ್ವನಿ ಆ ಶಬ್ದದಲ್ಲೇ ಅವಿತಿದೆ. ಕವಿತೆ ಆರಂಭವಾಗುವುದೇ ಹೀಗೆ :

**ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ**
**ನಗರದೊಳ ಹೊರಗೆ ; ನೋಡುತ್ತ ಮೇಲೆ ಕೆಳಗೆ,**
**ಆಯಕಟ್ಟಿನ ಜಾಗದಲ್ಲಿ ಕಾದಿದ್ದಾರೆ: ಬಸ್ಸಿಗೆ, ಬಡತಿಗೆ.**

ನಾಗರಿಕ ಜೀವಿಯ ಇಕ್ಕಟ್ಟು ವಿವರ ಕವಿತೆಯ ಆರಂಭದಲ್ಲೇ ಬಂದಿದೆ. 'ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ' ಎಂಬಲ್ಲಿ ನಗರದ ಜನತೆ ಹೊಸ ಹಾದಿಯ ಅನ್ವೇಷಕರಲ್ಲ, ಇದ್ದ ಹಾದಿಯಲ್ಲೇ ಓಡಾಡುವವರು, ಅವರು ಅಸಹಾಯಕಾಗಿದ್ದಾರೆ. ತಮ್ಮ ಸುತ್ತಲಿನ ಬದುಕಿನ ಕುರಿತಾಗಿ ಯಾವುದೇ ಕುತೂಹಲ, ವಿಸ್ಮಯವಿಲ್ಲದ ಈ ಮಂದಿಯ ಜೀವನದ ರೀತಿ ಚರ್ವಿತ ಚರ್ವಣವಾಗಿದೆ. ಮೇಲೆ ಕೆಳಗೆ ನೋಡುತ್ತ ಓಡಾಡುವ ಇವರ ಬದುಕಿನಲ್ಲಿ ಕಾಯುವ ಕರ್ಮ ತಪ್ಪಿದ್ದಲ್ಲ. 'ಆಯಕಟ್ಟಿನ ಜಾಗದಲ್ಲಿ ಕಾದಿದ್ದಾರೆ: ಬಸ್ಸಿಗೆ ಬಡತಿಗೆ' - ಇಲ್ಲೆಲ್ಲ ಒಂದು ರೀತಿಯ ಚಡಪಡಿಕೆ, ಉದ್ವೇಗ ಅನಿವಾರ್ಯತೆಯ ನರಳಿಕೆ ನೋವು ವ್ಯಕ್ತವಾಗಿದೆ. ನಾಗರಿಕ ಬದುಕು ಮನುಷ್ಯನನ್ನು ಹೇಗೆ ಪಲ್ಲಟಗೊಳಿಸುತ್ತದೆ, ಧೃತಿಗೆಡಿಸುತ್ತದೆ ಯಾವ ಸ್ಥಿತಿಗೆ ದೂಡುತ್ತದೆ ಎಂಬ ಚಿತ್ರವನ್ನು ಕವಿ ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಮಾನವ ನಿರ್ಮಿತ ವ್ಯವಸ್ಥೆ ನಗರ. "ದೇವರು ಹಳ್ಳಿಯನ್ನು ನಿರ್ಮಿಸಿದರೆ ಮನುಷ್ಯ ನಗರವನ್ನು ನಿರ್ಮಿಸಿದ" ಎಂಬುದೊಂದು ಗಾದೆ. ನಗರಗಳು ನರಕಗಳಾಗಿ ಅಲ್ಲಿನ ಜನರು ಬದುಕು ಡೋಲಾಯಮಾನವಾಗಿರುವುದು, ಅಲ್ಲಿ ಬದುಕಿಗಾಗಿ ಹೋರಾಟ ಮಾಡಬೇಕಾಗಿ ಬಂದಿರುವುದು ಎಲ್ಲರಿಗೂ ತಿಳಿದ ವಿಷಯವೇ. ನಗರದ ನಿವಾಸಗಳ ಪಡಿಪಾಟಲನ್ನು ಕವಿ ಹೀಗೆ ತೆರೆದಿಟ್ಟಿದ್ದಾರೆ.

**ಮನೆಯೊಡತಿ ಹೇಳಿದ್ದನ್ನೆಲ್ಲ ನೆನಪಿಗೆ ತಂದು, ಹಿಗ್ಗಿ**
**ಒಳನುಗ್ಗಿ, ಬಗ್ಗಿ ಕುಳಿತು ಅಥವಾ ಬಾಗಿ ನಿಂತು**
**ಗಂಟೆ ಬಡಿದೊಡನೆ ತಿಕೀಟಿನ ಹಾಸಲು ಮುಗಿದು**
..........................................................
**ಈ ನಡುವೆ ಅವರಿವರ ಭೆಟ್ಟಿ: ಒಂಟಿಗೈಯೆತ್ತಿ**
**ಪರಿಚಯದ ಬಿಟ್ಟಿ, ಭಾಷಣ ಕುಟ್ಟಿ ನುಚ್ಚು -**
**ತವುಡಿನ ಚೀಲ ಹೊತ್ತು ಹೊರಡುತ್ತಾರೆ.**

ನಗರದ ಜನರನ್ನು ತಲ್ಲಣಗೊಳಿಸುವ ಶಾಪಗಳು ಹಲವು. ಬದುಕಿನ ಏಕತಾನತೆ ಹಾಗೂ ಸ್ವಂತಿಕೆಯನ್ನು ಉಳಿಸಿ ಬೆಳೆಸಿಕೊಳ್ಳಲಾಗದ ಸ್ಥಿತಿಯನ್ನು ಮೇಲಿನ ಸಾಲು ಹಿಡಿದಿಟ್ಟಿದೆ. ಇವೆರಡೂ ಕಾರಣಗಳಿಂದ ವ್ಯಕ್ತಿ ಹತ್ತರಲ್ಲಿ ಹನ್ನೊಂದಾಗಿ ಎಲ್ಲರೂ ನಡೆದ ದಾರಿಯಲ್ಲಿ ತಾನೂ ನಡೆಯುತ್ತಾ ಗುಂಪಿನಿಂದ ಹೊರಬರಲು ಮತ್ತು ಸ್ವಂತಿಕೆಯನ್ನು ಬೆಳೆಸಿಕೊಳ್ಳಲು ಬೇಕಾಗುವ ನೈತಿಕ ಧೈರ್ಯವನ್ನೇ ಕಳೆದುಕೊಂಡಿದ್ದಾನೆ. ಮನೆಯೊಡತಿ ಹೇಳಿದ್ದನ್ನು ಮಾಡುವ ಚಾಕರಿಯವನಂತಾಗಿದ್ದಾನೆ. ಆದ್ದರಿಂದ ಕವಿತೆಯಲ್ಲಿ ಬರುವ ಹಿಗ್ಗಿ, ಒಳನುಗ್ಗಿ, ಬಗ್ಗಿ, ಕುಳಿತು ಅಥವಾ ಬಾಗಿನಿಂತ ವಿವರ ಬಂದಿರುವುದು ಅವರ ದಯನೀಯ ಸ್ಥಿತಿಯನ್ನು ಕುರಿತೇ ಹೇಳುತ್ತದೆ. ಸ್ವಾತಂತ್ರ್ಯ, ತನ್ನತನವನ್ನು ಕಳೆದುಕೊಂಡ ಸೆರೆವಾಸದ ಕೈದಿಯನ್ನು ಇದು ನೆನಪಿಸುತ್ತದೆ. ನಾಗರಿಕ ಕಟ್ಟುಪಾಡುಗಳಲ್ಲಿ ಮನುಷ್ಯ ಬಂಧಿಯಾಗಿದ್ದಾನೆ ಎಂಬುದನ್ನು ಧ್ವನಿಪೂರ್ಣವಾಗಿ ಉಪಮೆರೂಪಕ ಪ್ರತಿಮೆಗಳಲ್ಲಿ ಪಡಮೂಡಿಸಿದ್ದಾರೆ. ಇಲ್ಲಿ ಸೂಚಿತವಾದ 'ದಬದಬ' ಇಳಿಯುವ ಅನುಕರಣ ವಾಚಿಪದ, ಮುಂದೆ 'ನುಚ್ಚು' 'ತವುಡಿನ ಚೀಲ'ದ ವಿವರಗಳೆಲ್ಲ ಬಂದಿರುವುದರಿಂದ ನಗರವಾಸಿಗೂ ಮನುಷ್ಯನೆಂಬ ಪ್ರಾಣಿಗೂ ಸಾಮ್ಯವನ್ನು ಕಲ್ಪಿಸುತ್ತದೆ. ಜಗಿದದ್ದನ್ನೆ ಮತ್ತೆ ಜಗಿಯುವ ನೀರಸ ಸ್ಥಿತಿ ಇವರದಾಗಿದೆ. 'ತೌಡು', ನುಚ್ಚು', 'ಒಣಭಾಷಣ' ಇವೆಲ್ಲ ನೀರಸವಾದ ಬದುಕಿನ ಸಂಕೇತಗಳೇ ಆಗಿವೆ. ಒಟ್ಟಿನಲ್ಲಿ ಕವಿ ಮೇಲಿನ ವಿವರಗಳ ಮೂಲಕ ಶುಷ್ಕ, ಯಾಂತ್ರಿಕ ಜೀವನದ ವಾಸ್ತವ ಸ್ಥಿತಿಗೆ ಕನ್ನಡಿ ಹಿಡಿದಿದ್ದಾರೆ. ಆದರ ಮುಂದಿನ ಮಗ್ಗಲು ಇಂತಿದೆ :

**ಕಾರು ಸ್ಕೂಟರು ಫಟಫಟೀ ಗಾಡಿ : ನಾಯಿ**
**ಬೆನ್ನತ್ತಿದಂತೆ ಓಡುತ್ತಾರೆ; ಓಡುವದೆ ರೂಢಿ.**

**..................................................**

**ಅಂಗಡಿಯ ಅಂಗಾಂಗದಲ್ಲೂ ಕಣ್ಣಾಡಿಸಿರಲು**
**ಕಾಜಿನ ಕಪಾಟಿನಲ್ಲಿಟ್ಟ ಗೊಂಬೆ ಗೋಣಾಡಿಸಿತು**
**ನಾಲಗೆಯ ಅಂಟಂಟಿಗೆರಡು ಪೆಪ್ಪರಮಿಂಟು**
**ಚಪ್ಪರಿಸುತ್ತ ಬಂದ ದಾರಿಯಲಿ ಹೊರಡುವರು.**

ನಗರದ ಬದುಕು ವೇಗದ ಬದುಕು, ದ್ರುತಗತಿಯ ಜೀವನ. ಇಲ್ಲಿರುವ ಅನಾಮಧೇಯತೆ, ನಿರರ್ಥಕತೆ, ಅನಾಥಪ್ರಜ್ಞೆಯ ಕುರಿತೇ ಕವಿ ಜಿಜ್ಞಾಸೆ ನಡೆಸಿದ್ದಾರೆ. "ನಾಯಿ ಬೆನ್ನತ್ತಿದಂತೆ ಓಡುತ್ತಾರೆ; ಓಡುವುದೇ ರೂಢಿ" ಎಂಬಲ್ಲಿನ ಉಪಮೆ ಸಾಮಾನ್ಯವಾದರೂ ಅದರ ನಿಜಸ್ಥಿತಿಯನ್ನು ಊಹಿಸಿಕೊಂಡಾಗ ಪರಿಣಾಮದ ತೀವ್ರತೆ ನಮ್ಮನ್ನು ತಟ್ಟದೇ ಹೋಗದು. "ಅಂಗಡಿಯ ಅಂಗಾಂಗದಲ್ಲು ಕಣ್ಣಾಡಿಸಿರಲು ಕಾಜಿನ ಕಪಾಟಿನಲ್ಲಿಟ್ಟ ಗೊಂಬೆ ಗೋಣಾಡಿಸಿತು" ಎಂಬ ರೂಪಕ ಚಿತ್ರ ಭಯಂಕರವಾಗಿದೆ. ಈ ನಗರದ ಮನುಷ್ಯನ ಸ್ಥಿತಿಯೂ ಈ ಗೊಂಬೆಯಂತಾಗಿದೆ. ನಗರ

ಮಾನವ ನಿರ್ಮಿತ ವ್ಯವಸ್ಥೆಯೇನೋ ಹೌದು. ಆದರೆ ಆ ವ್ಯವಸ್ಥೆಯೇ ಅವನನ್ನು ಕಟ್ಟಿಹಾಕುವ, ತುಚ್ಛೀಕರಿಸುವ ದಾರುಣಸ್ಥಿತಿಯನ್ನು ಕವಿ ಈ ನುಡಿ ರೂಪಕದಲ್ಲಿ ಸಶಕ್ತವಾಗಿ ಅಭಿವ್ಯಕ್ತಪಡಿಸಿದ್ದಾರೆ. ನಗರದ ನಿವಾಸಿಗಳೆಲ್ಲರ ಪಾಡೂ ಇದೇ ಆಗಿದೆ ಎಂಬಲ್ಲಿ ಮಾನವೀಯ ತುಡಿತದ ಧ್ವನಿಯಾಗಿ ಕಾವ್ಯ ಮಾತನಾಡುತ್ತದೆ. ಮನುಷ್ಯ ಷೋಕೇಸಿನ ಗೊಂಬೆಯಂತಾಗಿದ್ದಾನೆ. ಎಲ್ಲೆಡೆ ಕೃತಕತೆ ಆಡರಿಕೊಂಡಿದೆ. ಪೇಟೆಯಲ್ಲಿ ಸಾಮಾನು ವಿಪರೀತ ತುಟ್ಟಿ. ಅದು ಜನಸಾಮಾನ್ಯರ ಕೈಗೆ ಎಟುಕುತ್ತಿಲ್ಲ ಎಂಬ ವಿವರಣೆಯ ಜೊತೆಗೆ "ಕೆಂಪು ಧೂಳಿನ ಬೆವರಿನಲ್ಲಿ ಪೌಡರಿನ ವಾಸನೆ"ಯನ್ನು ತಂದಿದ್ದಾರೆ. ಹುಸಿ ಸಂಸ್ಕೃತಿಯ ಪೋಜು ಇಲ್ಲಿ ಹೇಗೆ ಮೆರೆದಾಡುತ್ತದೆ ಎಂಬುದನ್ನು ವ್ಯಂಗ್ಯವಾಗಿ ಚಿತ್ರಿಸಲಾಗಿದೆ. 'ನಾಲಿಗೆಯ ಅಂಟಂಟಿಗೆರಡು ಪೆಪ್ಪರಮಿಂಟು' - ಇಲ್ಲಿಯೂ ಜನರ ಉದ್ವೇಗ, ತಳಮಳ, ಆತಂಕದ ಸೂಚನೆಯೇ ಕಾಣಸಿಗುತ್ತದೆ. ಕಾಂಕ್ರೀಟ್ ಕಾಡುಗಳಲ್ಲಿನ ದಿನಚರಿಯನ್ನು ಮುಂದಿನ ಸಾಲುಗಳಲ್ಲಿ ಮಾರ್ಮಿಕವಾಗಿ ಹಿಡಿದಿಟ್ಟಿದ್ದಾರೆ.

**ಮಿಂಚುದೀಪದ ಕೆಳಗೆ ಹುಡುಗ ಹುಡುಗಿಯರ ಚಕಚಕ ನಡಿಗೆ**
**ಪಾರ್ಕಿನಲಿ ಗುಬ್ಬಿ, ಗಿಳಿ, ಗೊರವಂಕಗಳ ಚಿಲಿಪಿಲಿ ಕೇಕೆ**
**ವಿರಾಮವಾಗಿ ಗಾಳಿಯ ಕುಡಿದು ಹೆಜ್ಜೆಯೆಣಿಸುತ್ತ**
**ಹೊರಟ ಪಿಂಚಣಿದಾರ: ಹಿಡಿದು ಪ್ರಶ್ನೆಯ ಬಡಿಗೆ.**
**ಗಂಟಲು ಹರಿದುಕೊಂಡು ಚೀರಿದೆ ಹೋಟೆಲಿನ ರೇಡಿಯೋ**
**ಹೊತ್ತಾಯ್ತು ಹೋಗಬೇಕಯ್ಯ ಮನೆಗೆ**

ನಗರದ ಜನರ ಜೀವನಕ್ರಮದತ್ತ ಇಲ್ಲಿ ನಮ್ಮ ಗಮನ ಸೆಳೆದಿದ್ದಾರೆ. ವೈರುಧ್ಯಮಯವಾದ ಬದುಕಿನ ರೀತಿ ಇಲ್ಲಿದೆ. ಹುಡುಗ ಹುಡುಗಿಯರ ಥಳಕು ಬಳುಕಿನ ರೀತಿನೀತಿ; ಅವರು ಮಿಂಚು ದೀಪದ ಕೆಳಗೆ ಸೇರಿದ್ದಾರೆ. ಕಾಡಿನಲ್ಲಿ ಸಹಜವಾಗಿ ತಮ್ಮ ಪಾಡಿಗೆ ಉಳಿದುಕೊಂಡಿರುವ ಪಕ್ಷಿಗಳನ್ನು ಇಲ್ಲಿ ತಂದು ಮನುಷ್ಯ ನಿರ್ಮಿತ ಪಾರ್ಕಿನ ಪಂಜರದಲ್ಲಿ ಬಂಧಿಸಿಡಲಾಗಿದೆ. ಇಲ್ಲಿನ ಮಕ್ಕಳ ಸ್ಥಿತಿಯೂ ಇದೇ ಆಗಿದೆ. ಇನ್ನು ಇಲ್ಲಿನ ಹಿರಿಯರ, ನಿವೃತ್ತರ ಪಡಿಪಾಟಲು ಮತ್ತೊಂದು ರೀತಿಯದು. ವಾಯುವಿಹಾರಕ್ಕೆಂದು ಹೊರಟ ಪಿಂಚಣಿದಾರನ ಕೈಲಿರುವುದು 'ಪ್ರಶ್ನೆಯ ಬಡಿಗೆ'! ಎಂಬಲ್ಲಿ ಬದುಕಿನ ದುರಂತದ ಚಿತ್ರ ನಮ್ಮನ್ನು ಹಿಡಿದು ಅಲ್ಲಾಡಿಸುತ್ತದೆ. ಹೊಟೇಲು, ರೇಡಿಯೋ ಮೊದಲಾದ ಆಧುನಿಕ ಸುಖಸಾಧನಗಳಿಂದಲೂ ಈ ಮಂದಿಗೆ ನೆಮ್ಮದಿಯೆಂಬುದು ಭ್ರಮೆಯೇ ಆಗಿದೆ. ಈ ನರಕ ವ್ಯವಸ್ಥೆಯೊಳಗೆ ಘಾಸಿಗೊಂಡ ಜನರ ರಕ್ತ ಹೀರಲು ಗುಂಗಾಡು ಪಡೆ ಸಿದ್ಧವಾಗಿದೆ. ನಾಲ್ಕು ಗೋಡೆಗಳ ನಡುವಿನ ಮಾಮೂಲಿ ಬಾಳು. ಇನ್ನು ರಾತ್ರಿಯ ಕತೆಯೂ ಅದೇ ಅದೇ ಹಳಸಲು. ಬೆಳ್ಳಂಬೆಳಗಿನ ಕತೆಯೋ ಮಹಾ ಬೇಸರದ್ದು.

**ಬೆಳಗಿನಲ್ಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು**
**ಇಸ್ತ್ರಿ ಬಟ್ಟೆಯ ತೊಟ್ಟು ಹೊರಡಬೇಕು**
**ಬಟ್ಟೆ ಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು**

ಜನರ ಪಾಡಿನ ದಾರುಣ ಚಿತ್ರಣವಿಲ್ಲಿದೆ. ಇಲ್ಲಿ 'ಬಟ್ಟೆ ಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು' ಎಂಬ ರೂಪಕ ಅರ್ಥಪೂರ್ಣವಾಗಿದೆ. 'ಬಟ್ಟೆ' ಎಂದರೆ 'ದಾರಿ' ಎಂಬ ಅರ್ಥವೂ ಇದೆ. ಈ ನಗರದ ಜೀವನದಾರಿ ಸುಗಮವಾದುದಲ್ಲ ಎಂಬಲ್ಲಿ ಬದುಕಿನ ಕರಾಳ ವೈರುಧ್ಯಗಳ ವಿವರವೂ ಇದೆ. ಕಣವಿ ಅವರ ಈ ಕವಿತೆಯನ್ನು ಓಜುವಾಗ ತಟಕ್ಕನೆ ನಮಗೆ ಎಲಿಯಟ್ ಕವಿಯ ವೇಸ್ಟ್ ಲ್ಯಾಂಡ್, ಅರವಿಂದ ನಾಡಕರ್ಣಿ ಅವರ 'ನಗರಾಯಣ', ಅಜ್ಞಾನ', ಜಿ.ಎಸ್.ಎಸ್. ಅವರ 'ಮುಂಬೈ ಜಾತಕ' ಕವಿತೆ ನೆನಪಾಗುತ್ತವೆ. ನಗರದ ಬದುಕಿನ ಅಪಮೌಲ್ಯಮಾಪನ ಹಾಗೂ ಅದರ ಇತಿಮಿತಿಗಳ ವಿವರವಿಲ್ಲಿ ಬಂದಿದೆ. ಇಲ್ಲಿನ ಬದುಕಿನ ದುರವಸ್ಥೆಯ ಕುರಿತು ಒಂದು ರೀತಿಯ ಹತಾಶೆಯ ಭಾವ ಇಲ್ಲಿ ವ್ಯಕ್ತವಾಗಿದೆ.

ಹೀಗಾಗಿ ಕವಿ ಕೊನೆಗೆ ಕೇಳುವ ಪ್ರಶ್ನೆಗೆ ಉತ್ತರವೇ ಇಲ್ಲ.

**ಇರುವ ದಾರಿಯ ತುಂಬ ನಡೆದಿದ್ದಾರೆ ಮಂದಿ**
**ನನಗೆಲ್ಲಿ ಬೇರೆ ದಾರಿ?**

ಈ ಸಾಲಿನಲ್ಲಿ ಕವಿತೆ ಒಮ್ಮೆಲೆ ತಾತ್ವಿಕತೆಯತ್ತ ತಿರುಗಿಬಿಡುತ್ತದೆ. ಇಡೀ ಕವಿತೆಯ ಯಶಸ್ಸು ನಿಂತಿರುವುದು ಹಾಗೂ ಅದರ ನೈಜ ಉದ್ದೇಶ ಈಡೇರುವುದು ಈ ಭಾಗದಲ್ಲೇ. ಅನನ್ಯತೆ, ಸ್ವಂತಿಕೆಯನ್ನು ಉಳಿಸಿಕೊಳ್ಳಲಾಗದ್ದಕ್ಕೆ ಉಂಟಾಗಿರುವ ವಿಷಾದ, ವ್ಯರ್ಥ ತಳಮಳ ಇಲ್ಲಿದೆ. ಇದೊಂದು ನವ್ಯ ಮಾದರಿಯ ಕವಿತೆ. ಕಾವ್ಯ ವಸ್ತುವಿನಲ್ಲಿ ಅಭಿವ್ಯಕ್ತಿಯಲ್ಲಿ ಕಣವಿ ಅವರ ನವ್ಯ ದೃಷ್ಟಿಕೋನ ಚೆನ್ನಾಗಿ ಫಲಿಸಿದೆ. ಆದರೂ ಕವಿ ಇಲ್ಲಿ ನವ್ಯದ ಅತಿಗೆ, ಅತಿರೇಕಕ್ಕೆ ಏರದೇ ಬರೇ ಹತಾಶೆ ಹತಭಾಗ್ಯ ವಿಚಾರಗಳನ್ನು ಮೆರೆಸದೇ, ಮಾನವೀಯ ಕಾಳಜಿಗಳ ನಿವೇದನೆಗೆ ಒತ್ತು ನೀಡಿರುವದು ಗಮನಿಸತಕ್ಕ ಅಂಶ.

ನಮ್ಮ ನಿತ್ಯ ಜೀವನದ ಪರಿಚಿತ ವಸ್ತು ಪ್ರಪಂಚವನ್ನು ಕವಿ ಇಲ್ಲಿ ಮನುಷ್ಯ ಹಾಗೂ ನಾಗರಿಕತೆಗಳ ಸಂಬಂಧದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ನಗರದ ಬದುಕು ಹೇಗೆ ಕ್ರಮಕ್ರಮವಾಗಿ ವ್ಯಕ್ತಿ ವಿಶಿಷ್ಟತೆಗಳನ್ನು ಹೊಸಕಿಹಾಕಿ, ಅವನ ಪ್ರತಿಭೆಯನ್ನು ಸ್ವಂತಿಕೆಯನ್ನು ಸಪಾಟುಗೊಳಿಸಿಬಿಡುತ್ತದೆ ಎಂಬದಕ್ಕೆ ಈ ಪದ್ಯ ಒಳ್ಳೆಯ ನಿದರ್ಶನ. ವ್ಯಕ್ತಿ ವಿಶಿಷ್ಟತೆಗಳೊಂದಿಗೆ ಸಾಮಾಜಿಕ ಸಂಬಂಧವನ್ನು ಉಳಿಸಿಕೊಳ್ಳುವುದು, ಆಂತರಿಕ - ಬಾಹ್ಯ ಸಮತೋಲನವನ್ನು ಸಾಧಿಸುವುದು ಸುಲಭವಲ್ಲ. ಇಲ್ಲಿ ಘರ್ಷಣೆ ಅನಿವಾರ್ಯ. ನಗರವಾಸಿಯ ಒಳದನಿಗೆ ಈ ಕವಿತೆ ಉಸಿರಾಗಿದೆ ಎಂಬುದು ಮಹತ್ವದ ಸಂಗತಿ. ಕಣವಿ ಅವರ ಕವಿತೆಗಳಲ್ಲಿ ಮೂಡಿಬಂದ ನಗರಪ್ರಜ್ಞೆಯನ್ನು ಕುರಿತು ವಿವೇಚಿಸುವಾಗ ಈ ಕವಿತೆಯೂ ನಮಗೆ ಮುಖ್ಯವಾಗುತ್ತದೆ. ಪ್ರಸ್ತುತ 'ಮಂದಿ' ಕವಿತೆ ವಾಸ್ತವಕ್ಕೆ ಹತ್ತಿರವಾಗಿಯೂ ಇಂದಿಗೂ ಹೆಚ್ಚು ರೆಲವಂಟ್ ಆಗಿಯೂ ಉಳಿದಿದೆ ಎಂಬುದು ಕಣವಿ ಅವರ ಕಾವ್ಯದ ಗಟ್ಟಿತನಕ್ಕೆ ಸಾಕ್ಷಿ.

ಜಿ.ಎನ್. ಉಪಾಧ್ಯ

# ೩೨. ನಂಬಿಕೆ

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು.
ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು.
ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ತರಗಳ ನಡುವೆ ಸ್ಥಿರಗೊಂಡ ಒಡನಾಟ, ನಿರಂತರ ನಂಟು.
ಹಗಲೆಲ್ಲ ಹಸುರಾಗಿ, ತುಂಬು ಕೆಂಪಾಗಿ, ರೆಂಬೆ-
ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದೊಳಚ್ಚೊತ್ತಿ
ಚಿತ್ತಾರವಾಗಿ ಕಪ್ಪು ಮುಸುಕಿನ ಒಳಗೆ ಹುದುಗುವುವು
ಇದ್ದು ಇಲ್ಲದ ಹಾಗೆ, ಇರುಳಿನಲಿ ಒಮ್ಮೆಲೇ ಚಿಗುರೊಡೆದು
ಅಂತರಂಗವ ಬಿಚ್ಚಿ ಬಯಲಿಗಿಡುವದು ಬಾನು
ಎಚ್ಚರಾಗದ ಹಾಗೆ ನೆಲದ ಮೈದಡವಿ ಮುದ್ದಿಸುವುದು.
ಆಗ ಎಲ್ಲರಿಗೂ ನಿದ್ದೆ. ಬೆಳಗಿನ ಜಾವ ಯಾವುದೊ
ಕನಸು, ಬೆಳಗಾದ ಮೇಲೆ ಮರೆತು ನೆನೆಸುವುದು-
ತಿರುಗಾಡಿ ಬರುವಾಗ ಗೆಳೆಯರಿಗು ಹೇಳಿನಕ್ಕು
ನಗಿಸುವುದು; ಹೂ ಗಿಡಕೆ ನೀರು ಹಣಿಸುವುದು.

ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು-
ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ
ಚಿಗುರಿ ನಿಂತವರಾರು ? ಬಿರುಗಾಳಿ ಬೀಸಿ ಆಕಾಶದುದ್ದ
ಧೂಳಡರಿ ದಿಕ್ಕುತಪ್ಪಿಸಿ, ಮನೆಮನೆಯ ಕಿಡಕಿ ಬಾಗಿಲು
ಬಡಿದು ಪಟಪಟ ಹನಿಯುದುರಿದಾಗ ಯಾರು ನೆಲಕಿಳಿದು
ಬಂದವರು ? ಮರುದಿನ ಬೇಲಿಗುಂಟ ಹೂವರಳಿದಾಗ ಯಾರು
ಕಿಲಕಿಲ ನಕ್ಕು ಹೋದವರು? ನಿರ್ಮಲವಾಗಿ ನಿಂತ ಮೋಡ

ಹೊಯ್ದಾಡಿ ಎಲ್ಲೊ ಇಳಿಯುವುದು - ಭೂಮಿ ಗುಟುಕರಿಸುವುದು
ಆಗೀಗ ಮಿಂಚಿ ಅಂತರಿಕ್ಷದಲೇನೋ ಹೊಳೆಯುವುದು.

ಯಾವುದೋ ಗಳಿಗೆಯಲಿ ಹಠಾತ್ತನೆ ಒಳಗೆ ಅನಿಸುವ-
ದೊಂದು; ಬೆಟ್ಟದ ಮುಡಿಯ ಕಲ್ಲು ಬಂಡೆಯಲಿ ಚಿಲ್ಲನೆ ಬುಗ್ಗೆ
ಚಿಮ್ಮಿ ಮುಂದೆ ಹರಿದದ್ದೆಲ್ಲೊ, ಹಗಲಿರುಳು ಜಾರುವವು
ದಿನದಿನವೂ ನನ್ನೊಳಗಿಂದ ಏನೊ ಹೀರುವವು; ಮತ್ತೆಲ್ಲೊ
ತಿರುಗಿ, ಪತ್ತೆಯಿರದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು
ದುಡಿಸುವವು, ಜೇಂಗೊಡವ ಕಂಡು ಅಚ್ಚರಿಗೊಂಡರೂ
ಅವಸರಪಡುವ ಹಾಗಿಲ್ಲ; ದಾಹ ತೀರಿಸಲು ನೀರಲ್ಲ.
ಮತ್ತು ಬರಿಸುವ ಮದ್ಯವಲ್ಲ. ಅಂಗೈಯಲ್ಲಿ ಹನಿಹನಿ
ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ ತೆರೆಯಬೇಕು.

ನನ್ನ ನಂಬಿಕೆಯೊಂದು ಆಕಾಶ :
ನಿಜ, ಅದಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.
ಹಗಲು ಹೊತ್ತಿನಲ್ಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು ಮಿಣಮಿಣ ಮೇಣ-
ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ.

೧.

ಚೆನ್ನವೀರ ಕಣವಿಯವರ ಕವಿತೆಗಳಲ್ಲಿ 'ನಂಬಿಕೆ' ('ಎರಡು ದಡ' ಸಂಗ್ರಹ) ಸಾಂದ್ರವಾದ ಸಂಕೇತ-ಪ್ರತಿಮೆಗಳಿಂದ ಕೂಡಿದ, ಸಂಕೀರ್ಣತೆಯನ್ನು ಒಳಗೊಂಡ ಒಂದು ಗಮನಾರ್ಹ ಕವಿತೆ; ಇಲ್ಲಿಯ ವಸ್ತು ಮೂಲತಃ ಅಮೂರ್ತ (abstract)ವಾದದ್ದು; ಆದರೂ ಜೀವನದ ತುಂಬ ವ್ಯಾಪಿಸಿಕೊಂಡಂಥದು. ಇಂಥ ವಸ್ತುವನ್ನು ಕಾವ್ಯಕ್ಕೆ ದುಡಿಸಿಕೊಳ್ಳುವಾಗ ಕವಿ ಎಷ್ಟು ಕಾಳಜಿ ತೋರಿದರೂ ಸಾಲದೆನಿಸುತ್ತದೆ. ಚಿಂತನಶೀಲ ವ್ಯಕ್ತಿತ್ವವುಳ್ಳ ಕಣವಿಯವರು ತಮ್ಮ ಅನುಭವಗಳಿಗೆಲ್ಲ ಆಕಾರ ಕೊಡುತ್ತ, ತೀರ ಸಹಜವೆನ್ನುವಂತೆ ಈ ಕವಿತೆ ಸೃಷ್ಟಿಸಿರುವುದನ್ನು ಕಾಣಬಹುದು.

ಕವಿತೆಯ ವಿಶ್ಲೇಷಣೆಗೆ ತೊಡಗುವ ಮುನ್ನ ಕವಿತೆಯ ಅಭಿವ್ಯಕ್ತಿ-ಸ್ವರೂಪಕ್ಕೆ ಸಂಬಂಧಿಸಿದ ಒಂದು ಮಹತ್ವದ ಅಂಶವನ್ನು ಗುರುತಿಸಿಕೊಳ್ಳುವುದು ವಿಹಿತವೆನಿಸುತ್ತದೆ. ಅದೆಂದರೆ ಈ ಕವಿತೆಯಲ್ಲಿ ಕವಿಯೇ ನಾಯಕತ್ವ ವಹಿಸಿ ಮಾತಾಡುತ್ತಿರುವುದು. ನನಗೆ ಗೊತ್ತಿದ್ದ ಮಟ್ಟಿಗೆ ಸ್ವತಃ ಕಣವಿಯವರೇ ಕವನದ ನಾಯಕತ್ವ ವಹಿಸಿದ್ದು ಕಡಿಮೆ. ತೀರ ಕೆಲವು ಕವಿತೆಗಳಲ್ಲಿ ಮಾತ್ರ ಅವರ 'ನನ್ನ ತನ' ಕಾಣಿಸಿಕೊಳ್ಳುತ್ತದೆ. ಉಳಿದ ಎಲ್ಲ ಕವಿತೆಗಳಲ್ಲಿ 'ನಾವು' ಎಂಬ ಸಾರ್ವತ್ರಿಕ ಪ್ರಜ್ಞೆಯೇ ಇದೆ. ಪ್ರಸ್ತುತ ಕವಿತೆಯ ದೃಷ್ಟಿಯಿಂದ ಅವರ 'ನನ್ನತನ' ಸೇರಿದುದೇ ಸೂಕ್ತವಾದದ್ದು. ಯಾಕೆಂದರೆ 'ನಂಬಿಕೆ' ಯಾವಾಗಲೂ ವ್ಯಕ್ತಿಗತವಾದದ್ದು. ಅದು ಆಯಾ ವ್ಯಕ್ತಿಯ ವ್ಯಕ್ತಿತ್ವದೊಂದಿಗೇ ಬೆಳೆದು ಬರುವಂಥಾದ್ದು. ಹಾಗಿದ್ದೂ ಅದು ಸಾರ್ವತ್ರಿಕ ಮೌಲ್ಯ ಉಳ್ಳದ್ದು. ಪ್ರತಿಯೊಬ್ಬ ವ್ಯಕ್ತಿ ತನಗಿಷ್ಟವಿರುವ ವಿಷಯಗಳಲ್ಲಿ, ವ್ಯಕ್ತಿಗಳಲ್ಲಿ ತನ್ನ ದೃಷ್ಟಿಗನುಗುಣವಾದ ವಿಚಾರಗಳಲ್ಲಿ, ಧೋರಣೆಗಳಲ್ಲಿ ಹಾಗೂ ತನ್ನ ವ್ಯಕ್ತಿತ್ವದ ವಿಕಾಸಕ್ಕೆ ಸಹಕಾರಿಯಾಗಬಲ್ಲ ತತ್ವಗಳಲ್ಲಿ, ಸಿದ್ಧಾಂತಗಳಲ್ಲಿ 'ನಂಬಿಕೆ' ಇಟ್ಟಿರುತ್ತಾನೆ. 'ನಂಬಿಕೆ' ವ್ಯಾವಹಾರಿಕವಾಗಿ, ನೈತಿಕವಾಗಿ, ತಾತ್ವಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ನಮ್ಮ ಜೀವನದ ವಿವಿಧ ಸ್ತರಗಳಲ್ಲಿ ಕಾರ್ಯ ಮಾಡುತ್ತಿರುತ್ತದೆ. ಅದು ಎಲ್ಲ ಸ್ತರದಲ್ಲಿಯೂ ಜೀವನ ನಿರ್ವಹಣೆಗೆ ತೀರ ಅನಿವಾರ್ಯವಾದದ್ದಾಗಿರುತ್ತದೆ. ಹೀಗಿದ್ದರೂ ಅದು ಹೊಯ್ದಾಡುವಂತೆ, ಜಾರಿಕೊಳ್ಳುವಂತೆ, ಸುಳ್ಳಾಗುವಂತೆ ಮಾಡುವ ಘಟನೆಗಳು ಆಗಾಗ ನಡೆಯುತ್ತಿರುತ್ತವೆ. ಹಾಗಾದಾಗ ಸಹಜಾಚರಣೆಯಾಗಿದ್ದ 'ನಂಬಿಕೆ' ಒಂದು ಸಮಸ್ಯೆಯಾಗುತ್ತದೆ. ಸರಳವಾಗಿದ್ದ ಅವರ ಸಂವೇದನೆಗಳು ಸಂಕೀರ್ಣವಾಗುತ್ತವೆ. ಅಂಥ ಸಂದರ್ಭಗಳಲ್ಲಿ ವ್ಯಕ್ತಿಯು ತನ್ನೊಳಗೇ ಅವುಗಳನ್ನು ವಿಶ್ಲೇಷಿಸಿ ಅದರ ಎಲ್ಲ ಪದರಗಳನ್ನು ಗುರುತಿಸಲು ಯತ್ನಿಸುತ್ತಾನೆ. ವ್ಯಕ್ತಿಯ ಮನೋಧರ್ಮ ಹಾಗೂ ಅವನ ಜೀವನಾನುಭವಗಳ ಭೂಮಿಕೆಯ ಮೇಲೆ 'ನಂಬಿಕೆ'ಯಲ್ಲಿಯ ಗಟ್ಟಿತನ ಇಲ್ಲವೆ ಜೊಳ್ಳುತನ ಒಂದು ಸ್ಥಿತಿಗೆ ಬಂದು ನಿಲ್ಲುತ್ತದೆ.

ಹೀಗೆ ಜೀವನಕ್ಕೆ ನಿಕಟವಾಗಿರುವ 'ನಂಬಿಕೆ'ವಿಷಯವನ್ನು ಕಾವ್ಯಕ್ಕೆ ವಸ್ತುವಾಗಿರಿಸಿಕೊಂಡಾಗ ಕವಿಯಾದವನು ತನ್ನನ್ನು ಅದರಿಂದ ಪ್ರತ್ಯೇಕಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಇಂಥಲ್ಲಿ ನವ್ಯದ ವಸ್ತು ಪ್ರತಿರೂಪ (objective correlative) ಹಾಗೂ ವ್ಯಕ್ತಿತ್ವಕ್ಕೆ ಅತೀತವಾಗಿರುವ (Escape from personality) ತಂತ್ರಗಳು ಪ್ರಯೋಜನಕಾರಿಯಾಗಲಾರವೆಂದು ಅನಿಸುತ್ತದೆ. ಕವಿ ತನ್ನ ವ್ಯಕ್ತಿತ್ವವನ್ನು ಅದರಲ್ಲಿ ಸಂಪೂರ್ಣ ತೊಡಗಿಸಿಕೊಂಡಾಗಲೇ ಕಾವ್ಯಕ್ಕೊಂದು ಗಟ್ಟಿತನ ಬರುತ್ತದೆ, ಅದು ಜೀವಂತವೂ ಆಗುತ್ತದೆ. ಅಂದರೆ ಇಲ್ಲಿನ ಕವನಕ್ರಿಯೆ ಒಂದು ಸ್ವಗತ ಸಂಭಾಷಣೆಯಂತಿರಬೇಕೇ ಹೊರತು ಬೇರೆ ಯಾವುದೇ ಬಗೆಯ ಶಬ್ದ ಚಿತ್ರದಂತೆ ಅಥವಾ ರೂಪಕದಂತೆ ಇರತಕ್ಕದ್ದಲ್ಲ.

ಕಣವಿಯವರ ಈ ಕವಿತೆ ಸಂಕೇತ ಪ್ರತಿಮೆಗಳನ್ನು ಸೃಷ್ಟಿಸಿಕೊಳ್ಳುತ್ತ ನಂಬಿಕೆಯ ಒಂದು ಶಿಲ್ಪವನ್ನು ರಚಿಸುತ್ತ, ಸ್ವಗತ ಸಂಭಾಷಣೆಯಾಗಿ, ಅನುಭವದ ವಿವಿಧ ಮಗ್ಗುಲುಗಳನ್ನು ಹೊರಳಿಸಿ ಹೊರಳಿಸಿ ನೋಡುತ್ತ, ತನ್ನದೇ ಆದ ನಿಲುವನ್ನು ಸೂಚಿಸುತ್ತದೆ.

ಕವಿತೆ ಪ್ರಾರಂಭವಾಗುವುದು 'ನಂಬಿಕೆ'ಯ ಸ್ವರೂಪ, ಜೀವನದಲ್ಲಿ ಅದರ ಪ್ರಭಾವ ಪರಿಣಾಮಗಳನ್ನು ಚಿತ್ರಿಸುವುದರೊಂದಿಗೆ;

**ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು**
**ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು.**

ಇದು ನಂಬಿಕೆಯ ಒಂದು ರೂಪ. ಎರಡು ಚರಣಗಳ ಈ ಪ್ರತಿಮೆಯಲ್ಲಿ ಅದರ ಹರವನ್ನೂ, ವೈವಿಧ್ಯವನ್ನೂ ಗುರುತಿಸಬಹುದು. ಅನಂತ, ಆಕಾಶ, ಆಕೃತಿ ಇವು 'ನಂಬಿಕೆ'ಯ ಮೂಬಗೆಯ (ಮೂಬಗೆಯಾಗಿದ್ದರೂ ಎಲ್ಲ ಕೂಡಿ ಒಂದೇ ಆಗಿರುವುದು) ಕಲ್ಪನೆಯನ್ನು ತಂದುಕೊಂಡುತ್ತವೆ. ಅನಂತವೆಂದರೆ ಅಂತವಿಲ್ಲದ್ದು ಅಥವಾ ಸೀಮಾತೀತವಾದದ್ದು. ಅಂದರೆ 'ನಂಬಿಕೆ'ಯು ಪರಿಮಿತಿಗೆ ಒಳಗಾಗದಂಥದ್ದು ಎಂದು ಅರ್ಥ, ಅದು ಆಕಾಶದಷ್ಟು ಅಪಾರ ವ್ಯಾಪ್ತಿಯುಳ್ಳದ್ದು ಎಂಬುದನ್ನು ಮುಂದಿನ 'ಆಕಾಶ'ವೆಂಬ ಪದವೇ ಸೂಚಿಸುತ್ತದೆ. ಒಟ್ಟಂದದಲ್ಲಿ ಅದು ವಿಶ್ವವ್ಯಾಪಿಯಾದ ಒಂದು ವಿಶಿಷ್ಟ ವಸ್ತು. ಹಾಗಿದ್ದರೂ ಅದಕ್ಕೊಂದು ಆಕೃತಿ ಅಥವಾ ಆಕಾರವಿದೆ. ಯಾಕೆಂದರೆ ಆಕಾಶದಂತೆ ಅದು ನಮ್ಮ ಸುತ್ತ ಮುತ್ತೂ, ಒಳಗು-ಹೊರಗೂ ವ್ಯಾಪಿಸಿಕೊಂಡಿದೆ. ಅಲ್ಲದೆ ಅನುಭವಗಮ್ಯವಾಗಿದೆ. ಇಲ್ಲಿಯ ಪ್ರತಿಯೊಂದು ಪದದ ಮೊದಲಕ್ಷರಗಳು ಅ, ಆ, ಆ, ಸವರ್ಣಗಳು ಒಂದೇ ಮೂಲವಸ್ತುವನ್ನು ಅಭಿನಯಿಸಿ ತೋರಿಸುವಂತಿದೆ. ಅದರ ಮುಂದಿನ ಚರಣದಲ್ಲಿಯೇ 'ನೀಲ'ವೆಂಬ ವರ್ಣವು ನಂಬಿಕೆ ಏಕವರ್ಣವುಳ್ಳದ್ದೆಂಬುದನ್ನು ಸಮರ್ಥಿಸುತ್ತದೆ. ಅಂದರೆ 'ನಂಬಿಕೆ' ಒಂದೇ ಒಂದು ನಿಶ್ಚಿತ ಬಣ್ಣ (ಸ್ವಭಾವ)ವುಳ್ಳದ್ದಾಗಿರುತ್ತದೆಯೇ ಹೊರತು ಊಸರವಳ್ಳಿಯಂತೆ ಗಳಿಗೆ ಗಳಿಗೆಗೆ ಬಣ್ಣ ಬದಲಿಸುತ್ತ ಹೋಗುವಂಥದ್ದಲ್ಲ. ಹಾಗಾದಾಗ ಅದು ಅಪನಂಬಿಕೆಯಾಗುತ್ತದೆ. ವಿಚಾರವನ್ನು ಗೃಹೀತ ಮಾಡಿಕೊಂಡಾಗ ಮುಂದೆ ಬರುವ 'ನೂರು ಬಣ್ಣದ ಲೀಲೆಗವಕಾಶವುಂಟು' ಎಂಬುದಕ್ಕೆ ಅರ್ಥವೇನು ಎಂಬುದು ಒಂದು ಪ್ರಶ್ನೆಯಾಗುತ್ತದೆ. ಇಲ್ಲಿಯ 'ನೂರು ಬಣ್ಣ' ಎಂಬುದು ಬಣ್ಣ ಬದಲಾಯಿಸುವುದನ್ನು ಸೂಚಿಸದೆ ಅದರ ವೈವಿಧ್ಯವನ್ನು ತಿಳಿಸಿ ಕೊಡುವಂಥದ್ದೆಂದು ಭಾವಿಸಬೇಕು. ಲೀಲೆಗೆ 'ಅವಕಾಶ'ವಿದೆಯೆಂಬುದು ಜೀವನವು ವೈವಿಧ್ಯಪೂರ್ಣ; ಅದರ ವ್ಯವಹಾರಗಳು, ಕಾರ್ಯಗಳು ಅನೇಕ ಎಂಬುದನ್ನು ಸೂಚಿಸುತ್ತದೆ. ಅನೇಕ ಮುಖವಾಗಿರುವ ಜೀವನ ವ್ಯವಹಾರದಲ್ಲಿ 'ನಂಬಿಕೆ'ಯೂ ಅ, ಆ ಸಮಯ, ಸಂದರ್ಭಗಳಿಗನುಸಾರವಾಗಿ ಕಾಣಿಸಿಕೊಳ್ಳುತ್ತದೆ. (ಹಾಗೆ ಕಾಣುವುದರಲ್ಲಿಯೇ ಅದರ ನೂರು ಬಣ್ಣಗಳಿವೆ) ಲೀಲೆಯೆನ್ನುವುದು ಅಗಾಧ ಕಾರ್ಯವನ್ನು ಸೂಚಿಸುವ ಪೌರಾಣಿಕ ಪದವಾದರೂ ಇಲ್ಲಿ ಅದು 'ನಂಬಿಕೆ'ಯ ವಿವಿಧ ಕಾರ್ಯ, ಪರಿಣಾಮಗಳನ್ನು ಸೂಚಿಸಲು ಮಾತ್ರ ನಿರ್ದಿಷ್ಟವಾಗಿದೆ.

**ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ**
**ಸ್ತರಗಳ ನಡುವೆ ಸ್ಥಿರಗೊಂಡ ಒಡನಾಟ, ನಿರಂತರ ನಂಟು**

ಈ ಸಾಲುಗಳು ನಮ್ಮ ಬದುಕಿಗೂ ನಂಬಿಕೆಗೂ ಇರುವ ಸಂಬಂಧವನ್ನು ಸೂಚಿಸುತ್ತವೆ. ಭೂಮಿಯ ಮೇಲೆ ಕಾಲೂರಿ ನಡೆದಿರುವ ಅಂದರೆ ವಾಸ್ತವ ಜಗತ್ತಿನ ಗಾಢ ಸಂಬಂಧವುಳ್ಳ, ನಾವು, ನಂಬಿಕೆಯ

ವಿವಿಧ ಸ್ತರಗಳ ನಡುವೆಯೇ ಬದುಕುತ್ತಿರುತ್ತೇವೆ. ಅಂತೆಯೇ ನಮಗೂ ಅದಕ್ಕೂ 'ಸ್ಥಿರಗೊಂಡ ಒಡನಾಟ'ವಿದೆ. ಅದು 'ನಿರಂತರ ನಂಟೂ' ಅಹುದು. ಇಲ್ಲಿ 'ನಂಟು' ಪದದಲ್ಲಿರುವ 'ಅಂಟು' ಎಂಬ ಧ್ವನಿಯು ಅದರ ಜಿಗುಟುತನವನ್ನು ಸೂಚಿಸದಿರದು. ಹೀಗೆ ಬದುಕು ನಂಬಿಕೆಗಳ ಗಾಢ ಸಮ್ಮಿಲನದಿಂದ ಉಂಟಾಗುವ ಪರಿಣಾಮವೇನು ಎಂಬುದನ್ನು ಮುಂದಿನ ಪ್ರತಿಮೆ ತಿಳಿಸಿಕೊಡುತ್ತದೆ.

**ಹಗಲೆಲ್ಲ ಹಸುರಾಗಿ, ತುಂಬು ಕೆಂಪಾಗಿ, ರೆಂಬೆ-**
**ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದೊಳಚ್ಚೊತ್ತಿ**
**ಚಿತ್ತಾರವಾಗಿ ಕಪ್ಪು ಮುಸುಕಿನ ಒಳಗೆ ಹುದುಗುವವು**
**ಇದ್ದು ಇಲ್ಲದ ಹಾಗೆ. ಇರುಳಿನಲಿ ಒಮ್ಮೆಲೆ ಚಿಗುರೊಡೆದು**
**ಅಂತರಂಗವ ಬಿಚ್ಚಿ ಬಯಲಿಗಿಡುವುದು ಬಾನು;**

ಈ ಪ್ರತಿಮೆ ನೋಡಿದಾಕ್ಷಣಕ್ಕೆ ರೋಮ್ಯಾಂಟಿಕ್ ವರ್ಣನಾ ರೀತಿಯಾಗಿ ಕಾಣಿಸುತ್ತದಾದರೂ ಅದು ಈ ಸಂದರ್ಭದಲ್ಲಿ ಸಾರ್ಥಕವಾದ ಅಭಿವ್ಯಕ್ತಿಯ ಮಾಧ್ಯಮವಾಗಿದೆ. ಹಗಲೆಲ್ಲ ಹಸುರಾಗು ಎಂಬುದು ಬದುಕು ಚೈತನ್ಯದಾಯಿಯಾಗುವುದನ್ನು, ತುಂಬು ಕೆಂಪಾಗು ಎಂಬುದು ಚೈತನ್ಯದಾಯಿಯಾದ ನಂತರ ಅದು ಪಕ್ವವಾಗುವದನ್ನೂ ಅಥವಾ ಫಲಪ್ರದವಾಗುವದನ್ನು ಸೂಚಿಸುತ್ತವೆ. ರೆಂಬೆ-ಕೊಂಬೆಗಳೆಲ್ಲ ಎಂಬಲ್ಲಿ ಬದುಕಿನ ಶಾಖೋಪಶಾಖೆಗಳ ಸಂಬಂಧವನ್ನು ಅಂದರೆ ಒಬ್ಬ ವ್ಯಕ್ತಿಯ ಜೀವನಕ್ಕೆ ಸಂಬಂಧಿಸಿದ ಇತರ ಹಲವಾರು ತತ್ವ, ಸಿದ್ಧಾಂತಗಳ ಸಂಬಂಧವನ್ನು ಸೂಚಿಸುತ್ತದೆ. ನಿರಾಳ ಮನದೊಳಚ್ಚೊತ್ತಿ ಚಿತ್ತಾರವಾಗುವುದು. ಪ್ರಶಾಂತ ಚಿತ್ತದ ವ್ಯಕ್ತಿತ್ವದ ಒಳಗೇ ಅದು ಸಾಕ್ಷಾತ್ಕರಿಸುವುದನ್ನು ಸಂಕೇತಿಸುತ್ತದೆ. ಅದು ಮನೋವೈದ್ಯ ಅಥವಾ ಅನುಭವಗಮ್ಯ ಎಂಬುದೂ ಇದರ ಅರ್ಥವಾಗಿದೆ. ಪೂರ್ವಭಾವಿಯಾಗಿ ಬರುವ 'ಕಪ್ಪು ಮುಸುಕಿನ ಒಳಗೆ' ಎಂಬುದು ಒಂದಿಷ್ಟು ಸಂದಿಗ್ಧವಾಗಿದೆ. ಕಪ್ಪು ಮುಸುಕು ಸಾಮಾನ್ಯವಾಗಿ ಅಸತ್ಯ ಅನ್ಯಾಯದ ವ್ಯವಹಾರಗಳನ್ನು ಸೂಚಿಸುವಂಥದ್ದು. ಅಂಥ ವ್ಯವಹಾರದಲ್ಲಿಯೂ ನಂಬಿಕೆ ಚಿತ್ತಾರವಾಗಿ ಹುದುಗುವುದು ಎಂದರೆ ವಿರೋಧಾಭಾಸವಾಗುತ್ತದೆ. ಆದರೆ ಇಲ್ಲಿಯ 'ಕಪ್ಪು ಮುಸುಕು' ಫೋಟೊ ನೆಗೆಟಿವ್ಹದಂಥಾದ್ದೆಂದಿಟ್ಟುಕೊಂಡರೆ ಅರ್ಥ ಸರಿಹೋಗುತ್ತದೆ. ಅಂದರೆ ಅಗೋಚರವಾದ ಆದರೂ ಚಿತ್ರವನ್ನು ಹುದುಗಿಸಿಟ್ಟುಕೊಂಡ ನೆಗೆಟಿವ್ಹದಂತೆ 'ನಂಬಿಕೆ' ನಮ್ಮ ನಮ್ಮ ಮನಸ್ಸಿನಲ್ಲಿ ಹುದುಗಿಕೊಂಡಿರುತ್ತದೆ. ಅದರ ಎಲ್ಲ ಬಗೆಯ ಆಕಾರಗಳೂ ಅಲ್ಲಿಯೇ ರೂಪುಗೊಳ್ಳುತ್ತವೆ.

ಹೀಗೆ ಅಂತರಂಗದಲ್ಲಿ ಅಚ್ಚೊತ್ತಿಕೊಂಡಿರುವ 'ನಂಬಿಕೆ' ನಮ್ಮ ಅಜಾಗೃತ ಮನಸ್ಸಿನಲ್ಲಿಯೂ ಕಾರ್ಯ ಮಾಡುತ್ತಿರುತ್ತದೆ. ಅಂದರೆ ನಂಬಿಕೆ ಪ್ರಜ್ಞಾಪೂರ್ವಕವಾದ ಆಚರಣೆಯಾಗದೆ ಸಹಜವಾದ ಜೀವನ ವ್ಯಾಪಾರವಾಗಿ ತನ್ನ ಪರಿಣಾಮವನ್ನು ಬೀರುತ್ತಿರುತ್ತದೆ. ಇರುಳಿನಲ್ಲಿ (ಸುಪ್ತಾವಸ್ಥೆಯಲ್ಲಿ ಅಥವಾ ಅಜಾಗೃತ ಸ್ಥಿತಿಯಲ್ಲಿ)ಯೂ ಅದು ಕಾರ್ಯ ಮಾಡುತ್ತಿರುತ್ತದೆ. ಇದು ಅದರ ಸಂಕೀರ್ಣವಾದ ಕಾರ್ಯವೆಂದು ಹೇಳಬಹುದು. ಈ

ಸಂಕೀರ್ಣತೆಯ ಸೂಕ್ಷ್ಮ ಕಾರ್ಯವನ್ನು ಗುರುತಿಸುವುದು ಮಾನವಶಾಸ್ತ್ರಕ್ಕೂ ಒಮ್ಮೆಲೆ ನಿಲುಕುವಂಥದ್ದಲ್ಲ. ಅದರ ಕ್ರಿಯೆ-ಪ್ರತಿಕ್ರಿಯೆಗಳನ್ನು ಗುರುತಿಸಿ, ವಿಶ್ಲೇಷಿಸಿ ಒಂದು ನಿರ್ಣಯಕ್ಕೆ ಬರಬೇಕಾಗುತ್ತದೆ. ಅಂಥದನ್ನು ಕಣವಿಯವರ ಕಾವ್ಯದ ಕಣ್ಣು ಗುರುತಿಸುತ್ತದೆ, ಸಂಕೇತದಲ್ಲಿ ಅಭಿವ್ಯಕ್ತಗೊಳಿಸುತ್ತದೆ, ಅಂದರೆ 'ನಂಬಿಕೆ' ಎಂಬ ಬಾನು (ಕಾವ್ಯದ ಆರಂಭದಲ್ಲಿ ಸೂಚಿಸಿದಂತೆ 'ಆಕಾಶ' ಎಂದೂ ಹೇಳಬಹುದು) ಆ ಅಜಾಗೃತ ಮನಸ್ಸಿನಲ್ಲಿ (ಇರುಳಿನಲ್ಲಿ) ಒಮ್ಮೆಲೆ ಚಿಗುರೊಡೆದು ತನ್ನ ಹೃದಯವನ್ನು ತೆರೆದಿಡುತ್ತದೆ. ಹಾಗೆ ನಂಬಿಕೆ ತನ್ನ ತನವನ್ನು ತೆರೆದಿಟ್ಟಾಗ ನಮ್ಮ ವ್ಯಕ್ತಿತ್ವದೊಂದಿಗೆ ಗಾಢವಾಗಿ ಬೆರೆತುಕೊಂಡಿರುತ್ತದೆ ಅದು:

**ಎಚ್ಚರಾಗುವ ಹಾಗೆ ನೆಲದ ಮೈದಡವಿ ಮುದ್ದಿಸುವುದು**
**ಆಗ ಎಲ್ಲರಿಗೂ ನಿದ್ದೆ.**

ಎಂಬಲ್ಲಿ ವ್ಯಕ್ತವಾಗಿದೆ. 'ಆಗ ಎಲ್ಲರಿಗೂ ನಿದ್ದೆ' ಎಂಬುದರಲ್ಲಿ ಒಬ್ಬ ವ್ಯಕ್ತಿಯ 'ನಂಬಿಕೆ'ಗೆ ಒಳಗಾದ ಎಲ್ಲ ವಿಚಾರಗಳಲ್ಲಿ ಅದರದೆ ಆದ ಒಂದು ಮರೆವು ಇರುತ್ತದೆಂದು ಅರ್ಥ ಅಥವಾ ಅಂಥ ವಿಚಾರಗಳೆಲ್ಲ ಸ್ಥಿರವಾದ ನಂಬಿಕೆಯ ಕಾರಣದಿಂದ ನಿಶ್ಚಿಂತವಾಗಿರುತ್ತವೆಂದೂ ಅರ್ಥ. ಈ ಸ್ಥಿರವಾದ 'ನಂಬಿಕೆ'ಯಲ್ಲಿ ಒಂದು ಸ್ವಪ್ನಸೃಷ್ಟಿಯೂ ಇದೆ:

**ಬೆಳಗಿನ ಜಾವ ಯಾವುದೊ**
**ಕನಸು! ಬೆಳಗಾದ ಮೇಲೆ ಮರೆತು ನೆನೆಸುವುದು**
**ತಿರುಗಾಡಿ ಬರುವಾಗ ಗೆಳೆಯರಿಗೂ ಹೇಳಿ ನಕ್ಕು**
**ನಗಿಸುವುದು; ಹೂ ಗಿಡಕೆ ನೀರು ಹಣಿಸುವುದು**

ಬೆಳಗಿನ ಜಾವದ ಇಲ್ಲಿಯ ಕನಸು 'ನಂಬಿಕೆ'ಯ ಶುಭ ಪರಿಣಾಮವನ್ನು ಸೂಚಿಸುತ್ತದೆ. ಅಂತೆಯೇ ಅದನ್ನು ಕವಿ ಮರೆತು ನೆನಸುತ್ತಿದ್ದಾನೆ. ಅಷ್ಟಲ್ಲದೆ ಅದರ ಸೊಗಸನ್ನು ಗೆಳೆಯರಿಗೂ ಹೇಳಿ ನಕ್ಕು ನಗಿಸುತ್ತಾನೆ. ಇಲ್ಲಿಯವರೆಗೆ 'ನಂಬಿಕೆ'ಯ ಒಂದು ಆದರ್ಶದ ನಿಲುವು ಸೂಚಿತವಾಗಿದೆ. ಆ ಈ ಆದರ್ಸ ಅಚಲವಾಗಿರುವವರೆಗೂ ಜೀವನದಲ್ಲಿ ಹೊಯ್ದಾಟಕ್ಕೆ ಅವಕಾಶವಿಲ್ಲ. ಯಥಾಪ್ರಕಾರ ಹೂಗಿಡಕ್ಕೆ ನೀರು ಹನಿಸುವ ದೈನಂದಿನ ವ್ಯವಹಾರದಲ್ಲಿ ಲೀನವಾಗಬೇಕಾಗುತ್ತದೆ. ಈ ಸಾಲುಗಳು ಗದ್ಯದ ಹೇಳಿಕೆಯಂತೆ ತೋರಿದರೂ ಪ್ರತಿಮಾ ರೂಪದಲ್ಲಿಯೇ ಇರುವದನ್ನು ಗಮನಿಸಬಹುದು. ಹೀಗೆ ಹೇಳಿಕೆಗಳನ್ನು ಪ್ರತಿಮೆಗಳನ್ನಾಗಿ ದುಡಿಸಿಕೊಳ್ಳುವುದರಲ್ಲಿಯ ಎ.ಕೆ. ರಾಮಾನುಜನ್ ಎದ್ದು ಕಾಣುತ್ತಾರೆ. ಕಣವಿಯವರೂ ಅವುಗಳನ್ನು ಆರಂಭದಿಂದಲೂ ಪ್ರತಿಮಾ ರೂಪಗಳಲ್ಲಿಯೇ ದುಡಿಸಿಕೊಳ್ಳುತ್ತಿರುವುದನ್ನು 'ಕೊನೆಯ ನಿಲ್ದಾಣ' 'ಕಾಲ ನಿಲ್ಲುವುದಿಲ್ಲ' ಮುಂತಾದ ಕವಿತೆಗಳಲ್ಲಿ ಕಾಣಬಹುದು.

ಕವಿತೆಯ ಮೊದಲನೆಯ ಭಾಗದಲ್ಲಿ ಮೈಮರೆಸುವಷ್ಟು ಗಾಢವಾಗಿದ್ದ 'ನಂಬಿಕೆ' ಎರಡನೆಯ ಭಾಗಕ್ಕೆ ಬಂದಾಗ ಒಂದು ಸಮಸ್ಯೆಯಂತೆ, ಒಗಟಿನಂತೆ ಕಾಣಿಸಿಕೊಳ್ಳುತ್ತದೆ. ಅಂದರೆ 'ನಂಬಿಕೆ'ಯ

ಮೊದಲಿನ 'ಸ್ಥಿರಗೊಂಡ ಒಡನಾಟ' 'ನಿರಂತರದ ನಂಟು ಸಡಿವಾಗುವ ಸಮಯವೊದಗಿ ಬಂದು, ಅದು ವಿಶ್ಲೇಷಣೆಗೆ ಒಳಪಡುತ್ತದೆ. ಈ ವಿಶ್ಲೇಷಣೆಯಲ್ಲಿ ಅದರ ಶೈಥಿಲ್ಯಗಳನ್ನು ಕವಿ ತಾನೇ ಪ್ರಶ್ನಿಸಿಕೊಂಡು ಪ್ರಶ್ನೆಯಲ್ಲಿಯೇ ಉತ್ತರವನ್ನು ಹುಡುಕುತ್ತ-ಸಾಗುತ್ತಾನೆ.

**ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು-**
**ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ**
**ಚಿಗುರಿ ನಿಂತವರಾರು?**

ಎಂಬುದು ಮೊದಲ ಪ್ರಶ್ನೆ. ಚಳಿಗಾಲ ಒಂದು ನಡುಕು ಹುಟ್ಟಿಸುವ ಹಾಗೂ ಎಲೆಗಳನ್ನು ಉದುರಿಸುವ ಸಮಯ. ಇಲ್ಲಿ 'ನಂಬಿಕೆ' ಥಂಡಿಯ ತೀಕ್ಷ್ಣತೆಗೆ ಸಿಕ್ಕು, ತನ್ನ ಪೂರ್ವದ ಎಲೆಗಳನ್ನು ಕಳಚಿಕೊಂಡಿದೆ. 'ಕಳಚುತ್ತಿರುವ' ಪದವನ್ನು ಒಡೆದು ಅದರ ಅರ್ಥವಂತಿಕೆಯನ್ನು ಹೆಚ್ಚಿಸುವುದನ್ನು ಇಲ್ಲಿ ಕಾಣಬಹುದು. ಹಾಗೆ 'ನಂಬಿಕೆ' ಕಳಚಿ ಹೋದಂತೆನಿಸಿದರೂ ಮತ್ತೆ ಬೇರಿಂದ ರಸ ಹೀರಿ ಚಿಗುರಿ ನಿಂತಿದೆ. ಅಂದರೆ ನಂಬಿಕೆಯ ಗಟ್ಟಿಮುಟ್ಟಾದ ಬೇರು ಸಡಿಲವಾಗಿದ್ದ ಸ್ಥಿತಿಯನ್ನು ಹೋಗಲಾಡಿಸಿ ಮತ್ತೆ ಹೊಸತನವನ್ನು ತಂದುಕೊಟ್ಟಿದೆ ಎಂದರ್ಥ. ಆದರೂ ಅದು ಪ್ರಶ್ನೆಯಾಗಿ, ಒಂದು ವಿಸ್ಮಯವಾಗಿ ಉಳಿದಿದೆ.

**ಬಿರುಗಾಳಿ ಬೀಸಿ ಆಕಾಶದುದ್ದ**
**ಧೂಳಡರಿ ದಿಕ್ಕು ತಪ್ಪಿಸಿ, ಮನೆ ಮನೆಯ ಕಿಡಕಿ ಬಾಗಿಲು**
**ಬಡಿದು, ಪಟ ಪಟ ಹನಿಯುದುರಿದಾಗ ಯಾರು ನೆಲಕಿಳಿದು**
**ಬಂದವರು?**

ಇದು 'ನಂಬಿಕೆ'ಯ ಇನ್ನೊಂದು ಕ್ರೈಸಿಸ್ ಅನ್ನು ಸಾರ್ಥಕವಾಗಿ ಚಿತ್ರಿಸುತ್ತದೆ. ಯಾವುದೋ ಒಂದು ವಿಲಕ್ಷಣವಾದ ಆಘಾತ ಬಿರುಗಾಳಿಯಾಗಿ ಧೂಳೆಬ್ಬಿಸಿ ದಿಕ್ಕು ತಪ್ಪಿಸುತ್ತದೆ. ಆಗ ಮನಸ್ಸಿನ ಎಲ್ಲ ಸ್ತರಗಳ ಮೇಲೂ ಹೊಡೆತ ಬೀಳುತ್ತದೆ. ಅದು 'ಮನೆ ಮನೆಯ ಕಿಡಕಿ ಬಾಗಿಲು ಬಡಿದು' ಎಂಬ ಪ್ರತಿಮೆಯಲ್ಲಿ ಸೂಚಿತವಾಗಿದೆ. ಮುಂದಿನ ಪ್ರಶ್ನಾರ್ಥವು ಹಿಂದಿನ ಆಘಾತ ಸೂಚಕವಾದ ಪ್ರತಿಮೆಗೆ ಒಂದು ಬ್ರೇಕು ಹಾಕಿ ಒಂದು ಹೊಸ ಆಸೆಯನ್ನು ಹುಟ್ಟಿಸುತ್ತದೆ. ಎಲ್ಲ ಅಬ್ಬರಣೆ ಮುಗಿದು ಮಳೆಹನಿಯುದುರಿದಂತೆ 'ನಂಬಿಕೆ' ನೆಲಕಿಳಿದು ಬರುತ್ತದೆ. ಇಂಥ ಅವಸ್ಥೆಯಲ್ಲಿ ಒಂದು ದಿನ (ಹಾಗೆಂದು ಕವಿ ಹೇಳಿರದಿದ್ದರೂ ಮುಂದೆ ಮರುದಿನ ಎಂದಿರುವುದರಿಂದ ಇಲ್ಲಿ ಒಂದು ದಿನ ಎಂಬುದು ಅಧ್ಯಾಹೃತವೆಂದು ತಿಳಿಯಬೇಕು) ಕಳೆದುಹೋಗುತ್ತದೆ. ಇಲ್ಲಿ ಒಂದು ದಿನ ಎಂಬುದು ಒಂದು ಸಮಯ- ಒಂದು ಕಾಲಾವಧಿ ಎಂದು ಭಾವಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. ಅಂಥ ಒಂದು ಆಘಾತಕರ ಸಮಯ ಕಳೆದ ಮೇಲೆ:

**ಮರುದಿನ ಬೇಲಿಗುಂಟ ಹೂವರಳಿದಾಗ ಯಾರು**
**ಕಿಲಕಿಲ ನಕ್ಕು ಹೋದವರು?**

ಎಂದು ಪ್ರಶ್ನಿಸಿಕೊಳ್ಳಬೇಕಾಗುತ್ತದೆ. ಮನಸ್ಸಿನ ಬೇಲಿಯಗುಂಟ 'ನಂಬಿಕೆ' ಮತ್ತೆ ಅರಳಿಸಿಕೊಂಡು ಸಂತೋಷವಾಗಿ ನಗುತ್ತಿರುವುದು ಇಲ್ಲಿ ಚಿತ್ರಿತವಾಗಿದೆ. 'ಚಿಗುರಿ ನಿಂತವರಾರು?' 'ಯಾರು ನೆಲಕಿಳಿದು ಬಂದವರು?' 'ಯಾರು ಕಿಲಕಿಲ ನಕ್ಕು ಹೋದವರು?' ಎಂಬವೆಲ್ಲ ಅವುಗಳ ಹಿಂದಿನ ನೈಸರ್ಗಿಕ ವಸ್ತುಗಳನ್ನೇ ಕುರಿತು ಹೇಳುತ್ತಿದ್ದರೂ ವ್ಯಕ್ತಿ ಸೂಚಕವಾದ ತತ್ವ ನಿರ್ದಿಷ್ಟವಾಗಿದೆ. ಅಂದರೆ ಕೆಲವು ಆಘಾತಕರ ಅಪಾಯಕಾರಿಯಾದ ಸಂದರ್ಭದಲ್ಲಿ ಕೆಲವು ತತ್ವಗಳು 'ನಂಬಿಕೆ'ಗರ್ಭವಾಗಿಯೇ ಉಳಿಯುತ್ತವೆಂಬುದನ್ನೂ ಕವಿ ಕಂಡುಕೊಂಡಂತಿವೆ.

ನಿರ್ಮಲವಾಗಿ ನಿಂತ ಮೋಡ
ಹೊಯ್ದಾಡಿ ಎಲ್ಲೋ ಇಳಿಯುವುದು-ಭೂಮಿ ಗುಟುಕರಿಸುವುದು
ಆಗೀಗ ಮಿಂಚಿ ಅಂತರಿಕ್ಷದಲ್ಲೇನೋ ಹೊಳೆಯುವುದು

ಹೀಗೆ ಒಂದು ಕ್ರೈಸಿಸ್ ಅನ್ನು ಮುಕ್ತಾಯಗೊಳಿಸುವ ಪ್ರತಿಮೆ ಅದರ ಎಲ್ಲ ಸ್ವರೂಪವನ್ನು ಸಮಾರೋಪವಾಗಿ ಚಿತ್ರಿಸುತ್ತದೆ. ಇಲ್ಲಿಯವರೆಗೆ 'ಆಕಾಶ' 'ಬಾನು' ಈ ರೂಪದಲ್ಲಿದ್ದ ನಂಬಿಕೆ ಈಗ ಘನೀಭೂತವಾಗಿ -ಆದರೂ ಆಕಾಶದ ಒಡಲಲ್ಲಿರುವ -ನಿರ್ಮಲವಾಗಿ ನಿಂತ ಮೋಡವಾಗಿ ಕಾಣಿಸಿಕೊಳ್ಳುತ್ತದೆ. ಅದು ಆರಂಭದಲ್ಲಿ ನಿರ್ಮಲವಾಗಿಯೇ ನಿಂತಿತ್ತು. ಮಧ್ಯ ಹೊಯ್ದಾಡಿತು. ಈಗ ಮತ್ತೆ ಎಲ್ಲೋ ಇಳಿದು-ಮನಸ್ಸಿನ ಯಾವ ಭಾಗದಲ್ಲಿಯೋ ಇಳಿದು-ಹೃದಯ ಭೂಮಿಯೂ 'ನಂಬಿಕೆ'ಯ ನೀರನ್ನು ಗುಟುಕರಿಸುವಂತೆ ಆಯಿತು. ಅಲ್ಲದೆ ಆಗೀಗ ಅಂತರಿಕ್ಷದಲ್ಲಿ ಮಿಂಚು ಹೊಳೆದಿದೆ. ಇಲ್ಲಿ ಅಂತರಿಕ್ಷವೆಂದರೆ ಅಂತರಂಗ. ಅಂತರಿಕ್ಷ -ಅಂತರಂಗ ಎಂಬ ಸಾಂಗತ್ಯದಲ್ಲಿಯೇ ಕವಿತೆಯ ಅರ್ಥವಂತಿಕೆ ಇದೆ, ಧ್ವನಿಯಿದೆ.

ಕವಿತೆಯ ಮೂರನೆಯ ಭಾಗದಲ್ಲಿ 'ನಂಬಿಕೆ'ಯ ಸಂಕೀರ್ಣಾನುಭವ ವ್ಯಕ್ತಗೊಂಡಿದೆ. ಈ ಹಿಂದಿನ ಅದರ ಹೊಯ್ದಾಟ ಮುಗಿದು ಈಗ ಅದು ಅತೀಂದ್ರಿಯ ಸ್ಪರ್ಶ ಪಡೆಯುತ್ತಿರುವುದನ್ನು ಕವಿ ಗುರುತಿಸಿದ್ದಾನೆ. ಇದೂ ಕೂಡ ಅಂತರಂಗದ ಕಾರ್ಯವೇ ಆಗಿದೆ;

ಯಾವುದೋ ಗಳಿಗೆಯಲಿ ಹಠಾತ್ತನೆ ಒಳಗೆ ಅನಿಸುವ
ಜೊಂದು; ಬೆಟ್ಟದ ಮುಡಿಯ ಕಲ್ಲು ಬಂಡೆಯಲಿ ಚಿಲ್ಲನೆ
ಬುಗ್ಗೆ ಚಿಮ್ಮಿ ಹರಿದದ್ದೆಲ್ಲೊ

ಯಾವುದೋ ಒಂದು ಸಮಯದಲ್ಲಿ ತಮ್ಮ ಒಳಗೆ ಇದ್ದಕ್ಕಿದ್ದಂತೆ ಮೂಡಿದ ಅದರ ಅವ್ಯಕ್ತ ಅನಿಸಿಕೆಯ ಹೇಳಿಕೆ ಇದು. ಈ ಅನಿಸಿಕೆ ಅನಿರ್ವಚನೀಯವಾದ ಒಂದು ಅನುಭವ, ಆ ಅನುಭವವನ್ನು ಕವಿ ಮುಂದಿನ ಸಾಲಿನಲ್ಲಿ ವಚನೀಕರಿಸಿದ್ದಾನೆ. ಇಲ್ಲಿ ಬರುವ ಬೆಟ್ಟದ ಮುಡಿಯ ಕಲ್ಲುಬಂಡೆ 'ನಂಬಿಕೆ'ಯು ಹುಟ್ಟದೇ ಇರುವ ಒಂದು ಅಸಾಧ್ಯ ಹಾಗೂ ಕಠಿಣತಮ ಅವಸ್ಥೆಯನ್ನು ಪ್ರತಿಬಿಂಬಿಸಿ, ಅದರ ಮುಂದೆಯೇ ಬುಗ್ಗೆ ಚಿಮ್ಮಿ ಹರಿಯುವುದನ್ನು ಹೇಳಿಕೊಡುತ್ತದೆ. ಅಂದರೆ

ಎಲ್ಲಿ ನಂಬಿಕೆಯ ನೀರಿಲ್ಲವೆಂಬ ಭಾವನೆಯುಂಟಾಗುತ್ತದೆಯೋ ಅಲ್ಲಿಯೇ ಅದು ಬುಗ್ಗೆಯಾಗಿ ಚಿಮ್ಮಿದ್ದನ್ನು ಕವಿ ಗುರುತಿಸುತ್ತಾನೆ. ಹಾಗೆ ನೋಡಿದರೆ ಬುಗ್ಗೆ ಚಿಮ್ಮುವುದು ಬೆಟ್ಟದ ಮುಡಿಯಲ್ಲಿಯೇ ಹೊರತು ಸಮತಟ್ಟಾದ ನೆಲದಲ್ಲಿ ಅಲ್ಲ. ಜೀವನವೆಲ್ಲ ಸಮವಿದ್ದಾಗ ಒಬ್ಬರು ಇನ್ನೊಬ್ಬರನ್ನು ನಂಬುವುದು ಸಹಜ, ಬೆಟ್ಟದಂಥ ಕಷ್ಟಕಾಲದಲ್ಲಿ ಅದು ಒಂದು ಪರೀಕ್ಷೆಗೆ ಒಳಗಾಗುತ್ತದೆ, ಆಗ ನಮಗೆ ಎದ್ದು ಕಾಣುವುದು ಅಪನಂಬಿಕೆಯ ಕಲ್ಲುಬಂಡೆಯೇ ಹೊರತು ನಂಬಿಕೆಯ ನೀರಲ್ಲ. ಆದರೆ ಕಣವಿಯವರಿಗೆ ಅಂಥ ಸ್ಥಿತಿಯಲ್ಲಿಯೂ ನೀರಿನ ಬುಗ್ಗೆ ಕಂಡಿದೆ. ಅಂದರೆ 'ನಂಬಿಕೆ' ಎಂಥ ಪ್ರಸಂಗದಲ್ಲಿಯೂ ಕೈಕೊಡದೆ ಉಳಿದುಕೊಂಡಿದ್ದುದರ ನಿಸರ್ಗ ಸಹಜವಾದ ಒಂದು ವಿಶಿಷ್ಟ ಸ್ವರೂಪವಾಗಿ ಗೋಚರಿಸಿದೆ.

ಇಷ್ಟಾದ ಮೇಲೆ ಕವಿಯ ಜೀವನಾನುಭವವೆಲ್ಲ ಗಟ್ಟಿಗೊಂಡು ಒಂದು ಸ್ಥಿತಿಗೆ ಬಂದು ನಿಲ್ಲುವುದರ ಸೂಚನೆಯನ್ನು ಮುಂದಿನ ಸಾಲುಗಳು ಪ್ರತಿಬಿಂಬಿಸುತ್ತವೆ. ಇಲ್ಲಿಯೂ ಕವಿಯ ಅನುಭವದ ಸ್ತರಗಳಲ್ಲಿ ಏರಿಳಿತಗಳಿದ್ದರೂ ಕೊನೆಗೆ ಅತ್ಯಂತ ನಿಶ್ಚಿತವಾದ ಒಂದು ನೆಲೆಗೆ ಬಂದು ನಿಂತಿದ್ದನ್ನು ಕಾಣಬಹುದು.

**ಹಗಲಿರುಳು ಜಾರುವುವು**
**ದಿನದಿನವೂ ನನ್ನೊಳಗಿಂದ ಏನೊ ಹೀರುವುವು; ಮತ್ತೆಲ್ಲೋ**
**ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು ದುಡಿಸುವವು.**

ಎಂಬಲ್ಲಿ ಇಡೀ ಬದುಕಿನ ಅನುಭವವಿದೆ. ದೈನಂದಿನ ಜೀವನದಲ್ಲಿ ತನ್ನೊಳಗೆ ಬೆರೆತಿರುವ ಹಾಗಿದ್ದೂ ಮತ್ತೆಲ್ಲೋ ಮುಖ ತಿರುಗಿಸುವ, ಪತ್ತೆಯಿಲ್ಲದಂತಾಗುವ ಆ 'ನಂಬಿಕೆ'ಯ ವಿವಿಧ ರೂಪಗಳು ಜೇನಿಟ್ಟು 'ಬಿಡಿಸಿಕೊ' ಎಂದು ಆಹ್ವಾನಿಸುತ್ತವೆ. 'ನಂಬಿಕೆ'ಯೊಂದು ಜೇನು. ಆದರೆ ಅದು ಸುಲಭವಾಗಿ ಸಿಗುವಂಥಾದ್ದಲ್ಲ. ಪ್ರಯತ್ನಪೂರ್ವಕವಾಗಿ, ಬಿಡಿಸಿಕೊಳ್ಳಬೇಕಾಗುವಂಥದ್ದು ಅಂಥ ಜೇಂಗೊಡವ ಕಂಡು ಅಚ್ಚರಿಗೊಂಡರೂ ಅವಸರಪಡುವ ಹಾಗಿಲ್ಲ ಎಂಬುದು ಮೊದಲಿನ ವಿಚಾರಕ್ಕೆ ಇನ್ನೊಂದು ಆಯಾಮವನ್ನು ನಿರ್ಮಿಸಿಕೊಡುತ್ತದೆ. ಇಲ್ಲಿ ಕವಿಯಲ್ಲಿಯೇ ಒಂದು ಬಗೆಯ ಹೋರಾಟ ನಡೆದಂತೆ ಕಂಡರೂ ಅವನ ಅನುಭವ ನಿರ್ದಿಷ್ಟವಾಗಿದೆ. "ದಾಹ ತೀರಿಸಲು ನೀರಲ್ಲ, ಮತ್ತು ಬರಿಸುವ ಮದ್ಯವಲ್ಲ" ಎಂಬಲ್ಲಿನ ನಂಬಿಕೆಯು ಎರಡು ತುತ್ತ ತುದಿಗಳ ನಡುವೆ ಇದೆ ಎಂದು ಕವಿ ಹೇಳುವಂತಿದೆ. 'ನಂಬಿಕೆ'ಯ ಕಾರ್ಯ ನೀರಿನಂತೆ ಬರೀ ದಾಹ ತೀರಿಸುವುದಾಗಲಿ ಇಲ್ಲವೆ ಮದ್ಯದಂತೆ ಮತ್ತುಗೊಳಿಸುವುದಾಗಲಿ ಅಲ್ಲ. ತೃಪ್ತಿ ಮತ್ತು ಮತ್ತತೆ ಇವೆರಡೂ ಆಯಾ ಅರ್ಥದಲ್ಲಿ ತಾತ್ಕಾಲಿಕವಾದವು. ಮತ್ತೆ ದಾಹವುಂಟಾಗುವುದು, ಮತ್ತೆ ಮತ್ತೇರಬೇಕೆಂಬ ಅಪೇಕ್ಷೆ ಉಂಟಾಗುವುದು. ಇದ್ದೇ ಇರುತ್ತದೆ. ಜೇನಿನ ಸವಿಯಂತಿರುವ 'ನಂಬಿಕೆ'ಯನ್ನು ಅನುಭವಿಸಿದಾಗ ಆಗುವ ಆನಂದವೇ ಬೇರೆ. ಅದು 'ಅಂಗೈಯಲ್ಲಿ ಹನಿ ಹನಿ ಹಾಕಿ, ನೆಕ್ಕಿ ನಾಲಿಗೆ ತುಂಬ ಸವಿದು ಕಣ್ಮುಚ್ಚಿ ತೆರೆಯಬೇಕು' - ಹನಿ ಹನಿ ಹಾಕಿಕೊಳ್ಳುವ, ನಾಲಗೆಯ ತುಂಬ ಸವಿಯುವ, ಕಣ್ಮುಚ್ಚಿ ತೆರೆಯುವ ಈ ಕ್ರಿಯಾತ್ಮಕವಾದ ಧ್ವನಿಪೂರ್ಣವಾದ ಚರಣಗಳಲ್ಲಿರುವ ಅರ್ಥ ಅನನ್ಯವಾದದ್ದು.

ಆ ಪದಗಳನ್ನು ಬಿಚ್ಚಿ ನೋಡುವುದಕ್ಕಿಂತ ಇಡಿಯಾಗಿ ಸ್ವಾನುಭವದ ಹಿನ್ನೆಲೆಯಲ್ಲಿ ಆಸ್ವಾದಿಸುವುದೇ ಸೂಕ್ತವೆನಿಸುತ್ತದೆ.

ಹೀಗೆ ಸ್ವಾನುಭಾವವನ್ನು ನಿವೇದಿಸಿ ಕೊನೆಗೆ ಕವಿ ತನ್ನ ಅದರ ವಿಲಕ್ಷಣ ಸಂಬಂಧವನ್ನು ಹೇಳಿಬಿಡುತ್ತಾನೆ.

**ನನ್ನ ನಂಬಿಕೆಯೊಂದು ಆಕಾಶ;**
**ನಿಜ, ಅದಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ**
**ನನಗೆ ನಿಲುಕುವುದಿಲ್ಲ, ದೂರದಿಂದಲ್ಲದೆ ನಾನದನು**
**ಮುಟ್ಟಿ ಅನುಭವಿಸಿಲ್ಲ, ಮೇಲೆ ನೋಡದೆ ಸೆಟೆದುಕೊಂಡೇ**
**ನಡೆದರೂ ಅದು ಸದಾ ನನ್ನ ತಲೆಯ ಮೇಲೆ**

ಕವಿತೆಯ ಆರಂಭದ ಉಕ್ತಿಗೆ ಪುಷ್ಟಿಕೊಡುವ, ಅದನ್ನು ಖಚಿತಪಡಿಸುವ ಹಾಗೂ ಅದರ ವ್ಯಾಪಕತೆಯನ್ನು ಪುನಃ ಸ್ಮರಿಸಿಕೊಳ್ಳುವ 'ನನ್ನ ನಂಬಿಕೆಯೊಂದು ಆಕಾಶ' ಎಂಬ ಹೇಳಿಕೆ ಕೊಟ್ಟು ಅದರ ಇನ್ನೊಂದು ವಿಶಿಷ್ಟಾನುಭವವನ್ನು ಕವಿ ನಮ್ಮ ಮುಂದಿಡುತ್ತಾನೆ. ಇಲ್ಲಿ ಅದರ ಆಕಾರ ತಳಬುಡವಿಲ್ಲದ್ದಾಗಿ ಕಂಡಿದೆ. ಇದು ಆಧಾರರಾಹಿತ್ಯ, ಅಸ್ಥಿರತೆಯನ್ನು ಸೂಚಿಸುವಂತಿದೆ ಅಥವಾ ಅಭದ್ರತೆಯ ಒಂದು ಸಂಕೇತವಾಗಿದೆ. ಆದರೆ ಕವಿಗೆ ಅದೇ ಇಲ್ಲಿ ನಿರ್ದಿಷ್ಟವಾದ ಅರ್ಥವಾದರೆ ಹಿಂದಿನ ಅನುಭವವೆಲ್ಲ ಅಭಾಸವಾಗಿ ಕಾಣುತ್ತದೆ. ಆಕಾಶದ ಆಕಾರ ದುಂಡಗಾದದ್ದು; ಉದಾಹರಣೆ ಕೊಟ್ಟು ಹೇಳುವುದಾದರೆ ಚೆಂಡಿನಂಥಾದ್ದು. ಇಂಥದಕ್ಕೆ ತಳ ಯಾವುದು ಬುಡ ಯಾವುದು ಎಂಬುದನ್ನು ನಿರ್ಧರಿಸುವುದು ಕಷ್ಟ. ಅಂದರೆ ಅದರ ಯಾವ ಮಗ್ಗುಲೂ ತಳವಾಗಬಹುದು. ಹಾಗೆಯೇ 'ನಂಬಿಕೆ' ಇಂಥದೇ ಒಂದು ತಳವಾಗುತ್ತದೆ, ಅಷ್ಟೇ. ಆಕಾಶದಂತೆ ಅಪರಂಪಾರವಾಗಿರುವ 'ನಂಬಿಕೆ'ಯು ಕೈಗೆ ನಿಲುಕುವುದಾಗಲಿ, ಅಥವಾ ಅದರ ಆದಿ-ಅಂತ್ಯಗಳನ್ನು ಅಳೆದು ತೋರಿಸುವದಾಗಲಿ ಸಾಧ್ಯವಿಲ್ಲ. ಈ ಅರ್ಥದಲ್ಲಿಯೇ 'ನನಗೆ ನಿಲುಕುವುದಿಲ್ಲ' ಎಂಬುದನ್ನು ತೆಗೆದುಕೊಳ್ಳಬೇಕೇ ಹೊರತು ಅನುಭವಕ್ಕೆ ಸಿಗುವುದಿಲ್ಲ -ಎಂದು ಭಾವಿಸಲಾಗದು. ಯಾಕೆಂದರೆ ಮುಂದಿನ ಸಾಲಿನಲ್ಲಿ ದೂರದಿಂದ ಪಡೆದ ಅನುಭವವಿದೆ. ಇದೂ ಕೂಡ ಅನುಮಾನಕ್ಕೆ ಎಡೆ ಕೊಡುತ್ತದೆ. ಹಿಂದೆ ಹೇಳಿದ 'ಒಡನಾಟ' 'ನಿರಂತರ ನಂಟು' ದೂರದಿಂದ ನಡೆಯತಕ್ಕವುಗಳೇ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ಅಲ್ಲದೆ ಕವಿ 'ನಾನದನು ಮುಟ್ಟಿ ಅನುಭವಿಸಿಲ್ಲ' ಎಂಬ ಮಾತು 'ಅಂಗೈಯಲ್ಲಿ ಹನಿ ಹನಿ ಹಾಕಿ, ನೆಕ್ಕಿ ನಾಲಿಗೆ ತುಂಬ ಸವಿದು, ಕಣ್ಮುಚ್ಚಿ ತಣಿಯಬೇಕು', ಎಂಬುದಕ್ಕೆ ವಿರೋಧವಾಗಿಯೂ ಕಾಣುತ್ತದೆ. ಹೀಗೆ ಪರಸ್ಪರ ವಿರೋಧವಿರುವುದೂ ಒಂದು ಸಂಕೀರ್ಣತೆ ಎಂದು ಹೇಳಿ ಕೈ ತೊಳೆದುಕೊಳ್ಳುವಂತಿಲ್ಲ. ಅದರ ಒಳಹೊಕ್ಕು ನೋಡಿಯೇ ಒಂದು ತೀರ್ಮಾನಕ್ಕೆ ಬರಬೇಕೆನಿಸುತ್ತದೆ. ಇಲ್ಲಿ 'ಮುಟ್ಟಿ ಅನುಭವಿಸಿಲ್ಲ' ನೋಡಿಯೇ ಒಂದು ತೀರ್ಮಾನಕ್ಕೆ ಬರಬೇಕೆನಿಸುತ್ತದೆ. ಇಲ್ಲಿ ಮುಟ್ಟಿ ಅನುಭವಿಸಿಲ್ಲ' ಎಂಬುದರ ಮುಂದೆ ಬರುವ ಮೇಲೆ ನೋಡದೆ ಸೆಟೆದುಕೊಂಡೇ ನಡೆದರೂ 'ಅದು ಸದಾ ನನ್ನ ತಲೆಯ ಮೇಲೆ' ಎಂಬ ಹೇಳಿಕೆಯಿರುವುದನ್ನು

ಗಮನಿಸಬೇಕು. ಅಂಗೈಯಲ್ಲಿ ಹನಿ ಹನಿ ಹಾಕಿ ನೆಕ್ಕುವುದು ಒಂದು ಅನುಭವವಾದರೆ, ನಮ್ಮ ಮೈಮರವೆಯಲ್ಲಿಯೂ ಅಂದರೆ ಅಹಮಹಮಿಕೆಯ ಭಾವನೆಯಲ್ಲಿಯೂ - ಅದು ಸ್ಪರ್ಶಾತೀತವಾಗಿ ತಲೆಯ ಮೇಲೆ ಇರುತ್ತದೆಂದು ಕವಿ ಹೇಳುತ್ತಾನೆ. ಇದು ಮಾನವನ ಇನ್ನೊಂದು ಸ್ವಭಾವವನ್ನು ಆ ಸ್ವಭಾವಕ್ಕು 'ನಂಬಿಕೆ' ಎನ್ನುವುದು ಅಗತ್ಯವೆಂಬುದನ್ನೂ ಸೂಚಿಸುತ್ತದೆ. ಇದನ್ನು ನೋಡಿದರೆ ಈ ಕವಿತೆಯಲ್ಲಿನ ಪ್ರತಿಮೆಗಳನ್ನು ಹಿಂದಿನ ಹಾಗೂ ಮುಂದಿನವುಗಳನ್ನು ಜೊತೆ ಜೊತೆಗಿಟ್ಟು ಅರ್ಥೈಸುವ ಆಯಾ ಪ್ರತಿಮೆಯ ಹಿನ್ನೆಲೆಯೊಂದಿಗೆ ಸ್ವತಂತ್ರವಾಗಿಯೇ ಅರ್ಥೈಸುವುದು ಒಳ್ಳೆಯದೆನಿಸುತ್ತದೆ.

ಕವಿತೆಯ ಕೊನೆಯ ಸಾಲುಗಳು ಸಾಮಯಿಕ ಪ್ರಜ್ಞೆಯಿಂದ ಒಂದು ಆಗಿ ಬರುತ್ತವೆ.

**ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ, ನಮ್ಮ ಬದುಕಿನಲಿ**
**ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.**
**ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣ ಮಿಣ ಮೇಣ**
**ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ**
**ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ.**

ಹಗಲು ಹಾಗೂ ರಾತ್ರಿ ಇವು ಜೀವನದ ಎರಡು ಮಹತ್ವದ ಮುಖಗಳಾದ ಸುಖ ದುಃಖಗಳನ್ನು ಪ್ರತಿನಿಧಿಸುವಂತವು. ಇಲ್ಲಿ ಸುಖದ ಕಾಲದಲ್ಲಿಯ 'ನಂಬಿಕೆ'ಯ ಸಂಬಂಧ ನಿಶ್ಚಿಂತವಾದುದಾದರೆ ದುಃಖದ ಕಾಲದಲ್ಲಿ ಅದರ ಸಂಬಂಧ ಹಾಗಲ್ಲವೆಂಬುದು ಸ್ಪಷ್ಟವಾಗಿದೆ. ವಿದ್ಯುದ್ದೀಪದ ಪ್ರತಿಮೆ ಆಧುನಿಕ ನಾಗರಿಕತೆಯ ಪ್ರತೀಕವಾಗಿ ಬಂದು, ಅದು ಸಂಪೂರ್ಣವಾಗಿ 'ನಂಬಿಕೆ'ಗೆ ಪಾತ್ರವಾದುದಲ್ಲ ಎಂಬುದನ್ನು ಸೂಚಿಸುತ್ತದೆ. ಅಂಥ ಸ್ಥಿತಿಯಲ್ಲಿ ನಮ್ಮ ಸಂಸ್ಕೃತಿಯ ಪರಂಪರೆಯೇ ಬೆಳಕು ನೀಡುವಂಥದ್ದು 'ಮಿಣ ಮಿಣ ಮೇಣ ಬತ್ತಿ' ಅದನ್ನು ಸಂಕೇತಿಸುತ್ತದೆ. ಕೊನೆಗೆ ನಕ್ಷತ್ರ ರೂಪದಲ್ಲಿರುವ ಹಲವಾರು ವಸ್ತು, ವಿಚಾರ, ವ್ಯಕ್ತಿ ತತ್ವಗಳ ನೆನಪು ಕೊಟ್ಟು, 'ನಂಬಿಕೆ' ಅಗಣಿತವಾಗಿ ತನ್ನ ಸ್ಥಾನದಲ್ಲಿ ಹೊಳೆಯುತ್ತಿರುತ್ತದೆಂಬ ಭರವಸೆಯನ್ನು ಕವಿತೆ ಹುಟ್ಟಿಸುತ್ತದೆ.

ಈ ಕವಿತೆಯ ಇಡೀ ವಸ್ತು ವಾಸ್ತವ ಪ್ರಪಂಚಕ್ಕೆ ಸೇರಿದ್ದು. ಜೀವನದ ವಿವಿಧ ಮುಖ ಅನುಭವಗಳನ್ನು ಅಭಿವ್ಯಕ್ತಗೊಳಿಸುವಂಥಾದ್ದು. ಹಾಗಿದ್ದು ಅದು ಸಂಪೂರ್ಣವಾಗಿ ಮಾನಸಿಕ ವ್ಯಾಪಾರಕ್ಕೆ ಸಂಬಂಧಿಸಿ ಆಗಿಯೇ ಬೆಳೆದದ್ದು. ಇಲ್ಲಿಯ ಕೆಲವು ಪ್ರತಿಮೆಗಳು ಬೆಡಗಿನ ವಚನದ ಮಾದರಿಯಲ್ಲಿಯೇ ಬೆಳೆಯುತ್ತಿರುವುದು ಈ ಕವಿತೆಯ ಇನ್ನೊಂದು ವಿಶೇಷ ಗುಣ. ಶೈಥಿಲ್ಯಕ್ಕೆಡೆಗೊಡದ ಕಾವ್ಯಬಂಧ ಹಾಗೂ ನುಡಿಗಟ್ಟುಗಳು ಕವಿತೆಯ ಅರ್ಥವಂತಿಕೆಯನ್ನು ತಿರು-ತಿರುಗಿ ನೋಡುವಂತೆ ಮಾಡುತ್ತದೆ. ಇದು ಕಣವಿಯವರ ಕಾವ್ಯಸಿದ್ಧಿಗೆ ಒಂದು ನಿದರ್ಶನವೆಂದು ಹೇಳಬಹುದು.

**ಗುರುಲಿಂಗ ಕಾಪಸೆ**

೨

ಕಣವಿಯವರ ಕವಿತೆಗಳಲ್ಲೆಲ್ಲ 'ನಂಬಿಕೆ' ಒಂದು ವಿಶಿಷ್ಟ ಸ್ಥಾನ ಪಡೆದಿದೆ. ನಿಗೂಢವಾದುದನ್ನು ಅನಂತವಾದುದನ್ನು ಒಂದು ಬಗೆಯಲ್ಲಿ ಅಗಮ್ಯವೆಂದೇ ಹೇಳಬಹುದಾದ್ದನ್ನು ಅರಿವಿಗೆ, ಅನುಭವಕ್ಕೆ ತಂದುಕೊಳ್ಳಬಹುದಾದ ಸಾಧನಗಳಲ್ಲಿ ನಂಬಿಕೆಯೂ ಒಂದಾಗಿದೆ. ನಿರಾಕಾರವಾದುದನ್ನು ನಂಬಿಕೆ ಒಂದು ಆಕೃತಿಗೆ ತಂದುಕೊಂಡೇ ಅದರ ಅಸಾಧಾರಣ ಸ್ವರೂಪವನ್ನರಿಯಲೆತ್ನಿಸುತ್ತದೆ. "ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು" ಎಂಬ ಈ ಕವಿತೆಯ ಮೊದಲ ಸಾಲೇ ಅಂಥ ಪಂಥಾಹ್ವಾನವೀಯುವಂಥದು. ಆಕಾಶಕ್ಕೆ ಕೊನೆ ಎಂಬುದಿಲ್ಲವಾದರೂ ಅದಕ್ಕೊಂದು ಆಕಾರವಿದೆಯೆಂದರೇನರ್ಥ ? ನಾವು ಕಟ್ಟುವ ಅದನ್ನರಿಯಲೆತ್ನಿಸುವ ಸಾಹಸವನ್ನು ಸೂಚಿಸುತ್ತಿವೆಯೆಂದು ತಿಳಿಯುವುದೋ? ಕವಿಯ ಶೋಧನೆ ಖಚಿತ ಮಾತುಗಳಲ್ಲಿ ಮೇಲೆ ಹೇಳಿದಂತೆ ವ್ಯಕ್ತವಾಗಿದೆ. ಅದನ್ನು ಪೋಷಿಸುವ ಮುಂದಿನ ಸಾಲು: "ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು". ಆಕಾಶದ ನೀಲಿಯಲ್ಲಿ ನೂರಾರು ಬಣ್ಣಗಳ ಪ್ರದರ್ಶನ ನಡೆದು ಹೋಗುವುದಿದೆ. ಇದನ್ನು ಕವಿ 'ಲೀಲೆ' ಎಂದಿದ್ದಾರೆ. ಈ ಲೀಲೆ ಯಾರದೆಂಬುದು ತಿಳಿಯದು, ಇದಕ್ಕ ಅವಕಾಶವಿತ್ತವರು ಯಾರೆಂಬುದೂ ತಿಳಿಯದು. ಭೂಮಿಯ ಬದುಕಿಗೆ ಆಗಸದ ನಂಟು ಕ್ಷಣಕ್ಷಣಕ್ಕೂ ಇರುವಂಥದು. ಇರುಳಲ್ಲಿ ಬಾನು ಭೂಮಿಯನ್ನು ವೈದಡವಿ ಮಲಗಿಸುವುದಂತೆ, ಮುದ್ದಿಸುವುದಂತೆ, ಆಗಸದ ಅಂಥ ಪ್ರೀತಿ, ಒಲವುಗಳು ಭೂಮಿಯ ಬದುಕಿಗೆ ಸಹಿಸಿದ್ದ, ಮಧುರ ಕನಸುಗಳನ್ನು ಊಡುವವು. ಆ ಬೆಚ್ಚನೆಯ ನೆನಪಲ್ಲೆ ಗಿಡಕೆ ನೀರು ಹಣಿಸಿ ಇಳೆಯ ಬಾಳನ್ನು ಹಸನುಗೊಳಿಸಿಕೊಳ್ಳಬಹುದೆಂಬ ಭಾವ ಕವಿತೆಯ ಮೊದಲ ಭಾಗದಲ್ಲಿ ಪ್ರಕಟವಾಗಿವೆ. ಮುಂದೆ, ಇದೊಂದು ವಿಸ್ಮಯಕಾರಿಯಾದ ಹಾಗೂ ಬಹು ಆಳವಾದ ಸಂಬಂಧ ಎಂಬುದನ್ನು ಕಂಡುಕೊಳ್ಳಲಾಗಿದೆ. ಮತ್ತೆ ಮತ್ತೆ ಹಣ್ಣೆಲೆಗಳು ಉದುರುವವು. ಹಸಿರೆಲೆಗಳು ಹೊಮ್ಮುವವು. ಇವೆಲ್ಲ ಬಾನಿನ ವಿಲಾಸವಾಗಿ ಭೂಮಿಯ ಜೊತೆಗಿನ ನಿರಂತರ ಸಂಬಂಧದ ಚಿತ್ರಗಳಾಗಿ ಮಾಡುವುದಷ್ಟೇ ಅಲ್ಲ, ಅದರ ರಹಸ್ಯ ಕುರಿತು ಗೌರವಪೂರ್ಣ ಸೋಜಿಗವೂ ಪ್ರಶ್ನಾರೂಪದ ಉದ್ಗಾರಗಳಲ್ಲಿ ವ್ಯಕ್ತವಾಗಿದೆ. 'ಆಗೀಗ ಮಿಂಚಿ ಅಂತರಿಕ್ಷದಲ್ಲೇನೋ ಹೊಳೆಯುವುದು' ; ಎರಡನೆ ಭಾಗದ ತುದಿಯಲ್ಲಿ ಬಂದಿರುವ ವಿವರಣಾರ್ಥಕ ಚಿಹ್ನೆ ಮೂರನೆಯ ಭಾಗದೊಡನೆ ಸ್ಥಾಪಿಸಿರುವ ಸಂಬಂಧ ಆ ಭಾಗದಲ್ಲಿ ಒಡಮೂಡಿರುವ ಚಿಂತನೆಗಳನ್ನು ಮಿಂಚಿನ ಬೆಳಕಲ್ಲಿ ಬೆಳಗುವಂತೆ ಮಾಡಿದೆ.

ಬೆಟ್ಟದ ಮುಡಿಯ ಕಲ್ಲುಬಂಡೆಯ ಚಿಲ್ಲನೆ ಚಿಮ್ಮಿದ ಬುಗ್ಗೆ ಮುಂದೆ ಹರಿಯುವುದಲ್ಲೋ. ಮನುಷ್ಯನ ಜೀವಿತದ ಹಾಡೂ ಇಂಥವೇ. "ಹಗಲಿರುಳು ಜಾರುವವು, ದಿನದಿನವು ನನ್ನೊಳಗಿಂದ ಏನೊ ಹೀರುವವು". ಒಂದೆಡೆ ಜೇಂಗೊಡ ಕಂಡು ಅಚ್ಚರಿಗೊಂಡರೂ ಅವಸರಪಡುವ ಹಾಗಿಲ್ಲ ಎನ್ನುತ್ತಾರೆ ಕವಿ. ದುಡುಕು ಅನರ್ಥಕ್ಕೆ ಕಾರಣವಾದೀತಷ್ಟೇ ಅಲ್ಲ, ಜೇನುತುಪ್ಪ- 'ದಾಹ ತೀರಿಸಲು ನೀರಲ್ಲ, ಮತ್ತು ಬರಿಸುವ ಮದ್ಯವೂ ಅಲ್ಲ', ಜೇನನ್ನು 'ಅಂಗೈಯಲ್ಲಿ ಹನಿಗನಿ ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ ತೆರೆಯಬೇಕು' ಆಕಾಶ ಕಣ್ಮುಚ್ಚಿ ತೆರೆದಾಗ (ಅಥವಾ ಕಣ್ತೆರೆದು

ಮುಚ್ಚಿದಾಗ) ಹುಟ್ಟಿರುವ ಈ ತಿಳುವಳಿಕೆ ಬದುಕಿನ ಸ್ವಾದವನ್ನು ಅನುಭವಿಸುವ ಪರಿಯನ್ನು ಹೇಳುತ್ತಿದೆ. ಲೋಕ ರಹಸ್ಯವನ್ನು ಅರಿಯಬಯಸುವ ಜಿಜ್ಞಾಸುಗಳೂ ಧ್ಯಾನಾವಸ್ಥೆಯಲ್ಲಿ ಕಣ್ಮುಚ್ಚಿ ತೆರೆದಾಗ (ಅಥವಾ ಕಣ್ತೆರೆದು ಮುಚ್ಚಿದಾಗ) ಹುಟ್ಟಿರುವ ಈ ತಿಳುವಳಿಕೆ ಬದುಕಿನ ಸ್ವಾದವನ್ನು ಅನುಭವಿಸುವ ಪರಿಯನ್ನು ಹೇಳುತ್ತಿದೆ. ಲೋಕ ರಹಸ್ಯವನ್ನು ಅರಿಯಬಯಸುವ ಜಿಜ್ಞಾಸುಗಳೂ ಧ್ಯಾನಾವಸ್ಥೆಯಲ್ಲಿ ಕಣ್ಮುಚ್ಚಿ ತೆರೆಯುತ್ತಾರೆ. ಈ ಕವಿ ಬಯಸುವುದು ಜೀವನದ ಮಧುವನ್ನು ಅಂಗೈಯಲ್ಲಿಟ್ಟು ಅಸ್ಪಷ್ಟವಾಗಿ ಸವಿಯುವ ಮುದ. ಅದನ್ನೊಂದು ಬಾಳಿನ ತತ್ವವಾಗಿಸುವ ಹದ. ಹೀಗೆ ಅಂತರಿಕ್ಷದಲ್ಲಿ ಹಠಾತ್ತನೆ ಹೊಳೆವ ಮಿಂಚು ಕಿವಿಯೊಳಗೆ ಫಕ್ಕನೆ ಬೆಳಗಿಸಿಬಿಡುವ ಅರಿವಿಗೆ ಬೆಳಕಿನ ಲಕ್ಷಣವೂ ಇದೆ. ಗ್ರಾಹ್ಯವಾಗುವ ಮಧುವಿನ ಆರೋಗ್ಯಪೂರ್ಣ ಸಿಹಿಯ ಸ್ವಾದವೂ ಇದೆ.

'ನನ್ನ ನಂಬಿಕೆಯೊಂದು ಆಕಾಶ' ಎಂದು ಕೊನೆಯ ಭಾಗ ಮೊದಲಾಗುತ್ತದೆ. 'ಅದು ನನ್ನದಾಗಿದ್ದೂ ನನಗೆ ನಿಲುಕದ ಎತ್ತರಲ್ಲೇ ಇದೆ' ಎನ್ನುತ್ತಾನೆ ಕವಿ. ಅದನ್ನು ಅಲಕ್ಷಿಸಿದರೂ ಅದು ಸದಾ ತನ್ನ ತಲೆಯ ಮೇಲೇ ಇರುವ ವಾಸ್ತವವನ್ನು ಕವಿ ಮರೆಯುವಂತಿಲ್ಲ. ನಂಬಿಕೆಯ ಜೊತೆಗಿನ ಕವಿಯ ಸಂಬಂಧದ ಸ್ವರೂಪವನ್ನು ಮುಂದಿನ ಸಾಲುಗಳಲ್ಲಿ ಹೇಳಲಾಗಿದೆ. 'ನಮ್ಮ ಬದುಕಿನಲಿ ನಾವು ಮಗ್ನರಾದರೆ ಸಾಕು', ನಂಬಿಕೆ ಸದಾ ತನ್ನತ್ತಲೇ ನೋಡುತ್ತಲಿರಲು ಕವಿಯನ್ನು ಒತ್ತಾಯಿಸುತ್ತಿಲ್ಲ. "ರಾತ್ರಿ ವಿದ್ಯುದ್ದೀಪ ಕೈಕೊಟ್ಟು ಮಿಣಿ ಮಿಣಿ ಮೇಣಬತ್ತಿಯ ಹಚ್ಚಿ ಅಂಜಿ ಆಕಳಿಸುತ್ತ ಕುಳಿತಾಗಲೂ / ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ" ವಿದ್ಯುದ್ದೀಪ, ಮೇಣಬತ್ತಿಗಳಂಥ ಮನುಷ್ಯ ಸಹಜ ಬೆಳಕಿನ ವ್ಯವಸ್ಥೆಗಳು ಕೈಕೊಟ್ಟಾಗಲೂ ಆಕಾಶದ ತುಂಬ ಸ್ವಯಂ ದೀಪಕತ್ವ ಹೊಂದಿರುವ ಲೆಕ್ಕವಿರದಷ್ಟು ನಕ್ಷತ್ರಗಳು ತುಂಬಿವೆ. ಇದು ಪುನಃ ಮರ್ತ್ಯದ ಬಾಳಿಗೆ ತೇಜಸ್ಸು ತಂದುಕೊಡಬಲ್ಲ ನಂಬಿಕೆಯೆಂಬ ಆಕಾಶದ ಕರುಣೆಯ ಕುರಿತ ನವಿರಾದ ಸ್ಪಂದನದ ಉದ್ಗಾರವೇ ಆಗಿದೆ. ತೀರ ಅಸ್ಥಿರ, ಅಶಾಶ್ವತವೆನ್ನಬಹುದಾದ ಭೂಮಿಯ ಬಾಳಿಗೆ ಆಗಸವು ಗಾಳಿ, ನೀರು ಬೆಳಕು ಒದಗಿಸುತ್ತ ಕಾಪಾಡುತ್ತಿದೆ, ಮೈದಡವಿ ಮಲಗಿಸುತ್ತ, ಕೈ ಹಿಡಿದು ನಡೆಸುತ್ತ ತಮ್ಮ ಬದುಕಿಗೆ ಭರವಸೆ ತುಂಬುತ್ತಿದೆ, ನಮ್ಮ ಅರಿವಿಗೆ ಬರಲಾರದಷ್ಟು ಅನೂಹ್ಯ ಬಗೆಗಳಲ್ಲಿ ಅದು ನಮ್ಮ ಬಾಳನ್ನು ನಡೆಸುತ್ತಿದೆ ಎಂದು ಕವಿ ತಿಳಿಯುತ್ತಾರೆ. ಇದೊಂದು ನಂಬಿಕೆ. ಆಕಾಶದ ಕುರಿತ ಈ ನಂಬಿಕೆಯು ನಂಬಿಕೆಯೆಂಬ ಆಕಾಶವನ್ನು ಕಟ್ಟಿಗೆ, ಆಕಾಶಕ್ಕೊಂದು ಆಕೃತಿಯನ್ನೂ ಕಟ್ಟಿದೆ. ಸ್ವತಃ ಕವಿತೆ ಅಂಥದೊಂದು ಆಕೃತಿಯಾಗಿದೆ. ಕಡ ತಂದ ಎಲ್ಲ ವಿಚಾರಗಳ ಬೆಳಕೂ ಆರಿ ಹೋದಾಗ ನಮ್ಮ ನಂಬಿಕೆಯೆಂಬ ಆಕಾಶದ ತಾರಾಪಥವೇ ನಮ್ಮನ್ನು ಮುನ್ನಡೆಸಬೇಕು. ಇದು ದುಡುಕಿ ನಡೆದವರ ಮಾರ್ಗವಲ್ಲ. ಹನಿ ಹನಿಯ ಮಧುವನ್ನು ನಾಲಗೆ ತುಂಬ ಸವಿದು ಕಣ್ಮುಚ್ಚಿ ತೆರೆದು ಸಾಗುವವರ 'ನೂರು ಬಣ್ಣದ ಲೀಲೆಗಳ' ರಸಮಯ ಪಯಣ. ಈ ಪ್ರಯಾಣ ಅನಂತವಾದುದೂ ಹೌದು, ಅದಕ್ಕೊಂದು ಆಕೃತಿಯಿರುವುದೂ ಹೌದು.

ಇದು 'ನಂಬಿಕೆ' ಕವಿತೆಯನ್ನು ಓದಬಹುದಾದ ಒಂದು ಬಗೆ.

**ಚಿಂತಾಮಣಿ ಕೊಡ್ಲೆಕೆರೆ**

# ೩೩. ಎರಡು ದಡ

ಮಂಜಿನಾಚೆಗೆ ಜಡೆಗಟ್ಟಿ ಕುಳಿತ ಬೆಟ್ಟದದಿ ಏಳು
ಕೊಳ್ಳದಲಿ ಹುದುಗಿದೆ ಭೂತ. ಪಾತಾಳದಿಂದ
ಪುಟಿದು, ನೆಲದ ವಾಸನೆ ಹಿಡಿದು, ಮುಗಿಲ ಕೆಚ್ಚಲ
ಗುಮ್ಮಿ, ಹಗಲ ಬೆಳಕನು ನೆಕ್ಕಿ, ಇರುಳ ಕತ್ತಲೆ-
ಯೊಡನೆ ಬಿದ್ದು ತೆಕಿಮುಕ್ಕಿ, ಕಂಡು ಕಾಣದ ಕಾಡು-
ಮೇಡಿನ ನೂರು ಝರಿ -ತೊರೆಗೆ ಸೊಕ್ಕಿ, ಉಕ್ಕಿ ಹರಿ-
ದಿದೆ ಊರೂರ ಮೈಗೆ ತಾಕಿ ತಿಕ್ಕಿ, ಹೊಸ ನೀರು
ಹಳೆನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗಿ, ತಟಸ್ಥ ತರು-ಮರದ ಬೇರಿಗೂ
ಕೈಚಾಚಿ, ಉರುಳಿ ಹೊರಳಾಡಿ ಮೈ ತುಂಬ ರಾಡಿಯ
ಬಡಿದು, ಈಗೀಗ ಶರತ್ಕಾಲದ ನಿದಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು.

ಪಶ್ಚಿಮದಲ್ಲಿ ಇಳಿದ ಕೆಂಬೆಳಕು
ಪೂರ್ವದಲಿ ಹೊಂಬೆಳಕ ತೂರುವುದು. ನಿಂತಿರುವ
ದಂಡೆ ವಾಸ್ತವವೆನಲು ಆಚೆ ದಡ ಕಲ್ಪನೆಯೆ ? ಈಸು
ಬಂದರೂ ಸಲೀಸು ತಲುಪುವೆವೆಂಬ ಭರವಸೆಯುಂಟೆ ?
ನೆಲ-ಮುಗಿಲ ನಡುವೆ ಆಗೀಗ ಕಾಮನಬಿಲ್ಲ ಸೇತುವೆಯು.
ಸುಖದುಃಖಗಳ ತಡಿಗೆ ಬಡಿದು, ತೆರೆಗೆ ಹೊಯ್ದಾಡಿ
ಸೋಲು-ಗೆಲುವಿನ ತೋಳ ತೊಟ್ಟಿಲವಾಗಿ, ಎಡ-ಬಲದ
ತೋಟಪಟ್ಟಿಗೆ ನೀರಮೊಗೆದು ಸಾಗಿದೆ ಹೀಗೆ.
ಎರಡು ದಡಗಳ ನಡುವೆ ಏಸು ಸಂಸಾರ ಮುಳು-

ಗೆದ್ದು ಗಾಸಿಗೊಂಡಿವೆ ಈಸುಗುಂಬಳಕಾಯಿಗಾಸೆಪಟ್ಟು.
ನಿದ್ದೆ-ಎಚ್ಚರದ ನಡುವಣಚ್ಚರಿ ಬದುಕೆ ? ಕೆದಕಿದರೆ
ಒಂದಿಷ್ಟು ರಕ್ತ ಮಾಂಸ; ಮೂಲದಲಿ ಮೂಳೆ:ನಿನ್ನೆಗೂ
ನಾಳೆಗೂ, ಯುಗಯುಗದಿಂದ ಬರೆದು ಗೀಚಿದ್ದೆಲ್ಲ
ಹಾಳೆ? ಜೋಗಿತಿಯಾದಳಂತೆ ಮುಪ್ಪಾದ ಸೂಳೆ.

ಮಳಲ ದಂಡೆಯಲಿ ಕುಸಿದಿವೆ ಕಾಲು. ಆಚೆ ತೋಪಿನಲಿ
ಕೋಗಿಲೆಯ ಜೋಗುಳ ಲಾಲಿ. ಎದುರಿಗೆ ನೀರ
ಭೋರ್ಗರೆತ, ಎಳೆತ-ಸೆಳೆತ : ಸ್ವಚ್ಛಂದ ಛಂದೋಬಂಧ
ಕ್ಷಿತಿಜದಂಚಿಗೆ ತನ್ನ ಉದ್ಬಾಹುಗಳ ಚಾಚಿ ಒಡಲ
ತೆರೆದಿದೆ ಕಡಲ ಕುಡಿವೆನೆಂದು, ಹಿಡಿದು ಕಡೆವೆ-
ನೆಂದು, ತಳಸೋಸಿ ಮುತ್ತುಗಳ ಪಡೆವೆನೆಂದು.

ಎರಡು ದಡಗಳ ನಡುವೆ ಹಾಯಿ ಬಿಚ್ಚಿವೆ ದೋಣಿ,
ಮುಳುಗಿ ಮಿನುಗಾಡುತಿವೆ ಮೀನು; ದೂರ ನೀಲಶ್ರೇಣಿ.

ಇದು ಎರಡು ದಡಗಳ ನಡುವೆ ಹರಿಯುವ ಹೊಳೆಯೊಂದರ ಕಥೆಯಂತಿದೆ. ಎರಡು ದಡಗಳ ನಡುವೆ ಇರುವ ಅನೇಕ ಎಳೆತ-ಸೆಳೆತಗಳಿಗೆ ಈಡಾಗಿರುವ ಮನಸ್ಸೊಂದರ ಆತ್ಮಕಥೆ ಕೂಡ ಆಗಿದೆ. ಮೊದಮೊದಲು ಆರ್ಭಟ, ಅನಂತರದಲ್ಲಿ ಆರ್ಭಟವಿಳಿದಾಗಿನ ಧ್ಯಾನ, ಆಮೇಲೆ ಮತ್ತೊಂದರ ಸೆಳೆತ- ಹೀಗೆ ಅನೇಕ ಬಗೆಯಲ್ಲಿ ಹೊಯ್ದಾಡುವ ಜೀವಿಯೊಂದರ ಭಾವಗಳ ಅಭಿವ್ಯಕ್ತಿ ಈ ಕವಿತೆ. ಮುಖ್ಯವೆಂದರೆ ಈ ಭಾವ ತುಮುಲಗಳು ಹೇಳಿಕೆಗಳಲ್ಲಿ ವ್ಯಕ್ತವಾಗುತ್ತಿಲ್ಲ; ಬೆಟ್ಟ, ಹೊಳೆ, ಸಮುದ್ರ, ಆಕಾಶ, ಮರ, ತೋಪು, ಕಾಮನಬಿಲ್ಲು, ಕೋಗಿಲೆಗಳಂಥ ಪ್ರಕೃತಿಯ ಚಿತ್ರಗಳ ಮೂಲಕ ವ್ಯಕ್ತವಾಗುತ್ತಿವೆ. ಪ್ರಾಕೃತಿಕ ವಿವರಗಳನ್ನು ಮನುಷ್ಯ ಸಂವೇದನೆಯ ರೂಪಕಗಳಾಗಿ ಬಳಸುವ ಕಣವಿಯವರ ಎಂದಿನ ಗುಣ ಇಲ್ಲಿಯೂ ಸಹಜವಾಗಿದೆ.

ಮಂಜಿನಾಚೆ ಜಡೆಗಟ್ಟಿ ಕುಳಿತ ಬೆಟ್ಟದ ಕೆಳಗಿರುವ ಭೂತದ ಉಲ್ಲೇಖದಿಂದ ಕವಿತೆ ಶುರುವಾಗುತ್ತದೆ. 'ದೂರದ ನೀಲಶ್ರೇಣಿ' ಕಾಣುತ್ತಿರಲು ಮುಳುಗಿ ಮಿನುಗಾಡುವ ಮೀನುಗಳ ವರ್ಣನೆಯೊಂದಿಗೆ ಕವಿತೆ ಮುಗಿಯುತ್ತಿದೆ. ಜಡತೆಯನ್ನು ಸೂಚಿಸುವ ಚಿತ್ರ. ಬೆಟ್ಟದಡಿಯ ಭೂತ ಚರಿತ್ರೆಯೇ ? ಮುಳುಗಿ ಮಿನುಗಾಡುವ ಮೀನು ವರ್ತಮಾನವೇ?

ಜಡೆಗಟ್ಟಿ ಕುಳಿತ ಬೆಟ್ಟದಡಿಯ ಭೂತದ ಉಲ್ಲೇಖದ ತಕ್ಷಣವೇ ಹುಟ್ಟಿ ಹರಿಯುವ ಹೊಳೆಯ ಚಿತ್ರವಿದೆ. ಪುಟಿದು ಹುಟ್ಟಿ, ಸೊಕ್ಕಿ, ತಿಕ್ಕಿ, ಕೈಚಾಚಿ ಹರಿವ ಅಬ್ಬರದ ಚಿತ್ರವಿದು. ತೀವ್ರವಾದ ಲಯದಲ್ಲಿ ಈ ಚಿತ್ರದೊಳಗೆ ತಟ್ಟನೆ ತಣ್ಣಗಿನ ಒಂದು ಮಾತು ಗಕ್ಕನೆ ಸೇರಿಕೊಂಡು

ವೇಗದ ಲಯಕ್ಕೆ ಬ್ರೇಕ್ ಬಿದ್ದಂತಾಗುತ್ತದೆ. ಭರದಿಂದ ಹರಿವ ಹೊಳೆ ಈಗ "ಶರತ್ಕಾಲದ ನಿಧಿಧ್ಯಾಸದಲಿ ಮೆಲ್ಲನೆ ತಿಳಿಗೊಂಡಿರುವ" ಹೊಳೆಯಾಗಿದೆ. ಈಗ ಹುಟ್ಟುವ ಪ್ರಶ್ನೆಗಳು ಸೊಕ್ಕಿ ಹರಿವ ಲವಲವಿಕೆಯವಲ್ಲ. ಆಚೆ ದಡದ ಬಗ್ಗೆ, ಅದನ್ನು ತಲುಪುವ ಬಗ್ಗೆ ಕಾಳಜಿ ಮಾಡುವಂಥವು.

ಹೊಯ್ದಾಟಗಳು ಇಲ್ಲಿಂದ ಆರಂಭವಾಗುತ್ತವೆ. ನೆಲ-ಮುಗಿಲುಗಳ, ಸುಖ-ದುಃಖಗಳ, ಸೋಲು-ಗೆಲುವಿನ, ಎಡ-ಬಲದ, ನಿದ್ದೆ-ಎಚ್ಚರಗಳ ನಡುವಣ ಆಕರ್ಷಣೆಗಳ ಹೊಯ್ದಾಟಗಳಿವು. ಬಾಳಿನ ಗುರಿ ಯಾವುದು ? ಒಂದು ಜೀವ ತನ್ನ ಜೀವಮಾನದಲ್ಲಿ ನಡೆಸುವ ಚಟುವಟಿಕೆಗಳ ಅರ್ಥವೇನು? ಎಂದು ಶೋಧನೆಗೊಳಿಸುವ ಧ್ಯಾನಸ್ಥ ಸ್ಥಿತಿ ಈಗ ದೊರಕಿದೆ. ಈ ಹೊತ್ತಲ್ಲಿ ಸೂಳೆ ಮುಪ್ಪಾಗಿ ಜೋಗಿತಿಯಾದ ಮೇಲೆ ಗತವನ್ನು ಮರುಕಳಿಸಿಕೊಳ್ಳುವಂತೆ ಅರ್ಥದ ಹುಡುಕಾಟ ಸುರುವಾಗಿದೆ.

ಆದರೆ ಇಂಥ ಹುಡುಕಾಟಗಳಲ್ಲಿರುವಾಗಲೇ ಮಳಲದಂಡೆಯಲಿ ಕಾಲು ಕುಸಿಯತೊಡಗಿವೆ. ಆಚೆ ತೋಪಿನಲ್ಲಿ ಕೋಗಿಲೆ ಕರೆಯುತ್ತಿದೆ. ಕಣ್ಮುಂದೆ ತನ್ನ ತೋಳುಗಳನ್ನು ಚಾಚಿ ಮೊರೆಯುತ್ತಿರುವ ಕಡಲಿದೆ. ಆದರೆ ಈಗ ದ್ವಂದ್ವಗಳು, ಶಂಕೆಗಳು ಕೊನೆಗೊಳ್ಳುತ್ತ ತಳಮಳವನ್ನು ದಾಟಿ ತಣ್ಣನೆಯ ಸ್ಥಿತಿಗೆ ಬಂದ ಮನಸ್ಥಿತಿಯಿದೆ. ಬಾಳಿನ ನಿಗೂಢತೆಯನ್ನು ಬಗೆವ ಹಂಬಲ ಮುಗಿದಿದೆಯಂತಲ್ಲ. ಆ ಹಂಬಲವಿದ್ದೂ, ಬಾಳುವ ("ಎರಡು ದಡಗಳ ನಡುವೆ ದೋಣಿ") ಭರವಸೆಯ ಸ್ಥಿತಿಯನ್ನುಕವಿತೆ ಸೂಚಿಸುತ್ತದಯೋ ಏನೋ? ಕಣವಿಯವರ ಪದ್ಯ ಅರ್ಥ ಮಾಡಿಕೊಳ್ಳಲು ಹೀಗೆ ಪ್ರಯತ್ನಿಸಲಾಗಿದೆ. (ಕವನ ಸಂಗ್ರಹ: 'ಎರಡು ದಡ')

**ರಹಮತ್ ತರೀಕೆರೆ**

೨

ಆಧುನಿಕ ಕನ್ನಡ 'ನವೋದಯ' ಕಾವ್ಯ ಸಂದರ್ಭ, ಪೂರ್ವ ಪಶ್ಚಿಮಗಳ ಒಂದು ವಿಶಿಷ್ಟ ಪಾಕವಾಗಿ ರೂಪುಗೊಂಡಿತು. ಪಶ್ಚಿಮದಲ್ಲಿ ಎನ್‌ಲೈಟನ್‌ಮೆಂಟ್ ಔದ್ಯೋಗೀಕರಣ, ವಸಾಹತುಶಾಹೀ ಪ್ರಕ್ರಿಯೆ ಮುಂತಾದುವಕ್ಕೆ ಪ್ರತಿಕ್ರಿಯೆಯಾಗಿ ಐರೋಪ್ಯ ರೋಮ್ಯಾಂಟಿಕ್ ಸಂವೇದನೆಯ ರೂಪು ಬಿಚ್ಚಿ ಅರಳಿತು. ಆದರೆ ನಮ್ಮಲ್ಲಿನ ನವೋದಯ ಸಾಹಿತ್ಯ, ಪಾಶ್ಚಾತ್ಯ ರೂಪುರೇಷೆಗಳಿಂದ ಭಿನ್ನವಾದ ಒಂದು ಸ್ವಂತಿಕೆಯನ್ನೂ ಬೇರುಗೊಳಿಸಿತು. ಕಾವ್ಯ ಕಲೆಗಳೆರಡರಲ್ಲೂ ನಮ್ಮದೇ ಸ್ವದೇಶೀ ಪರಂಪರೆಯನ್ನು ಮೇಲೆತ್ತಿ, ನಮ್ಮ ಸಾಂಸ್ಕೃತಿಕ ಸ್ವಂತಿಕೆಯನ್ನು ಹೊಸದಾಗಿ ನಿರ್ವಚಿಸಿತು. ವಸಾಹತುಶಾಹೀ ದಬ್ಬಾಳಿಕೆ, ಜಡತ್ವಗಳಿಂದ, ಸೀಳಿ ಕವಲಾಗಿ ಹೊರಬೀಳುವ ತಂತ್ರವೂ ಇದಾಗಿತ್ತು.

ಇಂತಹ ನಮ್ಮ ನವೋದಯ ಸಾಹಿತ್ಯ ಸಂದರ್ಭದಲ್ಲಿ ಬಹಳಷ್ಟು ರೋಮಾಂಟಿಕರಂತೆ, ಕಾಲ, ಇತಿಹಾಸ, ಪ್ರಕೃತಿ, ಸಮಾಜಪಟದ ತಂತುವಾಗಿ ವ್ಯಕ್ತಿ, ಆಧ್ಯಾತ್ಮ, ಐಡಿಯಾಲಜೀ ಇಂತಹ ಪರಿಕಲ್ಪನೆಗಳು, ರಚನಾ ಕೇಂದ್ರವನ್ನು ಆವರಿಸಿದ್ದವು. ವರ್ಡ್ಸ್‌ವರ್ತ್, ಶೆಲ್ಲಿ, ಬ್ಲೇಕ್, ರೂಸ್ಸೋ

ಮುಂತಾದ ಪಾಶ್ಚಾತ್ಯ ರೋಮಾಂಟಿಕರ ಪ್ರಭಾವವನ್ನು ಸ್ಪಷ್ಟವಾಗಿಯೇ ನಮ್ಮ ನವೋದಯದಲ್ಲೂ ಗುರುತಿಸಬಹುದು. ನಮ್ಮ ಶ್ರೇಷ್ಠ ಕವಿಗಳಲ್ಲಿ, ಆ ಸಂವೇದನೆಗಳು ನಮ್ಮದೇ ವಿಶಿಷ್ಟ ಸಂಸ್ಕೃತಿ ಪಾಕವಾಗಿ ಅರಳಿಕೊಂಡದ್ದನ್ನೂ ಗಮನಿಸಬಹುದು.

೨೦ನೇ ಶತಮಾನದ ಆದಿ ಭಾಗದಲ್ಲಿ, ಇಂಗ್ಲಿಷ್‌ನ ಎಲಿಯಟ್, ಎಜ್ರಾ ಪೌಂಡ್ ಮುಂತಾದವರಿಂದ 'ನವ್ಯ' ಪ್ರತಿಕ್ರಿಯೆಯಲ್ಲಿ ಕಾವ್ಯದ ವಸ್ತು, ತಂತ್ರಗಳೆರಡರಲ್ಲೂ ಇನ್ನೊಂದು ಹೊಸತನ ಬಂದುದು ವಿದಿತ. ಎರಡನೇ ಮಹಾಯುದ್ಧದ ಹತಾಶೆ, ಅದರ ಸುಪ್ತ ಸಮರ್ಥನೆಯಾದ ಅಸ್ತಿತ್ವವಾದ, ವ್ಯಕ್ತಿ-ಸಮಾಜದ ನಡುವಿನ ಬಿರುಕು, ಮುಂತಾದ ಪರಿಸರದಲ್ಲಿ ಸಮಾಜ, ಪ್ರಕೃತಿ, ಮಹಾಕಥನಗಳು ದೈವಿಕ ಭಾವುಕತೆಗಳ ಬದಲು ವ್ಯಕ್ತಿ, ವೈಯಕ್ತಿಕ ಸಂಘರ್ಷ, ನೋವು, ಹತಾಶೆಗಳಿಗೆ ಕೇಂದ್ರತೆ ಬಂತು. ಅರುವತ್ತರ ದಶಕದ ನಂತರ ಇವು ನಮ್ಮ ಕನ್ನಡ 'ನವ್ಯಕಾವ್ಯ' ಸಂದರ್ಭದಲ್ಲಿ ಗೋಪಾಲಕೃಷ್ಣ ಅಡಿಗ, ಚಿತ್ತಾಲ, ತಿರುಮಲೇಶ ಮುಂತಾದವರಲ್ಲಿ ಸ್ಫುರಣಗೊಂಡಿರುವುದು ವಿದಿತ. ಇಲ್ಲಿ ರೋಮಾಂಟಿಕರ ಪ್ರಕೃತಿ, ಸಮಾಜ ದೈವೀ ಭಾವುಕತೆ ಮುಂತಾದವುಗಳ ಸ್ಥಾನದಲ್ಲಿ, ವ್ಯಕ್ತಿ ಕೇಂದ್ರಿತಗಳು ತುಡಿತಗೊಂಡವು.

ಹೀಗೆ ಈ ನವೋದಯ ಮತ್ತು ನವ್ಯ, ಒಂದು ಭಿನ್ನ ಧ್ರುವಗಳಲ್ಲಿದ್ದಂತೆ ಕಂಡು, ಒಂದು ಡೈಲೆಕ್‌ಟಿಕ್ ರೂಪವನ್ನು ಪಡೆಯುತ್ತವೆ. ಪ್ರಾಯಶಃ ಇಂಥ ಮುಖಾಮುಖಿ ಪ್ರಕ್ರಿಯೆಯಲ್ಲಿ ಸಾಹಿತ್ಯ ಕಲೆಗಳೂ ಸೇರಿದಂತೆ, 'ಇತಿಹಾಸ' ಮುಂದುವರಿಯುತ್ತದೆ.

ಈ ನವೋದಯ ಹಾಗೂ ನವ್ಯದ ಕಂಸಗಳ ನಡುವೆ, ಆ ಬ್ರಾಕೆಟ್‌ಗಳನ್ನು ತೂರಿ ಮೀರಿದ ಅಪರೂಪದ ಕಾವ್ಯ ಪ್ರಕಾರ ಶ್ರೀ ಚೆನ್ನವೀರ ಕಣವಿಯವರದು ಎನ್ನಬಹುದು. ಇವರ ಕಾವ್ಯ ಅವೇ ನವೋದಯರ, ರೋಮಾಂಟಿಕರ ಕಾಲ, ಪ್ರಕೃತಿದೃಶ್ಯ, ಸೂರ್ಯೋದಯ, ಬೆಳದಿಂಗಳು, ಹಸಿರು, ತೊರೆ, ಬಾನಾಡಿಗಳನ್ನು ಸವರಿದರೂ, ಅದಕ್ಕೊಂದು ನವೋದಯದ ಸಂಭ್ರಾಂತ ದಿವ್ಯತೆ, ಆಧ್ಯಾತ್ಮತೆಯನ್ನು ಲೇಪಿಸುವುದಿಲ್ಲ. ಕಾಲ, ಪ್ರಕೃತಿ, ಸಮಾಜಗಳ ಒಳಗಿರುವ ಒಬ್ಬ ಸ್ವತಂತ್ರ ವ್ಯಕ್ತಿಯಾಗಿ, ಸ್ನೇಹ ನಗೆ ಮಾತುಗಳೊಡನೆ ಅವನ್ನು ಆತ್ಮೀಯಗೊಳಿಸುತ್ತಾರೆ ಕಣವಿಯವರು. ನವ್ಯದಲ್ಲಿ ಕೆಲವೊಮ್ಮೆ ಘೋಷಣೆಗೊಳ್ಳುವ ಒರಟುತನ, ಹತಾಶೆ ಸಾಮಾಜಿಕ ಅಪ್ರಸ್ತುತತೆ, ನಿರಂಕುಶಧಿಕಾರೀ ವಿರೋಧೀ ಸಂವೇದನೆಗಳು ಕಣವಿಯವರಲ್ಲೂ ಕಂಡುಬರುತ್ತವೆ. ಆದರೆ ಆ ನೋವು, ಒಂಟಿತನ, ವ್ಯಕ್ತಿ ಸ್ವಾತಂತ್ರ್ಯ ಮುಂತಾದುವು ನೋವ ಪರದಾಟವಾಗುವ ಬದಲು, ಆಂತರಿಕ ಧನಾತ್ಮಕ ಚಿಂತನೆಗಳಾಗುತ್ತವೆ ಕಣವಿ-ಕಾವ್ಯದಲ್ಲಿ.

ಇವನ್ನೆಲ್ಲಾ ಸ್ಥೂಲವಾಗಿ ಅವರ ಕವನ 'ಎರಡು ದಡ'ದಲ್ಲಿ ನೋಡಬಹುದು. ಹಿಂದೆ ಅಂದಂತೆ ನವೋದಯದ ಪ್ರಮುಖ ಕಾಳಜಿಗಳು, ಕಾಲ, ದೇಶ, ಪ್ರಕೃತಿ, ಸಾಮಾಜಿಕ ಕಳಕಳಿ, ದಿವ್ಯಾನುಭೂತಿ ಮುಂತಾದುವು. 'ಎರಡು ದಡ' ಕವಿತೆ ಆರಂಭವಾಗುವುದೇ 'ಬೆಟ್ಟದಡಿ ಹುದುಗಿದ ಭೂತ'ದಿಂದ. ಅದು ಪಾತಾಳದಿಂದ ಪುಟಿದು ನೆಲ ಝರಿಗಳನ್ನು ಉಕ್ಕಿ ಸೊಕ್ಕಿ ಕೊಬ್ಬಿ ಹುಚ್ಚೆದ್ದು

ಮೇಲೆದ್ದು ಶರತ್ಕಾಲದ 'ನಿಧಿಧ್ಯಾಸ'ದಲ್ಲಿ ಮೆಲ್ಲನೆ ತಿಳಿಗೊಳ್ಳುತ್ತದೆ. ಕಾಲ ದೇಶ ಪ್ರಕೃತಿಗಳು ಸಂಘರ್ಷ- ಪ್ರಕ್ರಿಯೆಯಲ್ಲಿ ಅನುಭಾವದೆಡೆ ಮುಖ ಅರಳಿಸುತ್ತವೆ. ಸಾಮಾಜಿಕ ಕಾಳಜಿ: 'ಎರಡು ದಡಗಳ ನಡುವೆ ಏಸು ಸಂಸಾರ ಮುಳುಗೆದ್ದು ಘಾಸಿಗೊಂಡಿವೆ'. ಎರಡು ದಡವನ್ನು ವ್ಯಕ್ತಿ ಹಾಗೂ ಸಮಾಜ ಬಂಧದ ಪ್ರಕ್ರಿಯೆಯನ್ನಾಗಿಯೂ ಕಾಣಬಹುದು. ನೋವು ನಲಿವು, ನಿದ್ದೆ ಎಚ್ಚರ, ನೆಲ ಮುಗಿಲು, ಐಡಿಯಾಲಜಿ ಪರಿಧಿಯೊಳಗಿನ ವ್ಯಕ್ತಿ ಮುಂತಾದ ನವೋದಯರ ನೋಟದಂತೆ, ಆದರೆ ಅವು ರೋಮಾಂಟಿಕ್ ಉತ್ಕಟತೆಯಾಗದಂತೆ ಕವನದಲ್ಲಿ ವಿಡಂಬನೆಯ ಕಡಿವಾಣ ಬರುತ್ತದೆ. 'ಯುಗ ಯುಗದಿಂದ ಬರೆದು ಗೀಚಿದ್ದೆಲ್ಲ ಹಾಳೆ? ಜೋಗತಿಯಾದಳಂತೆ ಮುಪ್ಪಾದ ಸೂಳೆ!'

ದಿವ್ಯ ಸಂಭ್ರಾಂತಿ, ಈ ಕವನದಲ್ಲಿ ಕೈಕಾಲು ಚೆಲ್ಲುವುದಿಲ್ಲ. 'ಕಡಲ ಕಡೆವೆನೆಂದು ತಳ ಸೋಸಿ ಮುತ್ತುಗಳ ಪಡೆವೆನೆಂದು' ವೈಯಕ್ತಿಕ ಭರವಸೆಯೂ ಇದೆ. ಅಗಾಧ ನಿಬ್ಬೆರಗಿನೊಡನೆ, ಮೈತ್ರಿ ಸ್ನೇಹಮಯತೆಯ ಮಿನುಗೂ ಇದೆ; 'ಎರಡು ದಡಗಳ ನಡುವೆ... ಮುಳುಗಿ ಮಿನುಗಾಡುತ್ತಿವೆ ಮೀನು.' ಯಾಕೆಂದರೆ, ಜೀವನವೊಂದು ದಿವ್ಯ ಬೆರಗು ಅಗಾಧಗಳನ್ನು ನಿಟ್ಟಿಸುತ್ತ, 'ಎರಡು ದಡಗಳ ನಡುವೆ ಹಾಯಿಬಿಚ್ಚಿದ ದೋಣಿ'ಯಲ್ಲಿ ನಡೆಯುವ ಸಂತಸದ ಹಾಲಿಡೇ ಪಯಣ, ಸಹೃದಯ ಕವಿ ಕಣವಿಯವರಿಗೆ.

ನವ್ಯದ ನಿಟ್ಟಿನಲ್ಲಿ ಒಂಟಿತನ, ಹತಾಶೆ, ನೋವುಗಳು ಮುಖ್ಯ ಸಂವೇದನಾ ನಾಲೆಗಳು. ಅವೂ, ಎರಡು ದಡದಲ್ಲಿ ಒಂದು ಭಿನ್ನ ಜಾಲವಾಗಿ ಹರಿವುಗೊಳ್ಳುತ್ತವೆ. ಕಾವ್ಯ ಪುರುಷನ 'ಮರಳ ದಂಡೆಯಲ್ಲಿ ಕುಸಿದಿದೆ ಕಾಲು', ಅದೊಂದು ಒಂಟಿತನ, 'ಆಚೆ ತೋಪಿನಲಿ ಕೋಗಿಲೆಯ ಲಾಲಿ. ಎದುರಿಗೆ ನೀರ ಭೋರ್ಗರೆತ' ಇವುಗಳನ್ನು ತಡವಲಾರದ ಅಸಹಾಯಕತೆ ಒಂದು ನಿಟ್ಟಿನಲ್ಲಿ. ಅದೇ ಇನ್ನೊಂದು ಮಗ್ಗುಲುಗೊಂಡು 'ಸ್ವಚ್ಛಂದ ಛಂದೋಬಂಧ'ವಾಗುತ್ತದೆ. ಹತಾಶನು 'ಕ್ಷಿತಿಜದಂಚಿಗೆ ತನ್ನ ಉದ್ಬಾಹುಗಳ ಚಾಚಿ'ತೊಡಗುತ್ತಾನೆ. 'ಕಡಲ... ತಳಸೋಸಿ ಮುತ್ತುಗಳ ಪಡೆವೆನೆಂದು' ಧನಾತ್ಮಕ ಜೀವನ ಕೆಚ್ಚು ಪಡೆಯುತ್ತಾನೆ. ವ್ಯಕ್ತಿ, ಜೀವನ 'ಅಸಂಗತ'ವಾಗುವುದಿಲ್ಲ. ಹೀಗೆ ಕಣವಿ ಕಾವ್ಯಹಕ್ಕಿ ನವ್ಯ ಜಾಲವನ್ನು ತಡವಿ ಹಾರುತ್ತದೆ.

ಈ ರೀತಿಯಾಗಿ ಕಣವಿಯವರು ನವೋದಯ, ನವ್ಯ ಕಾವ್ಯ ಪ್ರಕ್ರಿಯೆಗಳ ಒಳಗಿದ್ದೂ, ಅವಕ್ಕಿಂತ ಭಿನ್ನರಾಗಿ ಪ್ರಮುಖರಾಗುತ್ತಾರೆ. ಈ ನಿಟ್ಟಿನಲ್ಲಿ ಹಲವೊಮ್ಮೆ ಅವರ ಕಾವ್ಯ ಪ್ರಕಾರ 'ಸಮನ್ವಯ ಕಾವ್ಯ'ವೆಂದು ಪರಿಗಣಿಸಬಹುದೇನೋ! ಅಂತೆಯೇ ವಿಶಿಷ್ಟವಾಗಿದೆ ಕಣವಿಯವರ ಕಾವ್ಯ ಪ್ರಕಾರ, ಆಳ ಸ್ವಂತಿಕೆಗಳೊಂದಿಗೆ, 'ಕಣವಿಯವರ ಕಾವ್ಯ ಯಾವ ಐಡಿಯಾಲಜಿಗೂ ಬದ್ಧವಾಗದೆಯೆ. ತನ್ನ ಸಂವೇದನಾಶೀಲತೆಯನ್ನು ಉಳಿಸಿಕೊಂಡು ಬಂದಿದೆ' ಎನ್ನುತ್ತಾರೆ ವಿಮರ್ಶಕ ಪ್ರೊ. ಜಿ.ಎಸ್. ಆಮೂರರು. 'ಕಣವಿಯವರ ಕಾವ್ಯಮಾರ್ಗದ ವೈಶಿಷ್ಟ್ಯವೆಂದರೆ, ಎಲ್ಲಾ ಅನುಭವ ಲೋಕಗಳಿಗೂ (ನವೋದಯ ಮತ್ತು ನವ್ಯ) ಅವರು ಸದಾ ಎಚ್ಚರಾಗಿದ್ದರು... ಅಡಿಗರು ತಮ್ಮೆಲ್ಲ ಶಕ್ತಿಗಳನ್ನು ಸೂರೆಗೈದು ತೀವ್ರ ಕಾವ್ಯ ರಚಿಸುತ್ತಿದ್ದ ಸಂದರ್ಭದಲ್ಲೇ, ಅದಕ್ಕಿಂತ ಸಂಪೂರ್ಣವಾಗಿ

ಭಿನ್ನವಾದ ಕಾವ್ಯವನ್ನು ರಚಿಸಿದ ಕವಿಗಳಲ್ಲಿ ಕಣವಿಯವರು ಮುಖ್ಯರು ಎಂಬ ಅಂಶ, ಕನ್ನಡ ಕಾವ್ಯ ಚರಿತ್ರೆಯಲ್ಲಿ ಅವರಿಗಿರುವ ಪ್ರಮುಖ ಸ್ಥಾನವನ್ನು ಎತ್ತಿ ಹೇಳುತ್ತದೆ' ಎನ್ನುತ್ತಾರೆ ಡಿ.ಆರ್. ನಾಗರಾಜರು. ಈ ಮೇಲಿನ ಮಾತುಗಳ ವಿಮರ್ಶೆ, ಭಾಷೆಯ ಹಂತದವು. ಹೆಚ್ಚಾಗಿ ಸಾಹಿತ್ಯ-ವಿಮರ್ಶೆಗಳ ಭಾಷೆಯ ನಿಟ್ಟಿನಲ್ಲೇ ಹರುವುಗೊಳ್ಳುತ್ತವೆ. ಅದೂ ಲಿಪಿಯ ಲಿಖಿತ ರೂಪದಲ್ಲಿ. ಅದು ಸಹಜ ಕೂಡಾ. ಆದರೆ ಯಾವುದೋ ಒಂದು 'ರಸಕೃತಿ'ಯನ್ನು ಇತರ ಭಾಷೆಗಳಾದ ಚಿತ್ರ, ಶಿಲ್ಪ, ಸಂಗೀತ ಮುಂತಾದ ಭಿನ್ನ ಕಲಾ ಮಾಧ್ಯಮಗಳ ಮೂಲಕವೂ ಪ್ರವೇಶಿಸುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ಕಣವಿಯವರ 'ಎರಡು ದಡ'ವನ್ನು ಚಿತ್ರ, ಶಿಲ್ಪ, ನಾದಗಳ ನಿಟ್ಟಿನಲ್ಲಿ ನೋಡಲೆತ್ನಿಸುವೆ.

'ಎರಡು ದಡ'ದಲ್ಲಿ ಬಣ್ಣ ಬೆಳಕುಗಳು ಸಕ್ರಿಯ ಚಿತ್ರ ಪ್ರತಿಮೆಗಳಾಗುತ್ತವೆ 'ಪಶ್ಚಿಮದಲ್ಲಿ ಇಳಿದ ಕೆಂಬೆಳಕು, ಪೂರ್ವದಲ್ಲಿ ಹೊಂಬೆಳಕ ತೋರುವುದು', 'ನೆಲ ಮುಗಿಲ ನಡುವೆ ಆಗೀಗ 'ಕಾಮನಬಿಲ್ಲ' 'ಸೇತುವೆಯು' 'ಮುಳುಗಿ ಮಿನುಗಾಡುತಿದೆ' ಮೀನು; ದೂರದ ನೀಲಶ್ರೇಣಿ'. ಪ್ರಕೃತಿ ಸ್ಫುಟಗೊಳ್ಳುವುದೇ ಬಣ್ಣಗಳ ಆಟಗಳಲ್ಲಿ. ಉಪನಿಷತ್‌ನಲ್ಲಿ ಪ್ರಕೃತಿ ಹಿರಣ್ಯ ವರ್ಣದವಳು. ಗೀತೆಯ ಕೃಷ್ಣ ತನ್ನ ವಿಶ್ವರೂಪವನ್ನು ಸಾವಿರ ಸೂರ್ಯನ ಬೆಳಕಿನಂತೆ ಬೆಳಗಿಸುತ್ತಾನೆ.

ಲೌಕಿಕ ಸಾಮಾಜಿಕ ಸಂದರ್ಭದಲ್ಲಿದ್ದು, ವೈಯಕ್ತಿಕ ಅಂತರ್ಮುಖಿಯಾಗಿರುವ ಅಜಂತಾದ 'ಪದ್ಮಪಾಣಿ ಬುದ್ಧ' ಮುಂತಾದ ಚಿತ್ರಗಳಿಗೆ, ಸಾಮಾಜಿಕ, ವೈಯಕ್ತಿಕ ಆಯಾಮಗಳೆರಡನ್ನೂ ಬೆಸುಗೆಗೊಳಿಸಿದ ಕಣವಿಯವರ ಕಾವ್ಯ ಸಂವೇದನೆ ಹತ್ತಿರವಾಗಿ ಕಾಣುತ್ತಿದೆ. ಇನ್ನೊಂದು ಹಂತದಲ್ಲಿ, ಈ ಕಾವ್ಯ ಪ್ರಕಾರಕ್ಕೆ ೨೦ನೇ ಶತಮಾನದ ಆರಂಭ ಕಾಲದ ಚಿತ್ರಕಲೆಯ 'ಬೆಂಗಾಲೀ ಸ್ಕೂಲ್'ನ ಪುನರುತ್ಥಾನಕ್ಕೆ ಒಂದಿಷ್ಟು ಹೋಲಿಕೆಯಿದೆ. ಕಲ್ಕತ್ತಾದ ಆಗಿನ ಗಗನೇಂದ್ರನಾಥ್ ಠಾಗೋರ್, ಜೆಮಿನಿರಾಯ್ ಮುಂತಾದವರ ಪುನರುತ್ಥಾನ ಚಿತ್ರಪ್ರಕ್ರಿಯೆಯಲ್ಲಿನ ಪರಂಪರೆ, ಆಧುನಿಕತೆ, ಸ್ವಂತಿಕೆ ಸಂವೇದನೆಗಳಿಗೂ, ಕಣವಿಯವರ ಕವಿತೆಗಳಿಗೂ ಒಂದು ಪ್ರತಿಸ್ಪಂದನ ಕಂಡುಬರುತ್ತದೆ. ಪರಂಪರೆ, ಆಧುನಿಕತೆಗಳ 'ಎರಡು ದಡ'ದಲ್ಲಿ ಜೀವನ ಅರಳುತ್ತದೆ.

'ಎರಡು ದಡ'ದ ಮೊದಲ ಪದ್ಯವನ್ನು ಒಂದು ತುಡಿಯುವ ಶಿಲ್ಪವಾಗಿಯೂ ಕಾಣಬಹುದು. 'ಬೆಟ್ಟದಡಿ ಹುದುಗಿದ ಭೂತ ಮೇಲೆ ಪುಟಿದು ನೆಲ ಆಕಾಶ. ದಡಗಳನ್ನು ತಡುವುತ್ತ ನಿಧಿಧ್ಯಾಸದಲ್ಲಿ ತಿಳಿಗೊಂಡದ್ದನ್ನು ಒಂದು 'ಮಹಾನ್ ಶಿಲ್ಪದಂತೆ ಕಲ್ಪಿಸಬಹುದು. ಸಂಘರ್ಷ ಮೀರಿ ಘನಗೊಂಡ ಬೃಹತ್ ಬಾಮಿಯಾನ್ ಬುದ್ಧಶಿಲ್ಪ, ಗೊಮ್ಮಟರನ್ನು ಅದು ನೆನಪಿಸುತ್ತದೆ. ಇನ್ನೊಂದು ಆಧುನಿಕ ಸಂವೇದನೆಯ ಮಾನವೀಯ ನಿಟ್ಟಿನಲ್ಲಿ ಇಂಗ್ಲೆಂಡಿನ ಹೆನ್ರಿ ಮೂರರ ಗೋಲ ನುಣುಪು ಶಿಲ್ಪಗಳನ್ನು, ನಮ್ಮಲ್ಲಿನ ಕೆ.ಜಿ. ಸುಬ್ರಮಣ್ಯನ್‌ರ ಶಿಲ್ಪಗಳನ್ನು, ಕಣವಿಯವರ ಕವಿತೆಗಳು ನೆನಪಿಸುತ್ತವೆ.

ನಾದಮಯತೆ, ಸಂಗೀತ, ಕಾವ್ಯ ಇವೆರಡರಲ್ಲೂ ಅಂತಃಸ್ರೋತ ಎರಡು ದಡದ ಶಬ್ದ ಲಯಗಳು, ಗುಂಜನತೆ, ಕೆಲವೊಮ್ಮೆಯ ಸಹಜ ಅಂತ್ಯಪ್ರಾಸಗಳು, ಒಂದು ನವುರಾದ ಕೃತಕವಲ್ಲದ

ನಾದಮಯತೆಯನ್ನು ಗುಂಜಿಸುತ್ತವೆ. ಹಾಗಾಗಿ ಅವರ ಕವಿತೆಗಳು ಗೇಯ ಕವಿತೆಗಳಾಗಿಯೂ ಜನಪ್ರಿಯವಾಗಿವೆ. ಕವಿತೆಯ ಕಣ್ಣಲಿಪಿಯ ಒಳ ಹುದುಗಿರುವ ಶ್ರೋತ್ರೀಯ ಗೇಯತೆ ನಾದದ ಹಂತದಲ್ಲಿ ಕವಿತೆಗೆ ಹೊಸತನ ಶ್ರೀಮಂತಿಕೆ ತರುತ್ತವೆ. ಗಝಲ್ ಗೀತೆಗಳು ಈ ಕಾವ್ಯಕ್ಕೆ ಹತ್ತಿರವಿದ್ದಂತಿದೆ.

ಅಷ್ಟು ಹೆಚ್ಚಾಗಿ ಚರ್ಚಿತವಾಗದ 'ಎರಡು ದಡ' ಸಂಕೀರ್ಣವಾಗಿ ಅರಳುವ ಒಂದು ಗಮನೀಯ ಕವಿತೆ. ಅದು ಮಹತ್, ನೆಲಬಾನು. ಲೌಕಿಕ ಅಧ್ಯಾತ್ಮ, ನೋವು ನಲಿವು ಆದಿ ಅನಂತ, ವ್ಯಕ್ತಿ ಸಮಾಜ, ಪ್ರಕೃತಿ ಜೀವಗಳ ಎರಡು ದಡಗಳನ್ನು, ಜೀವನ ಲವಲವಿಕೆಯ ಕಾಮನಬಿಲ್ಲಿನಿಂದ ಜೋಡಿಸಿ ಆಡುವ, ಆಡಂಬರವಿಲ್ಲದ ಕವಿತೆಯಾಗಿದೆ ಕಣವಿಯವರ 'ಎರಡು ದಡ'.

ಆರ್ಯ

# ೩೪. ಗಾಂಧಿ

೧.

ಇರುವ ನೀರೆಲ್ಲ ಸುರಿದು
ಹಸಿದ ನೆಲ ಹಸುರಾಗಿ ಕಳಕಳಿಸಿ
ಬಾನು ಥಳಥಳಿಸಿರಲು -
ಬೆಳ್ಳಗೆ ಮೇಲೆ ಹೊರಟಿತ್ತು ಮಂದಹಾಸದ ಮೋಡ:
ಗಾಂಧಿ ನೋಡ.
ಮಹಡಿಮನೆ, ಗುಡಿಸಲು
ಪಡುಭೂಮಿ, ಹೊಲ-ಗದ್ದೆ, ಸುಡಗಾಡ ಸುತ್ತಲು
ಒಂದೆ ಸಮ
ಮೋಡದೊಡಲ ಕರುಣಾವೃಷ್ಟಿ.
ಕತ್ತಲೆ-ಎದೆಗೆ ಜಗ್ಗನೆ ಬೆಳಕ ಹೊತ್ತಿಸುವ ಮಿಂಚುದೃಷ್ಟಿ.
ಗುಡುಗಿಗಿಂತಲು ಘೋರ ಮೌನ,
ನೀಲದಲಿ ಪ್ರಾರ್ಥನೆಯ ಮೂಲ ತಾನ-ವಿತಾನ
ಮಳೆಗೆ ಮೈದೊಳೆದು ಎದೆಯನರಳಿಸುವ
ಸೃಷ್ಟಿ-ಸಂತುಷ್ಟಿ.

೨

ಬೆಳಗಾಗುವುದೆ ತಡ, ಹೊರಟದ್ದೆ ಪ್ರಭಾತಫೇರಿ-
ಯುಗಯುಗದ ಭಾರದಲಿ ಸುಂದು ಹಿಡಿದು ಮಲಗಿ
ಮುಲುಗಿರುವ ಕಿವಿ-ಗವಿಗಳಲಿ ಹೊಡೆದನು ನಗಾರಿ.
ನರನರವೂ ಹೊಸ ನೆತ್ತರಿನ ತುತ್ತೂರಿ.
ಕ್ಷಿತಿಜದಾಚೆಯ ಯಾವ ಪ್ರೇರಣೆಗೊ ಹೊರ ಹೊಮ್ಮಿರುವ

ಹೊಂಗಿರಣಗಳ ಕಸಬರಿಗೆ ಹಿಡಿದು
ಉಡುಗಿದ್ದೆ ಉಡುಗಿದ್ದು
ಸಂದಿ-ಗೊಂದಿ, ಗಟಾರು, ಊರು, ಹೊಲಗೇರಿ.
ಮರಳಿದ್ದು ಯಾವ ಸಂಜೆಗೊ-
ಮತ್ತೆ ಕರೆದಿತ್ತು ನೂರು ದಾರಿ.
ಎಡ-ಬಲಕೆ ಮಂದಿ-ಮಕ್ಕಳು
ಹಿಂದೆ ನೆರಳಿನಲಿ ಹೆಜ್ಜೆಯ ಹಿಂದೆ ಹೊಸ ಒಕ್ಕಲು.
'ನಕ್ಕಳಾತಾಯಿ'.
ಮೈದುಂಬಿ ತುಂಬು ಹೊಳೆ ದಾಟಲು
ನಂಬಿಗೆಯ ಗುಡಿಸಲು ಕಣ್ಣ ಕಂಬನಿಯನೊರೆಸಲು
ಮೂಕ ತಂತಿಯ ನಾದ ಹಿಡಿದು
ಗಡಬಡಿಸಿ ಹೊರಟ ದುಡುದುಡು ನಡಿಗೆ
(ಕೈಯಲ್ಲಿ ಭದ್ರವಿದೆ ಸತ್ಯಾಗ್ರಹದ ಬಡಿಗೆ)
ತನ್ನ ಉಪವಾಸದಗ್ನಿಕುಂಡದಲ್ಲಿ ಕರಗಿ ಮಿರುಗಿಸಿದ
ಕೋಟಿ ಕೋಟಿ ಜನದೆದೆಯ ಕಲ್ಮಷ-ಬಗೆ.
ಹೆಡಮುರಿಗೆ ಬಗಿದ ಹಾವ ಕೊಲ್ಲದೆ, ವಿಷವ ಕಕ್ಕಿಸಿ
ಹುತ್ತ ಸೇರಿಸಿದ ಗಾರುಡಿಗ,
ನಿತ್ಯಚಕ್ರದಖಂಡ ಸತ್ಯ ಸ್ನೇಹದ ನೂಲ
ತೆಗೆದು ಸುತ್ತಿದನು ಖಂಡ ಖಂಡ.
ಎಂಥ ಬಿರುಗಾಳಿಯಲು
ಮಾತು-ಕೃತಿಗಳ ಪರಡಿ ಏರು-ಪೇರಾಗದೊಲು
ಹಿಡಿದ ಸಮತೂಕ.
'ನಾ', 'ನೀ' ಎಂಬ ಘಟಾನುಘಟಿಗಳನೆಲ್ಲ ಹಿಡಿದು ಪುಟವಿಕ್ಕಿ, ತಿಕ್ಕಿ
ಹೂಡಿದನು ತಾಯ ರಥಕೆ -
ಪಾದಗಟ್ಟಿಗೆ ತಂದು ನಿಲ್ಲಿಸಿದ, ಸಲ್ಲಿಸಿದ ತನ್ನನೇ ನೈವೇದ್ಯಕೆ
ಜನದ ಸೇವೆಯ ಸಾಣೆಕಲ್ಲಿನಲಿ ತಿರುತಿರುಗಿ ತೇಯ್ದು
ಗಂಧವಾದನು ಅವರ ಹಣೆಗೆ.
ಆಗದಿದ್ದರೂ ಕಾಲಕಾಲಕ್ಕೆ ಮಳೆ
ಬಾರದಿದ್ದರೂ ಬೆಳೆ
ಬೆವರು ಸುರಿಸುತ ಜೀವಸತ್ತ್ವವಾದನು ಕಪ್ಪು ನೆಲದಲ್ಲಿ
ನಿಂತಿರುವ ತೆನೆಯ ಧ್ವಜಕೆ.

೩

ಯಾರು ಹೇಳಿದರು ನಾವೆಲ್ಲ ನಿನ್ನ ಮರೆತೆವೆಂದು ?
ಹಗಲೆಲ್ಲ ಕಟಕಟಿ ಬೇಡವೆಂದು
ಕಟೆದು ನಿಲಿಸಿದ್ದೇವೆ
ಕೂಟು ಕೂಟನಲಿ ನಿನ್ನ ನಗುವ ಮೂರ್ತಿ:
ಕಂಡು ಕಾಣದ ಹಾಗೆ ದಾಟಿ ಹೋಗುತ್ತೇವೆ-
ಮರುಗುವುದು ಒಳಗೊಳಗೆ
ಪಾರದರ್ಶಕದಂಥ ನಿನ್ನ ಅಂತಃಕರಣ :
ಕಾಡಿಗೆ ಬಳಿದ ಕಾಜಿನಲಿ ಮಾತ್ರ ಕಾಣುವುದು
ನಮಗೀಗ ಹಿಡಿದ ಗ್ರಹಣ.
ನೀನಿಂದು ಬದುಕಿದ್ದರೊಂದು ವೇಳೆ
ಗರತಿಯಾಗಬಹುದಿತ್ತೇನೊ ರಾಜಕಾರಣದ ಸೂಳೆ.
ಸತ್ಯಕ್ಕೆ ತಲೆ ತೆಗೆದು ನಿಂತವ ನೀನು
ನಿನಗೆ ಟೊಪ್ಪಿಗೆ ಹಾಕುವ ಧೈರ್ಯ ಯಾರಿಗಿತ್ತು ?
ಕುರಣೆಯೊ, ಕನಿಕರವೊ, ಕ್ಷಮೆಯೊ
ನೀನು ನಗುತ್ತಲೇ ಇರುವಿ :
ಅಂತೆಯೇ
ದಿನವೂ ನಮಗೆ ಬೈಗು ಬೆಳಗುಗಳುಂಟು,
ಇರುಳ ಬಾನಿನ ತುಂಬ ನೀನೊಬ್ಬನೇ ಕೋಲೂರಿ ನಡೆದಂತೆ
ಚಿಕ್ಕೆಗಳ ಗುರುತುಂಟು,
ಬರಗಾಲದಲ್ಲಿಯೂ ಗುಟುಕು ಗಂಜಿಯುಂಟು ;
ನಮ್ಮೊಳಗೆ ನಾವು ಗುರುಗುಟ್ಟಿದರೂ
ನೆಲವ ಕಾಯುವ ನಿಷ್ಠೆಯುಂಟು :
ಉಂಟು ;ಉಂಟು
ನಾವೆಲ್ಲ ಪೂಜೆಯ ಗಂಟು.
ಆದರೂ ನಿನ್ನ ಹೆಸರಿನಂಕಿಯ ಮುಂದೆ ನಮಗೂ ಒಂದು ಬೆಲೆಯುಂಟು.

೧೯೪೮ರಿಂದೀಚೆಗೆ ಅರ್ಧಶತಮಾನದ ಭಿನ್ನ ಭಿನ್ನ ಕಾಲ ಘಟ್ಟಗಳಲ್ಲಿ ಗಾಂಧಿ ಚಿಂತನೆಗಳು-ಆದರ್ಶಗಳು ಪಡೆದುಕೊಂಡ ಪ್ರಸ್ತುತತೆ-ಪಲ್ಲಟಗಳಿಗೆ ಕವನಗಳ ಮೂಲಕ ಕಾಲಕಾಲಕ್ಕೆ ಪ್ರತಿಕ್ರಿಯಿಸಿರುವ ಕನ್ನಡದ ಕವಿಗಳಲ್ಲಿ ಕಣವಿಯವರು ಪ್ರಮುಖರು. ಆಧುನಿಕ ಭಾರತದ ಸಾಮಾಜಿಕ

ಸಾಂಸ್ಕೃತಿಕ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಗಾಂಧೀಜಿಯವರ ವ್ಯಕ್ತಿತ್ವ ತತ್ವಾದರ್ಶಗಳನ್ನು ಮರು ವ್ಯಾಖ್ಯಾನಿಸಿಕೊಳ್ಳುತ್ತ ಬಂದಿರುವ ಕವಿ ಕಣವಿಯವರು ತಮ್ಮ ಕವನಗಳಲ್ಲಿ ಎತ್ತಿ ಹಿಡಿದಿರುವ ಗಾಂಧೀಜಿಯವರ ವ್ಯಕ್ತಿತ್ವ -ಸಂದೇಶಗಳು ಅವರ ವಿಸ್ತೃತ ಜೀವನಾನುಭವ, ಗಂಭೀರ ಚಿಂತನೆ ಸ್ವಾನುಭವದ ನಿಕಷದಿಂದ ಪಲ್ಲವಿಸಿರುವ ಮಾಗಿದ ಮನಸ್ಸಿನ ಬಿಂಬಗಳಾಗಿವೆ.

ಸಂವೇದನಾಶೀಲ-ಪ್ರಜ್ಞಾವಂತ ಮನಸ್ಸುಗಳನ್ನು ಕಾಲದೇಶಾತೀತವಾಗಿ ಕಾಡುವ ಕಟ್ಟುವ ಗಾಂಧಿ ಇಪ್ಪತ್ತನೆಯ ಶತಮಾನದ ಮಹಾವಿಸ್ಮಯ ಮಾತ್ರವಾಗಿರದೆ ಮಾನವ ಚೈತನ್ಯದ ಅನನ್ಯ ಸತ್ವದ ಮಹಾಪ್ರತೀಕವಾಗಿಯೇ ಪ್ರಸ್ತುತರಾಗಿದ್ದಾರೆ. ಸತ್ಯ ನಿಷ್ಠೆ-ದೈವಶ್ರದ್ಧೆ. ಅಂತಃಸಾಕ್ಷಿ ಅಂತಃ ಕರಣದ ಮೂಲ ಸೆಲೆಗಳಿಂದ ರೂಪುಗೊಂಡಿರುವ 'ಗಾಂಧಿ' ಮನುಷ್ಯ ಪ್ರಜ್ಞೆಯ ಮಹೋನ್ನತ ರೂಪಕವಾಗಿ ಸಾವಿರಾರು ಕವಿಗಳಿಗೆ ವಸ್ತುವಾಗುತ್ತ ಸೃಜನಶೀಲ ಮನಸ್ಸುಗಳಲ್ಲಿ ನಿತ್ಯ ಹುಟ್ಟುತ್ತಿರುವ ಮೃತ್ಯುಂಜಯ ಶಕ್ತಿಯಾಗಿ ಕನ್ನಡ ಪ್ರಜ್ಞೆಯಲ್ಲಿ ಮೂಡಿ ಬಂದಿದ್ದಾರೆ.

ಸ್ವಾತಂತ್ರ್ಯ ಪೂರ್ವದಲ್ಲಿಯೇ ಕವನ ರಚನೆ ಪ್ರಾರಂಭಿಸಿರುವ ಕವಿ ಕಣವಿಯವರು ಅಂದಿನ ನವೋದಯ ಪರಿಸರದ ಇತರ ಕವಿಗಳಂತೆಯೇ ದೇಶಪ್ರೇಮ, ಸ್ವಾತಂತ್ರ್ಯ ಹೋರಾಟ, ನಾಡು-ನುಡಿ ನಿಷ್ಠೆ ಮತ್ತು ರಾಷ್ಟ್ರೀಯ ನಾಯಕರ ಆದರ್ಶಗಳಿಂದ ಗಾಢವಾಗಿ ಪ್ರಭಾವಿತರಾದವರು. ಬಲಾಢ್ಯ ಆಂಗ್ಲ ಅಧಿಪತ್ಯವನ್ನು ಸತ್ಯ-ಅಹಿಂಸೆಯ ಸಾಮಮಾರ್ಗದ ಮೂಲಕ ಕೊನೆಗಾಣಿಸಿ ಭಾರತದ ಬಂಧ ವಿಮೋಚನೆ ಮಾಡಿದ ಪವಾಡ ಸದೃಶ ಘಟನೆಗಳಿಗೆ ಪ್ರತ್ಯಕ್ಷದರ್ಶಿಗಳಾಗಿದ್ದವರಿಗೆ ವಿಶೇಷವಾಗಿ ಯುವ ಜನಾಂಗಕ್ಕೆ ಗಾಂಧಿ ಮನುಷ್ಯರೂಪದ ಉಜ್ವಲ ಸತ್ವ ಸಂಚಯವಾಗಿ ವಿಸ್ಮಯ-ಭಕ್ತಿ-ಗೌರವಕ್ಕೆ ಪಾತ್ರರಾದರು.

ಹೀಗೆ ತಾರುಣ್ಯದಲ್ಲಿಯೇ ಗಾಂಧಿ ವ್ಯಕ್ತಿತ್ವದಿಂದ ಪ್ರಭಾವಿತರಾದ ಕವಿ ಕಣವಿಯವರ ಭಾವಕೋಶದಲ್ಲಿ ಗಾಂಧಿ ಶಾಶ್ವತವಾಗಿ ನೆಲೆಯಾಗಿದ್ದಾರೆ. ಗಾಂಧಿಯವರೊಂದಿಗೆ ಅವರು ನಡೆಸಿರುವ ದಶಕಗಳ ಬೌದ್ಧಿಕ-ಮಾನಸಿಕ ಅನುಸಂಧಾನದಲ್ಲಿ ಗಾಂಧಿ, ನಿಲುಕದ ಅಭೇದ್ಯ ಧ್ವನಿಯಾಗಿ, ಕಾಡುವ ನೆನಪಾಗಿ ಅವರೊಳಗೆ ಬೆಳೆಯುತ್ತಲೇ ಬಂದಿದ್ದಾರೆ. ಗಾಂಧಿ ಕುರಿತು ಕಣವಿಯವರು ಈ ವರೆಗೆ ರಚಿಸಿರುವ ಸ್ವತಂತ್ರ ಕವನಗಳು ಎಂಟು, ಸಾಂದರ್ಭಿಕ ಪ್ರಸ್ತಾಪವುಳ್ಳ ಕವನಗಳು ಮತ್ತು ಅನುವಾದಿತ ಕವನ ಒಂದು.

೧೯೪೯ರಲ್ಲಿ ಪ್ರಕಟವಾದ ಮೊದಲ ಕವನ ಸಂಕಲನ 'ಕಾವ್ಯಾಕ್ಷಿ'ಯ 'ಅಮರ ತೇಜಃ ಪುಂಜ'ಕಣವಿಯವರ ಗಾಂಧೀ ಅನುಸಂಧಾನದ ಮೊದಲ ಪ್ರಯತ್ನ. ಮುಂದಿನ ಐದು ದಶಕಗಳಲ್ಲಿ ನಡೆಸಿದ ಗಾಂಧಿ ವ್ಯಕ್ತಿತ್ವ ಶೋಧ ಅವರ ಹತ್ತಾರು ಕವನಗಳಲ್ಲಿ ಮೈದಾಳಿವೆ. ವಿಸ್ಮಯ, ಶ್ರದ್ಧೆ ಆದರಗಳ ಮೂಲಕ ಮನುಷ್ಯ ಸತ್ವದಲ್ಲಿ ಅಗಾಧ ವಿಶ್ವಾಸ ಮೂಡಿಸಿದ ಗಾಂಧಿ ಶಕ್ತಿಯಾಗಿ, ತತ್ವವಾಗಿ, ಅಂತಃಸಾಕ್ಷಿಯಾಗಿ, ಭಾವೋನ್ನತಿಯ ಸಂಕೇತವಾಗಿ ಅವರೊಳಗೆ ಬೆಳೆಯುತ್ತಲೇ ಸಾಗಿದ್ದಾರೆ. ಗಾಂಧಿ ಚೈತನ್ಯದ ವ್ಯೋಮಗಾಮಿ ಲಯಗಳ ಅಮೂರ್ತ ವಿನ್ಯಾಸಗಳನ್ನು ಭಾಷೆ ಬಂಧದ ಮೂರ್ತ ಪ್ರತೀಕಗಳಲ್ಲಿ ಕವನವಾಗಿಸುವ ಸವಾಲುಗಳನ್ನು ಮತ್ತೆ ಮತ್ತೆ ಎದುರಿಸುತ್ತಲೇ

ಬಂದಿರುವ ಕಣವಿಯವರ ಯಶಸ್ವಿ ಪ್ರಯತ್ನಗಳಲ್ಲಿ ಒಂದಾಗಿರುವ 'ಗಾಂಧಿ' ಕವನ ೧೯೭೦ರ ದಶಕದ ನವ್ಯ ಮಾದರಿಯ ರಚನೆ.

ಮೂರು ಭಾಗಗಳಲ್ಲಿ ವಿನ್ಯಾಸಗೊಂಡಿರುವ 'ಎರಡು ದಡ' ಸಂಗ್ರಹದ ಈ ಕವನವು ಗಾಂಧಿ ವ್ಯಕ್ತಿತ್ವ-ಸಾಧನೆ-ಸಿದ್ಧಿಯನ್ನು ಮೂಲದ ಅನನ್ಯ ಶ್ರದ್ಧೆ- ನಿಷ್ಠೆ ಆದರದೊಂದಿಗೆ ಶೋಧಿಸುತ್ತಸಲೇ ಇತಿಹಾಸವನ್ನು ವರ್ತಮಾನದಲ್ಲಿ ಅರ್ಥೈಸಲು ಪ್ರಯತ್ನಿಸುತ್ತದೆ. ಮೊದಲ ಭಾಗದಲ್ಲಿ ಗಾಂಧೀಜಿಯ ವಿರಾಟ್ ವ್ಯಕ್ತಿತ್ವದ ಸ್ಮರಣೆಯಿದ್ದರೆ, ಎರಡನೆಯ ಭಾಗವು ಭಾರತದ ಬಂಧ ವಿಮೋಚನೆಗಾಗಿ ಗಾಂಧಿ ಕಂಡುಕೊಂಡ ಶಾಂತಿ-ಪ್ರೀತಿ-ಸ್ನೇಹ ಮೂಲದ ಸತ್ಯಾಗ್ರಹದ ತಾತ್ವಿಕತೆಯನ್ನು ಕಟ್ಟಿಕೊಡುತ್ತದೆ. ಕೊನೆಯ ಭಾಗವು ಸಮಕಾಲೀನ ಸಾಮಾಜಿಕ ವಾಸ್ತವದಲ್ಲಿ 'ಗಾಂಧಿ' ತತ್ವಾದರ್ಶಗಳು ಬದುಕಿನಿಂದ ಕಣ್ಮರೆಯಾಗುತ್ತಿರುವ ವಿಷಾದವನ್ನು ಧ್ವನಿಸುತ್ತಲೇ, ಅನೀತಿ-ಅನ್ಯಾಯದ ಆತ್ಮ ವಿನಾಶಕ್ಕೆ ಪ್ರತಿಯಾಗಿ ಪ್ರೀತಿ, ಸ್ನೇಹ, ಸತ್ಯದ ದಾರಿಯನ್ನು ಪರಿಚಯಿಸಿದ ಗಾಂಧಿ, ಮಾನವ ಘನತೆ-ಗೌರವದ ಸಂಕೇತವಾಗಿ. ಪ್ರೀತಿ-ಶಾಂತಿ-ಬಂಧುತ್ವದ ಉಜ್ವಲ ಪ್ರತೀಕವಾಗಿ ಮಾನವ ಪ್ರಜ್ಞೆಯಲ್ಲಿ ನೆಲೆನಿಂದಿರುವ ವಿಶ್ವಾಸವನ್ನು ವ್ಯಕ್ತಪಡಿಸುತ್ತದೆ. ಹೀಗೆ ಉದಾತ್ತ ಬದುಕಿನ ಮೌಲ್ಯ ಪ್ರತಿಪಾದನೆಯೊಂದಿಗೆ, ಅಪಮೌಲ್ಯಗೊಳ್ಳುತ್ತಿರುವ ಸಮಕಾಲೀನ ಬದುಕಿನ ವಿಕೃತ ಬೆಳವಣಿಗೆಗಳ ಬಗೆಗೆ ಸ್ವವಿಮರ್ಶೆ-ಸಮಾಜ ವಿಮರ್ಶೆಯನ್ನು ಏಕಕಾಲಕ್ಕೆ ಪ್ರೇರೇಪಿಸುವ ಮಹತ್ವದ ರಚನೆಯಾಗಿದೆ.

ಮೊದಲ ಭಾಗದಲ್ಲಿ ಗಾಂಧಿ ವ್ಯಕ್ತಿತ್ವದ ಮೂಲಧಾತುಗಳಾಗಿರುವ ಪ್ರೀತಿ-ಕರುಣೆ, ಔದಾರ್ಯ-ಸಮತೆ-ಸಂಯಮದ ಗುಣವಿಶೇಷಗಳನ್ನು ಲೌಕಿಕ-ಅಲೌಕಿ ಆಳ ವಿಸ್ತಾರಗಳನ್ನು ನಿಸರ್ಗದ ರೂಪಕಗಳ ಮೂಲಕ ಓದುಗನ ಭಾವಕೋಶದಲ್ಲಿ ಬಿಂಬಿಸುವ ಅರ್ಥಪೂರ್ಣ ಪ್ರಯತ್ನವಿದೆ. ಅಮೂರ್ತವನ್ನು ಮೂರ್ತಗೊಳಿಸುವ ಈ ಪ್ರಕ್ರಿಯೆಯಲ್ಲಿ ಗಾಂಧಿ ಮೋಡವಾಗಿ, ಮಳೆಯಾಗಿ, ಮಿಂಚಾಗಿ, ಮೌನವಾಗಿ ಅನಂತವಿಸ್ತಾರದ ನೀಲಾಕಾಶವಾಗಿ ಆವರಿಸಿಕೊಳ್ಳುತ್ತಾರೆ. ಹಸಿದ ನೆಲಕ್ಕೆ ಅಮೃತ ವರ್ಷ ಸುರಿಸಿ ಒಡಲು ಬರಿದು ಮಾಡಿಕೊಂಡು ಬರಡು ನೆಲದಲ್ಲಿ ಗಾಂಧೀಜಿಯ ಜೀವ ಪ್ರೀತಿ, ಸೇವೆ-ಸಮರ್ಪಣೆಯ ಹೃದಯ ಶ್ರೀಮಂತಿಕೆ ಭಾವಗಮ್ಯವಾಗುತ್ತದೆ. "ಮಹಡಿ-ಗುಡಿಸಲು, ಹೊಲ-ಗದ್ದೆ, ಸುಡುಗಾಡು-ಪಡುಭೂಮಿ" ಎನ್ನುವ ಭಿನ್ನ ಭಾವಗೆಡೆಗೊಡದೆ ಎಲ್ಲೆಡೆಗೂ ಸಮಾನವಾಗಿ ಸಮೃದ್ಧಿಯನ್ನು ಹಂಚುವ 'ಮಳೆ' ಸಮತೆ ವಿಶ್ವಬಂಧುತ್ವದ ಭಾವ ಶ್ರೀಮಂತಿಕೆಯನ್ನು ಧ್ವನಿಸುತ್ತದೆ. "ಕತ್ತಲೆ-ಎದೆಗೆ ಜಗ್ಗನೆ ಬೆಳಕ ಹೊತ್ತಿಸುವ ಮಿಂಚುದೃಷ್ಟಿ" ಭಾರತದ ದಾಸ್ಯ ವಿಮೋಚನೆಯ ಅಪೂರ್ವ ಸ್ಮರಣೆಯನ್ನು ರೇಖಿಸುತ್ತದೆ. ರಾತ್ರಿಯ ನೀರವ ಮೌನದ ನಿಗೂಢತೆ, ಅನಂತ ಆಕಾಶದ ತಾನ-ವಿತಾನ ಹೀಗೆ ನಿಸರ್ಗದ ರೂಪಕಗಳ ಸೃಜನಶೀಲತೆ-ಸಮೃದ್ಧಿ-ಸಂತುಷ್ಟಿಗಳಲ್ಲಿ ಗಾಂಧೀಜಿಯ ವ್ಯಕ್ತಿತ್ವದ ಜೀವಪರ ಲಯಗಳನ್ನು ಮೂರ್ತಾಮೂರ್ತ ವಿಶ್ವಾತ್ಮಕವಾಗಿ ಹರಿದಾಡುವ ಅನುಭಾವಿಕ ಸತ್ವವನ್ನು ಅದ್ಭುತವಾಗಿ ಧ್ವನಿಸಲಾಗಿದೆ.

ಎರಡನೆ ಭಾಗದಲ್ಲಿ ದಾರ್ಶನಿಕ ಗಾಂಧೀಜಿಯವರ ಸತ್ಯವ್ರತ ಸಾಧನೆಯ ಸ್ಮರಣೆಯಿದೆ. ಅಜ್ಞಾನ-ಅಸ್ಪೃಶ್ಯತೆ. ಅಭಿಶಾಪ ಅಧೀನ ನೆಲೆಯ ಅವಮಾನದಲ್ಲಿ ಮೂಕ ಸಂಕಟ ಅನುಭವಿಸುತ್ತಿದ್ದ

ದಮನಿತರ ಹಕ್ಕಿಗಾಗಿ ಹೋರಾಡಿದ ಗಾಂಧೀಜಿಯವರ ಜೀವಕಾರುಣ್ಯ. ಸೇವೆ ಸಮರ್ಪಣೆಯನ್ನು "ನಂಬುಗೆಯ ಗುಡಿಸಲ ಕಣ್ಣ ಕಂಬನಿಯನೊರಸಲು ಮೂಕ ತಂತಿಯ ನಾದ ಹಿಡಿದು" ನಡೆಸಿದ ಹೋರಾಟವನ್ನು ಸೂರ್ಯ-ಗಾರುಡಿಗ-ಗಂಧ-ತೆನೆ-ರೂಪಕಗಳ ಲೋಕವು ಸಮರ್ಥವಾಗಿ ವ್ಯಂಜಿಸುತ್ತದೆ.

ಬಹುಸಂಸ್ಕೃತಿ- ಬಹು ಭಾಷೆ-ಧರ್ಮಗಳ ವರ್ತುಲಗಳಲ್ಲಿ ದ್ವೀಪಗಳಾಗಿದ್ದ ಭಾರತೀಯ ಮನಸ್ಸುಗಳನ್ನು ಸತ್ಯ ಸ್ನೇಹ-ಸೂತ್ರದಲ್ಲಿ ಒಂದಾಗಿಸಿದ್ದನ್ನು ಸಂಕೇತಿಸುವ "ನಿತ್ಯ ಚಕ್ರದಖಂಡ ಸತ್ಯ ಸ್ನೇಹದ ನೂಲ ತೆಗೆದು ಸುತ್ತಿದನು ಖಂಡ ಖಂಡ" ಎನ್ನುವ ರೂಪಕವು ಚರಕದಿಂದ ನೂಲು ತೆಗೆಯುವ ಕ್ರಿಯೆಯಿಂದ ಸ್ವದೇಶಾಂದೋಲನಕ್ಕೆ ಸೃಷ್ಟ್ಯಾತ್ಮಕ ಶಕ್ತಿ ಸಂಚಲನಗೊಳಿಸಿದ ಗತವನ್ನು ಮರುಕಳಿಸುತ್ತದೆ. ಭಾರತೀಯರಲ್ಲಿ ಸ್ವಾಭಿಮಾನ-ದೇಶಪ್ರೇಮ-ಸ್ವರಾಜ್ಯ-ಸ್ವದೇಶದ ಕನಸು ಬಿತ್ತಿ ಅನೈಕ್ಯತೆ ಅಸಮಾನತೆಯ ಬೆಂಕಿಯನ್ನು ನಂದಿಸಲು ಸಂಕಷ್ಟಗಳ ಸರಮಾಲೆಯನ್ನು ಸ್ವೀಕರಿಸಿದರು. ಸತ್ಯ ಅಹಿಂಸೆಯ ಹೋರಾಟದಲ್ಲಿ ಉಪವಾಸ-ವನವಾಸ-ಜೈಲುವಾಸಗಳ ಅಗ್ನಿದಿವ್ಯಗಳಿಗೆ ಆಹಾರವಾದರು. ಹೀಗೆ ಸಂಕಷ್ಟಗಳ ಸಾಣೆಕಲ್ಲಿನಲ್ಲಿ ಗಂಧವಾಗಿ ತೇಯ್ದುಕೊಳ್ಳುತ್ತ ಕೇಡಿಗೆ ಕಲ್ಯಾಣವನ್ನು, ದ್ವೇಷಕ್ಕೆ ಪ್ರೀತಿಯನ್ನು ಉತ್ತರವಾಗಿಸಿದರು. ಸತ್ಯ-ಶಾಂತಿಯ ದುರ್ಗಮ ಪಥದಲ್ಲಿ ನಂಜನುಂಗುತ್ತ ಎಡರು ತೊಡರುಗಳಿಗೆ ತತ್ತರಿಸದೇ ಮುನ್ನಡೆದ ರಾಷ್ಟ್ರಪಿತನ ತ್ಯಾಗ-ಸಂಯಮವನ್ನು ಗ್ರಹಿಕೆಗೆ ಮುಟ್ಟಿಸುವ ಈ ಭಾಗವು ಸೂರ್ಯ ಮುಳುಗುವ ಸಾಮ್ರಾಜ್ಯದ ಅಹಂಕಾರ ಅಟ್ಟಹಾಸದ ವಿಷ ನಾಲಿಗೆಯನ್ನು ಕತ್ತರಿಸದೇ ಕಚ್ಚಿಸಿಕೊಳ್ಳದೇ ಹಿಮ್ಮೆಟ್ಟಿಸಿದ ಅಸಾಮಾನ್ಯತೆಯನ್ನು ಶಸ್ತ್ರ ಶಕ್ತಿಯ ಆಂಗ್ಲ ಪ್ರಭುತ್ವವನ್ನು ಶಾಂತಿ-ಸ್ನೇಹದ ಸಾಮಮಾರ್ಗದ ಮೂಲಕ ಸೋಲಿಸಿದ ಗಾಂಧೀಜಿಯವರ ಹೋರಾಟದ ಬಿಕ್ಕಟ್ಟು ಮತ್ತು ತಾತ್ವಿಕತೆಯನ್ನು ಸಂಕೇತಿಸುವ 'ಹೆಡೆಮುರಿಗೆ ಬಿಗಿದ ಹಾವ ಕೊಲ್ಲದೆ, ವಿಷವ ಕಕ್ಕಿಸಿ ಹುತ್ತ ಸೇರಿಸಿದ ಗಾರುಡಿಗ' ಎನ್ನುವ ರೂಪಕ ಹಿಂಸೆ-ಅಹಿಂಸೆಗಳ ಮುಖಾಮುಖಿಯ ನಿರಂತರತೆಗೆ ಭಾಷ್ಯವಾಗುತ್ತದೆ. ದರಿದ್ರ ನಾರಾಯಣರ ಸೇವೆಗಾಗಿ, ಸ್ವತಂತ್ರ ಭಾರತಕ್ಕಾಗಿ ಅಹಿಂಸೆಯ ದೀಕ್ಷೆ ತೊಟ್ಟ ಗಾಂಧಿ ನಿತ್ಯ ಸಂಕಟಗಳ ನೂರಾರು ಅಗ್ನಿದಿವ್ಯಗಳನ್ನು ಹಾಯ್ದು ಬಂದರು. ಮನುಷ್ಯ ಕುಲದ ಘನತೆ ಗೌರವಕ್ಕಾಗಿ ನಾಡ ನಿಷ್ಠೆಗಾಗಿ, ನಂಬಿದ ಆದರ್ಶಗಳಿಗಾಗಿ ಸೋಲು ಸತ್ವಪರೀಕ್ಷೆಗಳ ಸಾಣೆಕಲ್ಲಿನಲ್ಲಿ ತಮ್ಮನ್ನು ನಿತ್ಯವೂ ತೆಯ್ದುಕೊಳ್ಳುತ್ತ ಆಶಾವಾದಿಯಾಗಿ ಮುನ್ನಡೆದು ಆತ್ಮಶ್ರೀಯನ್ನು 'ಆಗದಿದ್ದರೂ ಕಾಲಕಾಲಕ್ಕೆ ಮಳೆ ಬಾರದಿದ್ದರೂ ಬೆಳೆ ಬೆವರು ಸುರಿಸುತ ಜೀವಸತ್ವವಾದನು ಕಪ್ಪು ನೆಲದಲ್ಲಿ ನಿಂತಿರುವ ತೆನೆಯ ಧ್ವಜಕೆ' ಎನ್ನುವ ಅಪೂರ್ವ ಶ್ರದ್ಧೆಯೊಂದಿಗೆ ಎತ್ತಿಹಿಡಿಯುತ್ತದೆ. ಹೀಗೆ ಗಾಂಧೀಜಿ ವ್ಯಕ್ತಿತ್ವವನ್ನು ಅವರ ಹೋರಾಟದ ಹೆಜ್ಜೆಗಳಲ್ಲಿಯೇ ಶೋಧಿಸುವ ನಿರುದ್ವಿಗ್ನ ನಿರಾಡಂಬರ ಕಾವ್ಯ ಶೈಲಿಯು ಗಾಂಧಿ ವ್ಯಕ್ತಿತ್ವದ ಪ್ರಧಾನ ಲಯಗಳನ್ನು ಓದುಗರ ಚಿತ್ತಭಿತ್ತಿಯಲ್ಲಿ ಮೂರ್ತಗೊಳಿಸುತ್ತದೆ.

# ೩೯. ದೀಪಾವಳಿ

೧

ಅಲ್ಲಲ್ಲಿ ಹುಲ್ಲು ಹಳದಿಗೆ ತಿರುಗಿ ಗದ್ದೆಯಲಿ ನೆಲ್ಲು ತೆನೆಹಾಯ್ದು
ಗಾಳಿಯುದ್ದಕು ಬಾಗಿ ಬಾಚುತ್ತ ಬಿಸಿಲಿನಲಿ ಮಿರಿ ಮಿರಿ ಮಿಂಚಿ;
ಆಕಾಶದಲ್ಲಿ ಸ್ವಾತಿಯ ಮೋಡ ಸುರಿದು ಹಿಂಜರಿದು
ಕ್ಷಿತಿಜದಂಚಿನಲಿ ಸಂಜೆಯ ಸೂರ್ಯ ಝುಗಝುಗಿಸಿ
ಅಲ್ಲೊಂದು ಇಲ್ಲೊಂದು ಚಿಕ್ಕೆ ಕುತೂಹಲದಿ ಕಣ್ಣು ತೆರೆದಾಗ
ಬೆಳ್ಳಗೆ ಮಂಜು ಮುಸುಕಿನಲಿ ಬಂತು ದೀಪಾವಳಿ.

೨

ಗೋದಿ ಸಸಿ ನಾಟಿ, ಜೋಳದ ತುಂಬುತೆನೆ ತಲೆದೂಗಿ
ಹುಚ್ಚೆಳ್ಳು ಹಚ್ಚಹಸುರಿಗೆ ಅಚ್ಚಬಂಗಾರದಂಚಾಗಿ;
ದನಕರುಗಳೆಲ್ಲ ಮೇದು ಮೆಲುಕಾಡಿಸುತ ಬರುವಾಗ
ಕೆರೆಯಂಚಿನಲ್ಲಿ ಸಾಲಾಗಿ ಕುಳಿತ ಬೆಳ್ಳಕ್ಕಿ ಬಾನಿಗೆ ಹಾರಿ,
ನಸುಗಪ್ಪಿನಲ್ಲಿ ತೊಗಲಬಾವಲಿ ಹಿಂಡ ಹಿಂಬಾಲಿಸುತ
ಮನೆಮನೆಯ ಶಿವನಬುಟ್ಟಿಗೆ ಇಳಿದು ಬಂತು ದೀಪಾವಳಿ.

೩

ನೆಲದ ಹುಲ್ಲಿನ ಮೇಲೆ ಮುಗಿಲ ಮಲ್ಲಿಗೆ ಜಗುಳಿ,
ಹೊನ್ನವರೆ, ಅಡಕೆ, ಗೊರಟಿಗೆ, ಚೆಂಡು ದುಂಡಗೆ ಅರಳಿ
ಬೇಲಿಗುಂಟ ಬಿಳಿ, ಹಳದಿ, ಜಾಂಬಳಿ, ನೀಲಿ ಹೂಗಳ ಮೇಲೆ
ಕುಳಿತ ಪಾತರಗಿತ್ತಿ ಬೆಂಬತ್ತಿ ಮಕ್ಕಳಾಡಿರಲು,
ನೂರು ಸಲ ಗುಬ್ಬಿ ಗೂಡಿಗೆ ಮರಳಿ ಗುಟುಕಿಡಲು
ಅಕ್ಕರತೆಯಲಿ ಮರಿಗೆ ರೆಕ್ಕೆ ಮೂಡಿಸಿ ಬಂತು ದೀಪಾವಳಿ.

೪
ಸಂದಿಗೊಂದಿಯ ಕಸ-ಧೂಳಿ-ಜೊಂಡಿಗ-ಜೇಡಬಲೆ ಗುಡಿಸಿ
ಸುಣ್ಣಬಣ್ಣವ ಹಚ್ಚಿ, ಹಳೆಯ ತಲೆದಿಂಬಿಗೆ ಹೊಸ ಚೀಲ ತೊಡಿಸಿ,
ಹರಕು -ಮುರುಕು ಸಾಮಾನುಗಳ ಗಂಟು ಕಟ್ಟಿ ಮೂಲೆಗೆ ಇರಿಸಿ,
ಸ್ನೇಹಿತರ ಬಳಗಕ್ಕೆ ರೇಡಿಮೇಡ್ ಶುಭಾಶಯವ ಕಳಿಸಿ,
ವಿಶೇಷ ಸಂಚಿಕೆಯ ಮುಖಪುಟದಲ್ಲಿ ಹೆಣ್ಣಿನ ವಿಚಿತ್ರ ಭಂಗಿ ಕಂಡಾಗ
ಮುಸಿ ಮುಸಿ ನಕ್ಕು, ಇದ್ದುದರಲ್ಲೆ ಖುಷಿಯಾಗಿ ಬಂತು ದೀಪಾವಳಿ.

೫
ಹೊಲ, ಗದ್ದೆ, ಗಿರಣಿ, ಕಚೇರಿ ಕಾರ್ಖಾನೆಯಲಿ ಬೆವರು ಸುರಿಸಿ,
ಸಂಪು, ಹರತಾಳ, ಕೊಲೆ ಸುಲಿಗೆ, ಅಪಘಾತ ರಕ್ತಕುಂಕುಮವಿರಿಸಿ,
ವಿಧಾನಸಭೆಯ ವಿಧಿಯಿರದ ಗೊಂದಲದೊಳಗೆ ಸಿಕ್ಕು ಪಾರಾಗಿ
ಪಕ್ಷಾಂತರಕ್ಕೆ ಮನಸೋಲದೆ ತನ್ನ ಹಾದಿಯ ತಾನು ಹಿಡಿದು -
ಕಲ್ಲಿನೇಟಿಗೆ ಎಲ್ಲ ವಿದ್ಯುದ್ದೀಪ ಒಡೆದು ಚೂರಾಗಿರಲು
ಹಣತೆಗಳ ಹುಡುಹುಡುಕಿಕೊಂಡು ಬಂತು ದೀಪಾವಳಿ.

೬
ಹಲವಾರು ಸಲ ಮಾಮನಮನೆಗೆ ಬಂದ ಅಳಿಯನಂತೆ
ಭೆಟ್ಟಿಯಾದಾಗೊಮ್ಮೆ 'ಚಹ ಕುಡಿಸಪಾ' ಎನುವ ಗೆಳೆಯನಂತೆ
ದಿನದಿನವು ಪತ್ರಿಕೆಯಲ್ಲಿ ಬರುವ ವಾಚಕರ ಪತ್ರಗಳ ದೂರಿನಂತೆ
ಹೊಸ್ತಿಲ ತೊಳೆವ ಮೊದಲೆ ಬಾಗಿಲಲಿ ಸಪ್ಪಳಾಗುವ ಹಾಲಿನ ಬಾಟ್ಲಿಯಂತೆ
ಬಹುದಿನದ ಮೇಲೆ ಬಂದ ಕವನ ಸಂಕಲನದ ತಿದ್ದಿದೆರಡನೆಯ ಆವೃತ್ತಿಯಂತೆ
ಬರುವ ಕಾಲಕ್ಕೆ ಬಂತು ದೀಪಾವಳಿ.

'ನಗರದಲ್ಲಿ ನೆರಳು' (೧೯೭೪) ಸಂಕಲನದಲ್ಲಿ ಸಂಗ್ರಹಗೊಂಡಿರುವ 'ದೀಪಾವಳಿ' ಚೆನ್ನವೀರ ಕಣವಿಯವರ ಉತ್ತಮ ಕವನಗಳಲ್ಲೊಂದು. ಭಾರತೀಯ ಹಬ್ಬಗಳಲ್ಲೊಂದಾದ ದೀಪಾವಳಿ ಸಂದರ್ಭದ ಭಾವಸ್ಪಂದನಗಳು ಈ ಕವಿತೆಯ ವಿಶೇಷತೆ. ಸಾಮಾಜಿಕ, ಧಾರ್ಮಿಕ ಅಥವಾ ರಾಜಕೀಯವೆನ್ನಬಹುದಾದ ಯಾವುದೇ ವಲಯದ ಗಂಭೀರ ಆಶಯ ಕವಿತೆಗಿಲ್ಲವಾದರೂ ದೀಪಾವಳಿ ಹಬ್ಬದ ಆಗಮನದ ನೈಜ ನಿರೂಪಣೆಯೇ ಅಪರೂಪದ್ದಾಗಿದೆ; ವಸ್ತುನಿಷ್ಠವಾಗಿದೆ.

ಪ್ರಕೃತಿ-ನಿರೂಪಣೆಯೊಂದಿಗೆ ಕವನ ಮೊದಲಾಗುತ್ತದೆ. ವರ್ಷಾಕಾಲ ಹಿಮ್ಮೆಟ್ಟಿ ಚಳಿಗಾಲ ಆರಂಭವಾಗುವ ಸಂಧಿಕಾಲದಲ್ಲಿ ದೀಪಾವಳಿಯ ಆಗಮನವಾಗುತ್ತದೆ. ಈ ಕಾಲದ ನಿಸರ್ಗ

ಬದಲಾವಣೆಯ ಶಬ್ದ-ಚಿತ್ರಗಳು ಕವನದ ಮೊದಲರ್ಧ ಭಾಗವನ್ನು ವ್ಯಾಪಿಸಿವೆ. ಅಲ್ಲಲ್ಲಿ ಹುಲ್ಲು ಹಳದಿಗೆ ತಿರುಗುವುದು, ಗದ್ದೆಯಲಿ ತೆನೆ ಹಾಯ್ದ ನೆಲ್ಲು ಗಾಳಿಯುದ್ದಕು ಬಾಗಿ ಬಿಸಿನಲಿ ಮಿರಿ ಮಿರಿ ಮಿಂಚುವುದು, ಸ್ವಾತಿಯ ಮೋಡ ಸುರಿದು ಹಿಂಜರಿಯುವುದು, ಬೆಳ್ಳಗೆ ಮಂಜು ಮುಸುಕುವುದು- ಇವೆಲ್ಲ ಕಾಲದ ಪರಿಕ್ರಮದಲ್ಲಿ ತೋರುವ ದೃಶ್ಯಾವಳಿಗಳು, ಗೋದಿಯ ಸಸಿ, ಜೋಳದ ತುಂಬುತೆನೆ, ಹಚ್ಚ ಹಸುರಿನ ಹುಚ್ಚೆಳ್ಳು-ದೀಪಾವಳಿಯ ಆಸುಪಾಸಿನ ಪ್ರಕೃತಿ-ಬಿಂಬಗಳು. ಜೊತೆಗೇ ತೋರುವ ಮಲ್ಲಿಗೆ, ಹೊನ್ನವರೆ, ಅಡಕೆ, ಗೊರಟಿಗೆ, ಚೆಂಡು ಹೂಗಳು, ಬೇಲಿಯ ಗುಂಟ ಅರಳಿರುವ ಬಿಳಿ, ಹಳದಿ, ಕೆಂಪು, ಜಾಂಬಳಿ, ನೀಲಿ ಹೂಗಳು ಅಂದವನ್ನು ಹೆಚ್ಚಿಸಿವೆ.

ಚೆನ್ನವೀರ ಕಣವಿಯವರ ಪ್ರಕೃತಿ-ವರ್ಣನೆಯಲ್ಲಿ ಎಂದೂ ದುಂದುಗಾರಿಕೆಯಿಲ್ಲ. ಕವಿತೆಯ ವಸ್ತು -ದಾಟಿ ಯಾವುದೇ ಇರಲಿ; ಪ್ರಸಕ್ತಕ್ಕೆ ಪೂರಕವಾಗುವಷ್ಟು ಹಿತಮಿತವಾದ ರೀತಿಯಲ್ಲಿ ಸಂಜೆ, ಮುಂಜಾವು, ಋತುಮಾನಗಳನ್ನು ಅನ್ವಯಿಸಿಕೊಳ್ಳುವುದು ಕಣವಿಯವರ ವಿಶಿಷ್ಟತೆ. ಕಣವಿಯವರ ಇಡೀ ಕಾವ್ಯದಲ್ಲಿ ಅವೇ ಅವೇ ಹೂವು, ಬಳ್ಳಿಗಳು ಪುನರಾವರ್ತನೆಗೊಂಡಿರಬಹುದು. ಆದರೆ ಒಂದೊಂದೇ ಕವನದ ಪರಿಭಾವನೆಯಲ್ಲಿ ಪ್ರಾಕೃತಿಕ ಅಂಶಗಳು ಸಂಗತವಾಗಿಯೇ ತೋರುತ್ತವೆ. ಇಂಥಲ್ಲಿ ಆಗೀಗ ತೋರುವ ಮಧುರಭಾವದ ಎಳೆಗಳು ಕಾವ್ಯವನ್ನು ಕುತನಿಯಾಗಿಸುತ್ತವೆ. ದೀಪಾವಳಿಯ ಸಂಭ್ರಮಕ್ಕೆ ಪೂರ್ವಭಾವಿಯಾಗಿ ಅನುಕ್ರಮಗೊಳ್ಳುವ ವರ್ಣನೆಯಲ್ಲಿಯೂ ಇಂಥ ಎಳೆಗಳಿವೆ. ಕ್ಷಿತಿಜದಂಚಿನಲಿ ಸಂಜೆಯ ಸೂರ್ಯ ಝುಗಝುಗಿಸಿ ಅಲ್ಲೊಂದು ಇಲ್ಲೊಂದು ಚಿಕ್ಕೆ ಕುತೂಹಲದಿ ಕಣ್ಣು ತೆರೆಯುವಷ್ಟರಲ್ಲಿ, ತಾಯಿ ಗುಬ್ಬಿಯ ಗುಟುಕಿನ ಅಕ್ಕರತೆಗೆ ಮರಿಗೆ ರೆಕ್ಕೆ ಮೂಡುವಲ್ಲಿ ಅರಳುವ ಭಾವಸೂಕ್ಷ್ಮತೆ ಕಣವಿಯಂಥ ಭಾವ-ಜೀವಿಗೆ ಮಾತ್ರ ದಕ್ಕುವಂಥದು. ಬಹಳಷ್ಟು ಸಲ ಕವಿಯಂತೆ ಕವಿತೆ, ಲೋಕ ವ್ಯಾಪಾರದಿಂದ ಕಾವ್ಯಲೋಕಕ್ಕೆ ಶಬ್ದಾರ್ಥಗಳನ್ನು ಸಂವಹನಿಸಿಕೊಳ್ಳುವ ಬಗೆಯಲ್ಲಿ ಕಣವಿಯವರ ಮೃದುವಾದ ವ್ಯಕ್ತಿತ್ವ ಇಂಥ ಕುಸುರಿ ಕೆಲಸ ಮಾಡುತ್ತದೆ. ಅವರ ನೂರಾರು ಕವನಗಳಲ್ಲಿ ಈ ರೀತಿಯ ನವಿರು ಭಾವದ ದೃಶ್ಯಗಳನ್ನನೇಕ ಕಾಣಬಹುದು.

ಕವಿತೆಗೆ ಗ್ರಾಮೀಣ, ನಗರ ಎರಡೂ ಪ್ರದೇಶಗಳ ವ್ಯಾಪ್ತಿಯಿದೆ. ಮೊದಮೊದಲು ಗ್ರಾಮಪರಿಸರದ ಭಾವುಕ ನೆಲೆಯಲ್ಲಿದ್ದ ಕವಿತೆ ಕ್ರಮೇಣ ನಗರ ಜೀವನದ ಆಧುನಿಕ ಸಂವೇದನೆಗಳನ್ನು ಮೈಗೂಡಿಸಿಕೊಳ್ಳುತ್ತದೆ. ಈ ಹಂತದಲ್ಲಿ ಕಾವ್ಯ ಕ್ರಿಯಾಶೀಲವಾಗುತ್ತ ಹಳ್ಳಿಯ ಹಬ್ಬದ ಸಂಪ್ರದಾಯ, ನಾಗರಿಕ ಲೋಕದ ಭ್ರಾಮಕ ನಡುವಳಿಕೆಗಳೆಲ್ಲ ಅನಾವರಣಗೊಳ್ಳುತ್ತವೆ. ದೀಪಾವಳಿಗೊಮ್ಮೆ ಸಂದಿಗೊಂದಿ ಕಸ-ಧೂಳಿ ಗುಡಿಸಿ ಗೋಡೆಗಳಿಗೆ ಸುಣ್ಣ ಬಣ್ಣ ಹಚ್ಚಿ - ಹೊಸದೆನಿಸುವುದು. ಸ್ನೇಹಿತರಿಗೆಲ್ಲ ರೆಡಿಮೇಡ್ ಶುಭಾಶಯ ಕಳಿಸುವುದು, ದೀಪಾವಳಿ ವಿಶೇಷ ಸಂಚಿಕೆಯ ಮುಖಪುಟದಲ್ಲಿ ಹೆಣ್ಣಿನ ವಿಚಿತ್ರ ಭಂಗಿಗೆ ಮುಸಿಮುಸಿ ನಗುವುದು-ಇವೆಲ್ಲ ಹಳೆ - ಹೊಸ ಭಾವನೆಗಳೊಂದಿಗೆ ತಳುಕು ಹಾಕಿಕೊಳ್ಳುವ ದೀಪಾವಳಿ ಸಂದರ್ಭದ ವಿವಿಧ ಮುಖಗಳು.

ಇಂಥ ಅತ್ಯಂತ ಸರಳ. ಆಹ್ಲಾದಕರ ಬದುಕಿಗೆ ವರ್ತಮಾನದ ಅವಘಡಗಳು ಮುಖಾಮುಖಿಯಾಗಿ ನಿಲ್ಲುತ್ತವೆ.

**ಹೊಲ. ಗದ್ದೆ, ಗಿರಣಿ, ಕಚೇರಿ ಕಾರ್ಖಾನೆಯಲಿ ಬೆವರು ಸುರಿಸಿ,**
**ಸಂಪು, ಹರತಾಳ, ಕೊಲೆ, ಸುಲಿಗೆ, ಅಪಘಾತ, ರಕ್ತಕುಂಕುಮವಿರಿಸಿ,**
**ವಿಧಾನಸಭೆಯ ವಿಧಿಯಿರದ ಗೊಂದಲದೊಳಗೆ ಸಿಕ್ಕು ಪಾರಾಗಿ**
**ಪಕ್ಷಾಂತರಕ್ಕೆ ಮನಸೋಲದೆ ತನ್ನ ಹಾದಿಯ ತಾನು ಹಿಡಿದು -**
**ಕಲ್ಲಿನೇಟಿಗೆ ಎಲ್ಲ ವಿದ್ಯುದ್ದೀಪ ಒಡೆದು ಚೂರಾಗಿರಲು**
**ಹಣತೆಗಳ ಹುಡುಹುಡುಕಿಕೊಂಡು ಬಂತು ದೀಪಾವಳಿ.**

ಅತ್ಯಂತ ಸಂಪ್ರದಾಯಬದ್ಧ ಭಾರತದಂಥ ದೇಶದಲ್ಲಿ ದೀಪಾವಳಿಯಂಥ ಹಬ್ಬಗಳು ಎಷ್ಟೊಂದು ಚೇತೋಹಾರಿಯಾಗಬೇಕು. ಆದರೆ ನಿತ್ಯವೂ ನಡೆಯುವ ಸಾಮಾಜಿಕ, ರಾಜಕೀಯದ ವಿಕಾರ ಮುಖದ ವಿದ್ಯಮಾನಗಳು ಹಬ್ಬದ ಸುಖ-ಸಂತೋಷಗಳನ್ನು ಅಸ್ಥಿರಗೊಳಿಸುತ್ತವೆ. ದೀಪಾವಳಿ ಬದುಕಿಗೆ ಬೆಳಕು ತುಂಬಿರುವ ಬೆಳಕಿನ ಹಬ್ಬ. ಆದರೆ ಈ ಬೆಳಕಿನ ಮೂಲಕ್ಕೆ ಪೆಟ್ಟುಬಿದ್ದು ಬೀದಿ ಬೀದಿಗಳಲ್ಲಿಯ ವಿದ್ಯುದ್ದೀಪಗಳೆಲ್ಲ ಒಡೆಯುತ್ತವೆ. ಸಾಮುದಾಯಿಕ ಬದುಕು ಕತ್ತಲೆಯಿಂದ ಬೆಳಕಿಗೆ ಸಾಗುವ ಬದಲು ಬೆಳಕಿನಿಂದ ಕತ್ತಲೆಗೆ ಸಾಗುವ ವಿಷಣ್ಣತೆ ಕವಿತೆಯನ್ನು ಆವರಿಸುತ್ತದೆ. ಕವಿಯೇನೋ ಆಶಾವಾದಿಯಾಗಿ ಹಣತೆಗಳನ್ನು ಹುಡುಹುಡುಕಿಕೊಂಡು ಬಂತು ದೀಪಾವಳಿ ಎನ್ನುತ್ತಾನೆ. ಆದರೆ ವಾಸ್ತವ ಇನ್ನೂ ಕ್ರೂರವಾಗಿದೆ.

ಎಲ್ಲಾ ಕಾಲಕ್ಕೂ ಸಾಮಾಜಿಕ ನ್ಯೂನತೆಗಳು, ಅರೆಕೊರೆಗಳು ಇದ್ದವುಗಳೇ. ಆದರೆ ಇತ್ತೀಚಿನ ದಿನಗಳಲ್ಲಿ ಹೆಚ್ಚಿರುವ ಕ್ಷೋಭೆ, ತಲ್ಲಣಗಳು ಪ್ರಜ್ಞಾವಂತರ ನಿದ್ದೆಗೆಡಿಸಿವೆ. ಮತೀಯ ಗಲಭೆಗಳು ರಾಜಕೀಯ ವಿದ್ರೋಹಗಳು ಮನುಷ್ಯ ಸಂಬಂಧಗಳನ್ನು ಘಾಸಿಗೊಳಿಸಿವೆ. ಕವಿಗಳು ಕಲಾವಿದರು ಪ್ರೀತಿ, ಶಾಂತಿಯೆಂದು ಬೆಳಕಿನ ಹಣತೆಯನ್ನು ಆಶಿಸುತ್ತಾರೆ. ಆದರೆ ವಿದ್ರೋಹಿಗಳು ಮಾತ್ರ ವ್ಯವಸ್ಥೆಯ ಮೇಲೆ ಕಪ್ಪು ಗುಡಾರನ್ನು ಎಳೆಯುತ್ತಲೇ ಬಂದಿದ್ದಾರೆ. ಮೂವತ್ತು ವರ್ಷಗಳ ಹಿಂದೆ ಬರೆಯಲ್ಪಟ್ಟಿರುವ ಈ ಕವಿತೆ ಅಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವೆನಿಸಿದೆ. ಇಂಥ ಎಲ್ಲ ವೈರುಧ್ಯ, ಏಕತಾನಗಳಿಂದಾಗಿಯೇ ದೀಪಾವಳಿಯ ಸಂತೋಷಕ್ಕೆ ಸಂಭ್ರಮದ ಲೇಪವಿಲ್ಲ. ಆದ್ದರಿಂದ ಕವನದ ಕೊನೆಯಲ್ಲಿ 'ಬರುವ ಕಾಲಕ್ಕೆ ಬಂತು ದೀಪಾವಳಿ' ಎಂದು ಭಾವನೆಗಳೆಲ್ಲ ತಟಸ್ಥವಾಗಿಬಿಡುವುದು ಸಕಾರಣವಾಗಿಯೇ ಇದೆ.

ದೀಪಾವಳಿಯಂಥ ವಸ್ತುವಿನ ಅಭಿವ್ಯಕ್ತಿಗೆ ಅನೇಕ ಆಯಾಮಗಳುಂಟು. ವಿಶೇಷವಾಗಿ ದೀಪಾವಳಿಯ ಸಡಗರ, ಸಂಭ್ರಮಗಳು ಕಣ್ಣು ಕುಕ್ಕುತ್ತವೆ. ಆದರೆ ಇಲ್ಲಿ ಕವಿ ಆಯ್ಕೆ ಮಾಡಿಕೊಂಡಿರುವುದು ದೀಪಾವಳಿಯ ಸಡಗರವನ್ನಲ್ಲ; ದೀಪಾವಳಿಗೆ ಜನಸಮುದಾಯ ಸಜ್ಜುಗೊಳ್ಳುವ ಬಗೆಯನ್ನು. ದೀಪಾವಳಿ ದೊಡ್ಡಹಬ್ಬ; ನಮ್ಮ ಪರಂಪರಾಗತ ಸಂಪ್ರದಾಯ,

ಶ್ರದ್ಧೆಗಳನ್ನು ಚೇತೋಹಾರಿ ರೀತಿಯಲ್ಲಿ ಪ್ರತಿಬಿಂಬಿಸುವಂಥದು- ಅದು ಒಂದು ಮುಖ. ಆದರೆ ಸಮುದಾಯದ ಮಧ್ಯದಿಂದಲೇ ಹೊರಡುವ ಅನೇಕ ಅವಿಚಾರ ನಡವಳಿಕೆಗಳು ಈ ಜೀವನೋತ್ಸಾಹವನ್ನು ಹಾಳುಗೆಡವುತ್ತಿರುವುದು ಇನ್ನೊಂದು ಮುಖ. ಹೀಗೆ ಎರಡೂ ಮುಖಗಳನ್ನು ಸಮೀಕರಿಸುವಲ್ಲಿ ಕವಿ ತೋರಿಸುವ ಸಂಯಮ ಮುಖ್ಯವೆನಿಸುತ್ತದೆ. ಈ ಎರಡೂ ನಿಟ್ಟಿನ ಚಿತ್ರಗಳಲ್ಲಿ ಉದ್ರೇಕವಿಲ್ಲ.

ಕವಿತೆಯ ಭಾವ ಕೊನೆಯವರೆಗೂ ಬೆಳೆಯುತ್ತ ಹೋಗುತ್ತದೆ. ಮೊದಲನೆಯ ನುಡಿ ದೀಪಾವಳಿ ಸಮಯದ ಪ್ರಕೃತಿ-ಚೆಲುವನ್ನು ಅದರ ನೈಜ ಸ್ವರೂಪದಲ್ಲಿಯೇ ಹಿಡಿದಿಟ್ಟಿದೆ. ಹೊಲಗದ್ದೆಗಳಲ್ಲಿ ತೋರುವ ಹುಲ್ಲು, ತೆನೆ, ಸಂಜೆಯ ಸೂರ್ಯ, ಬೆಳ್ಳನೆ ಮಂಜು ಏನೆಲ್ಲ ಮುದನೀಡುತ್ತವೆ. ಇದೇ ಬಗೆಯ ವರ್ಣನೆ ಎರಡನೆಯ ನುಡಿಯ ಆರಂಭದಲ್ಲಿ ಮುಂದುವರಿದರೂ ಮುಂದೆ ದನಕರುಗಳು ಮೆಲುಕಾಡಿಸುತ ಮನೆಗೆ ಬರುವಲ್ಲಿ ಹೊಲಗದ್ದೆಗಳ ಚಿತ್ರ ಕ್ರಮೇಣ ಮರೆಯಾಗುತ್ತ ಕೊನೆಯ ಚರಣದಲ್ಲಿ ಶಿವನಬುಟ್ಟಿಯ ಮುಖಾಂತರ ದೀಪಾವಳಿ ಮನೆಯ ಅಂಗಳಕ್ಕೇ ಇಳಿಯುತ್ತವೆ. ಮೂರನೆಯ ನುಡಿಯಲ್ಲಿ ಹೂವು ಪಾತರಗಿತ್ತಿಗಳೊಂದಿಗೆ ಮಕ್ಕಳಾಟ ಮೇಳೈಸಿ ಕವಿತೆ ಮನುಷ್ಯ ಲೋಕವನ್ನು ಪ್ರವೇಶಿಸುತ್ತದೆ. ನಾಲ್ಕನೆಯ ನುಡಿ ಮಾನವ ಪ್ರಪಂಚದ ಚಟುವಟಿಕೆಗಳನ್ನು ಸಹಜವಾಗಿ ತೆರೆದಿಡುತ್ತಲೇ ದೀಪಾವಳಿಯ ವಿಶೇಷತೆಯನ್ನು ಬಿಂಬಿಸುತ್ತದೆ. ನಾಲ್ಕನೆಯ ನುಡಿಯ ವಾಸ್ತವ ಮುಖದ ವಿವರಣೆ ಮರೆಯಾಗಿ ಕವನ ಹೆಚ್ಚು ಅರ್ಥವತ್ತಾಗುವುದು ಐದನೆಯ ನುಡಿಯಲ್ಲಿ. ಹೊಲಗದ್ದೆಗಳ ರೈತರ, ಗಿರಣಿಗಳ ಕಾರ್ಮಿಕರ ಬೆವರಿನ ಪ್ರಾಮಾಣಿಕತೆಯನ್ನು ಅಣಕಿಸುವಂತೆ ಕೊಲೆ, ಸುಲಿಗೆ, ರಕ್ತಪಾತಗಳು ವಿಜೃಂಭಿಸುತ್ತವೆ. ಕೊನೆಯ ನುಡಿಯ ನೈರಾಶ್ಯಭಾವ ಐದನೆಯ ನುಡಿಯ ಘಟನಾವಳಿಗಳಿಗೆ ಪ್ರತಿಕ್ರಿಯಿಸುವಂತಿದೆ. ಹೀಗೆ ಮೊದಲಿನಿಂದ ಕೊನೆಯವರೆಗೆ ತೋರುವ ಪೂರ್ವ ನಿಯೋಜಿತ ಸಂಯೋಜನೆ ಕವಿತೆಗೊಂದು ಶಿಸ್ತನ್ನು ಒದಗಿಸಿದೆ.

ನಿರಾಡಂಬರ ಶೈಲಿಯ ಅನನ್ಯತೆ ದೀಪಾವಳಿ ಕವನದ ಹೆಚ್ಚುಗಾರಿಕೆ. ಕವಿತೆಯ ಪೂರ್ವಾರ್ಧದಲ್ಲಿ ಸ್ವಭಾವೋಕ್ತಿಯ ಸಾಲುಗಳೇ ಅಧಿಕ ಪ್ರಮಾಣದಲ್ಲಿವೆ. ಉತ್ತರಾರ್ಧದಲ್ಲಿ ಸಂಕೇತ, ಪ್ರತಿಮೆ, ಉಪಮೆಗಳಿವೆಯಾದರೂ ಅವೆಲ್ಲ ಆಕೃತಿಯ ಅಭಿವ್ಯಕ್ತಿಗಳು, ಹಳೆಯ ತಲೆದಿಂಬಿಗೆ ಹೊಸ ಚೀಲ ತೊಡಿಸುವುದು, ಹಣತೆಗಳ ಹುಡುಹುಡುಕಿಕೊಂಡು ದೀಪಾವಳಿ ಬರುವುದು-ಇಂಥವೆಲ್ಲ ಕವಿಯ ಉದ್ದೇಶಿತ ವಿವರಗಳನ್ನು ಅರ್ಥವತ್ತಾಗಿಸಿವೆ. ಕೊನೆಯ ಚರಣದಲ್ಲಿ ಸಾಲಾಗಿ ಬರುವ ಉಪಮೆಗಳಂತೂ ಕವಿತೆಯನ್ನು ಹೃದ್ಯವಾಗಿಸಿವೆ. ಹಲವಾರು ಸಲ ಮಾವನ ಮನೆಗೆ ಬರುವ ಅಳಿಯ, ಭೆಟ್ಟಿಯಾದಾಗೊಮ್ಮೆ 'ಚಹಾ ಕುಡಸಪಾ' ಎನ್ನುವ ಗೆಳೆಯ, ದಿನದಿನವೂ ಪತ್ರಿಕೆಯಲ್ಲಿ ಬರುವ ದೂರುಗಳು, ಹೊಸ್ತಿಲು ತೊಳೆಯುವ ಮೊದಲೇ ಹಾಜರಾಗುವ ಹಾಲಿನ ಬಾಟ್ಲಿ, ಬಹುದಿನಗಳ ಮೇಲೆ ಬಂದ ಕವನ ಸಂಕಲನದ ತಿದ್ದಿದ ಎರಡನೆಯ ಆವೃತ್ತಿ - ಈ ಎಲ್ಲ ಉಪಮೆಗಳು ದೀಪಾವಳಿಯ ಬಗೆಗೆ ಕವಿಯಲ್ಲಿ ಬೆಳೆದಿರುವ ನಿರ್ಲಿಪ್ತತೆಯನ್ನು ಸಶಕ್ತವಾಗಿ ಅನುಮೋದಿಸುತ್ತವೆ.

ಕವಿತೆ ಮುಕ್ತ ಛಂದಸ್ಸಿನಲ್ಲಿದ್ದರೂ ಅದರ ಗೇಯಗುಣ ಆಹ್ಲಾದಕರವಾದುದು. ಬಹುತೇಕ ಚರಣಗಳಲ್ಲಿ ಪುನರಾವರ್ತನಗೊಳ್ಳುವ ಐದು ಮಾತ್ರೆಯ ಗಣಗಳು ಕವನಕ್ಕೊಂದು ಅಪೂರ್ವ ಲಯ ತುಂಬಿಕೊಟ್ಟಿವೆ. ಐದು ಮಾತ್ರೆಯ ಈ ಗಣಗಳ ಸಂಖ್ಯೆ ಪ್ರತಿ ಸಾಲಿನಲ್ಲಿ ನಿರ್ದಿಷ್ಟವಿರದಿದ್ದರೂ ಲಯದ ಜೀಕಿನ ಪರಿಣಾಮ ಗುಣುಗುಣಿಸುವಂಥದು. ಕವನದ ಪ್ರತಿ-ನುಡಿಯಲ್ಲಿ ಆರು ಚರಣಗಳವೆ. ಈ ನುಡಿಗಳ ಆರನೆಯ ಚರಣದಲ್ಲಿ ಬರುವ 'ಬಂತು ದೀಪಾವಳಿ' ಎಂಬುದು ಆರೂ ಚರಣಗಳ ಒಳಹಂದರಕ್ಕೆ ಒಂದು ಪೂರ್ಣಾರ್ಥ ಕಟ್ಟಿಕೊಡುತ್ತಿದೆ. ಇದು ಎಲ್ಲಾ ನುಡಿಗಳ ಕೊನೆಯಲ್ಲಿ ನಿಯಮಿತವಾಗಿ ಪುನರಾವರ್ತನಗೊಳ್ಳುವುದರಿಂದ ಪಲ್ಲವಿಯಂತೆ ಗೇಯತೆಯನ್ನು ಮತ್ತೆ ಮತ್ತೆ ಸುಖಿಸುವಂತೆ ಮಾಡುತ್ತದೆ. ಸಂಗಡವೇ ಅರ್ಥದ ದೃಷ್ಟಿಯಿಂದಲೂ "... ಬಂತು ದೀಪಾವಳಿ" ಇಡೀ ಕವನಕ್ಕೊಂದು ಸಾವಯವ ಶಿಲ್ಪವನ್ನು ಒದಗಿಸಿದೆ.

ಶ್ರೀರಾಮ ಇಟ್ಟಣ್ಣವರ

# ೪೦. ಚೈತನ್ಯ ತ್ರಿಕೂಟ *

*ಪೂರ್ವದ ಅಪೂರ್ವ ಸಂಸ್ಕೃತಿಯ ಗೋಪುರವನೆ-
ರಡು ತೋಳಿನಲ್ಲಿ ಎತ್ತಿ, ಇತಿಹಾಸದಿತಿಮಿತಿಯ
ಹಾಯ್ದು, ಕಾಲದೊಡಲಿನ ಬಾಳ ಸಂಘರ್ಷಣೆಯ
ಬೆನಕವಾಗುವ ಕನಕ, ವಜ್ರ, ವೈಢೂರ್ಯ, ತೆರೆ-
ಮರೆಯ ಮಳಲ ಹೊರಚೆಲ್ಲಿ, ಇಲ್ಲಿ ಪಶ್ಚಿಮಕೆ
ಒಲಿದಳು ತುಂಗಭದ್ರೆ; ಉತ್ತುಂಗ ಶಿಲ್ಪದಲಿ
ಮುಕ್ತೀಶ್ವರನ ಪೂಜೆ, ವೀರಭದ್ರನ ಓಜೆ
ಚೌಡಯ್ಯ ಹುಟ್ಟು ಹಾಕುವನು ಎರಡೂ ದಡಕೆ.
ನೂತನ ಪುರಾತನಕೆ ತೇರನೆಳೆಯುವ ದಾರಿ
ತೆರೆದು, ಸಂಕ್ರಾಂತಿ ಸಂಭ್ರಮದಿ ಹಳ್ಳಿ ಒಡಮುರಿದೆದ್ದು
ದುಡಿದು, ಶಿವದೇವರಿಗೆ ಹಡದಿ ಹಾಸಿ,
ಸಂಜೆಗೆ ದೀಪ ಹಚ್ಚುವುದವರ ಹೆಸರು ಹೇಳಿ.
ಇವರೆ ಸುಳಿವ ಶಾಸನ, ತಿಳಿವ ಹರಡುತ ಬಾಳಿ-
ಗುತ್ಸಾಹ ತುಂಬುವರು: ಎಲ್ಲರ ಕುಶಲ ಕೇಳಿ.

ಸಮಕಾಲೀನತೆಯ ಅರಿವಿನಾಚೆಗೆ ಕಾವ್ಯ ಹೋಗಿ ಯೋಚಿಸಿರುವುದು ಅಪರೂಪ. ಅಂಥ ಒಂದು ಅಪರೂಪದ ಕವಿತೆ ಕಣವಿಯರ 'ನಗರದಲ್ಲಿ ನೆರಳು' ಸಂಗ್ರಹಲ್ಲಿದೆ. ಅದು 'ಚೈತನ್ಯ ತ್ರಿಕೂಟ' ಎಂಬ ಒಂದು ಸುನೀತ.

ತುಂಗಭದ್ರೆ ಚೌಡಯ್ಯ ದಾನಾಪುರ ಮತ್ತು ಶಿವದೇವರು ಇವು ಮೂರು ಕೂಡಿಕೊಂಡು 'ಚೈತನ್ಯ ತ್ರಿಕೂಟ'ವಾಗಿವೆ. ಈ ಕವಿತೆಯ ವಸ್ತು ಯಾವುದೆಂದರೆ ಸಂಸ್ಕೃತಿಯ ತಾಳಿಕೆ. 'ಕಾಲದೊಡಲಿನ

* ತುಂಗಭದ್ರೆ -ಚೌಡಯ್ಯ ದಾನಾಪುರ -ಶಿವದೇವರು

ಬಾಳ ಸಂಘರ್ಷಣೆಯ ಬೆನಕವಾಗುವ ಕನಕ, ವಜ್ರ, ವೈಢೂರ್ಯ, ತೆರೆಮರೆಯ ಮಳಲ ಹೊರಚೆಲ್ಲಿ, ಇಲ್ಲಿ ಪಶ್ಚಿಮಕ್ಕೆ ಒಲಿದಳು ತುಂಗಭದ್ರೆ.' ಧರ್ಮ ಮತ್ತು ಸಂಸ್ಕೃತಿಗಳಿಗೆ ಒಂದು ಅಧಿಷ್ಠಾನ ಬೇಕು. ಅದನ್ನು ಒದಗಿಸಿಕೊಟ್ಟ ನದಿ ತುಂಗಭಗ್ರೆ ಮತ್ತು ಚೌಡಯ್ಯ ದಾನಪುರ. ಈ ಊರಿನ ಜನ ನದಿಯನ್ನು ಆಶ್ರಯಿಸಿ ಬೆಳೆದು ಬಂದವರು. ನೀರು ಮತ್ತು ನೆಲ ಒಂದಕ್ಕೊಂದು ಆಶ್ರಯವಿತ್ತವು. ಅಲ್ಲಿಯ ದೇವಸ್ಥಾನಗಳು ಧರ್ಮ ಮತ್ತು ಸಂಸ್ಕೃತಿಗಳ ಕೇಂದ್ರವಾಗಿ ಇಂದಿಗೂ ಅವುಗಳ ನೆನಪನ್ನು ಉಳಿಸಿಕೊಂಡು ಬಂದಿವೆ. ನದಿ, ಊರು ಮತ್ತು ದೇವಸ್ಥಾನಗಳಂತೆ ಆ ಊರ ಜನರೂ ಈ ಸಂಸ್ಕೃತಿಯ ಕೇಂದ್ರವಾಗಿ ಇಂದಿಗೂ ಅವುಗಳ ನೆನಪನ್ನು ಉಳಿಸಿಕೊಂಡು ಬಂದಿವೆ. ನದಿ, ಊರು ಮತ್ತು ದೇವಸ್ಥಾನಗಳಂತೆ ಆ ಊರ ಜನರೂ ಈ ಸಂಸ್ಕೃತಿಯ ಸಾಕಾರ ರೂಪವಾಗಿದ್ದಾರೆ. ಇಡಿಯ ಊರು ಆ ಸಂಸ್ಕೃತಿಯ ಸುಳಿವ ಶಾಸನವಾಗಿದೆ. ಇದೆಲ್ಲಕ್ಕೂ ಕಾರಣವೆಂದರೆ ಚೌಡಯ್ಯ. ಅಂಬಿಗರ ಚೌಡಯ್ಯ ಇಂದಿಗೂ ಎರಡು ದಡಗಳಿಗೆ ಹುಟ್ಟು ಹಾಕುತ್ತಾನೆ. ನೂತನ ಮತ್ತು ಪುರಾತನಗಳು ಕೂಡುವ ಬಗೆಯನ್ನು ಕುರಿತು ಇಲ್ಲಿ ಯೋಚಿಸಲಾಗುತ್ತದೆ. ಒಂದು ಹಳ್ಳಿ ಇಲ್ಲಿ ಸಂಸ್ಕೃತಿಯ ಒಂದು ಘಟಕವಾಗುತ್ತದೆ.

ಈ ಕವಿತೆಯಲ್ಲಿ ಕಾಲಪ್ರವಾಹದ ಮಾತು ಬಂದಿದೆ. ಕಾಲದೊಡಲಿನ ಬಾಳ ಸಂಘರ್ಷಣೆಯಲ್ಲಿ ಬೆನಕವಾಗುವುದು, ವಜ್ರ ವೈಢೂರ್ಯಗಳಾಗುವುದು ಸಂಸ್ಕೃತಿಯ ಅರ್ಥವನ್ನು ವಿವರಿಸುವ ಪ್ರತಿಮೆಗಳಾಗಿವೆ. ಈ ಕವಿತೆಯಲ್ಲಿ ಯಾವುದೇ ಸ್ಪಷ್ಟವಾದ ಸಂದೇಶವಿಲ್ಲ, ಆದರೆ ಆಶಯಗಳಿವೆ. ಎರಡೂ ದಡಕ್ಕೆ ಚೌಡಯ್ಯ ಹುಟ್ಟುಹಾಕುತ್ತಿದ್ದರೆ ಎರಡನೆಯ ದಡದ ಬಗ್ಗೆ ನಮ್ಮ ಕುತೂಹಲ ಕೆರಳುತ್ತದೆ. ಶಿವದೇವರಿಗೆ ಹಡದಿ ಹಾಸಿ ಪ್ರತಿ ಸಂಜೆಗೆ ಅವರ ಹೆಸರು ಹೇಳಿ ಊರವರು ದೀಪ ಹಚ್ಚುತ್ತಿರಬೇಕಾದರೆ ಅವರ ನಂಬಿಕೆಯಲ್ಲಿ ಏನೋ ಶಕ್ತಿಪೂರ್ಣವಾದದ್ದು ಇರಬೇಕು. ಕಣವಿಯವರ ಕಾವ್ಯಕ್ಕೆ ಎರಡನೆಯ ದಡದ ಬಗ್ಗೆ ಕುತೂಹಲವೇನೋ ಇದೆ. ಅದರ ಅನುಭವ ಇಲ್ಲ. 'ಎರಡು ದಡ' ಎಂಬ ಕವಿತೆಯಲ್ಲಿಯ ಈ ಸಾಲುಗಳನ್ನು ನೋಡಬೇಕು.

**....ನಿಂತಿರುವ**
**ದಂಡೆ ವಾಸ್ತವವೆನಲು ಆಚೆ ದಡ ಕಲ್ಪನೆಯೆ ? ಈಸು**
**ಬಂದರೂ ಸಲೀಸು ತಲುಪುವುವೆಂಬ ಭರವಸೆಯುಂಟೆ ?**

ಎರಡು ದಡಗಳಲ್ಲಿ ಒಂದು ವಾಸ್ತವವೆಂದರೆ ಇನ್ನೊಂದು ಕಲ್ಪನೆಯಾಗಬೇಕೆಂಬ ನಿಯಮವೇನಿಲ್ಲ. ನದಿಗೆ ಒಂದೇ ದಡ ಇರುವುದು ಪ್ರಕೃತಿ ವಿರುದ್ಧವಾದದ್ದು. ಆದರೆ ಈಸು ಬಂದರೂ ಸಲೀಸಾಗಿ ಇನ್ನೊಂದು ದಡವನ್ನು ತಲುಪಬಹುದೆಂಬ ಭರವಸೆ ಇಲ್ಲ. ಆಗಾಗ ಕಾಣುವ ಕಾಮನಬಿಲ್ಲು ಸೇತುವೆ ನಿರುಪಯುಕ್ತವಾದದ್ದು.

**ಎರಡು ದಡಗಳ ನಡುವೆ ಏಸು ಸಂಚಾರ ಮುಳು-**
**ಗೆದ್ದು ಗಾಸಿಗೊಂಡಿವೆ ಈಸುಗುಂಬಳಕಾಯಿಗಾಸೆಪಟ್ಟು;**

**ನಿದ್ದೆ ಎಚ್ಚರದ ನಡುವಣಚ್ಚರಿ ಬದುಕೆ? ಕೆದರಿದರೆ**
**ಒಂದಿಷ್ಟು ರಕ್ತ ಮಾಂಸ, ಮೂಲದಲಿ ಮೂಳೆ; ನಿನ್ನೆಗೂ**
**ನಾಳೆಗೂ, ಯುಗಯುಗದಿಂದ ಬರೆದು ಗೀಚಿದ್ದೆಲ್ಲ**
**ಹಾಳೆ? ಜೋಗಿತಿಯಾದಳಂತೆ ಮುಪ್ಪಾದ ಸೂಳೆ.**

ಎರಡು ದಡಗಳ ನಡುವಿನ ಪ್ರವಾಹವನ್ನು ದಾಟಿಕೊಂಡು ಹೋಗುವುದು ಸುಲಭವೇನಲ್ಲ. ಆದರೆ ಅದಿಲ್ಲದೆ ಈ ದಡದ ಬದುಕು ಪರಿಪೂರ್ಣವೂ ಅಲ್ಲ. ಭರವಸೆ ಮತ್ತು ಸಂಶಯಗಳ ಉಯ್ಯಾಲೆ ನಿರಂತರವಾಗಿ ತೂಗುತ್ತದೆ. ಇನ್ನು ಸಂಕಲ್ಪಶಕ್ತಿಯ ಮಾತೋ? ಮೊದಲೇ ಸಂಕಲ್ಪ ಮಾಡಿಕೊಂಡು ಹೊರಟರೆ ಸಂಕಲ್ಪಿಸಿದ್ದೇ ಕೈಗೆ ದೊರೆಯುವ ಸಂಭವವೂ ಇದೆ. "ಹಾಗಾದರೆ ಯುಗಯುಗದಿಂದ ಬರೆದು ಗೀಚಿದ್ದೆಲ್ಲ ಹಾಳೆ?: ಹಾಳೆ ಶಬ್ದದಲ್ಲಿಯ ಶ್ಲೇಷೆಯಿಂದ ಕೂಡ ಸಂಶಯ ಪರಿಹಾರವಾಗುವುದಿಲ್ಲ. ಹಾಳೆ ಹಾಳೆಯಾಗಿಯೇ ಉಳಿದರೆ ಎಲ್ಲವನ್ನೂ ಮೊದಲಿನಿಂದ ಪ್ರಾರಂಭಿಸಬೇಕಾಗುತ್ತದೆ. ಈ ಕವಿತೆಯ ಪ್ರತಿಮೆಗಳಲ್ಲಿ ಕೂಡ ಭರವಸೆಯನ್ನು ನೀಡುವ ಅಂಶವೆಂದರೆ ಪ್ರಕೃತಿಯಲ್ಲಿಯ ಪರಿವರ್ತನೆಯೊಂದೇ. ನೀರು ಭೋರ್ಗರೆದು ತಟಸ್ಥವಾಗಿ (ಮತ್ತೊಂದು ಶ್ಲೇಷೆ) ನಿಂತ ತರುಮರಗಳ ಬೇರುಗಳನ್ನು ಅಲುಗಾಡಿಸಿ ಎಲ್ಲವನ್ನೂ ಬಗ್ಗಡವಾಗಿಸಿದರೂ ಮುಂದೆ ಶರತ್ಕಾಲದ ನಿಧಿಧ್ಯಾಸದಲ್ಲಿ ಎಲ್ಲ ತಿಳಿಯಾಗುವುದೆಂಬ ಭರವಸೆ. ಕಾಯಿ ಇದ್ದದ್ದು ಹಣ್ಣಾಗುವುದು , ರಾಡಿ ಇದ್ದದ್ದು ತಿಳಿಯಾಗುವುದು ಪ್ರಕೃತಿಯ ನಿಯಮ. ಇದು ಕೂಡ ಕಾಲ ಪರಿಪಾಕ.

ಮೇಲೆ ಉದಾಹರಿಸಿದ ಎರಡು ಕವಿತೆಗಳಲ್ಲಿ ಕಾಲ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಒಂದು ವಸ್ತುವಾಗಿ ಬಂದಿದೆ. ಕಣವಿಯವರ ನಿಸರ್ಗ ಕವಿತೆಗಳಲ್ಲಿಯಂತೆ ಐತಿಹಾಸಿಕ ಕಾಲವಾಗಬಹುದು. ಆದರೆ ಕಾಲದ ಬೇಸರ ತರಿಸುವ ಯಾಂತ್ರಿಕ ಸಾತತ್ಯ ಇಲ್ಲಿಲ್ಲ. 'ದಿನಮಪಿ ರಜನೀ ಸಾಯಂಪ್ರಾತಃ ಶಿಶಿರ ವಸಂತೌ ಪುನರಾಯಾತಃ' ಇಂಥದಲ್ಲಿ ಬದಲಾವಣೆ ಕೂಡ ಯಾಂತ್ರಿಕವಾಗುತ್ತದೆ. ಕಣವಿಯವರ ಮಳೆಗಾಲದ ಕವಿತೆಗಳಲ್ಲಿ ಕೆಲವು ಸಾರೆ ಪ್ರಕೃತಿ ಕವಿಯ ಮನಃಸ್ಥಿತಿಯನ್ನು ಪ್ರತಿಬಿಂಬಿಸುವ ಕನ್ನಡಿಯಾಗುತ್ತದೆ. ಹಬ್ಬ ಹುಣ್ಣಿಮೆಗಳನ್ನು ಒಂದು ಉತ್ಸಾಹದಿಂದ ಕಂಡರೂ 'ದೀಪಾವಳಿ'ಯಂಥ ಕವಿತೆಗಳಲ್ಲಿ ಅದೇ ಹಬ್ಬ ಮನಸ್ಸಿನ ಆಳದಲ್ಲಿಯ ವಿಷಾದವನ್ನು ಕಲಕಿ ಬಿಡುತ್ತದೆ. ಯುಗಾದಿಯ ಬಗ್ಗೆ ಬರೆದ ಕವಿತೆಗಳಲ್ಲಿ ಕೂಡ ವರ್ಷದ ಪುನರಾವರ್ತನ ಕಿರಿಕಿರಿಯನ್ನುಂಟು ಮಾಡುತ್ತದೆ. ಆದರೆ 'ಚೈತನ್ಯ ತ್ರಿಕೂಟ' ಮತ್ತು 'ಎರಡು ದಡ' ಕವಿತೆಗಳಲ್ಲಿ ಮಾತ್ರ ಕಾಲತತ್ವ ರೂಪಾಂತರ ಹೊಂದುವ ಹವಣಿಕೆಯಲ್ಲಿದೆ. ಚೌಡಯ್ಯದಾನಪುರದಲ್ಲಿ ಅಂಬಿಗರ ಚೌಡಯ್ಯನ ಕಾಲದಿಂದ ಇಲ್ಲಿಯವರೆಗೆ ಯಾವ ಬದಲಾವಣೆಯೂ ಆದಂತಿಲ್ಲ. ಆದರೂ ಜಾತ್ರೆಯ ಸಂಭ್ರಮ ಅದೇ ರೀತಿಯಲ್ಲಿ ನಡೆದಿದೆ. ಸಂಕ್ರಾಂತಿಯ ಹಬ್ಬದಂದು ಶಿವದೇವರಿಗೆ ಹಡದಿ ಹಾಸಿ ಜಾತ್ರೆಯ ಸಂಭ್ರಮದಲ್ಲಿ ಮೈಮರೆಯುವದೆಂದರೆ ಕಾಲದ ಯಾಂತ್ರಿಕತೆಯನ್ನು

ಕಾಲದ ಸೃಜನಶೀಲತೆಯಲ್ಲಿ ಬೆನಕವಾಗಿ, ಕನಕ, ವಜ್ರ, ವೈಢೂರ್ಯವಾಗುವುದೆಂದರೂ ಅದೇ ಆಗಿದೆ. 'ಎರಡು ದಡ' ಕವಿತೆಯಲ್ಲಿ ವಾಸ್ತವದ ದಂಡೆಯ ಮೇಲೆ ನಿಂತುಕೊಂಡೇ ಆಚೆಯ ದಡದಲ್ಲಿಯ ತೋಪು ತೋಟಗಳಲ್ಲಿ ಕೋಗಿಲೆಯ ದನಿ ಕೇಳುವುದೆಂದರೂ ಅದೇ ಆಗಿದೆ.

'ಚೈತನ್ಯ ತ್ರಿಕೂಟ'ದಲ್ಲಿ 'ಇತಿಹಾಸದಿತಿಮಿತಿಯ ಹಾಯ್ದು' ಎಂಬ ಮಾತಿದೆ. ಇತಿಹಾಸಕ್ಕೆ ಇತಿಮಿತಿಗಳಿವೆ ಎಂಬ ಮಾತನ್ನು ಒಪ್ಪಿಕೊಳ್ಳುವುದು ಕೂಡ ದೊಡ್ಡ ಸಂಗತಿಯಾಗಿದೆ. ಇತಿಹಾಸದ ಸಾತತ್ಯವನ್ನು ಅನುಸರಿಸುತ್ತಲೇ ಹೋದರೆ ಕಾಲದ ವ್ಯರ್ಥತೆಯನ್ನು ಅನುಭವಿಸಿದಂತೆ ಪ್ರಾಕೃತಿಕ ಕಾಲಕ್ಕೆ ಕೂಡ ನಾವು ಕೊಟ್ಟರೆ ಮಾತ್ರ ಅರ್ಥವಿದೆ. ಐತಿಹಾಸಿಕ ಕಾಲಕ್ಕೆ ಅದರದೇ ಆದ ಒಂದು ಅರ್ಥವಿದೆ. ಮನುಷ್ಯನ ಪುರುಷಾರ್ಥಗಳ ನಿರ್ಮಾಣಕ್ಕೆಂದೇ ಇತಿಹಾಸದ ಸೃಷ್ಟಿಯಾಗುತ್ತದೆ. ಆದರೆ ಇತಿಹಾಸದ ಅರ್ಥ ನಿರ್ಘೃಣವಾದದ್ದು. ಮನುಷ್ಯನಿಂದಲೇ ನಿರ್ಮಿತವಾದ ಇತಿಹಾಸ ತನ್ನ ನಿಯಮಗಳನ್ನು ಕಟ್ಟಿಕೊಂಡು ಸ್ವತಂತ್ರವಾಗಿರುತ್ತದೆ. ಅದರ ಅರ್ಥವನ್ನು ಮನುಷ್ಯ ಅನುಭವಿಸಿಯೇ ತೀರಬೇಕಾಗಿರುತ್ತದೆ. ರಾಜಕೀಯ ಇತಿಹಾಸದಲ್ಲಂತೂ ಇದು ಹೆಚ್ಚು ನಿರ್ದಯವಾಗಿ, ಹೆಚ್ಚು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ. ಇತಿಹಾಸದ ಗತಿಚಿತ್ರಗಳಲ್ಲಿ ಅದರ ಅರ್ಥ ಗೋಚರವಾಗುತ್ತದೆ. ಅಂಥ ಅರ್ಥ ಅಪ್ರಿಯವಾಗಿ ಮನುಷ್ಯನ ದಿನನಿತ್ಯದ ಬಾಳುವೆಗೆ ನಂಜಾಗಿ ಪರಿಣಮಿಸಿದಾಗ ಇತಿಹಾಸಕ್ಕೆ ಬೇರೆ ಅರ್ಥವನ್ನು ಆರೋಪಿಸುವ ಅಗತ್ಯ ಬೀಳುತ್ತವೆ. ಸಾಹಿತ್ಯ ಇಂದಿನ ರಾಜಕಾರಣವನ್ನು ಒಪ್ಪದಿರುವುದಕ್ಕೂ ಇದೇ ಕಾರಣವಿದೆ. ಆದರೆ ಇತಿಹಾಸಕ್ಕೆ ಬೇರೆ ಅರ್ಥವನ್ನು ಆರೋಪಿಸುವ ಪ್ರಯತ್ನ ಯಶಸ್ವಿಯಾಗಿಲ್ಲ.

**ಕೀರ್ತಿನಾಥ ಕುರ್ತಕೋಟಿ.**

# ೪೧. ಗುಬ್ಬಿ

ಗೋಡೆಗೆ ತೂಗು ಹಾಕಿದ ಫೋಟೋದ ಹಿಂದೆ
ಗುಬ್ಬಿ ಗೂಡು ಕಟ್ಟಿದೆ.
ಹುಲ್ಲು ಹತ್ತಿಯ ಚೂರು, ದಾರ ಮೆತ್ತಗೆ ಒಟ್ಟಿದೆ.
ಈ ಪುಕ್ಕಲು ಪ್ರಾಣಿಯ ಧೈರ್ಯಕ್ಕೆ
ಬರೀ ಎರಡು ರೆಕ್ಕೆ .
ಅಡಿಗೆಯ ಮನೆಗೂ ಬಂದು ಕುಟುಕುತ್ತದೆ
ಅನ್ನದ ಅಗಳು-
ಬರ‍್ರನೆ ಹೊರಗೆ ಹಾರಿ, ಆರಿಸಿ ಹುಲ್ಲಿನ ಹುಳು
(ಈ ಶಾಕಾಹಾರಿ)
ಸರ‍್ರನೆ ಬರುತ್ತದೆ ಮರಳಿ, ಮರ-ಮರಳಿ.
ಕಿಟಕಿಯ ಸರಳಿಗೆ ಕುಳಿತು, ಚಕಮಕ ಹೊರಳಿ
ತೂರಿಬಂದು, ಚಿಂವ್ ಚಿಂವ್ ಮರಿಗೆ ಗುಟುಕಿಟ್ಟು
ಹಾರಿ ಹೋಗುತ್ತದೆ. ಹೀಗೆ ಎಷ್ಟೋ ಬಾರಿ.

ಗುಬ್ಬಿಯ ಪುಟ್ಟ ಆಕೃತಿ
ಮರೆಯಾಗಿ,
ತಾಯಿಯ ವಿಶಾಲ ಹೃದಯದಲ್ಲಿ
ಕರಗಿ
ಹೋಗುತ್ತೇನೆ ನಾನು ಜೀವಂತವಾಗಿ.

ಒಬ್ಬ ಪ್ರತಿಭಾವಂತ ಕವಿಯ ಕೈಯಲ್ಲಿ ಚಿಕ್ಕ ಕವಿತೆಯೂ ಕೂಡ ಎಷ್ಟೊಂದು ಪ್ರಭಾವಶಾಲಿಯಾಗಿ ಮೂಡಿಬರುತ್ತದೆ ಎಂಬುದಕ್ಕೆ ನಿದರ್ಶನವಾಗಿ ಕವಿ ಚೆನ್ನವೀರ ಕಣವಿಯವರ

'ಗುಬ್ಬಿ' ಎಂಬ ಕವಿತೆಯನ್ನು ಓದಬಹುದು. ಗುಬ್ಬಿಯಷ್ಟೆ ಗಾತ್ರದ ಈ ಪುಟ್ಟ ಕವನ ೧೯೭೪ರಲ್ಲಿ ಪ್ರಕಟವಾದ 'ನಗರದಲ್ಲಿ ನೆರಳು' ಸಂಕಲನದಲ್ಲಿದೆ. ೧೯೮೫ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ 'ದಶವಾರ್ಷಿಕ ಕವಿತೆಗಳು (೧೯೭೪-೮೩)' ಎಂಬ ಮಹತ್ವದ ಆಂಥಾಲಜಿಯಲ್ಲೂ ಈ ಕವಿತೆ ಸೇರ್ಪಡೆಗೊಂಡಿದೆ. ಅಡಿಗ, ಜಿ.ಎಸ್.ಎಸ್. ಹಾಗೂ ಸ್ವತಃ ಕಣವಿಯವರ ಸಂಪಾದಕತ್ವದಲ್ಲಿ ಸಿದ್ಧಗೊಂಡ ಅಂಥಾಲಜಿಯಲ್ಲಿ ಈ 'ಗುಬ್ಬಿ' ಸೇರಿಕೊಂಡಿರುವುದು ಕವಿತೆಯ ಶ್ರೇಷ್ಠತೆಗೆ ಸಂದ ಗೌರವ ಅನ್ನಿಸುತ್ತದೆ.

ಒಂದು ವಿಶಿಷ್ಟ ಸಂದರ್ಭದಲ್ಲಿ ಈ ಕವನ ನನ್ನ ಗಮನ ಸೆಳೆಯಿತು. ಹತ್ತಾರು ವರ್ಷಗಳ ಹಿಂದೆ ನನ್ನ ಗೆಳೆಯನೊಬ್ಬ ಯುವ ಕವಿಗಳಿಗಾಗಿ ಬೆಂಗಳೂರಿನಲ್ಲಿ ಮೂರು ದಿನಗಳ ಶಿಬಿರ ಏರ್ಪಡಿಸಲು ಅದರ ನಿರ್ದೇಶಕನಾಗಿ ನನ್ನನ್ನು ಕರೆಸಿದ್ದ. ಶಿಬಿರಾರ್ಥಿಗಳಿಗೆ ಅಧ್ಯಯನ ಮಾಡಲು ನಮ್ಮ ಕೆಲವು ಪ್ರಮುಖ ಕವಿಗಳ ಕವಿತೆಗಳನ್ನು ಆರಿಸುವಾಗ, ಕಣವಿಯವರ ಅನೇಕ ಚೆಲುವಾದ ಕವನಗಳಲ್ಲಿ ಒಂದನ್ನು ಆರಿಸುವುದು ನಿಜಕ್ಕೂ ಕಷ್ಟ ಅನ್ನಿಸಿತು. ನಾನು ಹಾಗೂ ಆ ನನ್ನ ಗೆಳೆಯ ತುಂಬಾ ಹೊತ್ತು ಚರ್ಚಿಸಿ ನಂತರ ಆರಿಸಿದ್ದು 'ಗುಬ್ಬಿ'ಯನ್ನು.

ಕೇವಲ ಹದಿನೆಂಟು ಸಾಲುಗಳುಳ್ಳ ಈ ಕವನ ಆರಂಭವಾಗುವುದು ಹೀಗೆ;

**ಗೋಡೆಗೆ ತೂಗುಹಾಕಿದ ಫೋಟೋದ ಹಿಂದೆ**
**ಗುಬ್ಬಿಗೂಡು ಕಟ್ಟಿದೆ.**

ಈ ಸಾಲುಗಳು ಒಂದು ಸಾಮಾನ್ಯ ಹೇಳಿಕೆಯಂತಿವೆ. ಕವಿತೆ ಯಾವ ಅಬ್ಬರವೂ ಇಲ್ಲದೆ ಗದ್ಯವೊ ಅನ್ನಿಸುವಂತೆ ಆರಂಭವಾಗುತ್ತದೆ. ಇಲ್ಲಿ ಕವಿ ಭಾವಚಿತ್ರ ಎಂಬ ಸಂಸ್ಕೃತ ಪದವನ್ನು ಬಿಟ್ಟು, ಮಾತಾಡುವಾಗ ನಾವೆಲ್ಲ ಸಹಜವಾಗಿ ಬಳಸುವ ಫೋಟೋ ಎಂಬ ಆಂಗ್ಲ ಪದವನ್ನೇ ಉಪಯೋಗಿಸಿರುವುದು ಗಮನಾರ್ಹವಾಗಿದೆ. ಗುಬ್ಬಿಯಂಥ ಸಾಮಾನ್ಯ ಪಕ್ಷಿಯ ಬಗ್ಗೆ ಬರೆಯುತ್ತಿರುವುದರಿಂದ ದಿನ ಬಳಕೆಯ ಶಬ್ದಗಳನ್ನೆ ಬಳಸಿ, ಸಾಧ್ಯವಾದಷ್ಟು ನಿರಾಡಂಬರದ ಸರಳ ಶೈಲಿಯಲ್ಲೆ ಕವಿತೆ ಕಟ್ಟಬೇಕೆಂಬುದು ಕವಿಯ ಉದ್ದೇಶವಿರಬಹುದು ಅನ್ನಿಸುತ್ತದೆ.

ಹುಲ್ಲು, ಹತ್ತಿಯ ಚೂರು, ದಾರ ಮೆತ್ತಗೆ ಒಟ್ಟಿದೆ ಎಂಬ ನಂತರದ ಸಾಲಿನ ಬಳಿಕ ಮೊದಲೆರಡು ಸಾಲುಗಳನ್ನು ಪುನಃ ಓದಿಕೊಂಡರೆ ಆಗ ಸಾಲುಗಳಿಗೆ ಕಾವ್ಯದ ಬಂಧ ಪ್ರಾಪ್ತವಾಗುತ್ತದೆ. ಹತ್ತಿಯ ಚೂರು, ಹುಲ್ಲು, ದಾರಗಳಂಥ ತ್ಯಾಜ್ಯ ವಸ್ತುಗಳನ್ನು ಬಳಸಿ ಗುಬ್ಬಿ ಸುಂದರವಾದ ಗೂಡು ಕಟ್ಟುವಂತೆ ಸರಳವಾದ ಪದಗಳನ್ನೇ ಬಳಸಿ ಒಂದು ಆಕರ್ಷಕವಾದ ಕವಿತೆಯನ್ನು ಕಣವಿಯವರು ಹೆಣೆಯತೊಡಗಿರುವುದು ಸ್ಪಷ್ಟವಾಗುತ್ತದೆ.

**ಈ ಪುಕ್ಕಲು ಪ್ರಾಣಿಯ ಧೈರ್ಯಕ್ಕೆ**
**ಬರೀ ಎರಡು ರೆಕ್ಕೆ**

ಎಂಬ ಕವನದ ನಾಲ್ಕು ಮತ್ತು ಐದನೆ ಸಾಲುಗಳು ತುಂಬಾ ಪರಿಣಾಮಕಾರಿಯಾಗಿವೆ. ಇಲ್ಲಿ ನಮಗೆಲ್ಲ ಕಾಣಿಸುವ ಗುಬ್ಬಿ ರೆಕ್ಕೆಗಳ ಮೂಲಕ ಕವಿ ಧೈರ್ಯ ಎಂಬ ಅಮೂರ್ತ (abstract) ಗುಣವನ್ನು ಮೂರ್ತಗೊಳಿಸಿದ ಪರಿ ಹುಟ್ಟಿಸುತ್ತದೆ. ಹೀಗಾಗಿ ಈ ಸಾಲುಗಳು ಓದುಗನನ್ನು ಮತ್ತೆ ಮತ್ತೆ ಕಾಡುತ್ತ ಬಹುಕಾಲ ನೆನಪಿನಲ್ಲಿ ಉಳಿಯುವಂತಿವೆ.

ಗುಬ್ಬಿ ಪುಕ್ಕಲು ಪ್ರಾಣಿ ಅನ್ನಿಸಿಕೊಂಡಿರಬಹುದು. ಅದಕ್ಕೆ ಗಿಡುಗನಂಥ ಬಲಶಾಲಿಯಾದ ಕೊಕ್ಕು, ಕಾಲುಗಳು ಇಲ್ಲದಿರಬಹುದು. ಆದರೂ ಅದರದೆ ಆದ ಎರಡು ರೆಕ್ಕೆಗಳಿವೆ. ಈ ರೆಕ್ಕೆಗಳ ಬಲದಿಂದ ಬದುಕಬಲ್ಲೆ ಎಂಬ ಧೈರ್ಯ ಅದಕ್ಕೆ ಬರುತ್ತದೆ. ಹಣ, ಅಧಿಕಾರ ಹಾಗೂ ವಿದ್ಯೆಯ ಬಲದಿಂದ ಹಾರಾಡುವವರ ನಡುವೆ ಅವುಗಳಿಲ್ಲದ ಬಡ ಪ್ರಜೆ ಕೀಳರಿಮೆಯನ್ನು ತಾಳಬೇಕಾಗಿಲ್ಲ. ತನ್ನ ರಟ್ಟೆಯ ಬಲದ ಮೇಲೆ ವಿಶ್ವಾಸವಿಟ್ಟರೆ ತನ್ನ ಬದುಕನ್ನು ತಾನು ಸ್ವತಂತ್ರವಾಗಿ ರೂಪಿಸಿಕೊಳ್ಳಬಹುದು ಎಂಬುದನ್ನು ಕವಿ ಈ ಸಾಲುಗಳಲ್ಲಿ ಧ್ವನಿಸುತ್ತಾರೆ.

ಕವಿತೆಯ ಮುಂದಿನ ಭಾಗ ಹೀಗಿದೆ :

**ಅಡಿಗೆಯ ಮನೆಗೂ ಬಂದು ಕುಟುಕುತ್ತದೆ**
**ಅನ್ನದ ಅಗಳು-**
**ಬರ್ರನೆ ಹೊರಗೆ ಹಾರಿ, ಆರಿಸಿ ಹುಲ್ಲಿನ ಹುಳು**
**(ಈ ಶಾಕಾಹಾರಿ)**
**ಸರ್ರನೆ ಬರುತ್ತದೆ ಮರಳಿ, ಮರ-ಮರಳಿ.**
**ತೂರಿ ಬಂದು, ಚಿಂವ್ ಚಿಂವ್ ಮರಿಗೆ ಗುಟುಕಿಟ್ಟು**
**ಹಾರಿಹೋಗುತ್ತದೆ, ಹೀಗೆ ಎಷ್ಟೋ ಬಾರಿ.**

ಮೇಲಿನ ಸಾಲುಗಳಲ್ಲಿ ಗುಬ್ಬಿಗಳು ಬಿಡುವಿಲ್ಲದೆ ದುಡಿವ ಚಿತ್ರವನ್ನು ಕವಿ ಅತ್ಯಂತ ಮನೋಜ್ಞವಾಗಿ ಕಟ್ಟಿಕೊಡುತ್ತಾರೆ. ಇಲ್ಲಿನ ಲಯ, ಮರಳಿ, ಸರಳಿ(ಗೆ) ಹೊರಳಿ ತೂರಿ, ಮರಿ, ಹಾರಿ, ಬಾರಿ ಮುಂತಾದ ಸಹಜ ಪ್ರಾಸಗಳು ಮತ್ತು ಬರ್ರನೆ -ಸರ್ರನೆ ಎಂಬ ಪದಗಳಿಂದಾಗಿ ಗುಬ್ಬಿಯ ಹಾರಾಟದ ಕ್ರಿಯೆಯನ್ನು, ಗತಿಯನ್ನು ಕವಿತೆಯ ಸಾಲುಗಳು ಅಭಿನಯಿಸಿ ತೋರಿಸುತ್ತವೆ. ಕಣವಿಯವರ ಬಹಳಷ್ಟು ಕವಿತೆಗಳಲ್ಲಿ ಕಾಣಿಸುವ ಕುಸುರಿ ಕೆಲಸದ ಚೆಲುವು ಇಲ್ಲೂ ಸಹಜವಾಗಿ ಅನಾಯಾಸವಾಗಿ ಮೂಡಿ ಬಂದಿದೆ. 'ಶಾಕಾಹಾರಿ' ಎಂಬಲ್ಲಿನ ಶ್ಲೇಷೆಯನ್ನೂ ಕವಿ ಚೆನ್ನಾಗಿ ಬಳಸಿಕೊಂಡಿದ್ದಾರೆ.

ಮುಂದಿನ ಪ್ಯಾರಾದಲ್ಲಿ ಕಣವಿಯವರು ಕವಿತೆಗೆ ಹೊಸ ಆಯಾಮವನ್ನೇ ನೀಡುತ್ತಾರೆ. ಗುಬ್ಬಿಯಲ್ಲಿ ಕವಿ ಕಂಡದ್ದಾದರೂ ಏನು ?

**ಗುಬ್ಬಿಯ ಪುಟ್ಟ ಆಕೃತಿ**
**ಮರೆಯಾಗಿ,**
**ತಾಯಿಯ ವಿಶಾಲ ಹೃದಯದಲ್ಲಿ**
**ಕರಗಿ**
**ಹೋಗುತ್ತೇನೆ ನಾನು ಜೀವಂತವಾಗಿ.**

ಗುಬ್ಬಿಯಂಥ ಸಾಮಾನ್ಯವಾದ, ಯರೂ ಲೆಕ್ಕಕ್ಕೆ ತೆಗೆದುಕೊಳ್ಳದ ಹಕ್ಕಿಯಲ್ಲೂ ತಾಯಿಯ ಹೃದಯ ವೈಶಾಲ್ಯವನ್ನು ಕಂಡದ್ದು ಮತ್ತು ಓದುಗರಿಗೂ ಅದು ಕಾಣುವಂತೆ ಮಾಡಿದ್ದು ಈ ಪುಟ್ಟ ಕವಿತೆಯ ದೊಡ್ಡ ಸಾಧನೆ. ಕಣವಿಯವರ ವ್ಯಕ್ತಿತ್ವ ಹಾಗೂ ಕಾವ್ಯದಲ್ಲಿ ವಿಮರ್ಶಕರು ಈಗಾಗಲೆ ಗುರುತಿಸಿರುವ ಜೀವನಪ್ರೀತಿ, ಲವಲವಿಕೆ, ನಿರುದ್ವಿಗ್ನತೆ, ಪರಿಸರ ಪ್ರೇಮಗಳಂಥ ಒಳ್ಳೆಯ ಗುಣಗಳನ್ನು 'ಗುಬ್ಬಿ'ಯಲ್ಲೂ ಕಾಣಬಹುದು.

**ಎಚ್. ಡುಂಡಿರಾಜ್.**

# ೪೨. ಕೊಡೆ

ಕೊಡೆ ಹಿಡಿಯುತ್ತೇವೆ;
ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು
ಹಿಡಿಸುವ ಕೊಳೆಗೆ, ಆಗದವರು
ಎದುರಿಗೆ ಬಂದಾಗ ಮರೆಗೆ-
ಹೊತ್ತು ಬಂದಂತೆ.

ಮತ್ತೊಬ್ಬರ ತಲೆಗೆ
ನೆರಳು ಮಾಡುವ ಉಸಾಬರಿಗೆ
ಹೋಗಿ ಚುಚ್ಚುತ್ತೇವೆ;
ಮೆಚ್ಚುತ್ತೇವೆ ಹೆಣ್ಣು ಏರಿಸಿದ
ಹೂವಿನ ಕೊಡೆಗೆ - ತಂತಿ ಮೇಲಿನ ನಡಿಗೆ.

ಏಕಚಕ್ರಾಧಿಪತಿಯ ಬೆಳ್ಗೊಡೆಗೆ
ಬೆಂಕಿ ಹಚ್ಚುತ್ತೇವೆ. ಮರೆಸುತ್ತೇವೆ
ಉಧೋ ಉಧೋ ಎಂದು
ಛತ್ರ ಚಾಮರ ಹಿಡಿದು
ಪಲ್ಲಕ್ಕಿಯಲ್ಲಿ ಬೇಕಾದ ದೇವರನಿಟ್ಟು

ಹೊತ್ತು ಹೋದಂತೆ ಮಡಿಚಿ
ಹಿಡಿಯುತ್ತೇವೆ ನಮ್ಮ ಅಭಿರುಚಿ-
ಗೆ ತಕ್ಕಂತೆ; ಬೆದರಿಸಲಿಕ್ಕೆ
ನಾಯಿಗೆ, ನಡೆಯಲಿಕ್ಕೆ
ಊರುಗೋಲಾಗಿ.

'ನಗರದಲ್ಲಿ ನೆರಳು' ಸಂಗ್ರಹದ 'ಕೊಡೆ' ೧೯೭೦ರ ಆಜುಬಾಜಿನಲ್ಲಿ ಬಂದ ಕವಿತೆಯಾಗಿದೆ. ಐದು ಸಾಲುಗಳ ನಾಲ್ಕು ಪ್ಯಾರಾಗಳಿರುವ ಒಟ್ಟು ಇಪ್ಪತ್ತು ಸಾಲುಗಳ ಕವಿತೆಯಿದು. ಮಳೆಗಾಲ ಬಂದಾಗ ನಾವೆಲ್ಲಾ ಸಾಮಾನ್ಯವಾಗಿ ಉಪಯೋಗಿಸುವ 'ಕೊಡೆ' ಅಥವಾ ಛತ್ರಿ ಎಂಬ ಈ ವಸ್ತು ಕಣವಿಯವರ ಕಾವ್ಯದಲ್ಲಿ ಏನೆಲ್ಲಾ ಅರ್ಥಗಳನ್ನು ಪಡೆದುಕೊಂಡಿದೆ! ಕವಿತೆಯ ಗರ್ಭದೊಳಗೆ ಸಾಮಾಜಿಕ, ಐತಿಹಾಸಿಕ ಹಾಗೂ ಧಾರ್ಮಿಕ ವಿಷಯಗಳಿದ್ದು, ವ್ಯಂಗ್ಯ ವಿಡಂಬನೆಗಳೂ ಇವೆ. ಕೊಡೆ -ನಾವೆಲ್ಲಾ ಯಾತಕ್ಕಾಗಿ ಬಳಸುತ್ತೇವೆ? ಕೊಡೆಯ ಇತರ ಉಪಯೋಗಗಳೇನು? ಯಾವ ಯಾವ ಕಾರಣಗಳಿಗಾಗಿ ನಾವು ಕೊಡೆಯನ್ನು ಬಳಸಬಹುದು.? ಇತ್ಯಾದಿಗಳ ಜೊತೆಗೆ 'ಕೊಡೆ' ಯಾವು ಯಾವುದಕ್ಕೆ ಸಂಕೇತವಾಗುತ್ತದೆ? ಎಂಬುದನ್ನು ಸರಳವಾಗಿ,. ಸಾಂಕೇತಿಕವಾಗಿ ಮತ್ತು ವಿಡಂಬನೆ, ವ್ಯಂಗ್ಯಾತ್ಮಕವಾಗಿ ವಿವರಿಸುವುದೇ ಈ ಕವಿತೆಯ ಆಶಯ.

ಕೊಡೆ ಶಬ್ದಕ್ಕೆ ನಿಘಂಟಿನಲ್ಲಿ ಬೇರೆ ಬೇರೆ ಅರ್ಥಗಳಿವೆ. ಛತ್ರಿ, ಸತ್ರಿಗೆ, ಛತ್ರ, ಚತ್ತರಿಗೆ, ಅಡಪತ್ರ (ನಾಮಪದ), ಕೆದರು, ಪೊಳ್ಳುಮಾಡು, ಉಗುರುಗಳಿಂದ ಸುಲಿ, ತೆಗೆ, ನೋವಾಗು, ಗಾಯವಾಗು (ಧಾತು), ಕೊಡುವುದಿಲ್ಲ (ಅವ್ಯಯ). ಈ ಶಬ್ದ ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು 'ರೂಪ'ಗಳಲ್ಲಿ ಹೆಚ್ಚು 'ಅರ್ಥ'ಗಳಲ್ಲಿ ಬಳಕೆಯಾಗುತ್ತದೆ. 'ಕೊಡೆ' ನಾಮ, ಕ್ರಿಯಾ ಹಾಗೂ ಧಾತು ಪದವಾಗುತ್ತದೆ. ಕೊಡೆ ಬಳಸುವ 'ವಸ್ತು'ವೂ ಹೌದು; 'ನಿರಾಕರಣೆಯ ಶಬ್ದ'ವೂ ಹೌದು. ಕೊಡೆಯಿಂದ ಕವಿತೆಯಲ್ಲಿ ಕಂಡುಬರುವ ಉಪಯೋಗಗಳು-ಬಿಸಿಲಿಗೆ, ಮಳೆಗೆ, ಕಾರುಗಳು ಸಿಡಿಸುವ ಕೊಳೆಗೆ, ಆಗದವರು ಕಾಣದಂತಿರಲು, ಮತ್ತೊಬ್ಬರಿಗೆ ನೆರಳು ಮಾಡಲು, ನಾಯಿ ಬೆದರಿಸಲು, ಊರುಗೋಲಾಗಿ ನಡೆಯಲು ಇತ್ಯಾದಿ. ಆದರೆ ಕವಿತೆ ಇಷ್ಟನ್ನೇ ಹೇಳುತ್ತಿಲ್ಲ.

ಕವಿತೆ ಸಂಪೂರ್ಣ ಉತ್ತಮ ಪುರುಷದಲ್ಲಿದೆ. ಹಾಗಾಗಿ ಇಲ್ಲಿ ಬೇರೆಯವರಿಗೊ ಎದುರಿರುವವರಿಗೊ ಕವಿ ಹೇಳದೆ 'ತನಗೆ ತಾನೇ' ಹೇಳಿಕೊಳ್ಳುತ್ತಿದ್ದಾನೆ. ಆ ಮೂಲಕ ಕಾವ್ಯ 'ಹೇಳುವ ಕ್ರಿಯೆ'ಗಳಲ್ಲಿ 'ತಾನೂ ಒಬ್ಬ'ನಾಗುತ್ತಿದ್ದಾನೆ. ಇಲ್ಲಿ ಎರಡು ಅಂಶಗಳನ್ನು ನಾವು ಗಮನಿಸಬಹುದು. ಒಂದು: ಕಣವಿಯವರೆ ಒಂದು ಕಡೆ ವಿಮರ್ಶೆಯಲ್ಲಿ ಹೇಳಿದಂತೆ 'ಕಾವ್ಯ ವಸ್ತು'ವೇ (content) ತನ್ನ 'ರೂಪ (Form)ವನ್ನು ನಿರ್ಧರಿಸುತ್ತದೆಯೆಂಬುದು. ಹಾಗಾಗಿ ಇಲ್ಲಿ 'ಕೊಡೆ' ವಸ್ತು ವಿಷಯದ ಕವಿತೆ ನಿರೂಪಣೆಯಲ್ಲಿ ಮುಕ್ತ ಛಂದಸ್ಸನ್ನು ತಾಳಿದೆ. ಎರಡು: ಪ್ರತಿಭಾವಂತ, ವಿನಯವಂತ ಕವಿ ಮಾತ್ರ ಈ ತರದ ಧೋರಣೆಯನ್ನು ತಳೆಯಬಲ್ಲ. ಅಂದರೆ ಲೋಕದ ಕ್ರಿಯೆಯೊಳಗೆ 'ತನ್ನನ್ನು ಒಳಗು ಮಾಡಿಕೊಳ್ಳುವುದು' ಮತ್ತು ಲೋಕದ ಕ್ರಿಯೆಯಲ್ಲಿ 'ತಾನೂ ಒಳಗಾಗುವುದು'. ಈ ಕವಿತೆಯಲ್ಲಿ ಬರುವ ವ್ಯಂಗ್ಯ, ವಿಡಂಬನೆಗಳನ್ನು ಗಮನಿಸಿದರೆ ಆ 'ನಾವು'ಗಳಲ್ಲಿ 'ನಾನು' ಅಂದರೆ 'ಕವಿ'ಯೂ ಇದ್ದಾನೆಂದು ಅರ್ಥ.

ಇಲ್ಲಿನ ವಿಶೇಷತೆ ಎಂದರೆ ಆರಂಭದ ಸಾಲಿನಿಂದ ಅಂತ್ಯದ ಸಾಲಿನವರೆಗೆ ಕವಿತೆಯಲ್ಲಿ 'ಕ್ರಿಯೆ' ದಟ್ಟವಾಗಿ ಹೆಪ್ಪುಗಟ್ಟಿರುವುದು. ಕೊಡೆ 'ಹಿಡಿಯುತ್ತೇವೆ', 'ಚುಚ್ಚುತ್ತೇವೆ', 'ಮೆಚ್ಚುತ್ತೇವೆ', 'ಬೆಂಕಿ ಹಚ್ಚುತ್ತೇವೆ', 'ಮರೆಸುತ್ತೇವೆ', ಮಡಿಚಿ ಹಿಡಿಯುತ್ತೇವೆ', 'ಬೆದರಿಸಲಿಕ್ಕೆ, 'ನಡೆಯಲಿಕ್ಕೆ '

ಇತ್ಯಾದಿಗಳನ್ನು ಗಮನಿಸಬಹುದು. ಇಲ್ಲೆಲ್ಲಾ 'ಕ್ರಿಯೆ' ಗೆ ಒತ್ತು' ಕೊಟ್ಟಿರುವುದರಿಂದಲೇ ಕ್ರಿಯಾಪದಗಳೆಲ್ಲ 'ಒತ್ತಕ್ಷರ'ಗಳಿಂದ ಕೂಡಿವೆ. ಮೊದಲೆರಡು ಪ್ಯಾರಾಗಳು ಕೊಡೆಯ ಸಂಬಂಧ ಸಾಮಾಜಿಕ ವಿಷಯಗಳನ್ನು ವಿವರಿಸಿದರೆ ಮೂರನೆಯದು ಐತಿಹಾಸಿಕ, ಧಾರ್ಮಿಕ ವಿಷಯ ಹೇಳುತ್ತದೆ. ಕೊನೆಯದು ಮತ್ತೆ ಸಾಮಾಜಿಕ ವಿಷಯವನ್ನೇ ಹೇಳುತ್ತದೆ.

**ಕೊಡೆ ಹಿಡಿಯುತ್ತೇವೆ;**
**ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು**
**ಸಿಡಿಸುವ ಕೊಳೆಗೆ...,**

ಕವಿತೆಯು ಆರಂಭವಾಗುವುದೇ 'ಕೊಡೆ ಹಿಡಿಯುತ್ತೇವೆ' ಎಂಬ ಸಾಲಿನಿಂದ. ಯಾವುದಕ್ಕೆ ? ಬಿಸಿಲಿಗೆ, ಮಳೆಗೆ, ಮುಂದಿನದೆ ದೊಡ್ಡವರ ಕಾರು ಸಿಡಿಸುವ 'ಕೊಳೆ'ಗೆ. ಇಲ್ಲಿನ ವಿಶೇಷ ನೋಡಿ, ಎರಡನೆಯ ಸಾಲಿನಲ್ಲಿ 'ದೊಡ್ಡವರ ಕಾರು' ಎಂದಿದ್ದು ಮೂರನೆಯ ಸಾಲಿನಲ್ಲಿ 'ಸಿಡಿಸುವ ಕೊಳೆಗೆ' ಎಂದಿದೆ. ಇಲ್ಲಿ ' ದೊಡ್ಡವರ ಕಾರು' ಎಂಬುದರಲ್ಲಿನ 'ದೊಡ್ಡ' ಶಬ್ದ ಬಳಕೆಯ ವಿಶೇಷ ಗಮನಿಸಬೇಕು. 'ದೊಡ್ಡದು' ಎಂಬುದರಲ್ಲಿನ ಒಳಗಿರುವ 'ಟೊಳ್ಳುತನವನ್ನು ತುಂಬಾ ವಿಡಂಬನಾತ್ಮಕವಾಗಿ ಇಲ್ಲಿ ತೋರಿಸಿದ್ದಾರೆ. ಬಹಿರಂಗವಾಗಿ ಕಾಣುವ ದೊಡ್ಡದೆಲ್ಲವೂ ಎಷ್ಟೋ ಸಾರಿ ಅಂತರಂಗದಲ್ಲಿ 'ಕೊಳೆ' 'ಕಸ'ವನ್ನೇ ತುಂಬಿಕೊಂಡಿರುತ್ತದೆ. ದೊಡ್ಡವರ ವಾಹನಗಳೂ 'ದೊಡ್ಡಸ್ತಿಕೆ'ಯ ಸಂಕೇತಗಳೇ ಆಗಿರುತ್ತವೆ. ಅವುಗಳದು (ಅವರದೂ ಸಹ!) 'ಉರುಳು'ವುದೇ ವೃತ್ತಿ ಆಗಿರುತ್ತವೆ. 'ನೋವಾಗು'ವಂತೆ ಗಾಯ' ಮಾಡುತ್ತವೆ. ಅಲ್ಲದೆ ಅಸಹಾಯಕರಿಗೆ ಏನನ್ನೂ 'ಕೊಡುವುದಿಲ್ಲ'. ಇಲ್ಲಿನ ವಿಶೇಷ ಎಂದರೆ 'ಕೊಡೆ' ಹಾಗೂ 'ಕೊಳೆ' ಶಬ್ದಗಳಲ್ಲಿ ಕೊನೆಯ ಒಂದೇ ಅಕ್ಷರ ಮಾತ್ರ ವ್ಯತ್ಯಾಸವಾಗಿದೆ. ಮತ್ತು ಎಷ್ಟು ಅರ್ಥ ನೀಡುತ್ತದೆಯೆಂಬುದು. 'ಕೊಳೆ'ಯಿಂದ ರಕ್ಷಿಸಿಕೊಳ್ಳಲು 'ಕೊಡೆ' ಅಗತ್ಯವಿದೆ. ಆಗದವರು ಎದುರಿಗೆ ಬಂದಾಗ ಮರೆಗೆ. ಕೊಡೆ ಕೇವಲ ಮಳೆ, ಬಿಸಿಲಿಗೆ ಅಷ್ಟೇ ಅಲ್ಲ ನಿತ್ಯ ಜೀವನದಲ್ಲಿ ನಮಗೆ ಆಗದವರನ್ನು, ಅಭಿರುಚಿ-ಆಸಕ್ತಿಗಳಿಗೆ ಸರಿ ಹೊಂದದವರನ್ನು ಹಾಗೂ ಅನಾವಶ್ಯವಾಗಿ ನಮ್ಮನ್ನು ಟೀಕಿಸುವವರನ್ನು ನೋಡದಂತೆ ಇರಲು ಕೊಡೆಯನ್ನು ಹಿಡಿಯುತ್ತೇವೆ. ಕೊಡೆಯ ಇನ್ನೊಂದು ಬಗೆಯ ಉಪಯೋಗವನ್ನು ಇಲ್ಲಿ ಕಣವಿಯವರು ವಿಡಂಬನಾತ್ಮವಾಗಿ ಹೇಳುತ್ತಾರೆ.

ಕೊನೆಯ ಸಾಲಿನ 'ಹೊತ್ತು' ಶ್ಲೇಷೆಯಾಗಿ ಬಳಕೆಯಾಗಿದೆ. ಒಂದು 'ಹೊತ್ತು' ದಿನದ ಬೆಳಗು, ಮಧ್ಯಾಹ್ನ ಕಾಲಗಳನ್ನು ಸೂಚಿಸಿದರೆ, ಇನ್ನೊಂದು ನಾವುಗಳು ಹೊತ್ತು ತಂದ (ಪಾಪ, ಪುಣ್ಯ ಇತ್ಯಾದಿ) ಕರ್ಮ ಫಲಗಳು ಜೀವನದಲ್ಲಿ ಎದುರಾದಂತೆ 'ಕೊಡೆ' ಅಥವಾ 'ದಾರಿ'ಗಳನ್ನು ಕಂಡುಕೊಳ್ಳಬೇಕು. 'ಹೊತ್ತು ಬಂದಂಗೆ ಕೊಡೆ ಹಿಡಿಬೇಕು' ಅನ್ನೋ ಗಾದೇನೆ ಇದೆಯಲ್ಲ !

ಎರಡನೇ ಪ್ಯಾರಾ 'ಮತ್ತೊಬ್ಬರ ತಲೆಗೆ ನೆರಳು ಮಾಡುವ ಉಸಾಬರಿಗೆ ಹೋಗಿ ಚುಚ್ಚುತ್ತೇವೆ.' ಸರಳವಾದ ಅರ್ಥ ಇನ್ನೊಬ್ಬರಿಗೆ ಕೊಡೆ ಹಿಡಿಯುತ್ತೇವೆ. ಆದರೆ ನಮ್ಮ ಕಷ್ಟಗಳೇ ನಮಗಿರುವಾಗ ಇನ್ನೊಬ್ಬರಿಗೆ ಉಪಕಾರ ಮಾಡಲು ಹೋಗಿ ಅಲ್ಲಿಯೂ ಎಡವುತ್ತೇವೆ ಎಂಬುದೇ

ವಿಡಂಬನೆ. ಮಹಿಳೆಯರ ವಿಧವಿಧದ ನಮೂನೆಯ ಕೊಡೆಗಳನ್ನು ಅವರು ನಾಜೂಕಾಗಿ' ಹಿಡಿದು ನಡೆಯುವ ರೀತಿಗೆ ಮನಸ್ಸಲ್ಲೇ ಮೆಚ್ಚುತ್ತೇವೆ. 'ತಂತಿ ಮೇಲಿನ ನಡಿಗೆ' ಎನ್ನುವಲ್ಲಿ ಹೆಂಗಸರ ಬುದ್ಧಿಮತ್ತೆ, ಎಚ್ಚರ ಮತ್ತು ನಾಜೂಕುತನಗಳು ಗೋಚರಿಸುತ್ತವೆ.

ಮೂರೆಯ ಪ್ಯಾರಾದಲ್ಲಿ ಕವಿತೆ ಇದ್ದಕ್ಕಿದ್ದಂತೆ ಬೇರೊಂದು ಪಾತಳಿಗೆ ಹೊರಳುತ್ತದೆ. ಮೇಲೆ ಸಾಮಾನ್ಯಾರ್ಥದಲ್ಲಿ ಬಂದ ಕೊಡೆ ಇಲ್ಲಿ ಚಕ್ರಾಧಿಪತಿಗಳ 'ಬೆಳ್ಗೊಡೆ'ಯಾಗಿ ಸರ್ವಾಧಿಕಾರದ, ಪ್ರಭುತ್ವದ ಸಂಕೇತವಾಗುತ್ತದೆ. ಅಲ್ಲದೆ ಸಾವಿರಾರು ವರ್ಷಗಳ ರಾಜ-ಪ್ರಭುತ್ವದ ಸಂತತಿಯನ್ನು ೨೦ನೆಯ ಶತಮಾನದಲ್ಲಿ ಕೊನೆಗಾಣಿಸಿ ಹೊಸ ಪ್ರಜಾಪ್ರಭುತ್ವಕ್ಕೆ ನಾಂದಿ ಹಾಡುತ್ತೇವೆ. ಸ್ವಾತಂತ್ರ್ಯ ಪೂರ್ವದಲ್ಲಿದ್ದ ೫೦೦ಕ್ಕಿಂತ ಹೆಚ್ಚು ಸಂಸ್ಥಾನಗಳು, ರಾಜಮನೆತನಗಳು ಒಂದೇ ರಾತ್ರಿಯಲ್ಲಿ ನಿರ್ನಾಮವಾಗಿದ್ದನ್ನು ಇದು ಸೂಚಿಸುತ್ತದೆ. ಆದರೆ ವ್ಯಂಗ್ಯ ಎಂದರೆ ಹೀಗೆ ರಾಜಪ್ರಭುತ್ವವನ್ನು ಕೊನೆಗಾಣಿಸಿ, ಅವರ ಬೆಳ್ಗೊಡೆಗಳನ್ನು ಸಾಂಕೇತಿಕವಾಗಿ ಇಳಿಸಿದ ನಾವುಗಳೇ ಸ್ವಾತಂತ್ರ್ಯೋತ್ತರದಲ್ಲಿ ಸೋಗಲಾಡಿ, ಸ್ವಾರ್ಥ ರಾಜಕಾರಣಕ್ಕಿಳಿದಿರುವುದನ್ನು, ಗೆದ್ದವರ ಕಡೆ ಬಹುಪರಾಕು ಹೇಳುವುದನ್ನು ಹಾಗೂ ಧರ್ಮದ ಅಮಲನ್ನು ಹತ್ತಿಸಿಕೊಂಡು 'ಧರ್ಮರಾಜ ಕಾರಣ' ಮಾಡುತ್ತಿರುವುದನ್ನು ಕವಿತೆಯ ಮುಂದಿನ ಈ ಸಾಲುಗಳು ಹೇಳುತ್ತವೆ. 'ಮೆರೆಸುತ್ತೇವೆ। ಉಧೋ। ಉದೋ ಎಂದು । ಛತ್ರಿ ಚಾಮರ ಹಿಡಿದು । ಪಲ್ಲಕ್ಕಿಯಲ್ಲಿ ಬೇಕಾದ ದೇವರನಿಟ್ಟು'.

ಕೊನೆಯ ಪ್ಯಾರಾ ಮತ್ತೆ ಸಾಮಾನ್ಯ ಲಹರಿಗೆ ಬರುತ್ತದೆ. 'ಕೊಡೆ'ಗಳನ್ನು ಮಳೆ ನಿಂತ ಮೇಲೆಯೂ ಬಳಸಲು ಸಾಧ್ಯವಿದೆ. ದಾರಿಯಲ್ಲಿನ ಉಂಡಾಡಿ ನಾಯಿಗಳನ್ನು ಕಿಡಿಗೇಡಿಗಳನ್ನು ಬೆದರಿಸಲಿಕ್ಕೆ ಹಾಗೂ ವೃದ್ಧಾಪ್ಯದಲ್ಲಿ ಅಥವಾ ಓಡಲಾರದ ಸ್ಥಿತಿ ತಲುಪಿದರೆ ಉರುಗೋಲನ್ನಾಗಿ ಮಾಡಿಕೊಳ್ಳಬಹುದು. ಹೀಗೆ ಸಾಮಾನ್ಯ ಸರಳ ವಿಷಯದಿಂದ ಆರಂಭವಾದ ಈ ಕವಿತೆ ಸಂಕೀರ್ಣತೆಯ ತುದಿ ಮುಟ್ಟಿ ಮತ್ತೆ ಸಾಮಾನ್ಯತೆಯೆಡೆಗೆ ಬರುವ ರೀತಿಯಲ್ಲಿದೆ. ಮುಕ್ತ ಛಂದಸ್ಸಿನ ಈ ಪುಟ್ಟ ಕವಿತೆ ತನ್ನ 'ಅರ್ಥಶಕ್ತಿ'ಯಿಂದ ಓದುಗರನ್ನು ತಟ್ಟನೆ ಸೆರೆಹಿಡಿಯುತ್ತದೆ.

ಈ ಕವಿತೆ ವ್ಯಕ್ತಪಡಿಸುವ ಮೌಲ್ಯ ಪ್ರಜ್ಞೆ ಮತ್ತು ಧ್ವನಿಶಕ್ತಿ ಸಾಮಾನ್ಯವಾದದ್ದೇನಲ್ಲ. ಮಾನವೀಯತೆ, ಔದಾರ್ಯ, ಸಾತ್ವಿಕ ಗುಣಗಳನ್ನು ಕಳೆದುಕೊಳ್ಳುತ್ತಿರುವ ನಾವುಗಳು ಬದುಕನ್ನು ತುಂಬಾ ಸಿನಿಕತನದಿಂದ ನೋಡುತ್ತಿದ್ದೇವೆ. ಆದರ್ಶ, ಮೌಲ್ಯಗಳಿಗೆ ಬೆಲೆ ಕೊಡದ ನಾವು ಬೂಟಾಟಿಕೆಗೆ ಡಾಂಭಿಕತನಕ್ಕೆ ಮಣೆ ಹಾಕುತ್ತಿದ್ದೇವೆ. ರಾಜಪ್ರಭುತ್ವ ಧಿಕ್ಕರಿಸಿ ಪ್ರಜಾಪ್ರಭುತ್ವ ಒಪ್ಪಿಕೊಂಡ ನಾವೇ ದೇವರು, ಧರ್ಮದ ಹೆಸರಿನಲ್ಲಿ ಮನುಷ್ಯರ ಮಧ್ಯೆ ಅಡ್ಡಗೋಡೆಗಳನ್ನು ನಿರ್ಮಿಸಿದ್ದೇವೆ. ಮಾನವೀಯತೆ, ವೈಚಾರಿಕತೆ, ತ್ಯಾಗ, ಆದರ್ಶಗಳಿಲ್ಲದೆ ನಮ್ಮ ನಮ್ಮ ಮೂಗಿನ ನೇರಕ್ಕೆ ಬದುಕು ಸಾಗಿಸುತ್ತಿದ್ದೇವೆ. ಆರಂಭದ 'ಕೊಡೆ ಹಿಡಿಯುತ್ತೇವೆ' ಹಾಗೂ ಅಂತ್ಯದ 'ಊರುಗೋಲಾಗಿ' ಸಾಲುಗಳೇ ನನ್ನ ಮೇಲಿನ ಮಾತುಗಳನ್ನು ಪುಷ್ಟೀಕರಿಸುತ್ತವೆ. 'ಕೊಡೆ ಹಿಡಿಯುತ್ತೇವೆ' ಎಂಬ ಮಾತಲ್ಲೇ ಎಂಥ ವ್ಯಂಗ್ಯವಿದೆ!

ಬಿ.ಜಿ. ಚನ್ನೇರಹೊನ್ನಾಳಿ

# ೪೩. ಸರ್ವಜ್ಞ ಕವಿ

ಮುಚ್ಚಿಟ್ಟು ಮುಗ್ಗುನಾರುವ ಒಳಬಾಳ ಬಿಚ್ಚಿ
ಬಿಸಿಲಿಗೆ, ಹಂಗು -ಹಾತೆಗಳ ಕೊಡವಿ, ಬರಿನೆತ್ತಿ
ಹೊರಟ ಜಗದಿ ಸ್ವತಂತ್ರ. ಸಂದಿ -ಗೊಂದಿಯ ಸುತ್ತಿ
ಹೊಲಸು-ಕೊಳೆ-ಕಸಕೆ ಬೆಂಕಿ ಹಚ್ಚಿ ಒಳಿತನು ಮೆಚ್ಚಿ
ತಲೆಯ ಮೇಲಿಟ್ಟ. ಡಾಂಭಿಕರನೆತ್ತೆತ್ತಿ ಒಗೆದ.
ನಕ್ಕು ನಗಿಸಿದ ಸ್ವರ್ಗಕ್ಕೆ ಕಿಚ್ಚು ಹಚ್ಚುವುದ
ಕಲಿಸಿ. ಕೆಟ್ಟ ರಕ್ತದ ಕುರುವೊಡೆದು ಲೇಪಿಸಿದ
ಗಂಧ. ತನಗು ಜಗಕೂ ನಡುವೆ ತಕ್ಕ ತ್ರಿಪದಿಯ
ಬಂಧ : ಬದುಕು -ಬಂಗಾರಕ್ಕೆ ಒರೆ ಹಚ್ಚಿದ.
ಮನೆಯಿಲ್ಲ, ಮಠವಿಲ್ಲ; ಊರೆಲ್ಲ ನೆಂಟರು.
ಎಲ್ಲಿ, ಯಾರಿವನ ಕಣ್ಣು ತಪ್ಪಿಸಿದ ಬಂಟರು ?
ಬಳ್ಳಿಗುರುಡರಿಗೊಳ್ಳೆ ಗುರುವಾಗಿ ಕೈ ಹಿಡಿದ.
ಋಷಿಯಲ್ಲ ? ಋಜುಬಾಳ ಋಷಿ, ನಿಜವ ಪರಿಭಾವಿಸಿ -
ಇವನ ಕನ್ನಡಿಯಿರದೆ ನಮ್ಮ ಮುಖವೆಲ್ಲ ಮಸಿ.

ಶ್ರೀ ಚೆನ್ನವೀರ ಕಣವಿಯರ 'ಸುನೀತ ಸಂಪದ'ವನ್ನು ಓದುತ್ತಿದ್ದಾಗ ನನ್ನನ್ನು ಮತ್ತೆ ಮತ್ತೆ ಓದಿಸಿಕೊಂಡ ಕೆಲವು ಕವಿತೆಗಳಲ್ಲಿ 'ಸರ್ವಜ್ಞ ಕವಿ' ಕೂಡಾ ಒಂದು. ಆ ಸಂಕಲನದಲ್ಲಿ ವ್ಯಕ್ತಿ-ವ್ಯಕ್ತಿತ್ವ ಕುರಿತಂತೆ ೭೫ ಸುನೀತಗಳು ಇದ್ದರೂ, ಸರ್ವಜ್ಞನನ್ನು ಕುರಿತ ಕಣವಿಯವರ ಸುನೀತವು ವಿಷಯ ಮಂಡನೆ, ನಿರ್ವಹಣೆ ಮತ್ತು ಅದು ತಲುಪುವ ತೀರ್ಮಾನಗಳ ಕಾರಣಕ್ಕೆ ವಿಶೇಷವಾಗಿ ಗಮನ ಸೆಳೆಯುತ್ತವೆ

'ನಗರದಲ್ಲಿ ನೆರಳು' ಸಂಗ್ರಹದ 'ಸರ್ವಜ್ಞ ಕವಿ' ಸುನೀತವು ಷೇಕ್ಸಪಿಯರನ್ ಮಾದರಿಯ ಸುನೀತವಾಗಿದ್ದು ಆರಂಭದಲ್ಲಿ ಮೂರು ಚೌಪದಿಗಳು ಮತ್ತು ಕೊನೆಯಲ್ಲಿ ಒಂದು ದ್ವಿಪದಿಯನ್ನು

ಒಳಗೊಂಡಿದೆ. ಮೂರು ಚೌಪದಿಗಳಲ್ಲಿ ವಿಷಯ ಪ್ರವೇಶ, ಬೆಳವಣಿಗೆ ಮತ್ತು ಸಮರ್ಥನೆಯ ಕಾರ್ಯ ನಡೆದಿದ್ದು ಕೊನೆಯಲ್ಲಿ ಬರುವ ದ್ವಿಪದಿಯಲ್ಲಿ ಕವನದ ತಾತ್ವಿಕತೆಯು ತುಂಬ ಸಮರ್ಪಕವಾಗಿ ಮೂಡಿಬಂದಿದೆ.

ಕಣವಿಯವರು ಆಯ್ದುಕೊಂಡ ಸರ್ವಜ್ಞ ಕನ್ನಡಿಗರಿಗೆ ಆಪ್ತನಾದವನು,. ಸರ್ವಜ್ಞ ಎಂದೊಡನೆ ಪ್ರತಿಯೋರ್ವರ ಮನದಲ್ಲೂ ಅವನ ವ್ಯಕ್ತಿತ್ವ ಒಂದೊಂದು ಬಿಂಬ ಸ್ಫುಟಗೊಂಡು, ಆತನ ಹಲವಾರು ತ್ರಿಪದಿಗಳು ರಿಂಗಣಗುಡುವುದು ಸಾಮಾನ್ಯವೇನೋ. 'ಸರ್ವಜ್ಞನೆಂಬುವನು ಗರ್ವದಿಂದಾದವನೆ ಸರ್ವರೊಳಗೊಂದೊಂದು ನುಡಿಗಲಿತು ವಿದ್ಯೆಯ ಪರ್ವತವೇ ಆದ ಸರ್ವಜ್ಞ' ಎಂಬ ತ್ರಿಪದಿಯು ನಮ್ಮಲ್ಲಿ ವಿನಯದ ಮನೋಭಾವವನ್ನು ಉದ್ದೀಪಿಸಬಲ್ಲುದಾಗಿದೆ. ಹೀಗೆ ಹಲವರ ಭಾವಕೋಶವನ್ನು ಆವರಿಸಿ, ಅವರವರ ಅಳವಿಗೆ ತಕ್ಕಂತೆ ತನ್ನ ಛಾಪನ್ನು ಮೂಡಿಸಿರುವ ಸರ್ವಜ್ಞನ ವ್ಯಕ್ತಿತ್ವ ಮತ್ತು ಕೊಡುಗೆಯನ್ನು ಸುನೀತದ ಹದಿನಾಲ್ಕು ಸಾಲುಗಳಲ್ಲಿ ಹಿಡಿದಿಡುವುದು ಒಂದು ಸಾಹಸವೇ ಸರಿ. ಕಣವಿಯವರು ತಮ್ಮ ಈ ಪ್ರಯತ್ನದಲ್ಲಿ ನಿಸ್ಸಂಶಯವಾಗಿ ಯಶಸ್ವಿಯಾಗಿದ್ದಾರೆ. ಅವರು ಕಟ್ಟಿಕೊಟ್ಟಿರುವ ಸರ್ವಜ್ಞನ ವ್ಯಕ್ತಿಚಿತ್ರವು ಸರಳ, ಸುಂದರ, ಆಪ್ತವಾಗಿರುಂತೆ ಕೈಗನ್ನಡಿಯೂ ಆಗಿದೆ.

ಸರ್ವಜ್ಞನನ್ನು ಹೊಸದಾಗಿ ಪರಿಚಯಿಸಬೇಕಿಲ್ಲದ ಕಾರಣ, ನೇರವಾಗಿ ಆತನ ಅನನ್ಯ ವ್ಯಕ್ತಿತ್ವದ ಕಡೆಗೇ ಸುನೀತ ಮುಖ ಮಾಡುತ್ತದೆ. 'ಮುಚ್ಚಿಟ್ಟು ಮುಗ್ಗುನಾರುವ ಒಳಬಾಳ ಬಿಚ್ಚಿ ಬಿಸಿಲಿಗೆ' ಎಂಬ ಸುನೀತದ ಮೊದಲ ಸಾಲು ಜನಸಾಮಾನ್ಯರ ಬದುಕಿನ ನೇರ್ಪುಗೊಳಿಸಿದ ಕ್ರಮವನ್ನೂ ಸೂಚಿಸುತ್ತದೆ. ಯಾವುದೇ ವಸ್ತುವನ್ನಾಗಲೀ ಗಾಳಿ ಬೆಳಕುಗಳಿಗೆ ಒಡ್ಡದೆ ಮುಚ್ಚಿಟ್ಟರೆ, ಸಹಜವಾಗಿಯೇ ಅದರಿಂದ ಮುಗ್ಗಲು ವಾಸನೆ ಹೊರಡುತ್ತದೆ. ಇದು ಎಲ್ಲರ ಅನುಭವಗ್ರಾಹ್ಯವಾದ ವಿಚಾರ. ಈ ಕವಿತೆಯೊಳಗೆ ಮುಗ್ಗಲು ವಾಸನೆ ಬರುತ್ತಿರುವುದು ಜನರ 'ಒಳಬದುಕು'. ಸ್ಥಗಿತವಾದ ಚಿಂತನೆ ಮತ್ತು ಮೌಲ್ಯಗಳನ್ನೇ ಅಪ್ಪಿಕೊಂಡು ಬದುಕುವಾಗ ಅನೇಕ ಜಾಡ್ಯಗಳು ನಮ್ಮನ್ನು ಆವರಿಸಿಕೊಳ್ಳುತ್ತವೆ. ಜನರ ಇಂತಹ ಅಂತರಂಗವೆಂಬ ಒಳಬದುಕು ಆತ್ಮವಿಮರ್ಶೆ ಎಂಬ ಬೆಳಕಿಗೆ ತೆರೆದುಕೊಳ್ಳದೆ ಇದ್ದಾಗ ಮುಗ್ಗಲು ವಾಸನೆಯನ್ನು ಬೀರುತ್ತದೆ ಎಂಬ ಧ್ವನಿ ಇಲ್ಲಿಯದು. ಹೀಗೆ ತಮ್ಮ ಮಿತಿಗಳನ್ನು ದೋಷಗಳನ್ನು ಮುಚ್ಚಿಟ್ಟು ಮುಗ್ಗಲು ನಾರುವ ಜನರ ಈ 'ಇರುವಿಕೆ'ಯನ್ನು ಸರ್ವಜ್ಞನು ಬಿಸಿಲಿಗೆ ಬಿಚ್ಚಿ ಹರಹಿದ್ದಾನೆ! ಬಿಸಿಲು ಎಂಬುದು ವಾಚ್ಯಾರ್ಥದ ಜೊತೆಗೆ ಬೆಳಕು, ಜ್ಞಾನ, ಹೊಸತನ ಈ ಎಲ್ಲವನ್ನೂ ಸೂಚಿಸುತ್ತದೆ. ಮುಗ್ಗಲು ನಾರುವ ಜನರನ್ನು ನಿರಾಕರಿಸದೆ, ಅವರ ಒಳಗನ್ನು ಬಿಸಿಲಿಗೆ ಹರಡಿಟ್ಟು ಮತ್ತೆ ಆ ಬದುಕಲ್ಲಿ ಹೊಸತನದ ಗಾಳಿ, ಸ್ವಚ್ಛತೆಯ ಮನಃಸ್ಥಿತಿ, ನವೀನ ಧೋರಣೆಗಳು ಪ್ರವೇಶಿಸುವುದಕ್ಕೆ ಅನುವು ಮಾಡಿಕೊಟ್ಟಿರುವ ಸರ್ವಜ್ಞನ ಧನಾತ್ಮಕ ಕಾಳಜಿಯನ್ನು ಕವಿ ಸೂಚಿಸಿದ್ದಾರೆ. ಹೀಗೆ ಮಾಡಿದಾಗ ಸಹಜವಾಗಿ ಬದುಕಲ್ಲಿ ತುಂಬಿಕೊಂಡಿದ್ದ 'ಹಂಗು-ಹಾತೆ'ಗಳೆಂಬ ಒಳಗೊಳಗೇ ಸೇರಿಕೊಂಡು ನಾಶಕ್ಕೆ ಕಾರಣವಾಗುವ ಕೊಳಕನ್ನು ಕೊಡವಿದಂತಾಗುತ್ತದೆ. ಬೇರೆಯವರ ಬದುಕನ್ನು ಮಾತ್ರವಲ್ಲ, ಸರ್ವಜ್ಞ ತನ್ನ ವೈಯಕ್ತಿಕ

ಬದುಕನ್ನೂ ಹೀಗೆ ಬಿಸಿಲಿಗೊಡ್ಡಿ, ಬರಿನೆತ್ತಿಯಲ್ಲಿ ಸ್ವತಂತ್ರನಾಗಿ ಹೊರಟವನು. ಅದಕ್ಕಾಗೇ ಆತನಿಗೆ 'ಜಗದಿ ಸ್ವತಂತ್ರ'ನಾಗಲು ಸಾಧ್ಯವಾಯಿತು. ಈ ಜಗತ್ತಿನ ಹಂಗು ಆತನಿಗೆ ಇರಲಿಲ್ಲ. ಆದಾಗ್ಯೂ, ಅವನ ಎಲ್ಲ ಪ್ರಯತ್ನಗಳೂ ಈ ಜನರ, ಜಗದ ಸ್ವಚ್ಛತೆಯ ಕುರಿತೇ ಎಂಬುದೂ ಗಮನಿಸಬೇಕಾದ ಸಂಗತಿ ಎಂಬುದನ್ನು ಕವಿ ಸೂಚಿಸುತ್ತಿದ್ದಾರೆ.

ಸರ್ವಸಂಗ ಪರಿತ್ಯಾಗಿಯಾದ ಸರ್ವಜ್ಞ ದೇಶಾಟನೆಯ ಮೂಲಕ ಗಳಿಸಿದ್ದು ಅಗಾಧ. 'ಸಂದಿಗೊಂದಿಯ ಸುತ್ತಿ, ಹೊಲಸು-ಕೊಳೆ-ಕಸಕೆ ಬೆಂಕಿ ಹಚ್ಚಿ, ಒಳಿತನು ಮೆಚ್ಚಿ ತಲೆಯ ಮೇಲಿಟ್ಟ' ಎಂಬ ಸಾಲು ಸರ್ವಜ್ಞನ ಕೊಡುಗೆಯ ಅಗಾಧತೆ, ಪ್ರಾಮುಖ್ಯ ಮತ್ತು ಮೌಲಿಕತೆಗಳನ್ನು ಹೇಳುತ್ತದೆ. ಆತ ಸುತ್ತದ ಜಾಗವೇ ಇರಲಿಲ್ಲ. ಆತ ರಾಜಮಾರ್ಗದಲ್ಲಿ ನಡೆದದ್ದಲ್ಲ! 'ಸಂದಿ-ಗೊಂದಿ'ಗಳನ್ನು ಸುತ್ತಿದಾತ. ಈ ಸಂದಿಗೊಂದಿಗಳು ಇಕ್ಕಟ್ಟಿನ ದಾರಿಗಳನ್ನು, ಜನಸಾಮಾನ್ಯರ ಅಥವಾ ಶ್ರಮಿಕ ವರ್ಗದವರ ಪರಿಸರವನ್ನು ಪ್ರತಿನಿಧಿಸುತ್ತವೆ. ಹೀಗೆ ಸುತ್ತಿ ಕಂಡುಬಂದ ಹೊಲಸು -ಕೊಳೆ-ಕಸಕೆ ಆತ ಬೆಂಕಿಹಚ್ಚಿ ನಾಶಮಾಡಲು ಯತ್ನಿಸಿದ್ದನ್ನು ಕವನ ಸೂಚಿಸುತ್ತದೆ. ಇದು ವಾಚ್ಯಾರ್ಥವಾದರೆ, ಧ್ವನ್ಯಾರ್ಥದಲ್ಲಿ ಸಂದಿಗೊಂದಿಗಳು ಮನಸ್ಸಿನ ಸಂದಿಗೊಂದಿಗಳನ್ನು ಸೂಚಿಸುತ್ತವೆ. ಅಂತೆಯೇ ಮನದೊಳಗಣ ಹೊಲಸು-ಕೊಳೆ-ಕಸಗಳಿಗೆ ಬೆಂಕಿ ಹಚ್ಚಿ, ಅವುಗಳ ನಿರ್ಮೂಲನದ ಕಾಯಕವನ್ನು ಸರ್ವಜ್ಞ ಶ್ರದ್ಧೆಯಿಂದ ಮಾಡಿದ ಎಂಬುದನ್ನು ಮೇಲಿನ ಸಾಲು ಧ್ವನಿಸುತ್ತದೆ. ಸರ್ವಜ್ಞನ ವ್ಯಕ್ತಿತ್ವದ ಹಿರಿಮೆ ಎಲ್ಲಿದೆ ಎಂದರೆ, ಆತ ಕೇವಲ ಟೀಕೆ, ಕಟಕಿ, ವಿಡಂಬನೆಗಳಲ್ಲಿ ವಿರಮಿಸದೆ, 'ಒಳಿತನು ಮೆಚ್ಚಿ ತಲೆಯ ಮೇಲೆ ಇಟ್ಟುಕೊಂಡ' ಎಂಬುದನ್ನು ನಾವು ಗಮನಿಸಬೇಕಾಗಿದೆ. ಈ ಕಾಯಕವೇ ಆತನಿಗೆ ಯಾರನ್ನು ಬೇಕಾದರೂ ಪ್ರಶ್ನಿಸುವ ಛಾತಿಯನ್ನು ತಂದಿದೆ. ಅಂತೆಯೇ 'ಡಾಂಭಿಕರನ್ನೆತ್ತೆತ್ತಿ ಒಗೆಯಲು' ಅವನಿಂದ ಸಾಧ್ಯವಾಯಿತು. ಇಲ್ಲಿ ಡಾಂಭಿಕರು ಎಂದರೆ ಪುರೋಹಿತಶಾಹಿ, ರಾಜಶಾಹಿ, ಬಂಡವಾಳಶಾಹಿ- ಹೀಗೆ ಯಾವುದೇ ವರ್ಗವಾದರೂ ಆಗಬಹುದು. ಎಲ್ಲ ಡಾಂಭಿಕರನ್ನೂ ಆತ ತನ್ನ ವಿಮರ್ಶೆಯ ನಿಕಷದಿಂದ ದೂರ ಇಡಲಿಲ್ಲ. 'ಎತ್ತೆತ್ತಿ ಒಗೆದ' ಎಂದರೆ, ಅವರ ದೌರ್ಬಲ್ಯಗಳಿಗೆಲ್ಲ ಬೆಳಕುಚೆಲ್ಲಿ, ಅವರ ಅಂತರಂಗವೂ ಶುದ್ಧವಾಗುವುದಕ್ಕೆ ಪ್ರಯತ್ನಿಸಿದ್ದನ್ನು ಸೂಚಿಸುತ್ತದೆ.

ಕೇವಲ ಲೋಪಗಳನ್ನೇ ಹುಡುಕುವ ಮನಸ್ಸಿಗೆ, ಒಂದು ಬಗೆಯ ನೇತ್ಯಾತ್ಮಕ ನಿಲುವು ಅಂಟಿಬಿಡುವುದು ಲೋಕರೂಢಿ. ಆಗ ಅಂಥ ಮನಸ್ಸಿಗೆ ಎಲ್ಲೆಲ್ಲೂ ಕೆಡುಕುಗಳೇ ಕಾಣತೊಡಗುತ್ತವೆ. ಸರ್ವಜ್ಞ ಮಾತ್ರ ಇದಕ್ಕೆ ಅಪವಾದ ಎನ್ನುತ್ತಾನೆ ಕವಿ. ಲೌಕಿಕದಲ್ಲಿ ಮುಳುಗಿ, ಅರಿಷಡ್ವರ್ಗಗಳಿಗೆ ದಾಸರಾಗಿ, ಬದುಕಿನ ಜಂಜಾಟಗಳಲ್ಲೇ ಮುಳುಗಿದ ಜನರಿಗೆ ಬದುಕಿನ ನಿಜವಾದ ಸುಖ-ಸಂತೃಪ್ತಿಗಳನ್ನು ಪರಿಚಯಿಸುತ್ತ, ಅವರನ್ನು 'ನಕ್ಕು ನಗಿಸಿದ'; ಅವರಿಗೆ 'ಸ್ವರ್ಗಕ್ಕೆ ಕಿಚ್ಚು ಹಚ್ಚುವುದು ಕಲಿಸಿದ!' ಇಲ್ಲಿ ಕಣವಿಯವರು ಕೆಲವೇ ಮಾತುಗಳಲ್ಲಿ ಬಹು ಅರ್ಥಗಳನ್ನು ಧ್ವನಿಸುತ್ತಾರೆ. ಈ ಸಂತನು ಜನರಿಗೆ ವಿರಕ್ತಿಯನ್ನು ಬೋಧಿಸದೆ, ಕಾಣದ ಸ್ವರ್ಗಕ್ಕಿಂತ ವರ್ತಮಾನದ ಬದುಕಿನಲ್ಲಿ ಸ್ವರ್ಗವನ್ನು ಸೃಷ್ಟಿಸಲು ಕಲಿಸಿದ. ಹೀಗಾಗಿ ಸರ್ವಜ್ಞ ಓರ್ವ ದ್ರಷ್ಟಾರನಾಗಿ ಕವಿಗೆ ಕಂಡಿರುವುದು ಔಚಿತ್ಯಪೂರ್ಣವಾಗಿದೆ.

'ಕೆಟ್ಟ' ರಕ್ತದ ಕುರುವೊಡೆದು ಲೇಪಿಸಿದ ಗಂಧ' ಎಂಬ ಸಾಲು ಸರ್ವಜ್ಞನ ಕಾರ್ಯದ ಮಹತ್ವವನ್ನು ಸೂಚಿಸುತ್ತದೆ. ಕುರು ಒಳಗಿನ ಅಶುದ್ಧತೆಯ ಸೂಚಕವಾಗಿ ಕಾಣಿಸಿಕೊಳ್ಳುತ್ತದೆ. ಅದನ್ನು ಒಡೆಯಹೋದರೆ ನೋವಾಗುತ್ತದೆ ಎಂಬ ಕಾರಣಕ್ಕೆ. ಹಾಗೇ ಇಟ್ಟುಕೊಂಡಿರಲು ಸಾಧ್ಯವಿಲ್ಲವಲ್ಲ. ದೇಹದ ಕುರುವನ್ನು ವೈದ್ಯ ಒಡೆದು, ಅದಕ್ಕೆ ಔಷಧಿ ಹಾಕುವಂತೆ, ಸರ್ವಜ್ಞನು/ ಜನರ ಮನದೊಳಗೆ ಎದ್ದ 'ಕುರು'ಗಳನ್ನು ತನ್ನ ತೀಕ್ಷ್ಣ ವಿಮರ್ಶೆ ಎಂಬ ನುಡಿಗಳ ಮೂಲಕ ಒಡೆದು, ಗಂಧವನ್ನು ಸವರಿದ್ದಾನೆ. ಈ ಗಂಧ ಬೇರಾವುದೂ ಅಲ್ಲ; ತಿಳುವಳಿಕೆ ಎಂಬ ಗಂಧ; ಜನರ ಬದುಕಿಗೆ ಅವಶ್ಯಕವಾದ ಗಂಧ.

'ತನಗು ಜಗಕೂ ತಕ್ಕ ತ್ರಿಪದಿಯ ಬಂಧ; ಬದುಕು-ಬಂಗಾರಕ್ಕೆ ಒರೆಹಚ್ಚಿದ; ಎಂಬಲ್ಲಿ ಆತನ ತ್ರಿಪದಿಗಳು ಆತನಿಗೂ ಜಗತ್ತಿಗೂ ನಡುವೆ ಭಾವಸೇತುವೆಗಳಾಗಿ ನಿಂತಿರುವುದು ಸೂಚಿತವಾಗಿದೆ. ಆತನ ಅಂಕಿತದಲ್ಲಿರುವ ಸಾವಿರಾರು ತ್ರಿಪದಿಗಳಲ್ಲಿ ಹಲವು ಪ್ರಕ್ಷಿಪ್ತಗಳೂ ಸೇರಿಕೊಂಡಿವೆ. ಇದು ಆತನ ಜನಪ್ರಿಯತೆ ಮತ್ತು ಮಹತ್ವದ ನಿದರ್ಶನಗಳು. ತನ್ನ ತ್ರಿಪದಿಗಳ ಮೂಲಕ ಆತ ಒರೆಗೆ ಹಚ್ಚಿದ್ದು 'ಬದುಕೆಂಬ ಬಂಗಾರವನ್ನು'! ಹೀಗಾಗಿ ಆತನ ಕುಲುಮೆಯ ಒಳಹಾದು ಬಂದವರ ಬದುಕು, ಚೊಕ್ಕ ಚಿನ್ನವಾಗಿ ಹೊಳೆಯತೊಡಗುತ್ತದೆ ಎಂಬ ಇಂಗಿತವಿದೆ. 'ಮನೆಯಿಲ್ಲ ಮಠವಿಲ್ಲ ಊರೆಲ್ಲ ನೆಂಟರು' ಎಂಬ ಸಾಲು ಸರ್ವಜ್ಞನ ವ್ಯಕ್ತಿತ್ವದ ಅನನ್ಯತೆಯನ್ನು ಸೂಚಿಸುತ್ತದೆ. ಸಂಸಾರವಂದಿಗರಿಗೆ ಸಾಮಾನ್ಯವಾಗಿ ನೆಂಟರು, ಇಷ್ಟರು ಎಂಬ ದೊಡ್ಡ ವಲಯವಿರುತ್ತದೆ. ಅದನ್ನೇ ತೊರೆದವರಿಗೆ ಯಾರಿದ್ದಾರೋ ಎಂಬುದು ಸಾಮಾನ್ಯ ಅಭಿಪ್ರಾಯ. ವಾಸ್ತವವಾಗಿ ಸಂಸಾರಸ್ಥರಿಗೂ ಆಪತ್ಕಾಲದಲ್ಲಿ ಅವರಿಗೆ ರಕ್ತಸಂಬಧಿಗಳೂ ಉಳಿಯುತ್ತಾರೆನ್ನುವ ಭರವಸೆಯಿಲ್ಲ. ಹೀಗಿರುವಾಗ ವಿರಕ್ತ ಸರ್ವಜ್ಞನಿಗೆ ಊರೆಲ್ಲ ನೆಂಟರು ! ಇದು ಆತನ 'ಸಾಧನೆ' ಅಥವಾ 'ಗಳಿಕೆ'ಗೆ ಹಿಡಿದ ಕನ್ನಡಿಯಾಗಿದೆ.

ಈತನ ಹದ್ದಿನ ಕಣ್ಣಿನಿಂದ ತಪ್ಪಿಸಿಕೊಂಡವರು ಯಾರಿದ್ದಾರೆ ? ಎಲ್ಲಿದ್ದಾರೆ? ಎಂದು ಪ್ರಶ್ನಿಸುವ ಮೂಲಕ, ಅವನ ದೃಷ್ಟಿಕೋನದ ವ್ಯಾಪಕತೆಯನ್ನು ಸೂಚಿಸಲಾಗಿದೆ. ಆದುದರಿಂದಲೇ ಸರ್ವಜ್ಞ 'ಬಳ್ಳಿಗುರುಡರಿಗೊಳ್ಳೆ ಗುರುವಾಗಿ ಕೈಹಿಡಿದ' ಎನ್ನುತ್ತಾರೆ ಕವಿ. ಬಳ್ಳಿ ಎಂದರೆ ಕರುಳಬಳ್ಳಿ, ಸಂತಾನ. ತಾನು, ತನ್ನವರು ಎಂಬ ತೀರ ಸಂಕುಚಿತ ಬಾಂಧವ್ಯದಲ್ಲೇ ಗಿರಕಿ ಹೊಡೆಯುವವರನ್ನು ಸರ್ವಜ್ಞ ಗುರುವಾಗಿ ಕರೆದೊಯ್ದು ವಿಶಾಲ ಜನತ್ತಿನ ಶಿಶುವಾಗಿದ್ದಾನೆ. ಹೀಗೆ ಹನ್ನೆರಡು ಸಾಲುಗಳಲ್ಲಿ ಸರ್ವಜ್ಞನ ಬದುಕು, ಜೀವನಧೋರಣೆ, ಮಹತ್ವಗಳನ್ನು ಕಡೆದಿಟ್ಟ ಕಣವಿಯವರು ಕೊನೆಯ ದ್ವಿಪದಿಯಲ್ಲಿ ಅದಕ್ಕೊಂದು ತಾರ್ಕಿಕ ಮತ್ತು ಪರಿಣಾಮಕಾರಿಯಾದ ಮುಕ್ತಾಯವನ್ನು ನೀಡುತ್ತಾರೆ,

ಋಷಿಯಲ್ಲ? ಋಜುಬಾಳ ಋಷಿ. ನಿಜವ ಪರಿಭಾವಿಸಿ
ಇವನ ಕನ್ನಡಿಯಿರದೆ ನಮ್ಮ ಮುಖವೆಲ್ಲ ಮಸಿ

ಋಷಿಯಲ್ಲ ಎಂದರೆ ಆತ ಋಷಿಯಲ್ಲವೇ ಎಂಬ ಅರ್ಥವೂ ಆಗುತ್ತದೆ; ಆತನಲ್ಲದಿದ್ದರೆ ಮತ್ತಾರನ್ನು ಋಷಿ ಎನ್ನಬೇಕು ಎಂಬ ಅರ್ಥವೂ ಆಗುತ್ತದೆ. ಆತ ಹುಲುಮನುಜರಿಗೆ ಕೊಟ್ಟ ದೊಡ್ಡ ಕಾಣಿಕೆ ಎಂದರೆ ಋಜುತ್ವದ-ಬಾಳಿನ ಋಷಿ ಮತ್ತು ನಿಜವನ್ನು ಪರಿಭಾವಿಸುವ ದೃಷ್ಟಿಕೋನ ಎನ್ನುತ್ತಾನೆ ಕವಿ. ಅಂತೆಯೇ ಇವನ ಕನ್ನಡಿಯೊಂದು ನಮಗೆ ದೊರೆಯದಿದ್ದಲ್ಲಿ, ನಮ್ಮ ಮೈಯೆಲ್ಲ, ಮನವೆಲ್ಲ, ಬದುಕೆಲ್ಲ ಮಸಿಯಾಗುತ್ತಿತ್ತು ಎಂಬ ಎಚ್ಚರಿಕೆಯನ್ನೂ ನೀಡುತ್ತಾರೆ.

'ಸರ್ವಜ್ಞ ಕವಿ' ಸುನೀತವನ್ನು ಅದರ ಗಣವಿನ್ಯಾಸಗಳ ನೆಲೆಯಿಂದ ಅಭ್ಯಸಿಸುವುದು ಇನ್ನೊಂದು ನೆಲೆ. ಕಣವಿಯವರ ಸುನೀತಗಳಲ್ಲಿ ಅನೇಕ ಗಣಪರಿವೃತ್ತಿಯ ಪ್ರಯೋಗಗಳನ್ನು ಮಾಡಿರುವುದನ್ನು ಈಗಾಗಲೇ ಗುರುತಿಸಿದ್ದಾರೆ. ಪ್ರಸ್ತುತ ಈ ಸುನೀತದಲ್ಲೂ ಗಣಪರಿವೃತ್ತಿಯಲ್ಲಿ ಹಲವು ವಿನ್ಯಾಸಗಳು ದೊರೆಯುತ್ತವೆ. ಅದನ್ನು ಗಮನಿಸಲು ಸುನೀತದ ಪೂರ್ಣಪಾಠವನ್ನೇ ನೋಡಬೇಕಾಗುತ್ತದೆ.

೫ ೫ ೪ ೬
ಮುಚ್ಚಿಟ್ಟು / ಮುಗ್ಗುನಾ /ರುವ ಒಳ / ಬಾಳ ಬಿಚ್ಚಿ
೪ ೬ ೫ ೫
ಬಿಸಿಲಿಗೆ / ಹಂಗು-ಹಾತೆ /ಗಳ ಕೊಡವಿ /ಬರಿನೆತ್ತಿ
೬ ೪ ೫ ೫
ಹೊರಟ ಜಗದಿ / ಸ್ವತಂತ್ರ / ಸಂದಿ ಗೊಂ/ದಿಯ ಸುತ್ತಿ /
೫ ೬ ೫ ೫
ಹೊರಟ ಜಗದಿ / ಸ್ವತಂತ್ರ / ಸಂದಿ ಗೊಂ/ದಿಯ ಸುತ್ತಿ /
೫ ೬ ೫ ೫
ಹೊಲಸು-ಕೊಳೆ / -ಕಸಕೆ ಬೆಂಕಿ / ಹಚ್ಚಿ, ಒಳಿ /ತನು ಮೆಚ್ಚಿ
೫ ೫ ೫ ೫
ತಲೆಯ ಮೇ/ಲಿಟ್ಟ ಡಾಂ/ಭಿಕರನೆ/ ತ್ತೆತ್ತಿ ಒಗೆದ.
೫ ೬ ೪ ೫
ನಕ್ಕು ನಗಿ / ಸಿದ ಸ್ವರ್ಗ /ಕ್ಕೆ ಕಿಚ್ಚು / ಹಚ್ಚುವುದ
೬ ೪ ೫ ೫
ಕಲಿಸಿ ಕೆಟ್ಟ / ರಕ್ತದ / ಕುರುವೊಡೆದು / ಲೇಪಿಸಿದ /
೬ ೪ ೬ ೪
ಗಂಧ ತನಗು /ಜಗಕೂ / ನಡುವೆ ತಕ್ಕ / ತ್ರಿಪದಿಯ
೬ ೪ ೫ ೪
ಬಂಧ : ಬದುಕು / - ಬಂಗಾ /ರಕ್ಕೆ ಒರೆ / ಹಚ್ಚಿದ

೫ ೬ ೫ ೪

ಮನೆಯಿಲ್ಲ, / ಮಠವಿಲ್ಲ / : ಊರೆಲ್ಲ / ನೆಂಟರು

೫ ೬ ೫ ೪

ಎಲ್ಲಿಯಾ /ರಿವನ ಕಣ್ಣು /ಕಣ್ಣು / ತಪ್ಪಿಸಿದ / ಬಂಟರು ?

೫ ೫ ೫ ೫

ಬಳ್ಳಿಗುರು / ದರಿಗೊಳ್ಳೆ / ಗುರುವಾಗಿ / ಕೈಹಿಡಿದ /

೫ ೫ ೫ ೬

ಋಷಿಯಲ್ಲ? / ಋಜಬಾಳ / ಋಷಿ. ನಿಜವ / ಪರಿಭಾವಿಸಿ

೫ ೫ ೫ ೫

ಇವನ ಕ / ಕನ್ನಡಿಯಿರದೆ / ನಮ್ಮ ಮುಖ / ವೆಲ್ಲ ಮಸಿ.

ಸಾಮಾನ್ಯವಾಗಿ ಸುನೀತದಲ್ಲಿ ಐದು ಮಾತ್ರೆಯ ನಾಲ್ಕು ಗಣಗಳು ಬರುವುದು ನಿಯಮ. ಕನ್ನಡ ಕವಿಗಳು ಬಹುಮಟ್ಟಿಗೆ ಇದನ್ನು ಪಾಲಿಸಿದರೂ ಕೆಲವೊಮ್ಮೆ ಉಲ್ಲಂಘಿಸಿರುವುದೂ ಇದೆ. ನಿದರ್ಶನಕ್ಕೆ ಮೇಲಿನ ಸುನೀತದ ೯ ಮತ್ತು ೧೦ ನೇ ಸಾಲುಗಳಲ್ಲಿ ಕೇವಲ ೧೯ ಮಾತ್ರೆಗಳಿದ್ದರೆ, ೪ ಮತ್ತು ೧೩ನೇ ಸಾಲುಗಳಲ್ಲಿ ೨೧ ಮಾತ್ರೆಗಳು ಕಂಡುಬರುತ್ತವೆ. ಹಾಗೆಯೇ ಪ್ರತಿ ಸಾಲಿನಲ್ಲಿ ೫/೫/೫/೫ ರ ಗಣವಿಭಾಗ ಅಲ್ಲಲ್ಲಿ ಉಲ್ಲಂಘನೆಯಾಗಿದೆ. ನಿದರ್ಶನಕ್ಕೆ ಎರಡನೆಯ ಸಾಲಿನಲ್ಲಿ ೪/೬ಕ್ಕೆ ತಿರುಗಿಕೊಂಡಿದೆ. ಇದೇ ರೀತಿಯಲ್ಲಿ ೬,೭,೮,೯ ಮತ್ತು ೧೧ನೇ ಸಾಲುಗಳಲ್ಲಿ ಗಣಪರಿವೃತ್ತಿಗಳು ಗೋಚರಿಸುತ್ತವೆ. ಪ್ರಾಸದ ನೆಲೆಯಲ್ಲೂ ಕಣವಿಯವರ ಸ್ವೋಪಜ್ಞತೆ ಗಮನಕ್ಕೆ ಬರುತ್ತದೆ. ಮೂರು ಚೌಪದ ಮತ್ತು ಒಂದು ದ್ವಿಪದಿಯ ಚೌಕಟ್ಟಿನ ಪಾಲನೆಯಲ್ಲಿ ಅವರು ಷೇಕ್ಸ್‌ಪಿಯರನ್ ಮಾದರಿಯನ್ನು ಅನುಸರಿಸುವುದು ನಿಜವಾದರೂ ಅಂತ್ಯ ಪ್ರಾಸ ಆ ಮಾದರಿಗಿಂತ ಭಿನ್ನವಾಗಿದೆ. ಷೇಕ್ಸ್‌ಪಿಯರನ್ ಮಾದರಿಯ ಸಾನೆಟ್‌ನಲ್ಲಿ ಅಂತ್ಯಪ್ರಾಸವು ಎಬಿಎಬಿ, ಸಿಡಿಸಿಡಿ, ಇಎಫ್‌ಇಎಫ್, ಜಿಜಿ ಈ ಮಾದರಿಯಲ್ಲಿದ್ದರೆ, ಸರ್ವಜ್ಞ ಕವಿ ಸುನೀತದ ಅಂತ್ಯಪ್ರಾಸವು ಎಬಿಎಬಿ, ಸಿಸಿಸಿಬಿ, ಸಿಇಇಸಿ, ಎಫ್‌ಎಫ್ ರೀತಿಯಲ್ಲಿ ಕಂಡುಬರುತ್ತದೆ. ಎಂದರೆ ಕಣವಿಯವರು ಷೇಕ್ಸ್‌ಪಿಯರನ್ ಮಾದರಿಯ ಸಾನೆಟ್‌ನ್ನು ಸಾಲುಗಳ ವಿಭಜನೆಯ ತಾತ್ವಿಕತೆಯಲ್ಲಿ ಸ್ವೀಕರಿಸಿದ್ದು, ಉಳಿದಂತೆ ತಮ್ಮ ಸ್ವಾತಂತ್ರ್ಯವನ್ನು ಮೆರೆದಿದ್ದಾರೆ ಎಂದು ಹೇಳಬಹುದು.

ಸಬಿಹಾ ಭೂಮಿ ಗೌಡ

## ೪೪. ಯಾರು ಕೇಳುತ್ತಾರೆ, ಹೇಳಿರಣ್ಣಾ

ಅಲ್ಲಿ ಮುಳುಗುತ್ತಾರೆ, ಇಲ್ಲಿ ಏಳುತ್ತಾರೆ
ಎದ್ದು ಮೆರೆಯುತ್ತಾರೆ, ಹದ್ದು ಮೀರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಕದ್ದು ಕೇಳುತ್ತಾರೆ, ಸುದ್ದಿ ಮಾಡುತ್ತಾರೆ
ಗುದ್ದಿ ನೋಡುತ್ತಾರೆ; ಒದ್ದು ಓಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಹೊರಗೆ ಮೆಚ್ಚುತ್ತಾರೆ, ಒಳಗೆ ಚುಚ್ಚುತ್ತಾರೆ
ಮರೆಗೆ ಕಚ್ಚುತ್ತಾರೆ, ತೆರೆಗೆ ಬಿಚ್ಚುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ತಲೆಯ ಕೆರೆಯುತ್ತಾರೆ, ಕಲೆಯ ಕೊರೆಯುತ್ತಾರೆ
ನೆಲವ ಮರೆಯುತ್ತಾರೆ, ಬೆಲೆಗೆ ಮೆರೆಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಬಲೆಯ ಬೀಸುತ್ತಾರೆ, ಬುಟ್ಟಿಗೆಸೆಯುತ್ತಾರೆ
ಇಟ್ಟು ಕೊಳೆಸುತ್ತಾರೆ, ಹೊಟ್ಟೆ ಬೆಳೆಸುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಘಂಡು ಎತ್ತುತ್ತಾರೆ, ಎತ್ತಿ ಹಾಕುತ್ತಾರೆ
ಬಂಡು ಹೂಡುತ್ತಾರೆ, ಚೆಂಡು ಸುಲಿಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಕೈಯ ಮುಗಿಯುತ್ತಾರೆ, ಕಾಲು ಕೆದರುತ್ತಾರೆ
ಬಾಲ ಹಿಡಿಯುತ್ತಾರೆ, ಮೇಲೆ ಏರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಬಾಯಿ ಬಡಿಯುತ್ತಾರೆ, ಕಾಯಿ ಒಡೆಯುತ್ತಾರೆ
ಮರ್ಜಿ ಹಿಡಿಯುತ್ತಾರೆ, ಕುರ್ಚಿ ಪಡೆಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ರೈಲು ತಡೆಯುತ್ತಾರೆ, ದೀಪ ಒಡೆಯುತ್ತಾರೆ
ಕಲ್ಲು ತೂರುತ್ತಾರೆ, ಸುಳ್ಳು ದೂರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಹೊತ್ತು ಹೊರೆವವರಿಲ್ಲ, ಕಿತ್ತು ತಿಂಬವರೆಲ್ಲ
ಬಿತ್ತಿ ಬೆಳೆದವರಿಗೂ ತುತ್ತು ಭರವಸೆಯಿಲ್ಲ
ಎತ್ತ ಹೊರಳಿದರದೇ ನೋಟವಣ್ಣ

ಹೇಳುವವರೇ ಎಲ್ಲ, ಕೇಳುವವರೇ ಇಲ್ಲ
ಹೇಳಿ ಕೇಳೀ ಬಾಳ ಏಕತಾರಿಯ ಪದವ
ಯಾರು ಕೇಳುತ್ತಾರೆ ಹೇಳಿರಣ್ಣ.

ಇಂದು ನಾವೇನಾಗಿದ್ದೇವೆ ಎನ್ನುವುದರ ವಾಕ್‌ಚಿತ್ರ ಕಣವಿ ಅವರ 'ಯಾರು ಕೇಳುತ್ತಾರೆ ಹೇಳಿರಣ್ಣ' ಎಂಬ ಕವಿತೆ ('ನಗರದಲ್ಲಿ ನೆರಳು' ಸಂಗ್ರಹ) ನಾನು, ನೀವು, ಅವರು, ಇವರು ಎನ್ನದೇ ಯಾವುದೇ ಅಧ್ಯಾಪಕ, ಪಂಡಿತ, ಕವಿ, ಕಲಾವಿದ, ವಿಜ್ಞಾನಿ, ರಾಜಕಾರಣಿ, ಸಮಾಜ ಸೇವಕ, ನೌಕರ-ಒಡೆಯ, ಸ್ವಾಮಿ-ಸನ್ಯಾಸಿ ಮುಂತಾಗಿ ಸಮಾಜದ ಎಲ್ಲ ಸ್ತರಗಳಲ್ಲಿರುವ ಯಾರೆಡೆಯೂ ಕೈ ಮಾಡಿ ಹೇಳಬಹುದಾದ ಸತ್ಯ ಈ ಕವಿತೆಯ ಒಡಲಿನಲ್ಲಿ ಅನುಭಾವವಾಗಿ

ನುಡಿಯುತ್ತಿದೆ. ಮೂರ್ತ-ಅಮೂರ್ತ ಎಲ್ಲವನ್ನು ನುಡಿಯಾಗಿಸಿ, ನುಡಿಗೆ ತೊಡಗಿಸಿ ನುಡಿಯುವ ತಾಕತ್ತು ಅನುಭಾವಕ್ಕೆ ಇದೆ. ಈ ಕಾರಣದಿಂದಲೇ ಇದು ತಿಳಿದುದರ ಮೂಲಕ ತಿಳಿಯಲಾರದ್ದನ್ನು ತಿಳಿಸುತ್ತದೆ. ಹಾಗೆ ಕಂಡುದರ ಮೂಲಕ ಕಾಣಲಾರದ್ದನ್ನು ಕಾಣಿಸುವ ಬೆರಗು ಇದಕ್ಕೆ ಮೈಯಾಗಿ ಮಿನುಗುತ್ತಿದೆ. ಈ ಕವಿತೆಯಲ್ಲಿ ನುಡಿದಿರುವ ಪ್ರತಿ ಮಾತು ಮೂರ್ತ ಪ್ರಪಂಚದ ಅನುಭವವನ್ನು ಆಧರಿಸಿಯೇ ರೂಪಗೊಂಡಿದೆ. ಇದಕ್ಕೆ ಇರಬಹುದಾದ ಕಾರಣ ಕಂಡದ್ದರ ಮೂಲಕ ಕಾಣಲಾರದ್ದನ್ನು ತಿಳಿಯುವುದು.

ನಮ್ಮ ಸುತ್ತಲೂ ಇಂದು ಏನು ನಡೆಯುತ್ತಿದೆ ಎನ್ನುವುದನ್ನು ಸರಳ ಪದಗಳಲ್ಲಿ ಅರ್ಥ ವಿವರಣೆಯ ಹಂಗಿಲ್ಲದೆ, ಸಿದ್ಧಾಂತದ ಹೂರಣವಿಲ್ಲದೆ ಸತ್ಯದ ಸೊಬಗನ್ನು ಕಳೆದುಕೊಳ್ಳದೆ, ಕಂಡದ್ದನ್ನು ಕಂಡ ಹಾಗೆ ಕವಿತೆ ನುಡಿಯುತ್ತಿದೆ. ಯಾವ ಕಾಲದಲ್ಲಿಯೂ ಕಂಡದ್ದನ್ನು ಕಂಡ ಹಾಗೆ ಹೇಳುವುದು ತಿಳಿದಷ್ಟು ಸುಲಭದ ಕೆಲಸವಲ್ಲ. ಅದು ದೊಡ್ಡ ರಿಸ್ಕ್. ಕವಿ ಈ ರಿಸ್ಕ್‌ನ್ನು ವಿನಯ ಮತ್ತು ವಿಷಾದದಿಂದ ನಿಭಾಯಿಸುತ್ತಿದ್ದಾರೆ. ಇಲ್ಲಿನ ವಿನಯ ಕವಿಯ ಪ್ರಕೃತಿಗುಣ. ಇದಕ್ಕೆ ಕಾರಣ ಸತ್ಯವನ್ನು ಸ್ವೀಕರಿಸಲು ಸದಾ ತೆರೆದುಕೊಂಡಿರುವ ಅವರ ಮನ. ಹಾಗೆ ತನ್ನನ್ನು ಒಳಗೊಂಡ ಮತ್ತು ತನಗಿಂತ ದೊಡ್ಡದಾದ ಮಾನವ ಜಗತ್ತು ಮಾತ್ರ ತಾನು ನಡೆಯಬೇಕಾದ ಪಥ ಮತ್ತು ಪಾತಳಿಯನ್ನು ಮೀರಿ ನಡೆಯುತ್ತಿರುವುದು ಕವಿಯ ಮನಸ್ಸಿನಲ್ಲಿ ವಿಷಾದದ ಭಿತ್ತಿಯನ್ನು ರೂಪಿಸಿದೆ. ಈ ಭಿತ್ತಿಯಲ್ಲಿ ಆಸೆಗಳ ಆರ್ಭಟ ಕಾರಣವಾಗಿ, ಮಾನವ ಪ್ರಪಂಚದ ವಿಚಿತ್ರ ಚಿತ್ತ ವ್ಯಾಪಾರಗಳನ್ನು ಚಿತ್ರಿಸುವ ಪರಿ ಕವಿತೆಗೆ ವಿಷಾದ ಮತ್ತು ವಿಡಂಬನೆಯ ಧ್ವನಿ ನೀಡಿದೆ. ಆ ಧ್ವನಿ ಕಾಣುವ ಲೌಕಿಕದಿಂದ ಕಾಣದ ಅಲೌಕಿಕವನ್ನೆಲ್ಲಾ ವ್ಯಾಪಿಸಿರುವುದು ಕವಿತೆಯ ಬಹುದೊಡ್ಡ ಯಶಸ್ಸು.

ಬದುಕಿನ ಸೊಗಸು ಸುಖ ಯಾರಿಗೆ ಬೇಡ ? ಅದು ಎಲ್ಲರಿಗೂ ಬೇಕಾದುದೆ, ಆದರೆ ಅದಕ್ಕಾಗಿ ಶ್ರಮಿಸುವ ಮನ ಹಾಗೂ ಆ ಕ್ಷಣಗಳು ಬರುವವರೆಗೂ ಕಾಯುವ ತಾಳ್ಮೆ ಎಲ್ಲರಲ್ಲಿಯೂ ಕಾಣದ ಗುಣ. ಆಸೆಪಟ್ಟಿದ್ದೆಲ್ಲವನ್ನೂ ಪಡೆದೇ ತೀರಬೇಕೆಂಬ ಹಟ ಈ ಪ್ರಪಂಚದಲ್ಲಿ ವಿಚಿತ್ರವಾದ ಅವಸರವನ್ನು ಸೃಷ್ಟಿಸಿದೆ. ಇದು ಮನುಷ್ಯನನ್ನು ಉನ್ಮತ್ತತೆಯತ್ತ ತಳ್ಳಿ ಅವನ ಚಿತ್ತಸ್ವಾಸ್ಥ್ಯವನ್ನು ಹಾಳುಗೆಡವಿದೆ. ಕಾರಣ,

ಅಲ್ಲಿ ಮುಳುಗುತ್ತಾರೆ, ಇಲ್ಲಿ ಏಳುತ್ತಾರೆ
ಎದ್ದು ಮೆರೆಯುತ್ತಾರೆ, ಹದ್ದು ಮೀರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಇಲ್ಲಿ ಕೇಳುವವರು ಯಾರಿದ್ದಾರೆ ? ಯಾರು ಯಾರಿಗೆ ಹೇಳುವುದು ? ಇವರು ಯಾರೊಂದಿಗೆ ಇದ್ದಾರೆ. ರೂಪಕ್ಕೆ ಇರುವ ಅನೇಕ ಸ್ವರೂಪಗಳಲ್ಲಿ ಇವರ ನಿಜವಾದ ರೂಪ ಯಾವುದು ? ನೀತಿ ತತ್ವಗಳ ಹಂಗು ಹರಿದು ಅಲ್ಲಿಯೂ ಸರಿ, ಇಲ್ಲಿಯೂ ಸರಿ ಎನ್ನುವವರು ಅಲ್ಲಿ ಮುಳುಗೇಳುತ್ತಾರೆ,

ಇಲ್ಲಿ ಏಳುತ್ತಾರೆ. ಸಂಚು ಮಾಡಿ ಅವಕಾಶ ಪಡೆದು, ಪಡೆದ ಅವಕಾಶಕ್ಕೆ ಮೋಸಮಾಡಿ ಹದ್ದು ಮೀರಿ ಮೆರೆಯುವ ಹುಚ್ಚು ಅನೇಕರಲ್ಲಿ ಸಾಮಾನ್ಯವಾದ ಗುಣವೇ ಆಗಿದೆ. ಇದರೊಂದಿಗೆ ವಿಚಿತ್ರ ಕೌತುಕ ಸೇರಿದಾಗ,

ಕದ್ದು ಕೇಳುತ್ತಾರೆ ಸುದ್ದಿ ಮಾಡುತ್ತಾರೆ
ಗುದ್ದಿ ನೋಡುತ್ತಾರೆ, ಒದ್ದು ಓಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಇಲ್ಲಿ ಹೇಳುವುದಾದರೂ ಯಾರಿಗೆ ? ಭೂತ-ಭವಿಷ್ಯಗಳ ಒಡಲನ್ನು ಸೀಳಿ ಎಲ್ಲವನ್ನೂ ತಿಳಿದೇ ಬಿಡಬೇಕೆಂಬ ಕುತೂಹಲದಿಂದ ಕದ್ದು ಕೇಳುವುದು ಹಾಗೂ ಕೇಳಿಸಿಕೊಂಡದ್ದು ಸರಿಯೋ-ತಪ್ಪೋ ವಿಚಾರಿಸದೆ ಸುದ್ದಿ ಮಾಡುವುದು, ವಿಶ್ವಾಸಹೀನ ಮನಸ್ಥಿತಿಯ ಕಾರಣ ಎಲ್ಲವನ್ನೂ ಭೇದಿಸುತ್ತಾ ಭೇದಿಸುತ್ತಾ ಹೋಗುವುದು, ಅದರ ಪರಿಣಾಮ ಶೂನ್ಯವಾದಾಗ ತಮ್ಮನ್ನೂ ಒಳಗೊಂಡು ಎಲ್ಲವನ್ನು ನಿರಾಕರಿಸಿ ಪಲಾಯನ ಗೈಯುವುದು ನಮ್ಮವರ ಕುಚೇಷ್ಟೆಯ ಲೀಲಾವತಾರಗಳು.

ಹೊರಗೆ ಮೆಚ್ಚುತ್ತಾರೆ ಒಳಗೆ ಚುಚ್ಚುತ್ತಾರೆ
ಮರೆಗೆ ಕಚ್ಚುತ್ತಾರೆ ತೆರೆಗೆ ಬಿಚ್ಚುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ತಾವು ಸಾಧಿಸಲಾರದ್ದನ್ನು ಯಾರೇ ಸಾಧಿಸಿದರೂ ಅದನ್ನು ಗೌರವಿಸಬೇಕಾದ ಸಂದರ್ಭ ಎದುರಾದರೆ ಹೊರಗೆ ಮೆಚ್ಚಿದಂತೆ ಮಾಡಿದರೂ, ಒಳಗಿನ ಸಂಕಟದ ಕುದಿ ತಡೆಯದೆ ಸಮಯ ಸಾಧಿಸಿ ಅವರಿವರಲ್ಲಿ ಅಂದರೆ ತಮ್ಮಂಥವರಲ್ಲಿಯೇ ಸಣ್ಣ ಮಾತುಗಳನ್ನು ಆಡಿ, ಒಳಗಡೆಯ ಹೀನತನವನ್ನು ಬಿಚ್ಚಿ ಹರಹಿಕೊಳ್ಳುವುದು, ಏನೂ ತಿಳಿಯದವರಂತೆ ಮುಗ್ಧತೆಯನ್ನು ನಟಿಸುವುದು, ಅಂತರಂಗದ ಚಲುವಾದ ಕಲಾಶಕ್ತಿಯನ್ನು ಕಲ್ಪನಾಶಕ್ತಿಯನ್ನು ವ್ಯಯಮಾಡುವುದು, ಹಣಕ್ಕಾಗಿ ಹಪಹಪಿಸುವ ಪಿಪಾಸುಗಳಾಗಿ ಮೆರೆಯುವುದು, ಆ ಮೂಲಕ ಬಂಡವಾಳವನ್ನು ಬೆಳೆಸಿಕೊಳ್ಳುವುದು, ದೊಡ್ಡವರೆನಿಸಿಕೊಳ್ಳುವುದೇ ಹಲವರಿಗೆ ಜೀವನದ ರಾಜಮಾರ್ಗವಾಗಿದೆ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಭರವಸೆ ಮೂಡುವ ಮಾತನಾಡಿ, ಆವೇಶದಿಂದ ನಿಮಗಾಗಿ ಸಾಕಷ್ಟು ಹೋರಾಟ ಮಾಡುತ್ತಿದ್ದೇವೆಂಬ ನಂಬಿಕೆ ಹುಟ್ಟಿಸಿ, ಮಾನ-ಸನ್ಮಾನಗಳ ಹಬ್ಬಮಾಡಿ ವ್ಯವಸ್ಥೆಯನ್ನು ನಾಶಮಾಡುತ್ತಾ ಎಲ್ಲರನ್ನೂ, ಎಲ್ಲವನ್ನೂ ಮರೆತುಬಿಡುವುದು ಜೀವನ ಧರ್ಮವೇ ಆಗುತ್ತಿರುವುದು ಇಲ್ಲಿನ ವಿಪರ್ಯಾಸ.

ಫಂಡು ಎತ್ತುತ್ತಾರೆ, ಎತ್ತಿ ಹಾಕುತ್ತಾರೆ
ಬಂಡು ಹೂಡುತ್ತಾರೆ ಬೆಂಡು ಸುಲಿಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ವೈಯಕ್ತಿಕವಿರಲಿ, ಸಾರ್ವಜನಿಕ ಜೀವನವಿರಲಿ ಯಾವುದೇ ಕೆಲಸಕಾರ್ಯಗಳಿಗೆ ಹಣ ಅವಶ್ಯಕವೇ. ವೈಯಕ್ತಿಕ ಕಾರ್ಯಗಳಿಗೆ ದುಡಿಮೆಯಿಂದ ಅದನ್ನು ಪಡೆಯಬಹುದು. ಆದರೆ ಸಾರ್ವಜನಿಕ ಕಾರ್ಯಗಳಿಗೆ ಆ ಮೊತ್ತವನ್ನು ಎಲ್ಲಿಂದ ತರುವುದು ? ಅದಕ್ಕೆ ಸುಲಭದ ದಾರಿ ಫಂಡು ಎತ್ತುವುದು! ಹಾಗೆ ಎತ್ತಿದ್ದನ್ನು ಸಾರ್ಥಕವಾಗುವಂತೆ ಅದನ್ನು ಬಳಸಬೇಕೆಂಬುದು ಸರಿ. ಆದರೆ ಹಾಗೆ ಎತ್ತಿದ್ದನ್ನು ಹೀಗೆ ಎತ್ತಿ ಸ್ವಂತಕ್ಕೆ ಬಳಸಿಕೊಳ್ಳುವುದೂ ಸರಿಯೇ ಎನ್ನುವವರಿಗೆ ಏನು ಹೇಳುವುದು ? ಇಂಥವರು

ಕೈಯ ಮುಗಿಯುತ್ತಾರೆ, ಕಾಲು ಕೆದರುತ್ತಾರೆ
ಬಾಲ ಹಿಡಿಯುತ್ತಾರೆ ಮೇಲೆ ಏರುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಈ ಜನ ಕಂಡ ಕಂಡವರಿಗೆಲ್ಲ ಕೈ ಮುಗಿದು ಶರಣಾಗಿ ಪ್ರಶ್ನೆ ಮಾಡಿದವರೊಂದಿಗೆ ಕಾಲು ಕೆದರಿ, ಮಾಡಿದ ಮೋಸಗಳನ್ನು ಮುಚ್ಚಿಕೊಳ್ಳಲು ಪಕ್ಷಕಟ್ಟಿ ಹಿಂಬಾಗಿಲಿನಿಂದ ಓಲೈಸಬಾರದ ಕಡೆ ಹಲ-ಕೆಲವರನ್ನು ಓಲೈಸಿ ಅಧಿಕಾರದ ಸ್ಥಾನಗಳನ್ನು ಆಕ್ರಮಿಸಿಬಿಡುತ್ತಾರೆ. ಬಾಯಿ ಬಡಿಯುವುದು, ಹೀನರಿಗೆ ಅನವಶ್ಯಕ ಪ್ರಾಶಸ್ತ್ಯ ನೀಡುವುದು 'ಜೀ' ಅನ್ನುವುದು, ಅಧಿಕಾರಕ್ಕೆ ಅಂಟಿಕೊಳ್ಳುವುದು ಇವರ ಜೀವನದ ಪರಮಗುರಿ. ಅದು ತಮ್ಮ ಎಣಿಕೆಗೆ ತಕ್ಕಂತೆ ಸಿಗದೆ ಹೋದರೆ ಬಂಡಾಯದ ಕಹಳೆ ಮೊಳಗಿಸಿ ರೈಲು, ಬಸ್ಸು, ತಡೆದು, ದೀಪ ಒಡೆದು, ಕಲ್ಲು ತೂರಿ, ಸುಳ್ಳು ದೂರಿ, ಪ್ರತಿಭಟನೆಯ ಅಸ್ತ್ರದಿಂದ ಅಸಂಖ್ಯ ಅಮಾಯಕರ ಮೇಲೆ ಹರತಾಳದ ತಾಳ ಬಾರಿಸಿ ಅವರನ್ನು ಬಲಿಗೊಟ್ಟು ತಮಗೆ ಬೇಕಾದುದನ್ನು ಸಾಧಿಸುವುದು ಇವರಿಗೆ ಬದುಕಿನ ವೃತ್ತಿ, ಜೀವನ ಧ್ಯೇಯ. ಇಂಥವರೇ ನಮ್ಮ ಸುತ್ತ ಇಂದು ಪಿಶಾಚಿಗಳಂತೆ ಅಲೆಯುವುದು ಹೆಚ್ಚಾಗಿದೆ. ಇಲ್ಲಿ ಯಾರನ್ನು ನಂಬುವುದು ?

ಹೊತ್ತು ಹೊರೆವವರಿಲ್ಲ, ಕಿತ್ತು ತಿಂಬುವರೆಲ್ಲ
ಬಿತ್ತಿ ಬೆಳೆದವರಿಗೂ ತುತ್ತು ಭರವಸೆಯಿಲ್ಲ
ಎತ್ತ ಹೊರಳಿದರದೇ ನೋಟವಣ್ಣ

ಸಮಷ್ಟಿ ಹಿತವನ್ನು ಗಮನದಲ್ಲಿಟ್ಟು ನಿಸ್ವಾರ್ಥ ಮನದಿಂದ ಸರ್ವರ ನೆಮ್ಮದಿಯಲ್ಲಿ ನನ್ನ ನೆಮ್ಮದಿಯೂ ಇದೆ. ಸರ್ವರ ಅಭ್ಯುದಯದಲ್ಲಿ ನನ್ನ ಅಭ್ಯುದಯವೂ ಇದೆ ಎಂದು ಜವಾಬ್ದಾರಿಯಿಂದ ಹೊಣೆಗಾರಿಕೆಯನ್ನು ಕೈಗೆತ್ತಿಕೊಂಡು ಸಂಗತಿ, ಸನ್ನಿವೇಶ, ಅವಕಾಶ ಅಧಿಕಾರಗಳನ್ನು ನಿಭಾಯಿಸುವವರ ಸಂಖ್ಯೆ ಅತ್ಯಂತ ಕ್ಷೀಣವಾಗಿದೆ. ಕವಿಯ ಮನಸ್ಸು ಎಷ್ಟು

ರೋಸಿ ಹೋಗಿದೆಯೆಂದರೆ ಸುತ್ತಲೂ ನಡೆಯುವ ಘಟನೆಗಳನ್ನು ನೋಡಿ ನೋಡಿ ಸಮಷ್ಟಿ ಹಿತಕ್ಕಾಗಿ ದುಡಿಯುವವರಾರೂ ಇಲ್ಲ ಎನ್ನುವ ಮಟ್ಟಿಗೆ ನಿರಾಸೆಗೊಂಡಿದೆ. ಇಲ್ಲಿ ಇಂದು ಕಿತ್ತು ತಿನ್ನುವುದೇ ಕಾಯಕ ಮಾಡಿಕೊಂಡಿರುವವರ ಪ್ರಪಂಚವೇ ಬೆಳೆದು ನಿಂತಿದೆ. ಅಂಥದ್ದರಲ್ಲಿ ಸ್ವತಃ ಬಿತ್ತಿ ಬೆಳೆದವನಿಗೂ ಒಂದು ತುತ್ತಿನ ಭರವಸೆಯಿಲ್ಲದ ವಾತಾವರಣ ಎತ್ತ ನೋಡಿದರೂ ಹಬ್ಬಿ ಹರಡಿನಿಂತಿದೆ ಎನ್ನುತ್ತಾ ಕವಿ ವಿಷಾದದ ಶೃಂಗಕ್ಕೇರಿ,

**ಹೇಳುವವರೇ ಎಲ್ಲ, ಕೇಳುವವರೇ ಇಲ್ಲ**
**ಹೇಳಿ ಕೇಳೀ ಬಾಳ ಏಕತಾರಿಯ ಪದವ**
**ಯಾರು ಕೇಳುತ್ತಾರೆ ಹೇಳಿರಣ್ಣ ಎನ್ನುತ್ತಾರೆ.**

ಸತ್ಯ, ನೀತಿ, ತತ್ವ ವೇದಾಂತಗಳನ್ನು ಎಲ್ಲರೂ ಹೇಳುತ್ತಾರೆ. ಆದರೆ ಅವುಗಳನ್ನು ಆಚರಿಸುವವರಾರೂ ಇಲ್ಲ ಎನ್ನುವ ಚರಮ ವಾಕ್ಯ ಅರಿವು-ಆಚಾರದ ಮಧ್ಯ ತಲೆದೋರಿದ ಕಂದಕದ ರುದ್ರ ದರ್ಶನ ಮಾಡಿಸುತ್ತದೆ. ಕೊನೆಗೆ ಹೇಳಿ ಕೇಳಿ ಬಾಳ ಏಕತಾರಿಯ ಪದವ 'ಯಾರು ಕೇಳುತ್ತಾರೆ ಹೇಳಿರಣ್ಣ' ಎನ್ನುವಲ್ಲಿ ಬಾಳಿಗೆ ಒಳದಾರಿಗಳಿಲ್ಲ, ಅದಕ್ಕಿರುವುದು ಸತ್ಯ ಶುದ್ಧವಾದ ದುಡಿಮೆಯ ದಾರಿಯೊಂದೆ; ಅದನ್ನು ಬಾಳ ಅಂದರೆ ಮಗು ಅದರಂತೆ ನೀನು ಅನುಸರಿಸಬೇಕಿದೆ ಎನ್ನುವಲ್ಲಿ ಕವಿತೆಯ ಗತಿ ಮತ್ತು ಗಮ್ಯ ಅಂತಿಮವಾಗುತ್ತದೆ.

ಮೂರು ಪಾದಗಳ ಒಟ್ಟು ಹನ್ನೆರಡು ತ್ರಿಪದಿಗಳು ಮಾತ್ರಾ ವ್ಯತ್ಯಾಸದೊಂದಿಗೆ ಉತ್ಸಾಹ ಲಲಿತ ಮಂದಾನಿಲ ಲಯಗಳ ಹದವಾದ ಮಿಶ್ರಣ ಮಾಡಿಕೊಂಡು ಜಾನಪದರು, ಅನುಭಾವಿಗಳು ಏಕತಾರಿಯೊಂದಿಗೆ ಹಾಡುವ ಹಾಡಿನಂತೆ ಒಂದೇ ಸೂರಿನಲ್ಲಿ ಜೀವದ-ಜೀವನದ ದೌರ್ಬಲ್ಯಗಳನ್ನು ಮಿಡಿಯುತ್ತಾ ಅಸಹಾಯಕತೆಯನ್ನು ವಿಡಂಬಿಸುತ್ತಾ ಬಾಳಿನ ಅನೇಕ ಮುಖಗಳನ್ನು ಕವಿತೆ ಬಿಂಬಿಸುತ್ತಿದೆ. ಇಂಥ ಪ್ರತಿಯೊಂದು ನುಡಿಯು ಬಾಳಿನ ಅಂತರಾಳದಲ್ಲಿರುವ ಸೊಬಗನ್ನು ನೀನು ಕಾಣಬೇಕಿದೆ. ನೀನು ಅನುಸರಿಸದೆ ಅದು ಸಾಧ್ಯವಿಲ್ಲವೆನ್ನುವುದನ್ನು ಅಸಹಾಯಕ ಧ್ವನಿಯ ತರಂಗಗಳನ್ನು ಹೊರಡಿಸುತ್ತಲೇ, ವಿಡಂಬನೆಯ ಮದ್ದಳೆಯನ್ನು ರಣಗುಟ್ಟಿಸುತ್ತಲೇ ಸತ್ಯವನ್ನು ಅನಾವರಣಗೊಳಿಸುವ ಹಟ ಹಿಡಿದು ತಪ್ಪಿದ ಪಥವನ್ನು ಅಪ್ಪಿಕೊಳ್ಳುವ, ಅನುಸರಿಸುವ ಅನಿವಾರ್ಯತೆಯನ್ನು ಮನಸ್ಸಿಗೆ ನಾಟಿಸುವ ತತ್-ತ್ವ-ಪದವಾಗಿ ಬೆಳೆದದ್ದು ಕವಿತೆಯ ಜಯವಾಗಿದೆ. ಸಮಾನ ಧಾಟಿಯ ಇಂಥ ಚಿಂತನೆಗಳನ್ನು ಸೂಸುವ ಪದಗಳನ್ನು ನಾಡಿನ ಅನೇಕ ಅನುಭಾವಿಗಳ ತತ್ವಪದಗಳಲ್ಲಿ ನಾವು ಕಾಣಬಹುದು. ಅದರಲ್ಲಿಯೂ ವಿಶೇಷವಾಗಿ ಶಿಶುನಾಳ ಶರೀಫ ಸಾಹೇಬರ 'ಹ್ಯಾಂಗ ಬಳಕೆಯು ಮಾಡಬೇಕಣ್ಣ' ಎನ್ನುವ ಪದವನ್ನು ಈ ಕವಿತೆಯೊಂದಿಗೆ ನೆನಪಿಸಿಕೊಳ್ಳಬಹುದು.

**ಶಶಿಧರ ತೋಡಕರ**

# ೪೫. ಸಾವಿರದ ಸತ್ಯ

ಎಷ್ಟಂದರೂ ನಿನಗೆ ನಾಚಿಕೆಯಿಲ್ಲ
ಹೊತ್ತು-ಗೊತ್ತು, ನೇಮ-ನಿತ್ಯ ಯಾವುದೂ ಇಲ್ಲ.
ಆಡಾಡುತ್ತ ಅಡ್ಡಗಾಲು;ನಡುವೆ ಒಡ್ಡುವ ಸವಾಲು.
ಓಡುವ ಭರಾಟೆಯಲಿ ಬಂಡಿ ಕಳಕೊಂಡಂತೆ
ಕೊಂಡಿ, ಕಡೆಗೀಲು, ತೆರೆದ ಕಣ್ಣು ತೆರೆದಂತೆ
ಬಟಾಬಯಲು, ಹಾಡೇ ಹಗಲು ದರೋಡೆ:
ಹಿಂದೆ -ಮುಂದೆ ಸುತ್ತಲೂ ಹದ್ದು-ನೆರಳಿನ ಪಹರೆ.
ಚೂರೂ ಗುರುತು ಹತ್ತದ ಮುಖ ಚಹರೆ.
ಯಾರ ಮುಖಾಂತರವೊ ನಿನ್ನ ಕಂಡಾಗ ಸಂಕಟ, ದುಃಖ
ಮತ್ತೆ ಯಥಾಪ್ರಕಾರ:
ಪಿಸಿನೂಲು ತೆಗೆದು, ಹರಿದಲ್ಲಿ ಎಳೆ ಹಚ್ಚಿ
ಹುರಿ ಮಾಡಿ ಸುತ್ತುವ ಚರಖ -
ಮಗ್ಗದಲ್ಲಿ ಮೆಲ್ಲಗೆ ಬಗ್ಗಿ ನೇಯುವ ಸುಖ.

ಮರವೆಯ ಪರದೆಯಾಚೆ ಕಾಡಿನ ದಾರಿ
ಕಾಲಮಾನಕ್ಕೆ ದೂರ.
ತೆರೆ ಎದ್ದಾಗ ಇದ್ದಕ್ಕಿದ್ದಂತೆ ಸನಿಹ, ಒಮ್ಮೆಲೆ ಕ್ರೂರ.
ಹುಟ್ಟಿನ ಬೆನ್ನ ಹುರಿಗುಂಟ ಏರಿ
ತುಟ್ಟತುದಿಗೊಂದು ತರಹ.
ಮುಟ್ಟಿ ನೋಡಿದ ಹಾಗೆ ದಿಟ್ಟತನದನುಭವ.
ಕೊಟ್ಟು ರುಚಿತೋರಿ, ಇಸಗೊಂಡಂತೆ ನಾಲಗೆಯ ರವರವ.

ಇರಬಹುದು ನಿನಗಿದು ಸಹಜ; ಒಂದು ರೀತಿಯ ಮಜ.
ನಮಗೆ ಆಕಸ್ಮಿಕದ ಭಯ.
ಎಲ್ಲಾ ಕಳೆದು ಉಳಿದದ್ದು, ಉಳಿಯದಿದ್ದದ್ದೂ ನಿಜ.
ಒಣಗಿದೆಲೆ, ಬಾಡಿದ ಹೂವು, ಕಳಿತ ಹಣ್ಣು -
ಹುಳುಕೊರೆದು, ಬಿರುಗಾಳಿ ಬೀಸಿ ಉದುರಿದರೆ
ಮತ್ತೆ ಮಣ್ಣು.
ಮಂಜಿನೊಳಗಿಂದ ಹೊರಬಿದ್ದ ಮುಂಜಾವು.
ಮಧ್ಯಾಹ್ನ ಏರುವ ಕಾವು-
ಸಾವಿರದ ಸತ್ಯ: ಒರೆಗಳಚಿದಲಗು.
ಹಗಲೆಲ್ಲ ತೂಗಲಬಾವಲಿ ಹಿಂದು ತಲೆ-ಕೆಳಗು.
ನುಂಗಬೇಕಾದದ್ದು ಕಹಿ ಗುಳಿಗೆ-
ಸಿಕ್ಕು ನೀರಿನ ಸುಳಿಗೆ, ಮುಳುಗಿ
ಎದ್ದಂತೆ ಗುಳ್ಳೆ: ಕೊನೆಯ ಗಳಿಗೆ.

'ಸಾವಿರದ ಸತ್ಯ' - ಇದು 'ಜೀವಧ್ವನಿ' ಕವನ ಸಂಕಲನದಲ್ಲಿ ಕವಿ ರೂಪಿಸಿಕೊಂಡ ಧ್ವನಿಪೂರ್ಣ ಶೀರ್ಷಿಕೆ . ಈ ಶೀರ್ಷಿಕೆಯಲ್ಲೇ ಕವಿತೆಯ 'ಜೀವಧ್ವನಿ' ಹುದುಗಿದೆ. ವ್ಯಾಕರಣ ದೃಷ್ಟಿಯಿಂದ ಸಂಖ್ಯಾವಾಚಿ (ಸಾವಿರ) ಗುಣವಾಚಿ (ಸತ್ಯ) ಕಾಲುವಾಚಿ (ದ) ಈ ತ್ರಿವಳಿಗಳ ಸಾಧಿತರೂಪ ಪ್ರಸ್ತುತ ಶೀರ್ಷಿಕೆ ಎಂಬುದು ವಾಚ್ಯಾರ್ಥಕ್ಕೆ ಗ್ರಹಿತವಾಗುವ ಸಂಗತಿಯಾಗಿದೆ. ಆದರೆ ಈ ವ್ಯಾಕರಣವನ್ನು ಮುರಿದು ಕವಿತೆಯ ಆಶಯಕ್ಕೆ 'ಜೀವಧ್ವನಿ'ಯಾಗಬಲ್ಲ ಸಾಪೇಕ್ಷಿತ ಅರ್ಥ-ಧ್ವನಿಯ ತಾತ್ವಿಕ ಲೋಕವೊಂದನ್ನು ಕಟ್ಟಿಕೊಡುವುದು ಈ ಕವಿತೆಯ ಲಕ್ಷ್ಯಾರ್ಥಕ್ಕೆ ದಕ್ಕುವ ಅಸ್ಮಿತೆ. ವಾಚ್ಯಾರ್ಥವನ್ನು ಮುರಿದು ಲಕ್ಷ್ಯಾರ್ಥದಲ್ಲಿ ಕಟ್ಟಿಕೊಳ್ಳುವ ಪ್ರಕ್ರಿಯೆ ಒಟ್ಟು ಕಾವ್ಯ ಸಂವೇದನೆಯ ಮುಖ್ಯ ಗುಣ. 'ಸಾವಿರದ ಸತ್ಯ' ಇದಕ್ಕೊಂದು ಸ್ಪಷ್ಟ ನಿದರ್ಶನ. ಕವಿಯ ಸಂವೇದನೆ ಕವಿತೆಯ ಆಶಯದೊಂದಿಗೆ ಜೈವಿಕ ಸಂಬಂಧಪಡೆದು ಉದ್ದೇಶಿತ ವಿನ್ಯಾಸದ ಮೂಲಕ ಪ್ರಕಟವಾಗುವುದು ಕಾವ್ಯದ ನಿಜವಾದ ಶಕ್ತಿ. ಇಂಥದರ ಜೊತೆಗೆ ವಿಹರಿಸುವುದು ಪ್ರಯೋಗಶೀಲ ಮನಸ್ಸಿನ ಕಣವಿಯವರ ಜೀವಧ್ವನಿಯೂ ಹೌದು.

ಜೀವಜಗತ್ತಿನ ಬೆನ್ನಿನ ಮೇಲೆಯೆ ಸಾವಿನ ಸವಾರಿ. ಆ ಸಾವು ಇಚ್ಛಾನುವರ್ತಿ. ಅದು ಯಾರನ್ನು ಯಾವಾಗ, ಎಲ್ಲಿ, ಹೇಗೆ, ಎಷ್ಟೊತ್ತಿಗೆ ನುಂಗಿ ನೊಣೆಯುತ್ತದೆಯೋ ಯಾರಿಗೂ ತಿಳಿದಿರುವುದಿಲ್ಲ. ಅದೊಂದು ಅಮೂರ್ತ ಸಂಚು. ಈ ಸಂಚಿಗೆ ಬಲಿಯಾಗದ ಜೀವಿಯೇ ಇಲ್ಲ. ಇದು ಸಾವಿರದ ಸತ್ಯ, ಅಮರ ಸತ್ಯ. ಈ ಅರಿವಿನ ಹಿನ್ನೆಲೆಯಲ್ಲಿಯೇ 'ಜಾತಸ್ಯಮರಣಂ ಧ್ರುವಂ' ಎಂಬ ಉಕ್ತಿಗಾಗಲಿ, ಸಾವಿಲ್ಲದ ಮನೆಯ ಸಾಸಿವೆಯ ತರಲು ಕಿಸಾಗೋತಮಿಗೆ ಬುದ್ಧ ಬೋಧಿಸಿದ

ಕಥೆಗಾಗಲಿ ಸಾವು ಸಂಭವಿಸಿಲ್ಲ. ಸಾವಿನ ಅರಿವು ಅನುಭವ ಸತ್ಯಕ್ಕೆ ದಕ್ಕಿದಾರಭ್ಯದಿಂದ ಆ ಸಾವು ಕುರಿತು ಕುತೂಹಲಕಾರಿಯಾದ ಜಿಜ್ಞಾಸೆ ಶುರುವಾಗಿ ಅದು ನಿರಂತರವಾಗಿ ಮುಂದುವರೆದಿದೆ. ಆದರೂ ಈ ಸಾವಿನ ರಹಸ್ಯವನ್ನು ಭೇದಿಸಲು, ಇದನ್ನು ಗೆಲ್ಲಲು ಈವರೆಗೂ ಹುಲುಮಾನವನಿಂದ ಸಾಧ್ಯವಾಗಿಲ್ಲ. ಕೆಲವು ಸಂಗತಿಗಳನ್ನು ಅನುಭವಿಸಬಹುದೇ ಹೊರತು ವಿವರಿಸಲು ಆಗುವುದಿಲ್ಲ ಎಂಬ ಹೇಳಿಕೆ ನಿರಾಕರಿಸಲಾಗದ ಸತ್ಯ. ಆದರೆ ಇದನ್ನು ಸವಾಲಾಗಿ ಸ್ವೀಕರಿಸುವ ಪ್ರತಿಭಾಶಾಲಿಗಳಿಗೆ ಕೊರತೆಯಿಲ್ಲ. ಇಂಥವರ ಸಾಲಿಗೆ ಸೇರುವ ಪ್ರತಿಭೆ ಮತ್ತು ಪ್ರಜ್ಞೆಯಿರುವ ಕವಿ ಕಣವಿಯವರು ಇದಕ್ಕೆ ಸಮರ್ಥ ಪ್ರಮಾಣವನ್ನೊದಗಿಸುವಂತೆ ಸಾವಿನ ಅಮೂರ್ತ ಅನುಭವವನ್ನು ಕಾವ್ಯದ ಬೆಡಗಿನಲ್ಲಿ ರೂಪಿಸಿಕೊಡಲು 'ಸಾವಿರದ ಸತ್ಯ'ವನ್ನು ಅದರ ವಿವಿಧ ಚಹರೆಗಳಲ್ಲಿ ಇಲ್ಲಿ ಮಂಡಿಸಿದ್ದಾರೆ. ಇದು 'ಶಬ್ದಲಜ್ಜೆ'ಯನ್ನು ಮೀರುವ ಸಾಹಸ.

'ಎಷ್ಟೆಂದರೂ ನಿನಗೆ ನಾಚಿಕೆಯಿಲ್ಲ' - ಎಂದು ಸಾವನ್ನು ನೇರವಾಗಿ ಛೇಡಿಸುತ್ತ ತುಂಬ ರೋಷದ ಭಾವಹೊತ್ತು ಆರಂಭಗೊಳ್ಳುವ ಪ್ರಸ್ತುತ ಕವಿತೆ, ಮರುಕ್ಷಣವೆ ಆ ಸಾವು ಸೃಷ್ಟಿಸುವ ಆಘಾತಗಳತ್ತ ಹೊರಳುತ್ತದೆ. ಸುಳಿವೇ ಸಿಗದಂತೆ 'ಹದ್ದಿ'ನಂತೆ ಆಕಸ್ಮಿಕ ಬಂದೆರಗುವ ಹವ್ಯಾಸ ಸಾವಿಗೆ. ದಿಗಿಲಿಗೆ ಕಾರಣವಾಗುವ ಸಂಗತಿ ಎಂದರೆ, 'ಚೂರೂ ಗುರುತು ಹತ್ತದ ಮುಖ ಚಹರೆ' ಇದಕ್ಕಿರುವುದು, ಮನುಷ್ಯನ ದೌರ್ಭಾಗ್ಯವೆಂದರೆ, ಯಾರ ಮುಖಾಂತರವೊ ಇದನ್ನು ಕಂಡು ಕಳವಳಿಸಿ ದುಃಖ ಪಡುವುದು ಮತ್ತು ಅಸ್ಥಿರವಾದ ಬದುಕಿನ 'ಪಿಸಿನೂಲು' ತೆಗೆದು 'ಹರಿದಲ್ಲಿ' 'ಎಳೆ' ಜೋಡಿಸಿ ಮತ್ತೆ ಆ ಬದುಕಿನ ರಾಟಿ ತಿರುಗಿಸುತ್ತಲೇ ಇರುವುದು. ರೂಢಿಗತ ದಿನಚರಿಯ ಮಗ್ಗದಲ್ಲಿ ನೇಯ್ದು ಸಾಧನೆಯ 'ಸುಖ'ದಲ್ಲಿ (ಸಂ)ಭ್ರಮಿಸುವ, 'ಯಥಾಪ್ರಕಾರ'ಕ್ಕೆ ಹೊಡಿಕೊಳ್ಳುವ ವಿಪರ್ಯಾಸ ಬದುಕಿನ ದೊಡ್ಡ ವ್ಯಂಗ್ಯ. ಸಾವಿನ ಅವಾಂತರಗಳನ್ನು 'ಕವಿತೆ' ದಾಖಲಿಸುವ ಪರಿಯನ್ನು ಇಲ್ಲಿ ನೋಡಬಹುದು.

**ಹೊತ್ತು-ಗೊತ್ತು, ನೇಮ-ನಿತ್ಯ ಯಾವುದೂ ಇಲ್ಲ**
**ಆಡಾಡುತ್ತ ಅಡ್ಡಗಾಲು; ನಡುವೆ ಒಡ್ಡುವ ಸವಾಲು.**
**ಓಡುವ ಭರಾಟೆಯಲ್ಲಿ ಬಂಡಿ ಕಳಕೊಂಡಂತೆ**
**ಕೊಂಡಿ;ಕಡೆಗೀಲು, ತೆರೆದ ಕಣ್ಣು ತೆರೆದಂತೆ**
**ಬಟಾಬಯಲು, ಹಾಡೇ ಹಗಲು ದರೋಡೆ;**
**ಹಿಂದೆ-ಮುಂದೆ ಸುತ್ತಲೂ ಹದ್ದು-ನೆರಳಿನ ಪಹರೆ.**
**..................................**
**ಒಣಗಿದೆಲೆ, ಬಾಡಿದ ಹೂ, ಕಳಿತ ಹಣ್ಣು-**
**ಚಿಗುರು; ಮೊಗ್ಗು, ಹೀಚಿಗೆ ತೆರೆದ ಕಣ್ಣು;**
**ಹುಳು ಕೊರೆದು, ಬಿರುಗಾಳಿ ಬೀಸಿ ಉದುರಿದರೆ**
**ಮತ್ತೆ ಮಣ್ಣು.**

ಬಂಡಿ, ಕಡೆಗೀಲು, ಒಣಗಿದೆಲೆ, ಬಾಡಿದ ಹೂ, ಕಳಿತ ಹಣ್ಣು, ಚಿಗುರು ಮೊಗ್ಗು, ಹದ್ದು, ಹೀಚು, ಕಣ್ಣು, ಹುಳು, ಬಿರುಗಾಳಿ, ಮಣ್ಣು -ಇವೆಲ್ಲ ಪರಿಚಿತ ಪ್ರತಿಮೆಗಳೇ. ಆದರೆ ಕಾವ್ಯ ಸಂದರ್ಭದಲ್ಲಿ ಕಣವಿಯವರು ಪ್ರಯೋಗಿಸುವ ಔಚಿತ್ಯಪ್ರಜ್ಞೆಕಾರಣವಾಗಿ ಸಾವಿನ ಮೂರ್ತರೂಪವೇ ಎದುರು ನಿಲ್ಲುತ್ತದೆ. ಸಾವಿನ ನಿರ್ದಯವಾದ, ನಿರ್ದಾಕ್ಷಿಣ್ಯವಾದ ಅಟಾಟೋಪಗಳನ್ನು ಸಮರ್ಥವಾಗಿ ಬಿಡಿಸಿಟ್ಟ ಶಬ್ದಚಿತ್ರ ಇದು. ಈ ಚಿತ್ರಕ ಶಕ್ತಿಗೆ ಸಮಾಂತರವಾದ ಆದರೆ ವಿರುದ್ಧ ನೆಲೆಯ ಪ್ರತಿಮಾಲೋಕವೊಂದು ಕವಿತೆಯಲ್ಲಿದ್ದು, ಅದು ಕವಿತೆಯ ತಾತ್ವಿಕ ನೆಲೆಯನ್ನು ಅನಾವರಣಗೊಳಿಸುತ್ತದೆ. ಅರ್ಥವೇ ಆಗದ ಸಾವಿನ ಕ್ರೂರ ಸಂಚು ಮನುಷ್ಯ ಬದುಕಿನ ಮುಗ್ಧತೆ, ನಿಸ್ಸಹಾಯಕತೆ, ಜೀವನಾಸಕ್ತಿಗಳೊಂದಿಗೆ ನಡೆಸುವ ಚೆಲ್ಲಾಟಗಳನ್ನು, ಬಾಲ್ಯ ಯೌವ್ವನ, ವೃದ್ಧಾಪ್ಯಗಳ ಅವಸ್ಥಾಂತರಗಳನ್ನು ಪರಿಸರ ಹಾಗೂ ಭಗ್ನ ಪ್ರತಿಮೆಗಳೊಂದಿಗಿನ ಕ್ರಿಯಾತ್ಮಕ ಭಾಷೆಯಲ್ಲಿ ರೂಪಿಸುತ್ತ ಸಾವು, ಬದುಕಿನ ಎರಡೂ ನೆಲೆಗಳನ್ನು ಮುಖಾಮುಖಿಗೊಳಿಸುವ ಇಲ್ಲಿಯ ಕಾವ್ಯತಂತ್ರ ಗಮನಾರ್ಹವಾದುದು. ಇದನ್ನು ಕಣವಿಯವರು ನಿರ್ವಹಿಸುವುದು ಹೀಗೆ:

**ಮರವೆಯ ಪರದೆಯಾಚೆ ಕಾಡಿನ ದಾರಿ**
**ಕಾಲಮಾನಕ್ಕೆ ದೂರ.**
**ತೆರೆ ಎದ್ದಾಗ ಇದ್ದಕ್ಕಿದ್ದಂತೆ ಸನಿಹ, ಒಮ್ಮೆಲೆ ಕ್ರೂರ**
**ಹುಟ್ಟಿನ ಬೆನ್ನ ಹುರಿಗುಂಟ ಏರಿ**
**ತುಟ್ಟತುದಿಗೊಂದು ತರಹ.**
**ಮುಟ್ಟಿ ನೋಡಿದ ಹಾಗೆ ದಿಟ್ಟತನದನುಭವ**
**ಕೊಟ್ಟು ರುಚಿತೋರಿ, ಇಸಗೊಂಡಂತೆ ನಾಲಗೆಯ ರವರವ ;**
**ಇರಬಹುದು ನಿನಗಿದು ಸಹಜ; ಒಂದು ರೀತಿಯ ಮಜ.**
**ನಮಗೆ ಆಕಸ್ಮಿಕದ ಭಯ.**
**ಎಲ್ಲಾ ಕಳೆದು ಉಳಿದದ್ದು, ಉಳಿಯದಿದ್ದದ್ದೂ ನಿಜ.**

-ಹೀಗೆ ಸಾವಿನ ವಿವಿಧ ಚಹರೆಗಳನ್ನು ನಿಖರಗೊಳಿಸುತ್ತ ಬದುಕಿನ ವಾಸ್ತವಿಕತೆಯೊಂದಿಗೆ ನಿರ್ವಚಿಸಿಕೊಳ್ಳುವುದು ಕವಿತೆಯ ಆಶಯ. ಈ ಆಶಯವನ್ನು ಈಡೇರಿಸಿಕೊಡುವಲ್ಲಿನ ಕವಿತೆಯ ಆಸಕ್ತಿ ಇಲ್ಲಿ ಫಲಿಸಿದೆ. ಎಚ್ಚರಿರಬೇಕಾದ ಸಂದರ್ಭದಲ್ಲಿ ಮನುಷ್ಯ ಲೋಕ ತೊಗಲಬಾವಲಿಯ ಹಿಂಡಿನಂತೆ ತಲೆಕೆಳಗು ಮಾಡಿ ಮತ್ತೆ ಮತ್ತೆ ಯಥಾಸ್ಥಿತಿಗೇ ನೇತಾಡುವ ತಿಳಿಗೇಡಿತನದ ಪರಿಣಾಮವನ್ನೂ ಕವಿತೆ ಬೋಧಿಸುತ್ತದೆ. ಸಾವಿನ ಕೊನೆಯ ಗಳಿಗೆ ಕಹಿಗುಳಿಗೆ ನುಂಗಿದ, ನೀರಿನ ಸುಳಿಗೆ ಸಿಕ್ಕು ಮುಳುಮುಳುಗಿ ಎದ್ದ (ಕ್ಷಣಭಂಗುರ)ಗುಳ್ಳೆಯ ಅನುಭವ. ಇದು ಒರೆಗಳಚಿದ ಅಲಗಿನಂತೆ ನಿಚ್ಚಳ ಅಷ್ಟೇ ಅಪಾಯಕಾರಿ. ಮಣ್ಣಲ್ಲಿ ಮೈವೆತ್ತಮೂರ್ತಿ ಆಟ ಮುಗಿಸಿ ಮರಳಿ ಮಣ್ಣಾಗುವ ಪ್ರಕ್ರಿಯೆ. ಇದೇ ಸಾವಿರದ ಸತ್ಯ.

**ಬಾಳಣ್ಣ ಸೀಗಿಹಳ್ಳಿ.**

# ೪೬. 'ಅಲ್ಲ, ಮಾತ್ಹೇಳತೀನಿ'

ಯಾಕ ಸುಳ್ಳುಸುಳ್ಳ ಸುದ್ದಿ ಹಬ್ಬಸ್ತೀರಿ ?
ಮೊನ್ನಿ ಸಭಾದಾಗ ಯಾರೂ ನನ್ನ ಕಡೆ ಚಪ್ಪಲಿ ತೂರಿಲ್ಲ.
ಖರೆ ಹೇಳ್ತೀನಿ :
ತೂರಿದ್ದರೂ ನಾ ಅದನ್ನ ನೋಡಿಲ್ಲ.
ಕಟ್ಟಖರೇ ಹೇಳ್ತೀನಿ :
ಅದು ನನಗ ಬಡದೇ ಇಲ್ಲ
ಪೇಪರಿನ್ಯಾಗ ಸುದ್ದಿ ಬಂದದಂತ್ಹೇಳಿ
ಅದನ್ನೆಲ್ಲಾ ನಂಬಾಕ ಹೋಗಬ್ಯಾಡ್ರಿ.
ಓದು ಒಲ್ಯಾಗ ಸುಡ್ರಿ...
ಅವರರ ಏನ ಸುದ್ದ ಇರತಾರ?
ನಡೀಬಹುದಾದ್ದನ್ನ ನಡದ ಹೋತು ಅಂತಾರ.
ಹೋತೋ , ಬಂತೋ -ಅಂತೂ ಸುದ್ದೀ ಮಾಡ್ತಾರ.
ಆದರ, ಯರೋ ಕರೇ ನಿಶಾನಿ ಹಿಡಿದಿದ್ದು ಮಾತ್ರ ಖರೆ.
ಯಾಕಂದರ ಬಿಳೇ ಟೊಪಿಗಿ ನಡುವ ಕರೇದು ಕಂಡ ಕಾಣಸ್ತದ.
ಆದರಾಗೇನ ತಪ್ಪದ ?
ಅವತ್ತ ಮಂದಿ ಕೂಡಿದ್ದೇನು ತುಸಾನ?
ನನ್ನ ಭಾಷಣಂದರೇನ ಕಸಾನ ?
ಅಂಥಾ ಗದ್ದಲದಾಗ
ಯಾರದಾರ ಕಾಲಾಗಿಂದು ಕೈಯಾಗ
ಕೈಯ್ಯಂದು ತಲಿಮ್ಯಾಗ ಹೋಗೂದು
ಸ್ವಾಭಾವಿಕ, ಹೌದಲ್ಲ ?
ಅಂದ ಮ್ಯಾಲೆ, ಬೇಕಂತ ತೂರಿದರು
ಅಂತ ಯಾಕ ಬೊಬ್ಬಾಟ ಮಾಡ್ತೀರಿ ?

ಹೋಗಲಿ, ಒಂದು ವ್ಯಾಳೆ ತೂರೇ ಬಿಟ್ಟಾರಂತ ಇಟಗೊಳ್ರಿ:
ಚೆಂಡು ತೂರಿ ಹಿಡಕೋತಾರಲ್ಲಾ
ಹಾಂಗ್ಯಾಕ ಮಾಡಿರಬಾದು? ಹೇಳ್ರಿ.
ಇಲ್ಲ, ನನ್ನ ಕಡೇನ ತೂರಿದರು
ಅಂತ ನೀವನಬಹುದು.
ಹಂಗಾರ ನಾ ಒಂದು ಪ್ರಶ್ನೆ ಕೇಳ್ತೇನಿ:
ಅದೇನಿವರು ಸ್ವತಃ ತಯಾರ ಮಾಡ್ಸಿದ್ದ?
ಯಾರದೋ ಅಂಗಡ್ಯಾಗ ಕೊಂಡದ್ದು
ಇಷ್ಟು ದಿವಸ ಹಾಕ್ಕೊಂಡು ಅಡ್ಯಾಡಿದ್ದು
ಈಗ ಹರಿದಿದ್ದೀತು, ಬೀಸಿ ಒಗದಿದ್ದಾರು-ಆತು.
ಅಲ್ರೀ, ಎಲ್ಲೀದರ ಸಿಟ್ಟು ತಂದು ಎಲ್ಲ್ಯಾರ ಹಾಕಿದರ
ಏನ ಬಂದ್ಹಂಗಾತು ?
ಗುಜರಾತದಾಗ ಗುಂಡು ಹಾಕಿದ್ರ, ಇವರ್‍ಯಾಕ ಗುರ್ರನಬೇಕು ?
ಧಾರಣಿ ಏರಸೂದು, ಮಾನ-ಮರ್‍ಯಾದಿ ಇಳಸೂದು
ನಾಲಗಿ ಹೊಳ್ಸೂದು-
ಎಲ್ಲಾ ಕಡೇನೂ ನಡದ ನಡದೈತಿ.
ಬರೇ ನಮಗ ಏನ ಗುತಿಗಿ ಕೊಟ್ಟೈತೆ?
ಬಿಹಾರದಾಗ ನೋಡ್ರಿ, ಹ್ಯಾಂಗ ಬಾಯಿಗೆ ಅರಿವಿ ಕಟ್ಟಿಕೊಂಡು
ಹಿಂದ ಕೈ ಕಟ್ಟಿಕೊಂಡು ಮೆರವಣಿಗೆ ಹೊರಟಿದ್ರು-
ಅವರ, ಪೇಪರಿನವರ ಕೊಟ್ಟಾರಲ್ಲ-
ಹಾಂಗ ಬಾಯಿ ಮುಚ್ಚಿಕೊಂಡು ಸುಮ್ಮನಿಸಬೇಕ್ರಿಪ
ಅಂದರ ಶಾಣ್ಯಾತನ.
ಅಲ್ಲ, ಮಾತ್ಹೇಳತೀನಿ :
ಚಪ್ಪಲಿ ತೂರಿದ್ದು ತೂರಿ ಹೋಯ್ತು ;
ಅವರಿಗೊಂದು ಹೊಸ ಜೋಡು ಕೊಡಿಸಿದರಾತಿಲ್ಲೋ ?
ಏನಂತೀರಿ ?

'ಜೀವಧ್ವನಿ' ಕವನ ಸಂಕಲನದ, ಹಲವು ಅಂಶಗಳಲ್ಲಿ ವಿಶಿಷ್ಟವೆನಿಸಿರುವ 'ಅಲ್ಲ ಮಾತ್ಹೇಳತಿನಿ' ಕವಿತೆ ವಿಕ್ಟೋರಿಯನ್ ಕಾಲದ ರಾಬರ್ಟ್ ಬ್ರೌನಿಂಗ್ ಹಾಗೂ ಆಲ್ಫ್ರೆಡ್ ಟೆನಿಸನ್‌ರ dramatic monologue .. 'ಗಳನ್ನು ನೆನಪಿಗೆ ತರುವ ಈ ಕವನವು ಧ್ವನಿಪೂರ್ಣ ಗುಣದಿಂದಾಗಿ,

ಹರಿತ ವಿಡಂಬನೆ, ಕುಕ್ಕುವ ಕಟಕಿ, ತೀಕ್ಷ್ಣ ಉಕ್ತಿಗಳ ನವಿರು ಹಾಸ್ಯಗಳಿಂದಾಗಿ ಓದುಗರ ಗಮನ ಸೆಳೆಯುತ್ತದೆ.

ಕವನದ ನಾಯಕ ಅಥವಾ ಪ್ರಧಾನ ಪಾತ್ರ ಓರ್ವ ರಾಜಕೀಯ ವ್ಯಕ್ತಿ. "ಅಪಮಾನವನ್ನೂ ನಾಚಿಕೆಯಿಲ್ಲದೆ ಸ್ವೀಕರಿಸುವ ರಾಜಕಾರಣಿಯೊಬ್ಬರ ಭಂಡತನ ಈ ಕವನದ ವಸ್ತು" (ಎಚ್.ಎಸ್.ಆರ್.) ಸಾರ್ವಜನಿಕರ ಸಭೆಯಲ್ಲಿ ತನ್ನ ಅಸಂಗತ ಮಾತುಗಳಿಂದಾಗಿಯೊ ಅನುಚಿತ ನಡತೆಯಿಂದಾಗಿಯೋ ಸಭಿಕರಿಂದ 'ಚಪ್ಪಲಿ' ತೂರಿಸಿಕೊಂಡು ಅವಮಾನವನ್ನನುಭವಿಸಿದ್ದಾನೆ. ಸನ್ನಿವೇಶದ ಆವೇಶ, ಉದ್ವೇಗ ಆತಂಕಗಳೆಲ್ಲ ತನ್ನೊಳಗೆ ತಣ್ಣಗಾದ ಕ್ಷಣ ಕೈ ಜಾರಿದ / ಘಟಿಸಿದ ಸನ್ನಿವೇಶವನ್ನು ವೇದಾಂತಿಯಂತೆ ವಿಶ್ಲೇಷಿಸುತ್ತಾವೆ. ತನಗೆ ತಾನೇ ಸಾಂತ್ವನ, ಸಮಜಾಯಿಷಿ ಹೇಳಿಕೊಳ್ಳುವುದರ ಮೂಲಕ ಮೂಲ ಅನುಭವದ ಬಿಸಿ ಹಸಿಗಳನ್ನು ವಿಶ್ಲೇಷಿಸುತ್ತಾನೆ. ಕವನ ವೇದಿಕೆಯ ತುಂಬ ಅವನ ಧ್ವನಿ ಮಾತ್ರ ಅನುರಣಿಸಿದೆ. ಅವನ ಸಮರ್ಥನೆಯ ಕ್ರಮ ಏಕಮುಖಿ ಸಂಭಾಷಣೆಯಾದರೂ ಓದುಗರ, ಕೇಳುಗರ ಕಿವಿಗೆ ಸ್ಪಷ್ಟವಾಗಿ ಕೇಳಿಸುತ್ತದೆ. ಘಟನೆಯ ನಂತರದ ಜನರ, ಸುದ್ದಿ ಮಾಧ್ಯಮದವರ, ಪ್ರತಿಸ್ಪರ್ಧಿ, ಆರೋಪಿಗಳ, ಅವಮಾನಿಸಿದವರ ಗುಲ್ಲು ಗುಮಾನಿಗಳನ್ನು ಊಹಿಸಿಕೊಂಡು ಸಮರ್ಪಕ ಹಾಗೂ ತಾರ್ಕಿಕ ಉತ್ತರ ಹಾಗೂ ಸಮಜಾಯಿಷಿಯನ್ನು ನೀಡಿಕೊಳ್ಳುವ ರೀತಿ ಇಂಟರೆಸ್ಟಿಂಗ್ ಅನ್ನಿಸುತ್ತದೆ. ಸಂಭವಿಸಿದ ಕ್ರಿಯೆಯ ಅಸಂಗತತೆ, ಅಸಹ್ಯರೂಪವನ್ನು ತಲೆದೂಗುವ ಸಮರ್ಥನೆಯ ಮೇಕಪ್ಪಿನಲ್ಲಿ ಮುಚ್ಚುತ್ತಾನೆ.

ತನ್ನ ಕಡೆ ಚಪ್ಪಲಿ ತೂರಿದ ಸುದ್ದಿ 'ಸುಳ್ಳು' ಎಂದು ಸಾರುತ್ತ 'ನಾನದನ್ನು ನೋಡಿಲ್ಲ' 'ಅದು ನನಗೆ ಬಡದೇ ಇಲ್ಲ' 'ಪೇಪರಿನವರು ಸುಮ್ಮನೇ ಸುದ್ದಿ ಮಾಡಿದ್ದಾರೆ' ಎಂದೆಲ್ಲ ಸಮರ್ಥಿಸಿಕೊಳ್ಳುತ್ತ, ಕ್ರಿಯೆಯನ್ನು ನಿಷೇಧಿಸುತ್ತ 'ಅದನ್ನು ನಂಬಬ್ಯಾಡ್ರಿ' ಎಂದು ನಂಬಲು ಆಹ್ವಾನಿಸುತ್ತಾನೆ. ತೂರಿದ ಸಂಗತಿಯ ಸತ್ಯಾಸತ್ಯತೆಯ ಸ್ಪಷ್ಟ ನಿಖರದ ವಿಚಾರ ಅವನಿಗೆ ದಕ್ಕಿಲ್ಲ ಹಾಗೂ ಸಿಕ್ಕಿಲ್ಲ. ಮುಂಚಿನ ಸಾಲುಗಳಲ್ಲಿ ತೋಚಿದ ಸತ್ಯವನ್ನು ಅರಗಿಸಿಕೊಳ್ಳುವ ಪ್ರಯತ್ನವೆಂಬಂತೆ ಅಸ್ವಾಭಾವಿಕ ಕ್ರಿಯೆಗೆ ಸಹಜತೆಯ ಬಣ್ಣ ಮೆತ್ತುತ್ತಾನೆ. ತನ್ನ ಭಾಷಣ ಕೇಳಲು ತುಂಬ ಜನ ಬಂದಿದ್ದಿರಬಹುದು, ತನ್ನ ಭಾಷಣದ ಪ್ರಭಾವವೇ ಅಂಥದ್ದು. ಗದ್ದಲ-ಗೌಜಿನಲ್ಲಿ ಅಸಹಜ ಕ್ರಿಯೆ ಜರುಗಿರಲು ಸಾಕು ಎಂದು ಹೇಳಿಕೊಳ್ಳುತ್ತಲೇ ಆ ಕುರಿತು 'ಬೊಬ್ಬಾಟ' ಸಾಕೆಂದು ಎಚ್ಚರಿಸುತ್ತಾನೆ, ಅಬ್ಬರಿಸುತ್ತಾನೆ. ತನ್ನ ಕಲ್ಪನೆಯ ಇನ್ನೊಂದು ಧ್ವನಿಯನ್ನು ಕಟ್ಟಿ ಕೂಡಿಸುತ್ತಾನೆ. 'ಚೆಂಡಾಟ' ಆಡುವಂತೆ ಮೋಜಿಗೆ 'ಚಪ್ಪಲಿ ಆಟ' ಆಡಿದ್ದಿರಬಹುದು' ಹರಿದದ್ದನ್ನು ಇಟ್ಟುಕೊಂಡು ಏನು ಮಾಡಿಯಾರು ? ಬೀಸಿ ಒಗೆದಿರಬಹುದು' ಎನ್ನುವ ಗಂಭೀರ ಸ್ಥಿತಿಯನ್ನು ಸಹಜಗೊಳಿಸುವ, ಸಹಜ ಸಾಧ್ಯವಾಗಿಸುವ ತರ್ಕಬಲದ ವಿಶ್ಲೇಷಣೆ ಧ್ವನಿಪೂರ್ಣವಲ್ಲದೇ ಅರ್ಥಗರ್ಭಿತವಾಗಿದೆ. ಉಗ್ರ ಪ್ರತಿಭಟನೆಯನ್ನು ತಣ್ಣನೆಯ ಮೌನಕೆ - ಪರಿವರ್ತಿಸುವ, ಕ್ರೌರ್ಯ / ಶೋಷಣೆಯ ಕರಾಳ ಹಸ್ತದೊಂದಿಗೆ ಲಾಘವ ಮಾಡಿ ಸಂತೃಪ್ತಗೊಳ್ಳುವ ಸಂವೇದನಾರಹಿತ ಮನಸ್ಸೇ ಅದರ ಪ್ರಾಮಾಣಿಕತೆಯನ್ನು ತೆರೆದು ತೋರಿಸುವಿಕೆ ಇಲ್ಲಿದೆ. ಏನೆಲ್ಲ ಆಗಿದ್ದರೂ ಏನೂ ಆಗಿಲ್ಲವೆಂಬಂತೆ ಅನುಕೂಲಕ್ಕಾಗಿ ಪ್ರತಿಕೂಲ, ಪ್ರತಿಕ್ರಿಯೆಯನ್ನು ಅಪ್ಪಿ ಒಪ್ಪಿಕೊಳ್ಳುವ ಹಿಪೋಕ್ರಿಟನ 'ಚಪ್ಪಲಿ ತೂರಿದ್ದು ತೂರಿ ಹೋಯ್ತು ಅವರಿಗೊಂದು ಹೊಸಾ ಜೋಡು ಕೊಡಿಸಿವರಾತಿಲ್ಲೊ?' ಎನ್ನುವ

ಸಾಲು ಆಗಿದ್ದನ್ನು ಮರೆತು ಮತ್ತೊಂದು ಅಪರಾಧಕ್ಕೆ, ಹೊಸ ಶಿಕ್ಷೆಗೆ ಅಣಿಯಾದಷ್ಟು ಚರ್ಮದ, ಸಂವೇದನೆಗಳಿಂದ ದ್ವಿಮುಖ ನೀತಿಯ 'ರಾಜಕಾರಣಿ'ಯ ಮನಸ್ಸಿನ ಸ್ಥಿತಿಯನ್ನು ಬಿಂಬಿಸುತ್ತದೆ. ನಾಟಕೀಯ ಅಭಿವ್ಯಕ್ತಿ ಹಾಗೂ ವಿಡಂಬನೆಯ ಧಾಟಿ ಕವನದ ಸತ್ವ ಸೊಗಸುಗಳಿಗೆ ಕಾರಣವಾಗಿವೆ. ಸಾಮಾನ್ಯವಾಗಿ ಬಾಹ್ಯದಲ್ಲಿ ಅಸಂಗತ ನಡೆ-ನುಡಿ, ವೇಷ-ಭೂಷಣ ಆಚಾರ-ವಿಚಾರಗಳು ವಿಡಂಬನೆಗೆ ಆಹಾರವಾಗುತ್ತವೆ. ಅಭಿನಯ ಹಾಗೂ ಧ್ವನಿಸಹಿತ ಮಾತುಗಳಲ್ಲಿ ವಿಡಂಬನೆಯ ಪರಿಣಾಮ, ಪ್ರಭಾವಗಳನ್ನು ಬಿಂಬಿಸಬಹುದು. ಆದರೆ ಲಿಖಿತ ಅಭಿವ್ಯಕ್ತಿಯಲ್ಲಿ ಕಣವಿ ಅವರು ಅದನ್ನು ಅರ್ಥಪೂರ್ಣವಾಗಿ ತುಂಬಿ ತುಳುಕಿಸಿದ್ದು ಅವರ ವಿಶೇಷ ಹಾಗೂ ಕೌಶಲ್ಯಕ್ಕೆ ಕನ್ನಡಿ ಹಿಡಿಯುತ್ತದೆ, ಜೋನಾಥನ್ ಸ್ವಿಫ್ಟ್‌ನ 'ಕಟಕಿ'ಯನ್ನು ನೆನಪಿಗೆ ತರುತ್ತದೆ. ಲೇಖಕರೊಬ್ಬರು ಅಭಿಪ್ರಾಯಪಟ್ಟಿರುವಂತೆ ಕಣವಿ ಅವರ ಕಾವ್ಯಭಾಷೆಗೆ adaptability ಯ ಶಕ್ತಿಯಿರುವದರಿಂದ ಸಮಕಾಲೀನ ಸನ್ನಿವೇಶವೊಂದರ ವಿವರಗಳನ್ನು ಕುತೂಹಲಕಾರಿಯಾಗಿ ಆಡುಮಾತಿನ ಶೈಲಿಯಲ್ಲಿ ಬಿಂಬಿಸಬಲ್ಲರು. ಪ್ರಸ್ತುತ ಕವನದಲ್ಲಿ 'ಚಪ್ಪಲಿ' ಪ್ರತಿಮೆ ಕಾವ್ಯ ನಾಯಕನ ಭಾವನೆ ತರ್ಕ, ಸಮರ್ಥನೆ, ವಿಶ್ಲೇಷಣೆ ಉದಾಹರಣೆಗೆ ಹೂರಣ ಮಾತ್ರವಲ್ಲದೇ ಕಾರಣವೇ ಆಗಿ ಕನವದುದ್ದಕ್ಕೂ ಬೆಳೆದು ನಿಲ್ಲುತ್ತದೆ.

'ಚಪ್ಪಲಿ' ಶಬ್ದವು 'ದೂಷಣೆ', 'ಶಿಕ್ಷೆ' 'ಶೋಷಣೆ' 'ಅವಮಾನ' 'ಪ್ರತಿರೋಧ' ಲಘು ಪ್ರತಿಮೆಯನ್ನು ಸಂಕೇತಿಸುತ್ತ ಅದರ ಸ್ಥಾನಪಲ್ಲಟವು ಧಾರಕನ ಕ್ರೋಧ, ಅಸಡ್ಡೆಗೆ ಕಾರಣವಾಗಿ ತಪ್ಪಿತಸ್ಥನ ಆತಂಕದ ಉರುಳಾಗುತ್ತದೆ. ಪಾದವನ್ನು ರಕ್ಷಿಸುವ ಕವಚವು, ದುಷ್ಟನನ್ನು, ಸಮಾಜಘಾತುಕವಾಗುವ ರೀತಿ ಕವನದಲ್ಲಿ ಉಪಕರಣವಾಗಿ ಪರಿವರ್ತಿತವಾಗುವ ರೀತಿ ಧ್ವನಿಪೂರ್ಣವಾಗಿ ಅಭಿವ್ಯಕ್ತಿಗೊಂಡಿದೆ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ 'ಗುಜರಾತ್ ಹಾಗೂ ಬಿಹಾರ' ರಾಜ್ಯಗಳಲ್ಲಿ ನಡೆದ ಘಟನೆಗಳ ಪ್ರಸ್ತಾಪವು ಕವನದ ವಸ್ತು ವಿಷಯದ ಬೆಳವಣಿಗೆಯನ್ನು ಪುಷ್ಟೀಕರಿಸುತ್ತ ಅದನ್ನು ಗಂಭೀರಗೊಳಿಸುವ ಪ್ರಕ್ರಿಯೆಗೆ ತೊಡಗುತ್ತದೆ.

ಕವನದ ಶೀರ್ಷಿಕೆ ಹಾಗೂ ಕಾವ್ಯ ಶಿಲ್ಪದ ಕಳಸದಂತಿರುವ ಆಡುಮಾತಿನ (coloquial) ಶೈಲಿಯ 'ಅಲ್ಲ, ಮಾತ್ಹೇಳತಿನಿ' ಉದ್ಗಾರವು ಕವನದ ಪ್ರತಿನಿಧಿ ಹೇಳಿಕೆಗಳನ್ನು nullify ಗೊಳಿಸುವ, ಅಲ್ಲಗಳೆವ ಯಶಸ್ವೀ ಅಭಿವ್ಯಕ್ತಿಯಾಗಿ ವಿಶೇಷ ಅರ್ಥಪ್ರಾಪ್ತಿಯನ್ನೊದಗಿಸುತ್ತದೆ.

ಕಣವಿಯವರ ಶ್ರೇಷ್ಠ ಮಟ್ಟದ ವಿಡಂಬನೆ ಮಾದರಿಯ ಕವಿತೆಗಳಲ್ಲಿ ಒಂದಾದ 'ಜಗದೇಕಮಲ್ಲ' ಕವಿತೆಯ ಬಗ್ಗೆ ಬರೆಯುತ್ತ, "ಇಲ್ಲಿನ ವಿಡಂಬನೆ ಕವಿಯ ಒಟ್ಟು ತಾಂತ್ರಿಕ ನೆಲೆಯನ್ನು ಅರ್ಥೈಸಿಕೊಳ್ಳುವ ದಾರಿಯ ಒಂದು ಅನಿವಾರ್ಯ ಪ್ರಕಾರವೂ ಆಗಿರುವುದು ಈ ಸಂದರ್ಭದಲ್ಲಿನ ಹೆಚ್ಚಳವಾಗಿದೆ." ಎಂದಿರುವ ಕಾಳೇಗೌಡ ನಾಗವಾರ ಅವರ ಮಾತನ್ನು * ಪ್ರಸ್ತುತ ಕವಿತೆಗೂ ಅನ್ವಯಿಸಬಹುದಾಗಿದೆ.

**ಗುರುದೇವಿ ಹುಲೆಪ್ಪನವರಮಠ**

---

* ಕಣವಿಯವರ ಕಾವ್ಯದಲ್ಲಿ 'ಬೆಳ್ಳಿ ತೇರಿನ ದಾರಿ' ;ಪುಟ -೧೨೪

# ೪೭. ಹುಲ್ಲು

ಈ ಜುಲೈ ತಿಂಗಳ ಜಿಟಿಜಿಟಿ ಮಳೆ -
ಗಟಗಟ ಕುಡಿದು ಧುತ್ತೆಂದು ಬೆಳೆದು ನಿಂತಿದೆ ಹುಲ್ಲು.
ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು;
ಸಿಮೆಂಟು ಗೋಡೆಯ ಬಿರುಕು, ಟಾರು ಬೀದಿಯ ಒಡಕು -
ಎಂಥ ಇಕ್ಕಟ್ಟಿನಲ್ಲು ಹೊರಬರುತ್ತದೆ ತುರಾಯಿ ಹಚ್ಚಿಕೊಂಡು.

ಗುಡ್ಡ-ಮರಡಿ-ಬಯಲು ಸ್ವಂತ ಸಾಮ್ರಾಜ್ಯ.
ಹಿತ್ತಿಲದ ಮಾತು ಗೊತ್ತೇ ಇದೆ;
ಅಂಗಳದ ಅಂಗುಲಂಗುಲ ಕೂಡ ಅದರದೇ ಗುತ್ತಿಗೆ.
ಹೂದೋಟದಲ್ಲಿ ಹೇಳಿ ಕಳಿಸಿದ ಹಾಗೆ ಹೊತ್ತಿಗೆ
ಮೊದಲೇ ಬಂದು ಡೇರೆ ಹೊಡೆದು ತಳವೂರುತ್ತದೆ-
ನೀರೆರೆದು ಬೆಳೆಸಿದ ಹೂವಿನ ಗಿಡಕ್ಕೆಸೆದು ಸವಾಲು;
ಬೀಜದ ಕಸುವೊ, ಮಣ್ಣಿನ ಹಸಿವೋ -
ಮುಸುಗುಡುತ್ತದೆ ದನ ಮೇದು ಹೋದ ಮೇಲೂ.

ಕರುಣೆ ತೋರದೆ ಕುರುಪಿಯಿಂದ ಕೆತ್ತಿ ಕೆತ್ತಿ ತೆಗೆದು
ಹೊರದೆಗೆದು ಹಸನಾಯಿತೆಂದು ಉಸಿರು ಬಿಡು
ವಷ್ಟರಲ್ಲೇ ಕಷ್ಟದ ಮರುದಿನದ ಮುಖದಂತೆ
ಬ್ಲೇಡಿಗೆ ತಯಾರು, ನೀವಾರು, ನಿಮ್ಮ ಹೆಸರೇನು
ಕಸುಬಾವುದು-ಐದೆಸೆಯೆಲ್ಲ ಅದಕೆ ಗೊತ್ತು.
ಕಣ್ಮುಚ್ಚಿಬಿಟ್ಟೇ
ಬಿಡುತ್ತದೆ ಬಾಣ, ಹೇಳಿ ಎಲ್ಲಿಲ್ಲ ಅದರ ತಾಣ ?
ಇರಬಹುದು ಬಂಡೆಗಲ್ಲಿನ ಬೋಳುತಲೆ ಅಲ್ಲಲ್ಲಿ, ಅದರ

ತಳದಲ್ಲಿ ಮೆತ್ತಗೆ ಮಲಗಿರುತ್ತದೆ. ಪರೀಕ್ಷಿಸಿ ನೋಡಿ.
ಚೇಲಿದಾಟ ಒಳಗೆ ನುಗ್ಗುತ್ತದೆ : ಕಾಲ ಕೆಳಗೇ ಬಂದು
ಜಗ್ಗುತ್ತದೆ. ಲಾನಿನ ಕ್ರಾಪು ಕತ್ತರಿಸಿದಾಗ ಮಗ್ಗುಲದಲ್ಲಿ
ಹಿಗ್ಗುತ್ತದೆ: ಬರುಬರುತ್ತ ಒಗ್ಗಿ ಹೋಗುತ್ತದೆ.

ಮಳೆಗೆ ಹುಲ್ಲು ಮೊಳೆಯುವದು ಮೂಲ ಪ್ರವೃತ್ತಿ ನಿಸರ್ಗ.
ಕಳೆ ತೆಗೆದು ಬಿತ್ತಿ ಬೆಳೆಯುವುದು ನಾಗರಿಕ ಮಾರ್ಗ.
ಮರುಭೂಮಿಯ ಮಾತು ಬೇರೆ ; ಅಲ್ಲಿ ಮಳೆಯೂ ಇಲ್ಲ.
ಆದರೂ ದೂರ ಅಲ್ಲೊಂದು ಓಯಸಿಸ್ಸು ಉಂಟಲ್ಲ ಮಾರಾಯರೆ-
ಅದಕ್ಕೇ ಅಲ್ಲಿ ಒಂಟೆ ಮಲಗಿ ಮೆಲುಕಾಡಿಸುವುದು.

"A proper study of mankind is Man" ಎಂದಿದ್ದಾನೆ, ಕವಿ ಪೋಪ. ಹಾಗೆಯೇ 'The proper study of a poet is a Poem" ಎಂದು ನಾವು ಹೇಳಬಹುದು. ಒಬ್ಬ ಉತ್ತಮ ಕವಿಯು ತನ್ನ ಪ್ರತಿ ಕವನದಲ್ಲೂ ಪ್ರತಿಬಿಂಬಿತನಾಗುತ್ತಾನೆ - ಪ್ರತಿ ಬೀಜದಲ್ಲಿ ಮರವಿದ್ದಂತೆ. ಒಂದು ಕವಿತೆಯನ್ನು ಆಯ್ದು, ಆರೈಸಿ, ಅರಿತುಕೊಂಡರೆ ಅಲ್ಲಿ ನಮಗೆ ಕವಿಯ ಹೊನ್ನಿನ ಗೆರೆ-ಬಣ್ಣಗಳ ಹೊಳಪು ಬರೆದದ್ದು ಕಾಣಬಹುದು.

ಕವಿ ಕಣವಿಯವರ ಕಾವ್ಯದ ಗುಣಲಕ್ಷಣಗಳೇನು ? ಎದೆ ತುಂಬುವ ಮಾನವೀಯತೆ, ಎದೆ ತಟ್ಟುವ ಮಾರ್ಮಿಕತೆ, ನಮ್ರಸಚಿವನ ನಯಗಾರಿಕೆಯ ಹಿತೋಕ್ತಿ-ಚತುರೋಕ್ತಿ; ಉತ್ಪ್ರೇಕ್ಷೆಯ ನವಿರಾದ ವಿಲಾಸ, ರಸಾರ್ದ್ರವಾದ ಪದಮೈತ್ರಿ; 'ಬಂಧವಿರದ ಬಂಧುರ' ಪದ್ಯಬಂಧ, ಆವೇಶವಿಲ್ಲದ ಉತ್ಸಾಹ-ಉತ್ಸುಕತೆ, ಆಕ್ರೋಶವರಿಯದ ವಾಗ್ಮಿತೆ;ವರ್ಣ ವಿಷಯ ಅದು ವಸ್ತುವಿರಲಿ, ವ್ಯಕ್ತಿ ಇರಲಿ ಅವಿಸ್ಮರಣೀಯ ಭಾವ-ಭಂಗಿ-ನಿಲುವು-ಒಲವುಗಳನ್ನು ಸೂಕ್ಷ್ಮವಾಗಿ ಸೆರೆಹಿಡಿದು ಮಾತಿನಲ್ಲಿ ಮುದ್ರಿಸುವ ಚೂಟಿಯ ಛಾಯಾಗ್ರಾಹಕತೆ ಮತ್ತು ಆಳವಾದ, ನೈಜವಾದ, ನಿರ್ಭರವಾದ ಪ್ರಕೃತಿ ಪಾರವಶ್ಯ, ನಿಸರ್ಗ ಸೌಂದರ್ಯದ ಆಸಕ್ತಿ.

ಕವಿ -ವಿಮರ್ಶಕ ಡಾ. ಶಂಕರ ಮೊಕಾಶಿಯವರು ಕಣವಿಯವರಲ್ಲಿ Natural mysticism ಹದಗೆಡದ ರೂಪದಲ್ಲಿ ಕಂಡಿದ್ದಾರೆ. ಇಲ್ಲಿಯ Mysticism (ಅನುಭಾವ?) ದ ವಿಚಾರ ನನಗೆ ಹೊಳೆಯದು. ಆದರೆ ಅವರಲ್ಲಿ ನಿಸರ್ಗದ ಬಗೆಗೆ ಅತ್ಯಂತ ಆತ್ಮೀಯವಾದ ಆಸಕ್ತಿಯಿದೆ. ಇದನ್ನು ನಾವು ಭಕ್ತಿಯೇ ಅನ್ನಬಹುದು. ಆದರೆ 'ಭಕ್ತಿ' ಎಂಬ ಮಾತಿನಿಂದ ಹೊಳೆಯುವ ದೈವಿಕತೆ, ಶರಣಾಗತಿ ಇತ್ಯಾದಿಗಳ "ಕಾಂಡ" ಇಲ್ಲಿ ಕಾಣುವುದಿಲ್ಲ. ನಿಸರ್ಗವನ್ನು ಈ ಕವಿ ಮನವಾರೆ 'ಭಜಿಸು'ತ್ತಾರೆ, ಪ್ರೀತಿಸುತ್ತಾರೆ. ಅದರಿಂದ ತನ್ನ ಕಾವ್ಯಕ್ಕೆ ಸ್ಫೂರ್ತಿ ಪಡೆಯುವುದಿರಲಿ, ಅದರಲ್ಲಿ ಕಾವ್ಯವನ್ನೂ ಮರೆಯುತ್ತಾರೆ. ಅವರ 'ಬರೆಯಲೊಲ್ಲದ ಕವಿತೆ' ('ನಗರದಲ್ಲಿ ನೆರಳು' ಸಂಗ್ರಹ)ಯಲ್ಲಿಯೂ ಈ ಸಾಲುಗಳನ್ನು ನೋಡಬಹುದು:

ಇಂಥ ತಂಪೊತ್ತಿನಲಿ ಮಾನ್ಯ ಸಂಪಾದಕರೆ
ಕವಿತೆ ಏತಕೆ ಬೇಕು ಹೇಳಿ...
....ಬಾಡಿರುವ
ಹೂಗಳ ತೆಗೆದು, ಒಣಗಿದೆಲೆಗಳ ಗುಡಿಸಿ, ಅಲ್ಲಲ್ಲಿ
ಅಸ್ತಿತ್ವಕ್ಕೆ ಧಕ್ಕೆ ಬಾರದ ಹಾಗೆ ಬೆಳೆದ ಕಸ-ಕಳೆಯು
ಕೆತ್ತಿ, ಕುರುಪಿಯಾಡಿಸಿ, ಜರಜರಿಯಿಂದ ನೀರೆರೆಯುವಲ್ಲಿ
ನನಗೆ ಸುಖವುಂಟು ;

ಈ ಸುಖದ ಇದಿರು ಕವಿಗೆ ಸಂಪಾದಕರ ಚೆಕ್ಕು, 'ಗೌರವದ ಚವರಿ' ಯಾವುದೂ ಮರುಳುಗೊಳಿಸದು. ಈ ಬಗೆಯ ತನ್ಮಯತೆಯಿಂದ ಈ ಕವಿಯ ಪ್ರಕೃತಿ ವರ್ಣನೆ ಯಾವಾಗಲೂ ಉತ್ಕಟ ಪ್ರಾಮಾಣಿಕತೆ (Sincerity) ಯಿಂದ ತುಂಬಿರುತ್ತದೆ.

ಈ ಹಿನ್ನೆಲೆಯಲ್ಲಿ ನಾನು ವಿಶ್ಲೇಷಣೆಗೆ ಆಯ್ದುಕೊಂಡದ್ದು ಕವಿಯ 'ಹುಲ್ಲು' ಕವನ. ದೀಪಾವಳಿ ವಿಶೇಷ ಸಂಚಿಕೆ 'ಪಾಂಚಾಲಿ'ಯಲ್ಲಿ ಮೊದಲು ಪ್ರಕಟವಾದ ಕವನ (೧೯೭೪) 'ಜೀವಧ್ವನಿ'ಯಲ್ಲಿ ಸಂಗ್ರಹಗೊಂಡಿದೆ. ಬೆಳಗಿನ ಬಣ್ಣಗಳನ್ನು ಅಳೆದು ತಿಳಿಯಲು ಒಂದು ಕಿರಣವನ್ನು ಲೋಲಕದೊಳಗಿಂದ ಹಾಯಿಸಿ ಕಂಡರೆ ಸಾಕು, ಅದೇ ರೀತಿ ಈ ಕವನದ ವಿಮರ್ಶೆ, ಕವನವೇ ಒಂದು ಮನೋಲೋಲಕ ಅದರ ಓದುಗರ ಪ್ರವಾಹವನ್ನು ಪೃಥಃಕರಿಸಿ ಅವರ ಮಾದರಿಗಳನ್ನು ಗುರುತಿಸಲು. ("A poem is a mental prism capable of sepearating the stream of its readers into a number of distingushable types". I.A. Richards).

ಆಧುನಿಕ ಕವಿತೆಗೆ, ಅದೂ 'ನವ್ಯ'ವೆಂಬ ಕವನಕ್ಕೆ 'ರಸ'ವೆಂಬುದೊಂದು ಉಂಟೆ ? ರಸಕ್ಕೆ ಒಂದು ಮಾನವೀಯ ಸಂದರ್ಭ ಬೇಕು. ಸ್ಥಾಯೀಭಾವಗಳೆಲ್ಲ ಮಾನವ ಜೀವನದ ಅಂಗಗಳು, 'ತ್ರೈಗುಣ್ಯೋದ್ಭವ ಲೋಕಚರಿತ'ದಿಂದ ಕಥೆ, ನಾಟ್ಯ ಇತ್ಯಾದಿಗಳಲ್ಲಿ ರಸೋತ್ಪತ್ತಿ. ಬಿಡಿ ಕವನಗಳಲ್ಲಿ ಕವಿಯ ಆಶಯ ಅಂತರಂಗವೇ ಏಕಪಾತ್ರ. ಅಲ್ಲಿ ಯಾವ ಮಾನವೀಯ ಘಟನೆಯೂ ನಡೆಯುವುದಿಲ್ಲ. ಕವನ ಓದಿ ಮುಗಿದಾಗ ಏನೋ ಒಂದು ಉತ್ಸಾಹ, ಉತ್ತೇಜನ, ಉದ್ರೇಕ, ಆನಂದ ಉಂಟಾಗುವುದು ಖಂಡಿತ. ಆದರೆ ಒಂದು ಅಖಂಡ ರಸಾನುಭವವಲ್ಲ. ಅದನ್ನು ಹೆಚ್ಚೆಂದರೆ ಭವಭೂತಿ ಹೇಳುವ 'ಕೌತುಕರಸ'ವೆನ್ನಬಹುದು. ಆದ್ದರಿಂದ ಇಂಥ ಕವಿತೆಯ 'ರಸ' ಪರಿಚಯವೆಂದರೆ ಅದರ ಆನಂದವರ್ಧಕ ಸೌಂದರ್ಯದ ಪದಪ್ರತ್ಯಯದಿಂದ ಉಂಟಾಗುವ ವಿಶಿಷ್ಟ ಬೌದ್ಧಿಕ ಸುಖದ ಅರ್ಥ ಮಾಡಿಕೊಳ್ಳುವ ಪ್ರಯತ್ನ.

'ಹುಲ್ಲು' ಕವನದ ವಸ್ತು ಅಪೂರ್ವ. ಹುಲ್ಲು ತೀರ ಸಾಮಾನ್ಯ. ಸರ್ವಸಾಧಾರಣ, ಜನಸಾಮಾನ್ಯರಂತೆ. ಆದರೆ ನಾವೆಲ್ಲ ಪ್ರಾಣಿಕೋಟಿ ಬದುಕುವುದು ಹುಲ್ಲಿನಿಂದಲೇ ಎಂದರೆ ತಪ್ಪಲ್ಲ. ನಾವು ಉಣ್ಣುವ ಧಾನ್ಯ -ದವಸ ಹುಲ್ಲಿನಿಂದಲೇ, ನಾವು ಕುಡಿಯುವ ಹಾಲು-ಹೈನು ದನದ ಹೊಟ್ಟೆಯ ರಸಾಯನ ಶಾಲೆಯಲ್ಲಿ ಹುಲ್ಲಿನಿಂದ ತಯಾರಾದ ವಸ್ತುವೇ. ಬೇರೆ ಗಿಡಮರಗಳು ಇಲ್ಲದಿರುವಲ್ಲಿ ನೆಲದ ಮರ್ಯಾದೆ ಮುಚ್ಚುವುದು ಹುಲ್ಲೇ ಸರಿ. ಶೂರ ವೀರರೆಂಬ ಪುಂಡರು

ಹೋರಾಡಿ ಒಬ್ಬರನ್ನೊಬ್ಬರು ಕೊಂದು ಭೂಮಿತಾಯಿಯ ಮೈಯನ್ನೆಲ್ಲ ನೆತ್ತರಿಂದ ತೋಯಿಸಿದಾಗ ಆ ಬಗ್ಗೆ ನೊಂದು ನಾಚಿ ಭೂಮಿತಾಯಿಯ ಮೈಯನ್ನೆಲ್ಲ ನೆತ್ತರಿಂದ ತೋಯಿಸಿದಾಗ ಆ ಬಗ್ಗೆ ನೊಂದು ನಾಚಿ ಭೂಮಿ ಅದನ್ನೆಲ್ಲ ಹುಲ್ಲು ಹಾಸಿದ ಹಸಿರು ಸೆರಗಿನಿಂದ ಮುಚ್ಚಿಕೊಂಡು ಬಿಡುತ್ತಾಳೆ:

ಇಷ್ಟಾದರೂ ಹುಲ್ಲು ನಗೆ ಹೀನಾಯ, 'ಹುಲುಮನುಜ'ನೆಂದು ನಾವು ಹೀಯಾಳಿಸುತ್ತೇವೆ. ತೃಣೀಕರಿಸು ಎಂಬುದು ತಿರಸ್ಕರಿಸು ಎಂಬ ಅರ್ಥವನ್ನು ಕೊಡುತ್ತದೆ. ಅನಾಯಾಸವಾಗಿ ತಾನೇ ತಾನಾಗಿ ಬೆಳೆಯುವ ಹುಲ್ಲು ನಮ್ಮ ಮಟ್ಟಿಗೆ ದೀನ ದಲಿತ.

ಈ ದೀನದಲಿತ ಪಂಥಕ್ಕೆ ದನಿ ಕೊಟ್ಟಿದ್ದಾರೆ ಕವಿ. ಈ ಕವನದಲ್ಲಿ ಹುಲ್ಲು ಜೀವೇಷಣೆಯ ಪ್ರತೀಕವಾಗಿ ಕಂಡಿದ್ದಾರೆ. ಹುಲ್ಲಿಲ್ಲದ ತಾಣವೆಲ್ಲಿ ? ಹುಲ್ಲಿಗೆ ಯಾರ ಅಂಕೆ-ಅಂಕುಶ? 'ನಿತ್ಯ ಸರ್ವಗತಃ ಸ್ಥಾಣು ಅಚಲೋಽಯಂ ಸನಾತನಃ' ಎಂಬ ಪರಮಾತ್ಮನ ಪ್ರತೀಕ ನಿಜವಾಗಿಯೂ 'ಅಶ್ವತ್ಥ'ವಲ್ಲ ಈ ಹುಲ್ಲು!

ಈ ಕವನ, ಮಳೆಯಿಂದ ಮೊದಲಾಗಿ ಮಳೆಯೇ ಇಲ್ಲದ ಮರುಭೂಮಿಯಲ್ಲಿ ಕೊನೆಯಾಗುತ್ತದೆ.

ಹುಲ್ಲಿನ ಹುಟ್ಟು ಗುಟ್ಟು ಕವಿ ಸಜೀವವಾಗಿ ಚಿತ್ರಿಸಿದ್ದಾರೆ. ಅದು ಧುತ್ತೆಂದು ಬೆಳೆದು ನಿಂತಿದೆ. ಎಂಥ ಇಕ್ಕಟ್ಟಿನಲ್ಲೂ ತುರಾಯಿ ಹಚ್ಚಿಕೊಂಡು ಹೊರಬರುತ್ತದೆ. ಈ ಮಾತು ಹುಲ್ಲಿನ ಪುಟ್ಟ ಧಿಮಾಕನ್ನು ತುಂಬ ಸೊಗಸಾಗಿ ಚಿತ್ರಿಸುತ್ತದೆ. ಗೊಂಡೆಯೋ, ಮೊಗ್ಗೆಯೋ, ಹೂವೋ ತಲೆಗಿಟ್ಟುಕೊಂಡು ಹುಲ್ಲು-ಕದರು ಕಾಣಿಸಿಕೊಳ್ಳುತ್ತದೆ. ಅದರ ಪುಟ್ಟ ಬಾಳಿನಲ್ಲಿಯೂ ಅಟ್ಟಹಾಸವೆಷ್ಟು ? ನಮಗೆ ಜಿಟಿಜಿಟಿ ಮಳೆ ಹೊಲ ಬೇಸರ, ಆದರೆ ಅಲ್ಪಪ್ರಾಣಕ್ಕೆ ಅದು ಧಾರಾಕಾರ ಹಾಲೆರೆದಂತೆ, ಅದನ್ನೆ ಗಟಗಟ ಕುಡಿದು ಧುತ್ತೆಂದು ಮತ್ತೆ ಹಾಜರು - ನಾಗರಿಕತೆಗೆ ನಿಸರ್ಗದ ಸವಾಲು ಎಸೆದು. ಮೂಲ ಪ್ರವೃತ್ತಿಯನ್ನು ಪೂರ್ತಿ ನಿರ್ಮೂಲ ಮಾಡಲು ಸಾಧ್ಯವೆ? ಮೂಲ ಸಾಬೀತು ಇರುವತನಕವೂ ಅದು ಮತ್ತೆ ಮತ್ತೆ ಮೈದೋರುತ್ತದೆ.

'ತುರಾಯಿ ಹಚ್ಚಿಕೊಂಡು' ಎಂಬ ಚಿತ್ರಮಯ ಚಿಕ್ಕಪದಪ್ರಯೋಗ ತುಂಬ ಧ್ವನಿನಿಬಿಡವಾಗಿದೆ.

ಹಿತ್ತಲ ಮಾತು ಗೊತ್ತೆ ಇದೆ
(ಮರುಭೂಮಿಯ ಮಾತು ಬೇರೆ)

ಇಂಥ ಸಾಲುಗಳು ಈ ವೃತ್ತಬಂಧವಿರದ ಸ್ವಚ್ಛಂದ ಛಂದದ ಕವನದ ಒಳತೋಲವನ್ನು ಕಾಯ್ದುಕೊಳ್ಳುತ್ತವೆ. ಇದಕ್ಕೆ ಅಲ್ಲಲ್ಲಿಯ ಅಂತಃಪ್ರಾಸಗಳು -ಗುತ್ತಿಗೆ-ಹೊತ್ತಿಗೆ, ಕರಿಕೆ-ತುರಿಕೆ, ಹುಲ್ಲು-ಬಿಲ್ಲು, ಬಾಣ-ತಾಣ ಇತ್ಯಾದಿ ಬೆಳ್ಳಿಯ ಕೀಲು ಜಡಿದಂತೆ ಅಚ್ಚುಕಟ್ಟನ್ನು ಒದಗಿಸಿವೆ.

ಹುಲ್ಲು ಕಿತ್ತಷ್ಟು ಮತ್ತೆ ಮತ್ತೆ ಹುಟ್ಟಿಬರುತ್ತದೆಂಬ ಒಂದು ವಿಚಾರವನ್ನು ಕವಿ ಅನೇಕ ಪರ್ಯಾಯೋಕ್ತಿಗಳಿಂದ (elegant variations) ವರ್ಣಿಸುತ್ತಾರೆ. ಅಲ್ಲಿ ಅವರಿತ್ತ 'ಕಷ್ಟದ

ಮರುದಿನದ ಮುಖ'ದ ಉಪಮೆ ಒಮ್ಮೆಲೆ ಮನಸ್ಸು ಸೆರೆಹಿಡಿಯುವಂತಿದೆ. 'ಕಣ್ಮುಚ್ಚಿ ಬಿಟ್ಟೇ'- ಎಂಬ ಮಾತಿನ ಹಿಂದಿನ ಮಕ್ಕಳ ಕಣ್ಣುಮುಚ್ಚಾಟದ ಧ್ವನಿ ಈ ಪುಟ್ಟ ಹುಲ್ಲ ಚೆಲ್ಲಾಟಕ್ಕೆ, ಫಕ್ಕನೆ ಕಣ್ಣಿಗೆ ಬೀಳುವ ತುಂಟ ತರಳತನಕ್ಕೆ ಅರ್ಥವತ್ತಾದ ಶ್ರುತಿ ಕೊಡುತ್ತದೆ. ಅದೇ ರೀತಿ 'ಕಾಮನಬಿಲ್ಲು.... ಬಿಡುವುದು ಬಾಣ'. ಇಲ್ಲಿಯ ಹೋಲಿಕೆ ಹಳೆಯದೆನಿಸಿದರೂ ಅದರ ಕ್ರಿಯಾಶೀಲ ತಿರುವು ಹೊಸತು -ಹೃದ್ಯ.

ಬಂಡೆಗಲ್ಲಿನ ಬೋಳುತಲೆ ಅಲ್ಲಲ್ಲಿ ಇರಬಹುದು. ಆದರೆ ಪರೀಕ್ಷಿಸಿ ನೋಡಿ : ಅದರ ತಳದಲ್ಲಿ ಹುಲ್ಲು ಮೆತ್ತಗೆ ಮಲಗಿರುತ್ತದೆ.

**ಬೇಲಿದಾಟಿ ಒಳಗೆ ನುಗ್ಗುತ್ತದೆ**
**ಕಾಲ ಕೆಳಗೆ ಬಂದು ಜಗ್ಗುತ್ತದೆ**
**ಲಾನಿನ ಕ್ರಾಪು ಕತ್ತರಿಸಿದಾಗ ಮಗ್ಗುಲಲ್ಲಿ**
**ಹಿಗ್ಗುತ್ತದೆ -**

(ಮುಖದ ಕ್ಷೌರದ ನಂತರ ಕ್ರಾಪಿನ ಹೋಲಿಕೆ) ಈ ಪಂಕ್ತಿಗಳಲ್ಲಿಯ ಕ್ರಿಯಾಪದಗಳು ಪ್ರಾಸಕ್ಕಾಗಿ ಬಂದವಲ್ಲ, ಯಥಾರ್ಥತೆಯಲ್ಲಿ ಪ್ರಾಸವು ಸಾರ್ಥಕವಾಗಿದೆ.

'ಮಳೆಗೆ ಮಣ್ಣೆ ಮೊಳೆಯುತಿದೆ'- ಅಂದಿದ್ದಾರೆ. ಅಂಬಿಕಾತನಯದತ್ತರು ತಮ್ಮದೊಂದು ಕವನದಲ್ಲಿ, ಆದರೆ ಈ ಕವಿ ಬೀಜದ ಕಸುವನ್ನೂ ಮಣ್ಣಿನ ಹಸಿವನ್ನೂ ಬೇರೆಯಾಗಿ ಗುರುತಿಸುತ್ತಾರೆ. ಆದರೆ ಕವನದ ಕೊನೆಯಲ್ಲಿ ಹುಲ್ಲಿನ ಬೆಳೆಗೆ ಬೀಜ ಮಣ್ಣುಗಳೊಂದಿಗೆ ಮಳೆಯನ್ನು ಮುಖ್ಯ ಅಂಗವಾಗಿ ಕವಿ ನಮೂದಿಸಿದ್ದಾರೆ. 'ಮಳೆಗೆ ಹುಲ್ಲು ಮೊಳೆಯುವುದು'. ಇದು ಕವನದ ಆರಂಭಕ್ಕೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಜಿಟಿಜಿಟಿ ಮಳೆ ಷೇಕ್ಸ್‌ಪಿಯರ ಹೇಳುವ gentle rain ಅಲ್ಲ. ಆದರೂ ಇದು ಕರುಣೆಯ ಪ್ರತೀಕ. (ಕರುಣೆ ತೋರದೆ ಕುರುಪಿಯಿಂದ ಕೆತ್ತಿ ಕೆತ್ತಿ ತೆಗೆದಾಗ). ಈ ಕರುಣೆ ಮಳೆಗರೆದಾಗಲೇ ಹುಲ್ಲು ಮತ್ತೆ ತಲೆಯೆತ್ತುವುದು, ಅಂದರೆ ದೀನದಲಿತ ಜನಾಂಗ ದೇಶದ ನಿಜವಾದ ಬುಡಕಟ್ಟಿನ ಎಲ್ಲೆಲ್ಲೂ ನೆಲಸಿದ ಜನಪದ, ಮೇಲಿನವರ ಕರುಣೆಯಿಂದಲೇ ಚೇತರಿಸಿಕೊಂಡು ಏಳಬಲ್ಲರು ಎಂಬ ಭಾವ ಇಲ್ಲಿ ಮಿಡಿದಂತಿದೆ.

ಈವರೆಗಿನ ವಿಶ್ಲೇಷಣೆ, 'ಹುಲ್ಲು' ದುರ್ದಮ್ಯ ಜೀವೇಷಣೆ ಅಥವಾ ಜೀವನೋತ್ಸಾಹದ ಪ್ರತೀಕವೆಂದು ಕಂಡುಕೊಂಡಾಗ ಮೂಡಿ ಬಂದ ಮೀಮಾಂಸೆ. ಆದರೆ ಈ ಕವನದಿಂದ ಕವಿ ಇನ್ನೊಂದು ಆಳದ ಪಾತಳಿಯಲ್ಲಿ ಆಶಯವನ್ನು ತುಂಬಿದ್ದಾನೆ. ಇಲ್ಲಿ 'ಹುಲ್ಲು' ಜೀವನೋತ್ಸಾಹದಂತೆ ಜೀವ ಜೀವದ ಜೀವಾಳದ ಪ್ರೇರಣೆಯೂ ಪ್ರಚೋದನೆಯೂ ಆದ ಕಾಮಕ್ಕೂ ಪ್ರತೀಕವಾಗಿದೆ. ಫ್ರಾಯ್ಡ್‌ನ ಮತದಂತೆ ಮಳೆಯು ಒಂದು ಕಾಮಪ್ರತೀಕ. ಆದರೆ ಇಲ್ಲಿ ಕವಿ, ಮಳೆಗೆ ಜುಮ್ಮೆಂದು ನಿಮಿರಿ ನಿಲ್ಲುವ ಹುಲ್ಲು ಕಾಮದ ಪ್ರತೀಕವಾಗಿ ಒಟ್ಟು ಕಂಡಿದ್ದಾರೆ.

ಈ ಕೋನದಿಂದ ಕಂಡರೆ ಕವನದಲ್ಲಿ ಕೊನೆಯವರೆಗೂ ಅರ್ಥಪೂರ್ಣತೆ ಮಿಡಿಯುತ್ತದೆ. ಕಾಮಪ್ರವೃತ್ತಿಯ ಸಾರ್ವತ್ರಿಕತೆ ಸಾರ್ವಭೌಮಿಕತೆಯನ್ನು ಈ ಕವನ ಕಂಡರಿಸುತ್ತದೆ. ಈ ದೃಷ್ಟಿಯಿಂದ

ಇಲ್ಲಿಯ ಯಾವ ಪಂಕ್ತಿಯೂ ನಿರರ್ಥಕವಲ್ಲ. ವ್ಯರ್ಥವಲ್ಲ, ಜಿಟಿಜಿಟಿ ಮಳೆಗೆ (ಆಷಾಢಸ್ಯ ಪ್ರಥಮ ದಿವಸೇ.....) ಬೆಳೆದು ನಿಂತಲ್ಲಿಂದ ಹಿಡಿದು ಮಳೆಯೇ ಇಲ್ಲದ ಮರುಭೂಮಿಯವರೆಗೂ, ಹಿತ್ತಲ ಬೇಲಿಯಿಂದ ಹಿಡಿದು ಬೋಳುಬಂಡೆಯವರೆಗೂ ಇದಕ್ಕೆ "ಅರ್ಥ' ಹೊರಡುತ್ತದೆ.

"ಎಂಥ ಇಕ್ಕಟ್ಟಿನಲ್ಲು ಹೊರ ಬರುತ್ತದೆ..." ಈ ಸಾಲಿನಿಂದಲೇ ಈ ಭಾವ ವಿಚಿತ್ರ ಸ್ವಾರಸ್ಯ ಕಟ್ಟುತ್ತದೆ. ಈ ಸಾಲು ಇಲ್ಲಿಯ ಪ್ರತೀಕಾತ್ಮಕತೆ Key note ಆಗಬಲ್ಲದು- 'ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು', 'ಹಿತ್ತಲ ಮಾತು ಗೊತ್ತೇ ಇದೆ', 'ಹೂದೋಟದಲ್ಲಿ ಕೇಳಿ ಕಳಿಸಿದ ಹಾಗೆ', 'ನೀರೆರೆದು ಬೆಳೆಸಿದ ಗಿಡಕ್ಕೆ' ಅಂದರೆ ನಾಗರಿಕ ಸಂಸ್ಕೃತಿಗೂ ಈ ಕಾಮದ ಸವಾಲು, ಎಂಥ ಪರಿಷ್ಕೃತ ಪ್ರತಿಷ್ಠೆಯ ಜಂಭವನ್ನೂ ಅದು ನಡುಗಿಸಬಲ್ಲುದು. ಹಸಿವು-ಕಸುವುಗಳು ಕಾಮಕ್ಕೂ ಸಲ್ಲುವವು. 'ಮುಸುಗುಡುವದು' ಅದರದೇ ಭಾಷೆ. 'ಕಜ್ಜಿಯ ತುರಿಕೆ' ಅದರದೇ 'ಕಂಡೂ ಶಮನ', ಕಾಮನಬಿಲ್ಲಿನ ಬಾಣ ಕಣ್ಮುಚ್ಚಿ ಬಿಟ್ಟ ಬಾಣ. 'ಹೇಳಿ ಎಲ್ಲಿಲ್ಲ ಅದರ ತಾಣ ?'

ಮುಂದೆ ಇಲ್ಲವೆಂಬ ತಾಣಗಳ ಪರೀಕ್ಷೆ. 'ಬಂಡೆಗಲ್ಲಿನ ಬೋಳುತಲೆ' ನಿವೃತ್ತ, ಸಂನ್ಯಸ್ತ ವಿರಕ್ತವೆಂಬ ಸ್ಥಾನ. ಆ ಬಂಡೆಯ ಕೆಳಗೂ ಈ ಹುಲ್ಲು, ನುಣ್ಣಗೆ ಚಾಚಿದೆ. ಅಲ್ಲ - 'ಮೆತ್ತಗೆ ಮಲಗಿರುತ್ತದೆ' ; 'ಬೇಲಿದಾಟಿ ಒಳಗೆ ನುಗ್ಗುತ್ತದೆ' - ತಾರುಣ್ಯೋನ್ಮಾದಕ್ಕೆ ಯಾವ ಬೇಲಿಯ ಅಡೆ-ತಡೆ ? 'ಮಗ್ಗುಲಲ್ಲಿ ಹಿಗ್ಗುತ್ತದೆ' - ಇದು ವಿಧಿವತ್ತಾಗಿ ಲಾನಿನ ಕ್ರಾಪು ಕತ್ತರಿಸಿದ ಮೇಲೆ ಅಂದರೆ ಗಾರ್ಹಸ್ಥ-ದಾಂಪತ್ಯದ ಅಧಿಕೃತ ರೀತಿಯಲ್ಲಿ. ಆದರೆ ಆ ಕಾಮಪ್ರವೃತ್ತಿ 'ಒಗ್ಗಿ ಹೋಗುತ್ತದೆ. ಹೀಗೆ ಬರಬರುತ್ತ' ಎಂದು ಮತ್ತೆ ಸಮಾರೋಪಗೊಳಿಸುವುದೇಕೆ ? ಇದು ಮಾಮೂಲಿನ ತೀರ್ಮಾನವಾಗದೇ?

ಇನ್ನು ಜೀವನೋತ್ಸಾಹ ಮತ್ತೆ ಮತ್ತೆ ದಮಿತ ದಲಿತವಾದರೆ ಅದು ಅಂಥ ದೀನಾವಸ್ಥೆಗೆ ಬರಬರುತ್ತ ಒಗ್ಗಿಹೋಗುವುದು ನಿಜ. ಆದರೆ ಈ ಸಾಲಿನ ಹಿಂದಿನ ಸಾಲುಗಳು ಅಂಥ ತೊತ್ತುಳದುಳಿತದ ಧ್ವನಿಯನ್ನು ಕೊಡುವುದಿಲ್ಲ. ಅಲ್ಲೆಲ್ಲ ನುಗ್ಗು ಹಿಗ್ಗುಗಳದೇ ಮಾತು:

'ಹುಲ್ಲು' ಕಾಮದ ಪ್ರತೀಕವಾಗಿ ತೆಗೆದುಕೊಂಡಾಗ ಮರುಭೂಮಿ ಓಯಾಸಿಸ್ ಎಲ್ಲವೂ ಅರ್ಥಪೂರ್ಣವಾಗುತ್ತವೆ. (ಆದರೆ ಅದು ಬರಿ ಜೀವನೋತ್ಸಾಹದ ಪ್ರತೀಕ-ಪ್ರತಿಮೆಯಾದಾಗ) ಇದು ಅಷ್ಟೊಂದು ಪೂರಕ ಪೋಷಕವೆನಿಸುವುದಿಲ್ಲ. ಹಾಯಾಗಿ ಮೆಲುಕಾಡಿಸುತ್ತ ಮಲಗಿದ ಒಂಟಿ ದಲಿತ, ದಮಿತ ಪ್ರಾಣಶಕ್ತಿ (Vitality)ಯದಲ್ಲ. ಮರುಭೂಮಿ ಬಂಜೆತನಕ್ಕೆ ಓಯಾಸಿಸ್ ಅಲ್ಲಿಯೂ ವ್ಯಕ್ತವಾಗುವ ಲೈಂಗಿಕ ಹಸಿವೆಯ ಹಸಿ -ಹಸಿರಿಗೆ ಪ್ರತಿಮೆಗಳಾಗುತ್ತವೆ. ಆದರೆ ಆಗ "ದೂರ ಅಲ್ಲೊಂದು ಓಯಾಸಿಸ್ಸು ಉಂಟಲ್ಲ ಮಾರಾಯರೆ " ಎಂಬ ಉದ್ಗಾರದಲ್ಲಿ ಅನಗತ್ಯ ಲೇವಡಿ (Mockery) ಧ್ವನಿಸುವಂತಿದೆ. ಆದರೂ ಆ ಬಂಜೆತನದಲ್ಲಿಯೂ, ಒಂಟಿ ಬಾಳಿನಲ್ಲಿಯೂ ಮಲಗಿ ಮೆಲುಕಾಡಿಸುವ ಈಪ್ಸೆ 'ಒಂಟಿ'ಯ ಪ್ರತಿಮೆಯಲ್ಲಿ ಮಾರ್ಮಿಕವಾಗಿಯೇ ಮೈವೆತ್ತಿದೆ. ಈ ದೃಷ್ಟಿಯಿಂದ ಧ್ವನ್ಯರ್ಥದ ಈ ಪಾತಳಿಯಲ್ಲಿ 'ಹುಲ್ಲು' ತುಂಬ ಸಾರ್ಥಕವಾಗಿದೆ.

ಶಬ್ದ ಕೋಶಗಳಲ್ಲಿ ಸಿಗದ ಬಣ್ಣಗಳ ಎಲೆ ಎಲೆಯಲ್ಲಿ
ಹಿಡಿದು ಬಯಲಿಗುಡುಗೊರೆಯಾಗಿ ಮುಗಿಲೆಡೆಗೆ ದೃಷ್ಟಿ.
ಮಳೆಯಲ್ಲಿ ತಟಸ್ಥ, ಅಂತರ್ಮುಖಿಯಾಗಿ ನೆನೆದು
ನಿಂತ ಮೇಲೂ ಎಲೆದುಟಿಯಲ್ಲಿ ತಟಪಟ ಮಂತ್ರ.

ಎಲೆಯುದುರುವಾಗ ನಿರ್ಭಾವದಲಿ ನಿಂತ, ಗಾಳಿಯಲ್ಲಿ
ಗಿರಿಗಿರಿ ತಿರುಗಿ, ನೆಲವಪ್ಪುವುದ ನೋಡುವ ಸಂತ.
ಇಡಿಯ ಮರವೀಗ ಎಲೆಯ ಮರ್ಮರವಿರದ ಮೂಲಾಕೃತಿ,
ಬರುವ ಸಂವತ್ಸರಕ್ಕೆ ಬರೆದ ಭರವಸೆಯ ನಕ್ಷೆ.
ಕಾಯುತ್ತದೆ ವಸಂತಕ್ಕೆ ನೆನಪು-ಹಸಿಯುಳಿಸಿಕೊಂಡು
ಅನುಭವಿಸುತ್ತ ಈ ಬಗೆಯ ಬರಡು ಶಿಕ್ಷೆ.

ಕಾಯಲಾರದೆ ಮನುಷ್ಯ ಕೊಡಲಿಯೆತ್ತುತ್ತಾನೆ:
ಮಾಯಲಾರದ ಗಾಯ ಭವಿಷ್ಯಕ್ಕೆ, ಭೂತಕ್ಕೆ ಬಲಿ?
ಒಂದೊಂದು ಏಟಿಗೂ ಒಂದೆಡೆಗೆ ಭೂಕಂಪ
ಮತ್ತೊಂದೆಡೆಗೆ ಚಂಡಮಾರುತ, ನೂರು ಅಪಘಾತ,
ಕಡಿದ ಟೊಂಗೆಯ ಬದಿಗೆ ಚಿಗುರು ಪಿಳಿಪಿಳಿ ಕಣ್ಣು;
ಅನುಮಾನಿಸುವ ಮೊಗ್ಗೆ; ಈ ಮನುಷ್ಯನ ಬಗ್ಗೆ
ಎಲ್ಲೆಡೆ ಸಂಶಯವೆ. ಇದರ ತಣ್ಣೆಳಲಲ್ಲಿ ಕುಳಿತು
ನಲ್ಲೆಯ ಗಲ್ಲ ಮುಟ್ಟಿ, ಮಗುವ ಮುದ್ದಿಸಿದವನು
ಹೂ ಹಣ್ಣು ಕಾಯಿಗಳ ಪಡೆದು ಗುಡಿಗೆ ಹೋದವನು
ಯಾರು? ಹೌದು, ಇವನೆ, ಈ ಮನುಷ್ಯನೆ.

ಚೆನ್ನವೀರ ಕಣವಿಯವರ ಒಂದು ಮಹತ್ವದ ಕವಿತೆ 'ಜೀನಿಯಾ' ಸಂಗ್ರಹದ ಮನುಷ್ಯ-ಪ್ರಕೃತಿ', ಕವಿತೆಯ ಶೀರ್ಷಿಕೆಯೇ ಅರ್ಥಪೂರ್ಣ. ಇದು ಮನುಷ್ಯನ ಪ್ರಕೃತಿಯ ಕಥನವೋ, ಪ್ರಕೃತಿ ಮತ್ತು ಮನುಷ್ಯನ ಸಂಬಂಧದ ಕಥನವೋ ಅಥವಾ ಪ್ರಕೃತಿಯ ಕುರಿತಾಗಿ ಮನುಷ್ಯನ ಚಿಂತನವೋ? ಈ ಮೇಲಿನ ಯಾವುದೇ ವಿಚಾರಕ್ರಮಗಳು ಮನುಷ್ಯ ಮತ್ತು ಪ್ರಕೃತಿಯು ಭಿನ್ನವಾಗಿರುವ ಎರಡು ಸಂಗತಿಗಳೆಂದು ಸೂಚಿಸುತ್ತಿದೆಯಲ್ಲವೇ ? ಅಂದರೆ ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಛಿದ್ರತೆಯನ್ನು ಕವಿತೆ ವಸ್ತುವಾಗಿಸಿಕೊಂಡಿದೆಯೇ?

ಈ ಕವಿತೆಯಲ್ಲಿ ಐದು ಘಟಕಗಳಿವೆ. ಮೊದಲ ಘಟಕದಲ್ಲಿ ಬರುವ ಪದಗಳ ಆಯ್ಕೆಯಲ್ಲಿ ಮತ್ತು ಪ್ರಯೋಗದಲ್ಲಿ ಕವಿಯ ಕೌಶಲ ಎದ್ದು ಕಾಣುತ್ತದೆ. ಇಲ್ಲಿ 'ಮೊಳೆಯುವ, ಮೇಲೇಳುವ,

ಬೆಳೆಯುವ, ನರ್ತಿಸುವ, ಚಿತ್ರಬಿಡಿಸುವ' ಕ್ರಿಯೆಗಳು ನಿಸರ್ಗದ ವಸ್ತುವಿವರಣೆಗಳಷ್ಟೇ ಅಲ್ಲ, ಸೃಜನಶೀಲ ಮನಸ್ಸಿನ ಮನುಷ್ಯನ ಬದುಕೂ ಆಗಿದೆ.

ಕವಿತೆಯ ಎರಡನೆಯ ಭಾಗದಲ್ಲಿ ನಿಸರ್ಗದ ವಿವರಗಳೆಲ್ಲ ಗೃಹಸ್ಥನೊಬ್ಬನ ಚಿತ್ರದಂತೆ ರೂಪುಗೊಳ್ಳುತ್ತದೆ. ಆದರೆ ಗೃಹಸ್ಥನೇ ಆಗಿ ರೂಪುಗೊಳ್ಳುವುದಿಲ್ಲ. ಅಂದರೆ ಕವಿತೆಯ ಈ ಭಾಗದಲ್ಲಿ ಬಳಸುವ 'ಅತಿಥಿಗಳಂತೆ' ಮತ್ತು 'ಬಳಗವೇ ಎಂಬಂತೆ' ಎಂಬ ಶಬ್ದಗಳು ನಿಸರ್ಗವನ್ನು ವರ್ಣಿಸಲು ಮನುಷ್ಯ ಬದುಕಿನ ಕ್ರಮಗಳನ್ನು ಕವಿ ಆಯ್ಕೆ ಮಾಡಿಕೊಂಡಿರುವುದನ್ನು ಹೇಳುತ್ತವೆ.

ವಿಮರ್ಶಕ ಡಿ.ಆರ್. ನಾಗರಾಜರು ಕಣವಿಯವರ ಕಾವ್ಯ ಮಾರ್ಗವನ್ನು ಭಾವಗೀತಾತ್ಮಕ ವಾಸ್ತವತೆ ಎಂದು ಹೆಸರಿಸುತ್ತಾರೆ. ಜೊತೆಗೆ ಕಣವಿಯವರ ಸಂವೇದನೆಗಳು ಪ್ರಕೃತಿಯೊಳಗೆ ಭಾಷಾಂತರವಾಗುವುದನ್ನು ಸರಿಯಾಗಿಯೇ ಗುರುತಿಸುತ್ತಾರೆ. (-ಶಕ್ತಿ ಶಾರದೆಯ ಮೇಳ - ಡಿ. ಆರ್. ನಾಗರಾಜ್ ಪು. ೨೪೧)

ಅಂತೆಯೇ - **ನೂರು ಬಗೆ ಹಕ್ಕಿ ಅತಿಥಿಗಳಂತೆ, ಇಲ್ಲ ಬಂಧು ಬಳಗವೇ**
**ಎಂಬಂತೆ ನಿಶ್ಚಿಂತ ಕುಳಿತು, ದೂರ ದೂರದ ಅರಣ್ಯದ ಸುದ್ದಿ**
**ಚಿಲಿಪಿಲಿಸಿ, ಒಂದಿಷ್ಟು ಕೊರಳು ಸರಿಪಡಿಸಿ, ಹಾಡಿ**
**ಚುಂಚುತಿಕ್ಕಿ ಗರಿಹಿಗ್ಗಲಿಸಿ ಕೊಡವಿ, ಹಿಕ್ಕೆ ಹಾಕಿ-**
**ಮತ್ತಾವ ನೆನಪೊ, ಸಿಕ್ಕತ್ತ ಹಾರಿ ಮರೆಯಾಗುವವು.**
**ಆಳದ ಬೇರಿನಿಂದ ನಿರಾಳ ಟೊಂಗೆ ಟಿಸಿಲಿನವರೆಗು**
**ಮರಮರ ಮರ್ಮರ, ವಿಚಿತ್ರ ನೋವು ನಲಿವು-**

ಎಂಬ ಈ ಸಾಲುಗಳಲ್ಲಿ ಮರಗಳ-ಹಕ್ಕಿಗಳ ನಿಗೂಢ ಸಂಬಂಧದ ಅಭಿವ್ಯಕ್ತಿ ಇದೆ. ಈ ಸಂಬಂಧವು ದಟ್ಟ ವಿವರಗಳ ಜೋಡಣೆಯಲ್ಲಿ ಕವಿಯ ಸಂವೇದನೆಗಳು ನಿಸರ್ಗದೊಳಗೆ ಭಾಷಾಂತರಗೊಂಡಿವೆ. ಈ ವರ್ಣನೆಯ ವೈಶಿಷ್ಟ್ಯದಲ್ಲಿ ಮನುಷ್ಯನೂ ಒಂದಾಗಿದ್ದಾನೆ. ವಿಚಿತ್ರ ನೋವು ನಲಿವುಗಳು ಮರದ ಮರ್ಮರಗಳಲ್ಲಿ ಅಭಿವ್ಯಕ್ತಿಗೊಂಡು ಗಟ್ಟಿ ಸಂಬಧದ ಅಭೀಪ್ಸೆಯನ್ನು ನಿಸರ್ಗವು ವ್ಯಕ್ತಪಡಿಸಿದೆ.

ಕವಿತೆಯ ಮುಂದಿನ ಭಾಗದಲ್ಲಿ ಗೃಹಸ್ಥನೊಬ್ಬ ತಟಸ್ಥನಾಗಿ ಅಂತರ್ಮುಖಿಯಾಗಿ ಮುಗಿಲೆಡೆಗೆ ದೃಷ್ಟಿ ನೆಟ್ಟು ನಿಂತ ಸಂತರಂತೆ ಮರದ ಚಿತ್ರವಿದೆ. ಇಂಥ ಘಳಿಗೆಯಲ್ಲಿ ಕವಿಗೆ ನಿಸರ್ಗ ಹೀಗೆ ಕಾಣುತ್ತದೆ.

**ಎಲೆಯುದುರುವಾಗ ನಿರ್ಭಾವದಲಿ ನಿಂತ, ಗಾಳಿಯಲಿ**
**ಗಿರಗಿರಿ ತಿರುಗಿ, ನೆಲವನಪ್ಪುವುದ ನೋಡುವ ಸಂತ.**

ಇಡಿಯ ಮರವೀಗ ಎಲೆಯ ಮರ್ಮರವಿರದ ಮೂಲಾಕೃತಿ. ಇದು ಸಂತನೊಬ್ಬನ ಪ್ರಕೃತಿಯ ಚಿತ್ರದಂತೆಯೇ, ಚಳಿಗಾಲದ ನಿಸರ್ಗದ ಚಿತ್ರವೂ ಹೌದು. ಕವಿತೆಯು ಮತ್ತೆ ಮತ್ತೆ ಮನುಷ್ಯ ಮತ್ತು ನಿಸರ್ಗದ ಅವಿನಾಭಾವದ ಸಂಬಂಧವನ್ನು ಬೇರೆ ಬೇರೆ ವಸ್ತು ವಿವರಗಳ ಮೂಲಕ ಹೇಳುತ್ತದೆ. ಬರುವ ವಸಂತ ಋತುವಿಗೆ ಕಾಯುತ್ತಾ ನಿಲ್ಲುವ ಮರಕ್ಕೆ (ಪ್ರಕೃತಿಗೆ) 'ಕಾಯುವಿಕೆ' ಶಿಕ್ಷೆಯಾದರೂ ಜೊತೆಗೇ ಅದಮ್ಯ ಆಶಾವಾದವೂ ಇದೆ. ಕನಸು, ಭರವಸೆಗಳೆಲ್ಲ ಕವಿತೆಯೊಳಗೆ ಹೆಪ್ಪುಗಟ್ಟುತ್ತವೆ.

ನವೋದಯ ಕಾಲದ ಆದರ್ಶ, ಆಶಾವಾದಗಳು ಕವಿತೆಯ ಈ ಸಾಲುಗಳಲ್ಲಿ ಸ್ಪಷ್ಟವಾಗುತ್ತವೆ. 'ಬರುವ ಸಂವತ್ಸರಕೆ ಭರವಸೆಯ ನಕ್ಷೆಯಾಗಿ' ನಿಂತ ಬರಡು ಮರ ಅನೇಕ ವಿಚಾರಗಳನ್ನೂ ಭಾವನೆಗಳನ್ನೂ ರವಾನಿಸುತ್ತದೆ. ಇಲ್ಲಿ ಪ್ರಕೃತಿಯ ಸಂಗತಿಗಳು ಭಾವಾಗೀತಾತ್ಮಕವಾಗಿ ಭಾಷಾಂತರಗೊಂಡು ಪ್ರಕೃತಿಯೇ ಆದ ಮನುಷ್ಯ ಕಾಣಿಸಿಕೊಂಡಿದ್ದಾನೆ.

ಕವಿತೆ ಮುಂದಿನ ಭಾಗದಲ್ಲಿ ಬೇರೆಯ ತಿರುವನ್ನು ಪಡೆಯುತ್ತದೆ. ಕವಿತೆಯ ಮುಖ್ಯ ಘಟ್ಟ ಇದೆನ್ನಬಹುದು. ಇಲ್ಲಿ ಕಣವಿಯವರು ಜೀವಕೇಂದ್ರಿತ ಪ್ರಕೃತಿಯ ವಿವರಗಳನ್ನು ಭಗ್ನಗೊಳಿಸುವ ಮನುಷ್ಯನ ಪ್ರಕೃತಿಯನ್ನು ನೇರವಾಗಿ ಹೇಳಿಬಿಡುತ್ತಾರೆ. ಇಲ್ಲಿ ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಛಿದ್ರವಾಗಿರುವುದನ್ನು ಗುರುತಿಸಬಹುದು. ಕಾಯುತ್ತಿರುವ ಮರಕ್ಕೆ

**ಕಾಯಲಾರದ ಮನುಷ್ಯ ಹೊಡಲಿಯೆತ್ತುತ್ತಾನೆ.**
**ಮಾಯಲಾರದ ಗಾಯ ಭವಿಷ್ಯಕ್ಕೆ; ಭೂತಕ್ಕೆ ಬಲಿ ?**
**ಒಂದೊಂದು ಏಟಿಗೂ ಒಂದೆಡೆಗೆ ಭೂಕಂಪ**
**ಮತ್ತೊಂದೆಡೆ ಚಂಡಮಾರುತ, ನೂರು ಅಪಘಾತ**

ಇಡೀ ಜಗತ್ತಿನ ಅವ್ಯಕ್ತ ನಿಗೂಢ ಸರಪಳಿಯನ್ನು ತಮ್ಮ ದಿಮಾಕಿನಿಂದ ಕತ್ತರಿಸಿದ ಮನುಷ್ಯ ಇಲ್ಲಿದ್ದಾನೆ. ಈ ಆಧುನಿಕ ಮನುಷ್ಯನ ಅಹಂಕಾರವನ್ನು 'ಕಡಿದ ಟೊಂಗೆಯ ಬದಿಗೆ ಚಿಗುರು ಪಿಳಿಪಿಳಿ ಕಣ್ಣು' ಬಿಡುತ್ತಾ ಗಮನಿಸುತ್ತಿದೆ.

**ಅನುಮಾನಿಸುವ ಮೊಗ್ಗೆ; ಈ ಮನುಷ್ಯನ ಬಗ್ಗೆ**
**ಎಲ್ಲೆಡೆಗು ಸಂಶಯವೆ.**

-ಕವಿತೆಯ ಈ ಸಾಲುಗಳಲ್ಲಿ ಮನುಷ್ಯ ತಾನು ನಿಸರ್ಗದಿಂದ ಬೇರೆಯಾಗಿದ್ದಾನೆ. ಹೌದು, ಬೇರೆಯೇ ಇದ್ದಾನೆ ಎಂಬ ಭಾವ ಬೆಳೆಯುತ್ತಾ ಹೋಗುತ್ತದೆ. ಈ ಧ್ವನಿ ಕಣವಿಯವರ ಇತರ ಪ್ರಕೃತಿ ಗೀತೆಗಳಲ್ಲಿ ಅನಾವರಣಗೊಳ್ಳುತ್ತದೆ. ಇದೇ ಸಂಕಲನದ (ಜೀನಿಯಾ) 'ಹೂವು ಹೊರಳುವವು' ಎಂಬ ಕವಿತೆಯಲ್ಲಿ ಕಣವಿಯವರು ನಿಸರ್ಗದ ಎದುರು ಮನುಷ್ಯನ ಮಿತಿಯನ್ನು ಗುರುತಿಸುವುದು ಹೀಗೆ :

**ಹೂವು ಹೊರಳುವವು ಸೂರ್ಯನ ಕಡೆಗೆ**
**ನಮ್ಮ ದಾರಿ ಬರಿ ಚಂದ್ರನವರೆಗೆ**

ಇಲ್ಲಿ ಕವಿಗೆ ಪ್ರಕೃತಿ ಮತ್ತು ಮನುಷ್ಯ ಸಂಬಂಧದ ಬಗೆಗೆ ಸ್ಪಷ್ಟ ಕಲ್ಪನೆಯಿದೆ.

ಈ ಸಂದರ್ಭದಲ್ಲಿ ವರಕವಿ ಬೇಂದ್ರೆಯವರ 'ಯುಗಾದಿ' ಪದ್ಯದ ಧ್ವನಿಯೂ ಕೇಳಿಬರುತ್ತದೆ. ಇಲ್ಲಿ ಬೇಂದ್ರೆಯವರು

'ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ' ಎನ್ನುತ್ತಾ ಎಲ್ಲೆಡೆಗೆ ಹೊಸತನವನ್ನು ಕಂಡು ಹರ್ಷಿಸುತ್ತಾ ಒಂದಾಗುತ್ತಾ 'ನಮ್ಮ ನಷ್ಟೆ ಮರೆತಿದೆ' ಎನ್ನುತ್ತಾರೆ.

ಇಲ್ಲಿ ಇಡೀ ಪರಿಸರವೇ ಒಂದಾಗಿರುವಾಗ, ಒಂದಾಗದ ಮನುಷ್ಯನ ಪ್ರಕೃತಿಯ ಸ್ಪಷ್ಟ ಚಿತ್ರವಿದೆ.

ಕಣವಿಯವರು ಕವಿತೆಯ ಕೊನೆಯಲ್ಲಿ ಹೀಗೆನ್ನುತ್ತಾರೆ:

**ಇದರ ತಣ್ಣೆಳಲಲ್ಲಿ ಕುಳಿತು**
**ನಲ್ಲೆಯ ಗಲ್ಲ ಮುಟ್ಟಿ ಮಗುವ ಮುದ್ದಿಸಿದವನು**
**ಹೂ ಹಣ್ಣು ಕಾಯಿಗಳ ಪಡೆದು ಗುಡಿಗೆ ಹೋದವನು**
**ಯಾರು? ಹೌದು, ಇವನೆ, ಈ ಮನುಷ್ಯನೇ -**

ಪ್ರಸ್ತುತ ಕವಿತೆಯ ಈ ಮುಕ್ತಾಯ ಮನುಷ್ಯನ ಆಳದಲ್ಲಿರುವ ಸ್ವಾರ್ಥವನ್ನು ನಮ್ಮೆದುರು ಇಡುತ್ತದೆ. ಕವಿ ಯಾವ ಪ್ರಶ್ನೆಯನ್ನೂ ಹಾಕದೇ, ಯಾವ ಉತ್ತರವನ್ನೂ ನಿರೀಕ್ಷಿಸದೆ ಪೂರ್ಣ ವಿರಾಮ ಇಟ್ಟುಬಿಡುತ್ತಾರೆ. ಜೀವಕೇಂದ್ರಿತ ಪ್ರಕೃತಿಯ ಕಥನವು ಮನುಷ್ಯ ಪ್ರಕೃತಿಯ ಸ್ವಭಾವವನ್ನು ಚಿತ್ರಿಸುವುದರೊಂದಿಗೆ ಮುಕ್ತಾಯವಾಗುತ್ತದೆ.

ಕಣವಿಯವರ ಪ್ರಕೃತಿ ಗೀತೆಯೊಳಗೆ ನಿಸರ್ಗದ ಸಣ್ಣಪುಟ್ಟ ವಿವರಗಳೂ ಭಾವಗೀತಾತ್ಮಕವಾಗಿ ಅಭಿವ್ಯಕ್ತಗೊಂಡು ವಾಸ್ತವಿಕ ಪ್ರಜ್ಞೆಯಾಗಿ ರೂಪುಗೊಳ್ಳುವುದನ್ನು ಈಗಾಗಲೇ ಕನ್ನಡ ವಿಮರ್ಶೆ ಗುರುತಿಸಿದೆ. ಆ ನಿಲುವಿಗೆ ಸ್ಪಷ್ಟ ಉದಾಹರಣೆ 'ಮನುಷ್ಯ-ಪ್ರಕೃತಿ'ಯಾಗಿದೆ. .

**ಕೆ.ಆರ್. ಸಿದಗಂಗಮ್ಮ.**

# ೬೪. ಹೂವು ಹೊರಳುವವು ಸೂರ್ಯನ ಕಡೆಗೆ

ಹೂವು ಹೊರಳುವವು ಸೂರ್ಯ ಕಡೆಗೆ
ನಮ್ಮ ದಾರಿ ಬರಿ ಚಂದ್ರನವರೆಗೆ, -
ಇರುಳಿನ ಒಡಲಿಗೆ, ದೂರದ ಕಡಲಿಗೆ
ಮುಳುಗಿದಂತೆ, ದಿನ ಬೆಳಗಿದಂತೆ
ಹೊರ ಬರುವನು ಕೂಸಿನ ಹಾಗೆ.

ಜಗದ ಮೂಸೆಯಲಿ ಕರಗಿಸಿ ಬಿಡುವನು
ಎಲ್ಲ ಬಗೆಯ ಸರಕು :
ಅದಕೆ ಅದರ ಗುಣದೋಷಗಳಂಟಿಸಿ-
ಬಿಡಿಸಿಬಿಟ್ಟ ತೊಡಕು.

ಗಿಡದಿಂದುದುರುವ ಎಲೆಗಳಿಗೂ ಮುದ-
ಚಿಗುರುವಾಗಲೂ ಒಂದೆ ಹದ.
ನೆಲದ ಒಡಲಿನೊಳಗೇನು ನಡೆವುದೋ
ಎಲ್ಲಿ ಕುಳಿತಿಹನೊ ಕಲಾವಿದ.

ಬಿಸಿಲ ಧಗೆಯ ಬಸಿರಿಂದಲೆ ಸುಳಿವುದು
ಮೆಲು ತಂಗಾಳಿಯು ಬಳಿಗೆ.
ಸಹಿಸಿಕೊಂಡ ಸಂಕಟವನು ಸೋಸಲು
ಬಂದೆ ಬರುವದಾ ಗಳಿಗೆ.

ಸಹಜ ನಡೆದರೂ ಭೂಮಿಯ ಲಯದಲಿ
ಪದಗಳನಿರಿಸಿದ ಹಾಗೆ.
ವಿಶ್ವದ ರಚನೆಯ ಹೊಳಹಿನಲ್ಲಿ
ಕಂಗೊಳಿಸಿತು ಕವಿತೆಯು ಹೀಗೆ.

ಚೆನ್ನವೀರ ಕಣವಿಯವರ ಎಲ್ಲ ಕವನಸಂಗ್ರಹಗಳಲ್ಲಿಯೂ ನಿಸರ್ಗ ಕುರಿತ ಕವಿತೆಗಳು ಇದ್ದೇ ಇವೆ. ನವೋದಯ ಕಾವ್ಯಮನೋಧರ್ಮದಿಂದ ಕಾವ್ಯರಚನೆಗೆ ಆರಂಭಿಸಿದ ಅವರಲ್ಲಿ ಇದು ಬಹಳ ಸಹಜವಾದದ್ದೇ. ಮುಂದೆ ಪ್ರಚಲಿತವಾದ ನವ್ಯ ಕಾವ್ಯಮಾರ್ಗದಿಂದಲೂ ಅವರು ಹಲವು ಅಪೇಕ್ಷಿತ ಅಂಶಗಳನ್ನು ತಮ್ಮ ಅಭಿವ್ಯಕ್ತಿ ರೀತಿಯಲ್ಲಿ ಅಳವಡಿಸಿಕೊಂಡು ತಮ್ಮ ಕಾಲದ ಸಮರ್ಥ ಕವಿಗಳಲ್ಲಿ ಒಬ್ಬರೆನಿಸಿಕೊಂಡರು. ಕಣವಿ ಕಾವ್ಯದ ಎಲ್ಲ ಪ್ರವಾಹಗಳಲ್ಲಿಯೂ ಮಿಂದು ಎದ್ದವರು, ಯಾವುದರಲ್ಲಿಯೂ ಮುಳುಗಿ ಹೋದವರಲ್ಲ. ಪ್ರತಿಯೊಬ್ಬ ಕವಿಯೂ ಮಾಡಬೇಕಾದದ್ದು ಇದನ್ನೇ. ಒಂದೇ ಕಾವ್ಯ ರೀತಿಗೆ ಹಠದಿಂದ ಅಂಟಿಕೊಳ್ಳುವುದನ್ನು ನಿಷ್ಠೆಯೆಂದು ಕರೆದು ಪ್ರಶಂಸೆ ಮಾಡುವುದಾಗಲೀ ಭಿನ್ನ ಕಾವ್ಯಗಳ ಉತ್ತಮ ಅಂಶಗಳನ್ನು ಹಾಳತವಾಗಿ ಮೈಗೂಡಿಸಿಕೊಂಡು ಸ್ವತಂತ್ರವಾದ ವಿಶಿಷ್ಟ ಕಾವ್ಯವ್ಯಕ್ತಿತ್ವ ರೂಢಿಸಿಕೊಳ್ಳುವುದನ್ನು ಮಾರ್ಗಸಂಕರವೆಂದು ಅಲ್ಲಗಳೆಯುವುದಾಗಲೀ ಸಲ್ಲದ ಮಾತಾಗುತ್ತದೆ. ದುರದೃಷ್ಟವಶಾತ್ ನಮ್ಮ ಹಲವು ವಿಮರ್ಶಕರಲ್ಲಿ ಇಂಥ ಬೆಳವಣಿಗೆಯನ್ನು ಉದಾಸೀನವಾಗಿ ಕಂಡು ಅದನ್ನು ಅಲ್ಲಗಳೆಯುವ ಮಾದರಿ ಎನಿಸಿಕೊಂಡಿದ್ದ ಇಂಗ್ಲಿಷ್ ಸಾಹಿತ್ಯದಲ್ಲೇ ಹೀಗಾಗದಿರುವುದನ್ನು ಗಮನಿಸಬೇಕು. ಯೇಟ್ಸ್ ಕವಿ ತನ್ನ ಮೊದಲ ಕೆಲವು ಕಾವ್ಯಸಂಕಲನಗಳನ್ನು ರೋಮ್ಯಾಂಟಿಕ್ ಕಾವ್ಯಮಾರ್ಗದಲ್ಲೇ ಬರೆದವನು. ಅಷ್ಟೆ ಅಲ್ಲ The last great romantic poet ಎಂದು ಕರೆಸಿಕೊಂಡವನು. ಆದರೆ ತನ್ನ ಕಾಲದಲ್ಲಿ ಹೊಸದಾಗಿ ಕಾಣಿಸಿಕೊಂಡ ನವ್ಯಮಾರ್ಗಕ್ಕೆ ಹೊರಳಿ ಅದರ ಪೂರ್ಣ ಪ್ರವಾಹಕ್ಕೆ ಮೈಯೊಡ್ಡಿ ಪರಿವರ್ತನಗೊಂಡವನು. ಇದನ್ನು ಅಲ್ಲಿಯ ನವ್ಯ ವಿಮರ್ಶಕರು ಯೋಗ್ಯ ಬೆಳವಣಿಗೆಯೆಂದು ಪ್ರಶಂಸಿಸಿದ್ದಾರೆ. ಹಾಗೆ ನೋಡಿದರೆ ಅವನ ಕಾವ್ಯದ ಉತ್ತರ ಭಾಗವನ್ನು ನವ್ಯ ಕಾವ್ಯದ ಪ್ರವರ್ತಕನಾದ ಎಲಿಯಟ್‌ನ ಕಾವ್ಯಕ್ಕಿಂತಲೂ ಹೆಚ್ಚಿನದೆಂದು ಬೆಲೆಗಟ್ಟಿದವರೂ ಅಲ್ಲಿದ್ದಾರೆ. ಆದರೆ ಈ ಹೋಲಿಕೆಯನ್ನು ದೂರಕ್ಕೆ ಎಳೆಯಬೇಕಾಗಿಲ್ಲ. ಯೇಟ್ಸ್ ರೂಪಿಸಿಕೊಂಡ ಹೊಸ ಕಾವ್ಯಾಭಿವ್ಯಕ್ತಿ ಹೆಚ್ಚು ಸಂಕೀರ್ಣವೂ ಹೆಚ್ಚು ಪ್ರತಿಮಾತ್ಮಕವೂ ಆದ ಕಾರಣದಿಂದ ಹೆಚ್ಚು ಎತ್ತರದ ನೆಲೆಯದು ಆದುದೆನ್ನುವುದು ಸ್ಪಷ್ಟ. ಆದರೆ ಅವನೂ ಮುಂಚಿನ ಕಾವ್ಯಮಾರ್ಗದಿಂದ ಹೊಸ ಕಾವ್ಯಮಾರ್ಗಕ್ಕೆ ದಾಟಿ ಬೆಳೆದವನೆಂದು ಹೇಳುವುದಷ್ಟೇ ಈ ಮಾತಿನ ಉದ್ದೇಶ.

ಆರಂಭದ ಕೆಲ ಕಾಲಾನಂತರ ಕಣವಿಯವರ ಕಾವ್ಯದ ಮೇಲೆ ನವ್ಯಕಾವ್ಯದ ಪ್ರಭಾವವಾದದ್ದು ಕಾಣುತ್ತದೆ. ಅವರ ಪ್ರಕೃತಿ ಕವಿತೆಗಳೂ ಇದಕ್ಕೆ ಹೊರತಲ್ಲ. ಮೊದಲಲ್ಲಿ ಸರಳ ರೂಪವಾಗಿದ್ದ ಅವರ ನಿಸರ್ಗ ಕವಿತೆಗಳು ನಂತರ ಹೆಚ್ಚು ಸಂಕೀರ್ಣವೂ ಚಿತ್ರಾತ್ಮಕವೂ ಆಗುವುದು. ಪ್ರಕೃತಿ

೪

'ಚಳಿಗಾಲದಲಿ ಒಂದೊಂದೆ ಎಲೆಯುದುರಿ ನೆನಪು ಕಳಚುತ್ತಿರುವಾಗ, ಯಾರಿಗೂ ಕಾಣದ ಹಾಗೆ. ಬೇರಿಂದ ರಸ ಹೀರಿ ಚಿಗುರಿ ನಿಂತವರಾರು ? ಬಿರುಗಾಳಿ ಬೀಸಿ ಆಕಾಶದುದ್ದ ಧೂಳಡರಿ ದಿಕ್ಕು ತಪ್ಪಿಸಿ ಮನೆಮನೆಯ ಕಿಡಕಿ ಬಾಗಿಲು ಬಡಿದು, ಪಟಪಟ ಹನಿಯುದುರಿದಾಗ ಯಾರು ನೆಲಕಿಳಿದು ಬಂದವರು? ಮರುದಿನ ಬೇಲಿಗುಂಟ ಹೂವರಳಿದಾಗ ಯಾರು ಕಿಲ ಕಿಲ ನಕ್ಕು ಹೋದವರು ...? ಹೀಗೆ ಸೃಷ್ಟಿಯಲ್ಲಿನ ಸಾತತ್ಯವನ್ನೂ, ಚಿರಂತನತೆಯನ್ನು ತಮ್ಮ ಕಾವ್ಯ ಜೀವನದುದ್ದಕ್ಕೂ ವಿಸ್ಮಯದ ಕಣ್ಣುಗಳಿಂದ ಕಾಣುತ್ತಾ ಕಾಣಿಸುತ್ತಾ ಬಂದಿರುವ ಕವಿ ಚೆನ್ನವೀರ ಕಣವಿಯವರು ಯಾವ ಪಂಥ, ಸಿದ್ಧಾಂತಗಳಿಗೂ ತಮ್ಮನ್ನು ಪರಿಮಿತಗೊಳಿಸಿಕೊಳ್ಳದೇ, ಮುಕ್ತ ಮನಸ್ಸಿನಿಂದ ಬರೆಯುತ್ತಿರುವ ವಿರಳರು. ಸಮಕಾಲೀನ ಕನ್ನಡ ಸಾಹಿತ್ಯದಲ್ಲಿ ಅವರ ಸಮಾನ ಮನೋಧರ್ಮದ ಕವಿಯೆಂದರೆ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರೆಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಕಣವಿಯವರ 'ಮಾತು' ಎಂಬ ಕವಿತೆಯಲ್ಲಿ 'ಮೃದುವಚನ ಮೂಲೋಕ ಗೆಲ್ಲುವುದು, ತಿಳಿಯ' ಎಂಬ ಒಂದು ಸಾಲಿದೆ. ವೈಯಕ್ತಿಕವಾಗಿ ಕಣವಿ ಇಂಥ ಮೃದುವಚನ ದೀಕ್ಷೆಯನ್ನು ತೊಟ್ಟವರು, ಬದುಕು, ಬರೆಹಗಳೆಡರಲ್ಲೂ ಸಮಾಧಾನವನ್ನು ಸಾಧಿಸಿಕೊಂಡು, ಈ ಪಕ್ವ ವಯಸ್ಸಿನಲ್ಲೂ ಶಿಶುಮನಸ್ಸಿನ ಮುಗ್ಧತೆ, ಬೆರಗು, ಕುತೂಹಲಗಳನ್ನು ಜೋಪಾನವಾಗಿ ಕಾಪಾಡಿಕೊಂಡು ಬಂದಿರುವ ಅನನ್ಯತೆ ಅವರದು.

'ಜೀವಧ್ವನಿ' ಸಂಕಲನದಲ್ಲಿರುವ 'ಹುಲ್ಲು' ಎಂಬ ಪುಟ್ಟ ಕವಿತೆ ಕಣವಿಯವರ ಮನೋಧರ್ಮವನ್ನು ಸ್ಪಷ್ಟವಾಗಿ ಬಿಂಬಿಸುವ ಒಂದು ರಚನೆಯೆನ್ನಬಹುದು. ಹುಲ್ಲೆಂಬುದು ಸಸ್ಯ ಸಮೂಹದಲ್ಲಿ ತೀರಾ ಕೆಳಸ್ತರದ್ದು ಎಂದು ನಾವು ಭಾವಿಸುತ್ತೇವೆ. ಅದೊಂದು ಅನಪೇಕ್ಷಿತ ಸಸ್ಯವೆಂದು ಪರಿಗಣಿಸುವುದರಿಂದಾಗಿಯೇ ಅದನ್ನು 'ಕಳೆ' ಎಂದು ತಿರಸ್ಕಾರದಿಂದ ಕರೆಯುತ್ತೇವೆ. ಹುಲ್ಲಿಗೂ ಪ್ರಕೃತಿಯಲ್ಲಿ ಅದರದೇ ಆದ ಸ್ಥಾನವಿದೆ ಎಂಬ ಸತ್ಯವನ್ನು ನಾವು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಹುಲ್ಲು ಎಲ್ಲ ಪ್ರತಿರೋಧಗಳನ್ನೂ ಎದುರಿಸಿ, ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತದೆ. ಎಂಥದೇ ಸಂದರ್ಭದಲ್ಲೂ ಬದುಕಬೇಕೆನ್ನುವ ಛಲಕ್ಕೆ ಹುಲ್ಲಿನಷ್ಟು ಸಮರ್ಥ ಉದಾಹರಣೆ ಇನ್ನೊಂದಿಲ್ಲ. ಹುಲ್ಲಿನಲ್ಲಿ ನಿರಂತರವಾಗಿ ಮಿಡಿಯುತ್ತಿರುವ ಈ 'ಜೀವಧ್ವನಿ'ಯನ್ನು ಗಮನಿಸುವ ಕವಿ ಅಚ್ಚರಿಗೊಳ್ಳುತ್ತಾರೆ:

**ಈ ಜುಲೈ ತಿಂಗಳ ಜಿಟಿ ಜಿಟಿ ಮಳೆ-**
**ಗಟಗಟ ಕುಡಿದು ಧುತ್ತೆಂದು ಬೆಳೆದು ನಿಂತಿದೆ ಹುಲ್ಲು.**
**ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು ;**
**ಸಿಮೆಂಟು ಗೋಡೆಯ ಬಿರುಕು, ಟಾರು ಬೀದಿಯ ಒಡಕು**
**ಎಂಥ ಇಕ್ಕಟ್ಟಿನಲ್ಲು ಹೊರಬರುತ್ತದೆ ತುರಾಯಿ ಹಚ್ಚಿಕೊಂಡು**

ಎಂಥ ಪ್ರತಿಕೂಲ ಸನ್ನಿವೇಶದಲ್ಲೂ -ಕವಿಯ ಮಾತಿನಲ್ಲೇ ಹೇಳುವುದಾದರೆ 'ಎಂಥ' ಇಕ್ಕಟ್ಟಿನಲ್ಲೂ' ಬದುಕಬೇಕೆನ್ನುವ ಅದಮ್ಯ ಸಂಕಲ್ಪಶಕ್ತಿ ಹುಲ್ಲಿನಲ್ಲಿದೆ. ಅದು 'ಕೇವಲ' ಬದುಕುವುದಿಲ್ಲ. 'ತುರಾಯಿ ಹಚ್ಚಿಕೊಂಡು' ಬದುಕುತ್ತದೆ. ಬದುಕನ್ನು ಒಂದು ಸಂಭ್ರಮವೆಂದು ಭಾವಿಸಿ ಆಸ್ವಾದಿಸುತ್ತದೆ. ಬೇಸಿಗೆ ಬಿಸಿಲಿಗೆ ಒಣಗಿಯೋ, ದನಕರು ಎಮ್ಮೆ ಕುರಿಗಳಿಗೆ ಆಹಾರವಾಗಿಯೋ ಮನುಷ್ಯನ ತಿರಸ್ಕಾರಕ್ಕೆ ತುತ್ತಾಗಿಯೋ ಮರೆಯಾಗಿದ್ದ ಹುಲ್ಲು ಮುಂಗಾರು ಮಳೆ ಬಿದ್ದೊಡನೆಯೇ ಸಕಲ ಜೀವನೋತ್ಸಾಹದಿಂದ ಮತ್ತೆ ಕಾಣಿಸಿಕೊಳ್ಳಲು ಸಾಧ್ಯವಾಗುವುದು ಈ ಕಾರಣದಿಂದಲೇ. ನಾಗರಿಕರೆನ್ನಿಸಿಕೊಂಡ ಮನುಷ್ಯ ಹುಲ್ಲಿನ ಪರಮ ಶತ್ರು. ಮನೆಯಂಗಳ, ಹೂವಿನ ತೋಟ, ಹೊಲಗದ್ದೆ - ಇಂಥ ಕಡೆಗಳಲ್ಲಿ ಹುಲ್ಲು ಕಾಣಿಸಿಕೊಂಡರೆ ಅವನ ಮೈ ಉರಿಯುತ್ತದೆ. ಆದರೆ ಹುಲ್ಲು ಮಾತ್ರ ಮನುಷ್ಯನ ಕೋಪ, ತಿರಸ್ಕಾರಗಳಿಗೆ ಸೊಪ್ಪು ಹಾಕದೆ ತನ್ನ ಪಾಡಿಗೆ ತಾನು ತನ್ನ ಸ್ವಂತ ಸಾಮ್ರಾಜ್ಯವಾದ ಗುಡ್ಡ-ಮರಡಿ-ಬಯಲು-ಹಿತ್ತಿಲುಗಳಲ್ಲಲ್ಲದೆ, ಮನುಷ್ಯ ನಿರ್ಮಿತ ಹೂದೋಟಗಳಲ್ಲೂ 'ಡೇರೆ ಹೊಡೆದು ತಳ ಊರುತ್ತದೆ', ಹೂಗಿಡಗಳನ್ನು ಮನುಷ್ಯ ಉದ್ದೇಶಪೂರ್ವಕವಾಗಿ ನೀರೆರೆದು, ಗೊಬ್ಬರ ಹಾಕಿ, ಎಲ್ಲ ರೀತಿಯ ಆರೈಕೆ ರಕ್ಷಣೆಗಳನ್ನೊದಗಿಸಿ ಬೆಳೆಸುತ್ತಾನೆ. ಆದರೆ ಹುಲ್ಲಿಗೆ ಈ ಸೌಲಭ್ಯ, ರಕ್ಷಣೆ ಯಾವುದೂ ಇಲ್ಲ. ಅದರ ಬೀಜದಲ್ಲಿ ಇರುವ ಜೀವ ಚೈತನ್ಯವೊಂದೇ ಅದಕ್ಕೆ ಆಧಾರ. ಅದರ ನೆರವಿನಿಂದ ಮನುಷ್ಯ ಪೋಷಿತ ಹೂಗಿಡಗಳಿಗೆ ಅದು ಸವಾಲು ಹಾಕುತ್ತದೆ. ದನಗಳು ಮೇದು ಹೋದ ನಂತರವೂ 'ಮುಸುಗುಡುತ್ತ' ಮತ್ತೆ ಕಾಣಿಸಿಕೊಳ್ಳುತ್ತದೆ. ಹೀಗೆ ಮತ್ತೆ ಮತ್ತೆ ಮುಖ ತೋರಿಸಿ ತನ್ನನ್ನು ಅಣಕಿಸುವ ಈ ಕಳೆ'ಯನ್ನು ನಾಗರಿಕ ಅಹಂಕಾರದಿಂದ ತುಂಬಿ ತುಳುಕುತ್ತಿರುವ ಮನುಷ್ಯ ಹೇಗೆ ಸಹಿಸಿಯಾನು ? ಅದರ ಮೂಲೋತ್ಪಾಟನೆ ಮಾಡಲೇಬೇಕೆಂದು ಹಟದಿಂದ ಆತ 'ಕರುಣೆ ತೋರದೆ, ಕುರುಪಿಯಿಂದ ಕೆತ್ತಿ ಕೆತ್ತಿ ತೆಗೆದು ಹೊರಗೆಸೆದು, 'ಹಸನಾಯಿತೆಂದು' ಸಮಾಧಾನದ ಉಸಿರು ಬಿಡುವಷ್ಟರಲ್ಲಿಯೇ ಹುಲ್ಲು ಮತ್ತೆ ಪ್ರತ್ಯಕ್ಷವಾಗುತ್ತದೆ. ಮುಖಕ್ಷೌರ ಮಾಡಿಕೊಂಡ ಮರುದಿನವೇ ಮುಖದಲ್ಲಿ ಕಾಣಿಸಿಕೊಳ್ಳುವ ಕೂದಲ ಹಾಗೆ. ಮನುಷ್ಯ ಹುಲ್ಲಿನ ಬೇಟೆಯಾಡಿದರೆ, ಅವನ ಕಣ್ಣು ತಪ್ಪಿಸಿ ಮರೆಯಾಗುವ ಹುಲ್ಲು ಅವನ ವಿರುದ್ಧವೇ ಬಾಣ ಹೂಡುತ್ತದೆ. ಮನುಷ್ಯನ ಇತಿಮಿತಿಗಳೆಲ್ಲಾ ಅದಕ್ಕೆ ಗೊತ್ತು. ಹುಲ್ಲು ಅವಿನಾಶಿ ಮಾತ್ರವಲ್ಲ ಅಜೇಯವೂ ಹೌದು. ಜೊತೆಗೆ ಅದು ಸರ್ವವ್ಯಾಪಿ ಕೂಡಾ. ಗಾಳಿ, ಬೆಳಕು, ನೀರು ಯಾವುದಕ್ಕೂ ಪ್ರವೇಶವಿಲ್ಲವೆಂದು ನಾವು ಭಾವಿಸಿರುವ ಬಂಡೆಗಲ್ಲುಗಳ ತಳಭಾಗದಲ್ಲೂ ಹುಲ್ಲು ಕಾಣಿಸಿಕೊಳ್ಳುತ್ತಾ, ತನ್ನ ಚಿರಂಜೀವತ್ವವನ್ನು ಸಾರಿ ಹೇಳುತ್ತದೆ. ಬಲವಾದ ಬೇಲಿಯನ್ನೂ ದಾಟಿ, ತೋಟದೊಳಗೆ ನುಗ್ಗಿ, ತನ್ನ ಬಾವುಟ ಹಾರಿಸುವ ಹುಲ್ಲಿಗೆ, ಗಡಿರೇಖೆಗಳನ್ನು ಅತಿಕ್ರಮಿಸಬಾರದೆನ್ನುವ ನಾಗರಿಕ ಪ್ರಜ್ಞೆಯಿಲ್ಲ. ಮನುಷ್ಯ ಅಚ್ಚುಕಟ್ಟಾಗಿ 'ಲಾನಿನ ಕ್ರಾಪು ಕತ್ತರಿಸಿ' ಖುಷಿ ಪಡುವಷ್ಟರಲ್ಲೇ. ಈ ಹುಲ್ಲು ತಾನು ಅನಪೇಕ್ಷಿತ ಅತಿಥಿ ಎಂದು ಗೊತ್ತಿದ್ದರೂ ನಿರ್ಲಜ್ಜೆಯಿಂದ ಲಾನಿನ ಪಕ್ಕದಲ್ಲಿಯೇ ಕಾಣಿಸಿಕೊಂಡು ಹಲ್ಲು ಕಿರಿಯುತ್ತದೆ. ಅನಿವಾರ್ಯವಾಗಿ ಮನುಷ್ಯ ಅದರ ಇರುವಿಕೆಯನ್ನು ಸಹಿಸಿಕೊಳ್ಳುತ್ತಾನೆ; ಅದನ್ನು ಒಗ್ಗಿಸಿಕೊಳ್ಳುತ್ತಾನೆ.

ಹೀಗೆ ಹುಲ್ಲು ಬದುಕಿನ ಚಿರಂತನತೆಗೆ ಬಂದು ಪ್ರತೀಕದಂತೆ ಕಾಣಿಸಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ಜಾನ್ ರಸ್ಕಿನ್ ಎಂಬ ಇಂಗ್ಲೀಷ್ ಚಿಂತಕ ಹುಲ್ಲನ್ನು ಕುರಿತು ಬರೆದ ಒಂದು ಪ್ರಬಂಧ ನೆನಪಾಗುತ್ತದೆ. ಆ ಪುಟ್ಟ ಬರೆಹದ ಕೊನೆಯ ಭಾಗದಲ್ಲಿ ರಸ್ಕಿನ್ ಹೇಳುತ್ತಾನೆ. "ಮನುಷ್ಯನ ಸಂದರ್ಭಕ್ಕೆ ಸಂಗತವಾಗಬಲ್ಲ ಹುಲ್ಲಿನ ವಿಶಿಷ್ಟ ಗುಣಗಳೆಂದರೆ ವಿನಯ ಮತ್ತು ಹರ್ಷ ಪ್ರವೃತ್ತಿ... ಅತ್ಯಂತ ಕೆಳಮಟ್ಟದ ಸೇವೆಗಾಗಿ ಅದರ ಸೃಷ್ಟಿಯಾಗಿದೆ. ಎಲ್ಲರ ಕಾಲ್ತುಳಿತಕ್ಕೂ ಸಿಕ್ಕಲು, ಪ್ರಾಣಿಗೆ ಆಹಾರವಾಗಲು ಮಾತ್ರ -ಎನ್ನುವುದು ಅದರ ವಿನಯಕ್ಕೆ ಸಂಬಂಧಪಟ್ಟ ಸಂಗತಿ. ಎಲ್ಲ ಬಗೆಯ ಹಿಂಸೆಗೂ ಸಂಕಟಕ್ಕೂ ತುತ್ತಾಗಿಯೂ ಅದು ಸಂತುಷ್ಟವಾಗಿಯೇ ಇರುತ್ತದೆ ಎನ್ನುವುದು ಅದರ ಹರ್ಷಪ್ರವೃತ್ತಿಯನ್ನು ಸೂಚಿಸುತ್ತದೆ. ಅದನ್ನು ನೀವು ಉರುಳಿಸಿಬಿಡಿ, ಮಾರನೆಯ ದಿನ ಅದು ಇನ್ನಷ್ಟು ಬಲಿಷ್ಠವಾಗುತ್ತದೆ. ಅದನ್ನು ಕತ್ತರಿಸಿ ಹಾಕಿ. ಆಗ ಅದು ತನ್ನ ಸುಳಿಗಳನ್ನು ಎಷ್ಟೋ ಪಾಲು ಹೆಚ್ಚಿಸಿಕೊಳ್ಳುತ್ತದೆ. ನೀವು ಅದನ್ನು ತುಳಿಯಿರಿ, ಅದು ಇನ್ನಷ್ಟು ಹಿತಕರವಾದ ಕಂಪನ್ನು ಸೂಸುತ್ತದೆ. 'ಗಡ್ಡೆ ಕಟ್ಟಿದ ಇಬ್ಬನಿ ಸುತ್ತಲೂ ಇದ್ದಾಗಲೂ ಅದು ಇನ್ನಷ್ಟು ಪ್ರಕಾಶಮಾನವಾಗಿ, ಖುಷಿಯಾಗಿ ಸೊಗಯಿಸುತ್ತದೆ' (ಅನು :ಗೊ. ಅಡಿಗ) ಕವಿತೆಯ ಕೊನೆಯಲ್ಲಿ ಕಣವಿಯವರು ಹುಲ್ಲನ್ನು ನೆಪ ಮಾಡಿಕೊಂಡು, ಪ್ರಕೃತಿ ಮತ್ತು ನಾಗರಿಕತೆಗಳ ನಡುವಣ ವ್ಯತ್ಯಾಸವನ್ನು ಸೂತ್ರರೂಪದಲ್ಲಿ ಕಡೆದಿಟ್ಟಿದ್ದಾರೆ. 'ಮಳೆಗೆ ಹುಲ್ಲು ಮೊಳೆಯುವುದು ಮೂಲ ಪ್ರವೃತ್ತಿ. ನಿಸರ್ಗ ; ಕಳೆ ತೆಗೆದು ಬಿತ್ತಿ ಬೆಳೆಯುವುದು ನಾಗರಿಕ ಮಾರ್ಗ'. 'ಸಂಸ್ಕೃತಿ, ನಾಗರಿಕತೆ - ಎಲ್ಲವೂ ಪ್ರಕೃತಿಯ ಬುನಾದಿಯ ಮೇಲೆಯೇ ನಿಂತಿವೆ. ಮನುಷ್ಯ ಪ್ರಕೃತಿಯ ನೆಲೆಯಿಂದ ಮೇಲಕ್ಕೇರಿದಾಗ ಸಂಸ್ಕೃತಿಯನ್ನು ಎಟುಕಿಸಿಕೊಳ್ಳುತ್ತಾನೆ. ಆದ್ದರಿಂದಲೇ ಪ್ರಕೃತಿಯೊಂದಿಗೆ ಮನುಷ್ಯನ ನಿರಂತರ ಸೆಣಸಾಟ. ಆದರೆ ಪ್ರಕೃತಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ, ಮನುಷ್ಯ ಬದುಕಲಾರ, ಬೆಳೆಯಲಾರ, ಸಂಸ್ಕೃತಿ, ನಾಗರಿಕತೆಗಳಿಗೆ ಮೂಲಾಧಾರವಾಗಿರುವುದು ಪ್ರಕೃತಿಯೇ. ಮರುಭೂಮಿಯಲ್ಲಿ ಮಳೆಯೂ ಇಲ್ಲ. ಅದರಿಂದಾಗಿ ಹುಲ್ಲೂ ಇಲ್ಲ. ಮನುಷ್ಯ ಅಲ್ಲಿ ಬದುಕಲಾರ; ನಾಗರಿಕತೆ ಅಲ್ಲಿ ಬೆಳೆಯಲಾರದು. ಮರುಭೂಮಿಯಲ್ಲಿ ವಿರಳವಾಗಿ ಕಾಣುವ ಓಯಸಿಸ್‌ಗಳಲ್ಲಿ ಮಾತ್ರ ಬದುಕು ಅರಳಿಕೊಳ್ಳುತ್ತದೆ. ಅಲ್ಲೇ ಬದುಕಿನ ಸಂಕೇತವಾಗಿ ಒಂಟಿ ಮಲಗಿ ಮೆಲುಕಾಡಲು ಸಾಧ್ಯವಾಗುತ್ತದೆ. ಬಹುಶಃ ಇದೇ ಹುಲ್ಲಿನ ಮೂಲಕ ಕವಿ ಕಂಡುಕೊಳ್ಳುವ ಜೀವನದರ್ಶನ.

'ವಿಹಾರಿ'.

ಎನ್. ಶ್ರೀನಿವಾಸ ಉಡುಪ

# ೪೮. ನಮ್ಮ 'ಮನು'ವಿನ ಕಥೆ

ನಮ್ಮ ಸಣ್ಣ ಹುಡುಗನಿಗೆ ನಾಯಿ ಸಾಕಬೇಕೆಂಬ ಆಶೆ
ಸ್ವಂತ ಮನೆಗೆ ಹೋದಾಗ ನೋಡೋಣ ಎಂದಿದ್ದೆ.
ಹೋದ ಮರುದಿನವೇ ತಂದು ಬಿಟ್ಟ ಒಂದು ಕುನ್ನಿ.
(ಅದು ಗಂಡು ಎಂಬುದು ಎಲ್ಲರಿಗೂ ಗೊತ್ತಾಯಿತೆನ್ನಿ)

ಈದು ಹದಿನೈದು ದಿನ ಆಗಿರಬಹುದು.
ಹಿಡಿದರೆ ನುಣುಚಿಕೊಳ್ಳುತ್ತಿತ್ತು ಅಷ್ಟು ಮೃದು.
ಮೂಲೆಯಲ್ಲಿ ಹಾಸಿದ ಗೋಣಿ ತಟ್ಟುಬಿಟ್ಟು
ಕೋಣೆಯ ತುಂಬ ಓಡಾಡುತ್ತಿತ್ತು ಲುಟುಪುಟು.

ಹಾಲಿನ ಬಟ್ಟಲು ಬಿಟ್ಟು ಮತ್ತೇನೊ ಹುಡುಕುತ್ತಿತ್ತು
(ತಾಯಿ ಯಾರ ಮನೆಯಲ್ಲಿತ್ತೊ)
ಹಗಲು ಹೊತ್ತು ಕಾಲು ಕಾಲಲ್ಲೇ ಯಾವತ್ತು
ಯಾರಾದರು ಎಲ್ಲಿ ತುಳಿದುಬಿಡುತ್ತಾರೊ ಎಂದು ಭಯ-
ಹೇಗೋ ಪಾರಾಗಿಬಿಡುತ್ತಿತ್ತು ದೇವರ ದಯ.

ಕುಂಯ್ ಎಂದರೆ ಸಾಕು ನನ್ನ ಕಿವಿ ನಿಮಿರುತ್ತಿತ್ತು.
ಹುಡುಗರಿಗೆ ಬಾಯಿ ಮಾಡುತ್ತಿದ್ದೆ: ಅಲ್ಲೇ ಕುಳಿತಲ್ಲಿಯೇ
'ಅದಕ್ಕೇನು ಧಾಡಿ, ಬರೇ ಡೋಕಾರತನ'- ಮನೆಯ ಯಜಮಾನಿ.
(ಐದು ಮಕ್ಕಳನ್ನು ಹೆತ್ತು ಬೆಳೆಸಿದವಳಲ್ಲವೇ ?)
ಆದರೂ ಕುನ್ನಿಯ ಕಾಳಜಿಯ ಬಗ್ಗೆ ನನಗೆ ಗುಮಾನಿ.
ಹುಡುಗರಿಗಂತೂ ಅದು ಆಟದ ವಸ್ತು.

ಉಚ್ಚೆ ಹೊಯ್ಯುತ್ತಿತ್ತು ಪೊಗದಸ್ತು.
ಆದರಿಂದ ಸ್ವಲ್ಪ ಅಸ್ತವ್ಯಸ್ತ ಮನೆಯ ಶಿಸ್ತು-
ಆದರೂ ಪರವಾಯಿಲ್ಲ ಎನ್ನಿಸಿತು.

ಬೆಳೆದಂತೆ ಮನೆಯ ಕಾಂಪೌಂಡು ಸಣ್ಣದಾಯಿತು.
ನೆರೆಹೊರೆಯ ವಾರಿಗಿ ಕುನ್ನಿಗಳೊಡನೆ ಗುದುಮುರಿಗೆ, ಚೆನ್ನಾಟ
ಹುಡುಗರು ಆಡುವ ಚೆಂಡು ಬಾಯಲ್ಲಿ ಹಿಡಿದು ಓಟ.
ದಾರಿಹೋಕರ ಕಂಡು ಒಮ್ಮೊಮ್ಮೆ ಗುರುಗುರು, ದುರುದುರು ನೋಟ
ಹೆಸರುಗೊಂಡು ಕರಿದಿರೊ, ಬಾಲವಲ್ಲಾಡಿಸಿ ಬಂದೇ ಬಿಡುವುದು
ಜೆಕ್ಕೊಂತ
ಮರೆತೇಬಿಟ್ಟಿದ್ದೆ: ನಾವೆಲ್ಲ ಅದಕ್ಕೆ ಹೆಸರಿಟ್ಟಿದ್ದು 'ಮನು' ಅಂತ.

ಮನೆಗೆ ಯಾರಾದರೂ ಗುರುತಿನವರು ಬಂದರೆ ಸಾಕು
ಎರಡೂ ಮುಂಗಾಲು ಎತ್ತಿ ಅವರ ಬಟ್ಟೆಯ ಮೇಲೆ ಒತ್ತಿ
ಸ್ವಾಗತಿಸಿದಾಗಲೇ ಅದಕ್ಕೆ ಸಮಾಧಾನ.
'ಅದೇನೂ ಮಾಡುವುದಿಲ್ಲ' ಎಂದರೂ ಅವರ ಹೆದರಿಕೆ ಹೋಗಿರುವುದಿಲ್ಲ
ಇಷ್ಟು ಮಾತ್ರ ಖರೆ; ಇದುವರೆಗೆ ಯಾರನ್ನೂ ಕಡಿದಿಲ್ಲ

ಪೋಸ್ಟ್‌ಮನ್ ಅಥವಾ ಪೇಪರಿನ ಹುಡುಗ ಬಂದಾಗ, ವಿಚಿತ್ರ -
'ಗುರ್' ದನಿ ಕೇಳಿ ಗೇಟಿನಿಂದಲೇ ಒಗೆಯುತ್ತಾರೆ ಪತ್ರ.
ಭಿಕ್ಷುಕರು ಬಂದಾಗ ಮಾತ್ರ ಮಲಗಿರುತ್ತದೆ ಸುಮ್ಮನೆ.
ಬಾರಿಸುವವರು ಬಂದರೂ-ತಕ್ಷಣ ಕಳೆದುಕೊಳ್ಳುತ್ತದೆ ಸಹನೆ.

ಹಿಡಿಯಹೋದಂತೆ ಮಾಡಿ ಹೆದರಿಸುತ್ತದೆ ಹಿಂದುಕೋಳಿ.
ಬೆಕ್ಕನ್ನು ಬೆನ್ನಟ್ಟಿ ಹಿಡಿದೇಬಿಡುತ್ತದೆ ಚಂಡಾಳಿ.
ಆಕಸ್ಮಾತ್ ಬೇರೆ ನಾಯಿ ಬಂತೊ; ಮುಗಿದೇಹೋಯಿತು ಕಥೆ
ಇನ್ನೊಮ್ಮೆ ಇತ್ತ ಹಾಯುವುದಿಲ್ಲ-ಎನಿಸಿಬಿಡುತ್ತೆ.
ಮೈಗೆ ತೊನಸಿ ಅಂಟಿಕೊಂಡರೆ ಇದಕ್ಕೆ ವಿಪರೀತ ಸಿಟ್ಟು
ಏನೇನೋ ಮಾಡಿ ಕೆರೆದು ಓಡಿಸುತ್ತದೆ ಕಷ್ಟಪಟ್ಟು-

ಆದರೂ ಮತ್ತೆ ಇದ್ದಲ್ಲೇ ಇರುತ್ತವೆ ಸುತ್ತು ಸುತ್ತಾಡಿ.
ನಾವೇ ಹಿಡಿದು ತೆಗೆದಾಗ ನೋಡುತ್ತದೆ ಇಷ್ಟುದ್ದ ಚಾಚಿ ಮುಸುಡಿ.
ಗಾಯಕ್ಕೆ ಔಷಧಿ ಹಚ್ಚಿದರೆ ನೆಕ್ಕಿ ನೆಕ್ಕಿ ಮಾಯಿಸುವ ರೂಢಿ.
ಹೊಟ್ಟೆ ಕೆಟ್ಟಾಗ ಹುಲ್ಲು -ಪಲ್ಲು ತಿಂದು ಸುಧಾರಿಸುತ್ತದೆ, ನೋಡಿ.

ಕಟ್ಟಿಹಾಕುವ ರೂಢಿ ಇಟ್ಟಿಲ್ಲ; ಆದರೂ ಇಲ್ಲ ಎಷ್ಟೂ ಅಪಾಯ
ಕೊರಳಪಟ್ಟಿಯು ಮಾತ್ರ ಒಂದೆರಡು ದಿನದಲ್ಲಿ ಮಾಟಾಮಾಯ.
ಹೊರಗೆ ಹೊರಟಾಗ ಎದ್ದು ಬರುವದಿದ್ದಲ್ಲಿಂದ ಓಡಿ ಜೊತೆಗೆ
ಕುಕ್ಕುಲೋಟವೆ ಅದರ ಸಡಗರದ ನಡಿಗೆ.
ಮುಂಜಾನೆ ವಾಕಿಂಗಿನಲ್ಲಿ ಮುಂದಡಿಯಿಟ್ಟು ತೋರಿಸುತ ಹಾದಿ
ದಾರಿಬದಿಯಲ್ಲಿಯೇ ಲಗುಬಗೆಯಿಂದ ಮುಗಿಸುವುದು ಪ್ರಾತರ್ವಿಧಿ.

ಸಲಿಗೆ ಕೊಟ್ಟ ನಾಯಿ ತಲೆಗೇರಿತು ಎನ್ನುವುದು ಅತಿಶಯೋಕ್ತಿ.
ಸೋಫಾ, ಕುರ್ಚಿ ಇತ್ಯಾದಿ ಹತ್ತಿ ಕೂಡುವುದರಲ್ಲಿ ಸ್ವಲ್ಪ ಆಸಕ್ತಿ.
ಬೆದರಿಸಿದರೆ ಮತ್ತೆ ನಾಚಿ ಕೆಳಗಿಳಿಯುವುದು, ಚಿಂತೆಯಿಲ್ಲ.
(ಮುಂದಿನ ಚುನಾವಣೆಯವರೆಗೆ ಸಹಿಸುತ್ತ ಕಾಯಬೇಕಿಲ್ಲ)

ಈಗ ನನ್ನೆದುರು ಕುಳಿತು ಮಿಕಿಮಿಕಿ ನೋಡುತ್ತ ಬಾಲವಲ್ಲಾಡಿಸಿದೆ -
ಹೇಳಿದರೆ ನೀವು ನಂಬುತ್ತೀರೋ ಇಲ್ಲವೋ-
ತನ್ನ ಮುಂಗಾಲನ್ನೆತ್ತಿ ನನಗೆ ತಿವಿಯುತ್ತಿದೆ.

ಅದಕ್ಕೀಗ ಹಸಿವೆಯೆಂಬುದು ನನಗೆ ಗೊತ್ತು ;
ನಿಮಗೂ ಹೊತ್ತಾಯ್ತು, ಮತ್ತೊಮ್ಮೆ ಕೂಡಿದಾಗ
ಅದರ ಕಥೆ ಮುಂದುವರಿಸುತ್ತೇನೆ.
ಬಾಯಿಯಿಲ್ಲ ಎನ್ನುವುದಷ್ಟೆ; ಇಲ್ಲದಿದ್ದರೆ
ಅದೂ ನಮ್ಮಂತೆಯೇ, ಅಲ್ಲವೆ ?

# ೪೯. 'ಮನು'ವಿನ ಕೊನೆಯ ಗಳಿಗೆ

ಕಳೆದ ಐದಾರು ದಿನಗಳಿಂದ ಮನಸ್ಸಿಗೆ
ಸಮಾಧಾನವೇ ಇರಲಿಲ್ಲ -
ಒಳಗೂ ಹೊರಗೂ ಬಿಟ್ಟೂ ಬಿಡದೆ ಓಡಾಡಿಕೊಂಡು
ಬೇಡವೆಂದರೂ ಬಾಲವಲ್ಲಾಡಿಸಿ ಬೆಂಬತ್ತಿ ಬಂದು
ಮೊದಲೇ ಮುಂದಿನ ದಾರಿಯನ್ನು ಮೂಸಿ
ಹೊರಡುತ್ತಿದ್ದ 'ಮನು'
ಏಕಾಏಕಿ ಮಲಗಿಬಿಟ್ಟಿತು.

ಚಳಿಗಾಲದಲ್ಲಿ ಒಂದೊಂದು ದಿನ ಇದು ಹೀಗೇ -
ಮಣ್ಣು ಕೆದರಿ, ಬೆಚ್ಚಗೆ ಮುದುಡಿ ಮಲಗಿಕೊಳ್ಳುವುದೆಂದು
ಸುಮ್ಮನಿದ್ದೆ, ಆದರೆ
ಯಾರು ಬಂದರೂ, ಹೋದರೂ ಕಣ್ಣೆತ್ತಿಯೂ ನೋಡದೆ
ಒದರದೆ, ಓಡಾಡದೆ, ಒಮ್ಮೆಲೆ
ಮೌನವಾಗಿ ಬಿಡುವುದೆ ?

ಉದ್ದಕ್ಕೆ ಗೋಣು ಚಾಚಿ ಕೂಳು ನೀರಿಲ್ಲದ ನಿಸ್ತೇಜ
ಬಿದ್ದುಕೊಂಡುದ ಕಂಡು ತಣ್ಣಗಾದೆ.
ಎಲ್ಲರಿಗೂ ಆದೇ; 'ಮನು ಏಕೆ ಹೀಗಾದೆ ?
ಹಾಕಿದ ಔಷಧ ಕುಡಿಸಿದ ಹಾಲು ಕಟವಾಯಿಗುಂಟ.
ಒಂದು ಕ್ಷಣ-ಒಂದೇ ಕ್ಷಣ-ಇದಕ್ಕೆ ಬಾಯಿ ಬಂದು
ತನ್ನ ನೋವನ್ನೆಲ್ಲ ಹೇಳಿಕೊಳ್ಳಬಾರದೇ - ಎನ್ನಿಸಿತು.
ಇಂಥ ಸ್ಥಿತಿಯಲ್ಲೂ ಹತ್ತಿರ ಹೋದರೆ
ಮೆತ್ತಗೆ ಬಾಲವಲ್ಲಾಡಿಸಿತು.

ಕೊನೆಯ ಗಳಿಗೆಯಲ್ಲೂ ಮೆಲ್ಲಗೆ ಕಣ್ಣು ತೆರೆದು
ಕಣ್ಣಲ್ಲಿಯೇ ಜೀವ ಹಿಡಿದಂತೆ
ಗುಡ್ಡೆ ಹೊರಳಿಸಿ, ಒಮ್ಮೆ ಎಲ್ಲರನ್ನೂ ನೋಡಿದ
ಕೃತಜ್ಞತೆಯ ಆ ಪ್ರಶಾಂತ ನೋಟ -
ಮೊನ್ನೆ ಸಂಜೆಯ ಅಪರೂಪದ ಆ ಚಂದ್ರ-ಶುಕ್ರ ಕೂಟ
ಮೂಡಿ ಮರೆಯಾಯಿತು.
ಹಣತೆಯ ಕುಡಿ - ಬೆಳಕು ಸಣ್ಣದಾಗುತ್ತ ನಂದಿತು.
ಹೌದು,. ಆದರೆ ಆ ನೀಲಮಣಿ ಬೆಳಕು ಎಲ್ಲಿ ಹೋಯಿತು ?
ಕತ್ತಲೆಯನ್ನು ಭೇದಿಸಿ ಹೇಗೆ ಪಾರಾಯಿತು ?
ಮಣ್ಣ ಹಣತೆಯನ್ನು ಮಣ್ಣಿಗೆ ಬಿಟ್ಟು
ಆಕಾಶದ ಯಾವ ಮೂಲೆಯಲ್ಲಿ ಚುಕ್ಕಿಯಾಯಿತು ?

ಅದರ ಶೌರ್ಯವನ್ನೆಲ್ಲ ಈಗ ಯಾರ ಮುಂದೆ ಹೇಳುವುದು ?
ಹೇಳಿ ಏನು ಮಾಡುವುದು ?
ಏಳೆಂಟು ವರುಷಗಳ ಎಡೆಬಿಡದ ಜೀವದ ನಂಟು
ಮಲ್ಲಿಗೆಯ ಅಂಟಿನಂತೆ, ನೆನೆಸಿದಾಗೆಲ್ಲ ಚಿಗಿತು ಹೂ ಬಿಡುವುದು.

ನೆಲ -ಬಾನುಗಳನ್ನು ಸುತ್ತಿ ಬೀಸುವ
ಎಲ್ಲರ ಉಸಿರಾಗಿರುವ, ಇದ್ದೂ ಇಲ್ಲದ ಹಾಗಿರುವ
ಈ ಗಾಳಿಯಲ್ಲಿ
ಇಂಥ ಎಷ್ಟು ಜೀವಗಳ ಪರಿಮಳ ಬೆರೆತು ಹೋಗಿದೆಯೋ-
ನೆಲದ ಮೇಲಿನ ಹೂವು, ಮುಗಿಲಲ್ಲಿಯ ಚುಕ್ಕಿ
ಅವೇ ಬಾಯಿಬಿಟ್ಟು ಹೇಳಬೇಕು.

೧

ಲೋಕ ಸಂಗತಿಯೊಂದು ಕವಿ ಕೃತಿಯಲ್ಲಿ ಸಾಮಾನ್ಯವಾಗಿ ಎರಡು ರೀತಿಯಲ್ಲಿ ಬಳಕೆಯಾಗುತ್ತದೆ ಒಂದು, ಕವಿತೆಯ ಇಡೀ ವಸ್ತುವಿನ ರೂಪದಿಂದ ವಿಸ್ತಾರವಾಗಿ; ಬಣ್ಣನೆಯ ಮೂಲಕ ವಿಶದವಾಗಿ. ಎರಡು, ಆ ಸಂಗತಿ ಉಪಮೆ, ರೂಪಕ. ಸಂಕೇತ, ಪ್ರತಿಮೆಯ ರೂಪದಲ್ಲಿ ಕವನದಲ್ಲಿ ಅಲ್ಲಲ್ಲಿ ಹ್ರಸ್ವವಾಗಿ; ಸೂಚ್ಯತೆಯ ದ್ವಾರಾ ಮೂಲ ವಸ್ತುವಿಗೆ ಪೋಷಕವಾಗಿ. ಕವಿಯೊಬ್ಬನ ಒಟ್ಟು ರಚನೆಗಳಲ್ಲಿ ಈ ಎರಡರಲ್ಲಿ ಒಂದು ವಿಧಾನ ಇದ್ದೇ ಇರುತ್ತದೆ; ಹಾಗೆಯೇ

ಇವೆರಡರಲ್ಲಿ ಯಾವುದಾದರೂ ಒಂದಕ್ಕೆ ಪ್ರಾಶಸ್ತ್ಯ ಹೆಚ್ಚಾಗಿರುತ್ತದೆ. ಅವನ ಸಮಗ್ರ ಕಾವ್ಯದ ಮೌಲ್ಯ ಮಾಪನವನ್ನು ಮಾಡುವ ಸಂದರ್ಭದಲ್ಲಿ ಕವಿ ಬಳಸುವ ಈ ಇಬ್ಬಗೆಗಳಲ್ಲಿ ಒಂದು ಗಣ್ಯ, ಮತ್ತೊಂದು ಅಲ್ಪಗಣ್ಯ ಇಲ್ಲವೇ ನಗಣ್ಯ ಎನ್ನುಂವತಿಲ್ಲ. ಎರಡೂ ಸಮಾನ ಗಣನೀಯವೇ. ಇವುಗಳನ್ನು ಹೇಗೆ ಕವಿ ಔಚಿತ್ಯಪೂರ್ಣವಾಗಿ ಉಪಯೋಗಿಸಿಕೊಂಡಿದ್ದಾನೆ; ಅರ್ಥವಂತಿಕೆ ಅನನ್ಯತೆಗಳನ್ನು ಸಾಧಿಸಲು ಹೇಗೆ ಪ್ರಯತ್ನಿಸಿದ್ದಾನೆ ಎಂಬ ವಿಚಾರ ಮುಖ್ಯವೆನಿಸುತ್ತದೆ.

ನಮ್ಮ ಸತ್ವಶಾಲಿ ಕವಿಗಳೂ ವ್ಯಕ್ತಿತ್ವರೂಢ ಸಹಜ ಸಜ್ಜನಿಕೆ ವಿನಯ ಸಂಪನ್ನತೆಗಳನ್ನು ತಮ್ಮ ಕವನಗಳಲ್ಲಿ ಸಮರ್ಥವಾಗಿ ಪಡಿಯಚ್ಚಿಸಿರುವವರೂ ಆದ ಚೆನ್ನವೀರ ಕಣವಿಯವರು ಮಿಕ್ಕೆಲ್ಲ ಕವನಕರ್ತರ ಹಾಗೆ ಇವೆರಡೂ ಬಗೆಗಳನ್ನು ತಮ್ಮ ಪದ್ಯ ರಚನೆಗಳಲ್ಲಿ ಸಾರ್ಥಕವಾಗಿ ಉಪಯೋಗಿಸಿದ್ದಾರೆ. ಕಣವಿಯವರ ಕವಿತೆಗಳ ಬಂಧದಲ್ಲಿನ ಬಿಗಿ ಬನಿ, ಲಯಾನ್ವಿತ ಛಂದೋ ನೈಪುಣ್ಯ ಮತ್ತು ಪ್ರಾಸಗಳ ಸಮುಚಿತ ಬಳಕೆ ಹೃದ್ಯವಾದದ್ದು. ಇದರಂತೆಯೇ ಅವರ ಸೂಕ್ಷ್ಮ ಸಂವೀಕ್ಷಣ ಕೌಶಲ, ಕ್ಷಿಪ್ರ ಸ್ಪಂದನಶೀಲ ಸ್ವಭಾವ ಮತ್ತು ಸಮಶೀತೋಷ್ಣ ಸಾಮರಸ್ಯಪ್ರದ ನಿಲುವು ಹಾಗೂ ಇವುಗಳನ್ನು ಶಬ್ದದಲ್ಲಿ ಎರಕಹೊಯ್ಯುವ ಅಭಿವ್ಯಂಜನ ಕ್ರಮ ಕಿರಿಯ ಕವಿಗಳಿಗೆ ಅಧ್ಯಯನಯೋಗ್ಯವೆನ್ನಿಸುವಂತಹದು.

ಸುನೀತಗಳ ಅಡಕತೆಯ ಕಿಷ್ಕಿಂಧತೆಯಲ್ಲಿ ಅನಾಯಾಸವಾಗಿ ನುಸುಳುವ ಹಾಗೆಯೇ, ಮುಕ್ತಛಂದದ ವಿರಳತರ ತೆರವಿನಲ್ಲಿ ನಿರಾತಂಕವಾಗಿ ದಾಪುಹೆಜ್ಜೆ ಹಾಕಬಲ್ಲ ಚಾತುರ್ಯ ಕಣವಿಯವರಿಗೆ ಕರತಲಾಮಲಕ, ಇವರ ಸುಕುಮಾರ ಗೇಯಾತ್ಮಕ ಕವಿ ಚೇತನಕ್ಕೆ ಅಬ್ಬರ, ಅರಚಾಟ, ಅವಿನೀತ ಆಕ್ರೋಶ ಅಪರಿಚಿತ. ಅವರ ಮೂರ್ತಿತ್ವದಲ್ಲಿ ಹೇಗೋ ಹಾಗೆ ಲಿಖಾವಟ್ಟಿನಲ್ಲಿಯೂ ಬಂಡಾಯರೂಪಿ ಏಕತಾನತೆಯ [illegible] ಟಾಕಿ ಸಿಡಿತಕ್ಕಿಂತ ನಾವ[illegible]ಪಶಮದ ಮತಾಪು ಹೂಬಾಣಗಳ ರಖಂವಾರು ರಂಗುಗಳ ಸಮು[illegible] ಅ[illegible]ಕ. ಕೆಲವೊ[illegible] ತೆಳು [illegible]ದಲೇ ಅದ್ಭುತ ಪರಿಣಾಮವನ್ನು ಪ್ರಾಪ್ತಿಸಿಕೊಳ್ಳಬಲ್ಲ ಮನಃಪರಿಣ[illegible] ಇವರದು. ರಾಜಕೀಯ ಮತ್ತು ಸಾಮಾಜಿಕ ದುರ್ವಿದ್ಯಮಾನಗಳ ವಿಡಂಬನ ಪದ್ಯಗಳಲ್ಲಿ ಈ [illegible]ರ. ಚೆನ್ನವೀರ ಕಣವಿಯವರ ನಿಡುಗಾಲದ ನಿರಂತರ ಹಾಗೂ ಅಚಲ ಶ್ರದ್ಧಾನ್ವಿತ ಕಾ[illegible]ರ್ಮ ಕನ್ನಡ ಕಾವ್ಯ ಕಣಜಕ್ಕೆ ಅಗಣಿತ ಸುಸ್ವಾದನೀಯ ಪೌಷ್ಟಿಕ ಕಾಳುಗಳನ್ನು ಬಳುವಳಿಸಿದೆ. ಸ್ವಪರಂಪರೆಯ ಸತ್ವಯುತ ಮತ್ತು ಸನ್ಮೌಲ್ಯ ಸಮೃದ್ಧ ವ್ಯಕ್ತಿಗಳಿಗೆ ಹಾಗೂ ಆಚಾರ ವಿಚಾರಗಳಿಗೆ ಎಂತೋ ಅಂತೆಯೇ, ಅನ್ಯ ಸಂಸ್ಕೃತಿಯ ವ್ಯಕ್ತಿತ್ವ ವರ್ಧಕ ಧಾತುಗಳಿಗೂ ಕಣವಿಯವರು ಎಂದಿಗೂ ತೆರೆದ ಅಂತರಂಗ. ಈ ಕಾರಣದಿಂದ ಇವರ ಕಾವ್ಯಕ್ಕೆ ನಿರ್ಮುಕ್ತ ಉದಾರತೆ ಸೌಹಾರ್ದಗಳ, ಸಹಿಷ್ಣುತೆ ಸಂಯಮಗಳ ಘನವಂತಿಕೆ, ಸ್ವಾಸ್ಥ್ಯಪ್ರದ ಸಮನ್ವಯಕರ ನಿಲುವು ಲಭ್ಯವಾಗಿದೆ.

ನಾನು ಓದಿರುವ ಕಣವಿಯವರ ಕವನಗಳಲ್ಲಿ ಸಾಕು ನಾಯಿಯನ್ನು ಕುರಿತು ಅವರು ಬರೆದಿರುವ ಎರಡು ರಚನೆಗಳು ನನ್ನ ಅತೀವ ಮೆಚ್ಚುಗೆಗೆ ಪಾತ್ರವಾಗಿವೆ. ಈ ಕವಿತೆಗಳು- "ನಮ್ಮ ಮನು'ವಿನ ಕಥೆ" ಮತ್ತು "ಮನುವಿನ ಕೊನೆಯ ಗಳಿಗೆ" - 'ಜೀವಧ್ವನಿ' (೧೯೮೧)

ಸಂಗ್ರಹದಲ್ಲಿವೆ. ಇವೆರಡೂ ಪ್ರತ್ಯೇಕ ರಚನೆಗಳೆನ್ನಿಸಿದರೂ ಸ್ವತಂತ್ರವಾಗಿ ಓದಿ ಅನುಭವಿಸುವ ಸ್ವಸಮಗ್ರತೆ, ಪೂರ್ಣತೆಯನ್ನು ಪಡೆದಿದ್ದರೂ ವಸ್ತುವೊಂದರ ಎರಡು ಮಗ್ಗುಲುಗಳನ್ನು ತೆರೆದಿರುವಂಥವು. ಅಥವಾ ಪರಸ್ಪರ ಪೂರ್ವೋತ್ತರ ಎರಡು ಮಜಲುಗಳನ್ನು ಪ್ರತಿನಿಧಿಸುತ್ತವೆ. ಹಾಗಾಗಿ, ಈ ಎರಡು ಕವಿತೆಗಳು ಒಂದಕ್ಕೊಂದು ಪೂರಕ; ಮೊದಲನೆಯದು ಎರಡನೆಯದರ ಭಾವಾಲೋಚನೆಗಳ ಪರಿಪೋಷಕ.

ಮೊದಲನೆಯದರಲ್ಲಿ ("ನಮ್ಮ 'ಮನು'ವಿನ ಕಥೆ") ಕವಿಪುತ್ರ ತಾನು ಸಾಕಲು ತಂದಿರುವ ಗಂಡುನಾಯಿ ಮರಿಯ ಬಾಲಲೀಲೆಗಳ ಉಲ್ಲಾಸದಾಯಕ ವರ್ಣನೆಗೆ ಪ್ರಾಧಾನ್ಯ. ಎರಡನೆಯದರಲ್ಲಿ ("ಮನುವಿನ ಕೊನೆಯ ಗಳಿಗೆ") ವ್ಯಾಧಿಗ್ರಸ್ತ ನಾಯಿಯ ಅಂತಿಮ ಕಾಲದ ನೋವು ವಿಷಣ್ಣತೆಗಳ ದಾರುಣಾನುಭವ ಪ್ರಚೋದಿತ ನಿರೂಪಣೆಗೆ ಪ್ರಾಶಸ್ತ್ಯ. ಮೊದಲನೆಯದಕ್ಕಿಂತ ಎರಡನೆಯ ಕವನದಲ್ಲಿ ತಾತ್ತ್ವಿಕಾಂಶಗಳು ಹೆಚ್ಚು; ಹಾಗೆಯೇ ಮನೋವೇಧಕ ಗುಣದಲ್ಲಿಯೂ ಇದು ಮಿಗಿಲು ಪರಿಣಾಮಕಾರಿ. ಬದುಕಿನ ಅನಿರೀಕ್ಷಿತ ಹೊರಳುವಿಕೆಗೆ, ನಿಗೂಢ ಕ್ರಿಯಾವರ್ತನೆಗೆ ಭಾಷ್ಯ ಬರೆದಂತಿದೆ ಈ ಎರಡನೆಯ ಪದ್ಯ.

ಮನುಷ್ಯ ಮತ್ತು ಪ್ರಾಣಿ ಸಂಬಂಧದ ಅನೂಹ್ಯ ಹಾಗೂ ಆಂತರಿಕ ಗುಹ್ಯ ಬಾಂಧವ್ಯ ಅಪರಿಹಾರ್ಯವಾದ ಕಗ್ಗಂಟಾಗಿ ಉಳಿದುಬಿಡುವ ತಥ್ಯವನ್ನು ಇವೆರಡು ಪದ್ಯಗಳು ಅಥವಾ ಜೋಡಿಗವಿತೆ ಹೃದಯಸ್ಪರ್ಶಿಯಾಗಿ ಮನವರಿಕೆ ಮಾಡಿಕೊಡುತ್ತವೆ. ನಮಗೆ ಪ್ರಿಯವಾದ, ಇಲ್ಲವೇ ದಿನನಿತ್ಯದ ಉಪಯೋಗಕ್ಕೆ ಸಲ್ಲುವ ವಸ್ತುವೊಂದು ಕಾಲ ಕಳೆದಂತೆ ನಮ್ಮ ಕಾಳಜಿ ಆಸಕ್ತಿಗಳನ್ನು ಒಂದೇ ತೆರನಾದ ಕಾವಿನಲ್ಲಿ ಇರುವಂತೆ ಪ್ರಚೋದಿಸದು. ಬರಬರುತ್ತಾ ಉಪೇಕ್ಷೆ ಅವಜ್ಞೆಗೆ ಪಕ್ಕಾಗುವುದು ನಿಸರ್ಗ ನಿಯಮ. ಆದರೆ ಅದು ಇದ್ದಕ್ಕಿದ್ದಂತೆ ಕಳೆದು ಹೋಗಿ ನಮ್ಮ ಕೈ ತಪ್ಪಿ ಹೋದರೆ ಅದರ ಬಗೆಗಿನ ಚಿಂತೆ, ಚಿಂತನೆ ಆಗಿಂದಾಗ್ಗೆ ನಮ್ಮನ್ನು ಬಾಧಿಸುತ್ತ, ಆವರೆಗೂ ನಮ್ಮ ಅರಿವಿಗೆ ಬಂದಿದ್ದ ಆ ವಸ್ತುವಿನ ಹಲವು ವಿಷಯಗಳು ನಮಗೆ ನೆನಪಾಗುತ್ತ ಚಿಟುಕು ಮುಳ್ಳಾಗಿ ಜೀವವನ್ನು ಕುಟುಕುತ್ತಿರುತ್ತವೆ. ನಿರ್ಜೀವ ವಸ್ತುವಿನ ಅಂಟಿನ ನಂಟೇ ಇಷ್ಟು ಪರಿಣಾಮಕಾರಿಯಾಗಿರುವಾಗ, ಇನ್ನು ಜೀವಿಗಳ ನಡುವಣ ಭಾವಾತ್ಮಕ ಬಾಂಧವ್ಯದ ಬಗೆಗೆ ಹೇಳುವುದೇನು? ಆ ಜೀವಿಯ ವಿಯೋಗ ಉಂಟುಮಾಡುವ ಖಾಲಿತನ, ವಿಹ್ವಲತೆ ವಾಗತೀತ. ಅದರ ಸ್ಮೃತಿಯ ನಿರಂತರ ತಾಡನಕ್ಕೆ ಕೆಲ ಕಾಲ ಮನಸ್ಸು ಕಡಲ ದಂಡೆ. ಆ ಜೀವಿಯ ಬಗ್ಗೆ ಅಸಹನೆ, ಅಪ್ರೀತಿ, ಅವಜ್ಞೆಗಳನ್ನು ತಳೆದು 'ಕಾಲಕಸ'ದಂತೆ ಕಾಣುತ್ತಿದ್ದವರಿಗೆ ಬಾಧಿಸುವ ಮನೋಯಾತನೆ ಪಶ್ಚಾತ್ತಾಪದ ಭಾವನೆ ಬಣ್ಣಿಸಲು ಅಸದಳ. ಈ ಜೋಡಿಗವಿತೆಯಲ್ಲಿ ಬರುವ ಮನೆಯ ಯಜಮಾನಿಯ ಸ್ಥಿತಿ ಇಂಥದ್ದು. ಪ್ರಾಣಿ ದಯೆ ಸ್ವರೂಪದ ಉತ್ಕಟ ಚಳುವಳಿ ಸರ್ವವ್ಯಾಪಿಯಾಗಿರುವ ಪ್ರಸಕ್ತ ಕಾಲದಲ್ಲಿ ಕಣವಿಯವರ ಈ ಜೋಡಿಗವಿತೆ ಅರಿವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಮಿಗಿಲು ಸಹಕಾರಿಯಾಗಬಲ್ಲ ಸತ್ತ್ವವುಳ್ಳಂಥದ್ದು. ವೈಯಕ್ತಿಕ ನೆಲೆಯ ವಿಷಯವೊಂದರ

ರಸಾರ್ದ್ರ ಭಾವಾಭಿವ್ಯಕ್ತಿ ಸಾರ್ವತ್ರಿಕಾನುಭವದ ಸಮರ್ಥನೆ, ಬಲವರ್ಧನೆ ಮತ್ತು ಅಧಿಕತರ ವಿಸ್ತರಣೆಗೆ ನೆರವಾಗಬಲ್ಲ ನಿದರ್ಶನ ಈ ಎರಡು ಕವನ ರಚನೆಗಳಲ್ಲಿ ವಿದಿತವಾಗುತ್ತದೆ.

ಕಿರುಮಗನ ಖಾಯಿಷಿಗಾಗಿ ಮನೆಗೆ ತಂದು ಸಲಹಿದ ನಾಯಿಮರಿ ಬೆಳೆದು ದೊಡ್ಡದಾಗುತ್ತಿರುವ ಹಾಗೆ ಮನೆ ಮಂದಿಯೊಳಗೆ, ಗೃಹಕೃತ್ಯದ ವಿಷಯಗಳೊಂದಿಗೆ ಸಂಬಂಧವನ್ನು ವರ್ಧಿಸಿಕೊಳ್ಳುತ್ತ ಹಲವು ಬಗೆಯ ತೀವ್ರ ರಾಗಭಾವಗಳ ಉಗಮಕ್ಕೆ ಕಾರಣವಾಗುವ ಪರಿ, ಓದುಗನ ಹೃನ್ಮನಗಳನ್ನು ಪ್ರಭಾವಕಾರಿಯಾಗಿ ತಟ್ಟುತ್ತದೆ. ಕನ್ನಡದ ಗದ್ಯಪದ್ಯಗಳ ವಿಸ್ತಾರದಲ್ಲಿ ನನ್ನ ಓದಿಗೆ ದಕ್ಕಿರುವ ಪ್ರಾಣಿ ವಿಷಯಕ ರಚನೆಗಳಲ್ಲಿ ಕಣವಿಯವರ ಈ ಜೋಡಿಗವಿತೆಯೆಂತೆ ಲವಲವಿಕೆಯಲ್ಲಿ, ಮನುವನ್ನು ಚಡಪಡಿಕೆಗೆ ತುತ್ತಾಗಿಸುವ ಸಂವೇದನಾತ್ಮಕ ಅನುಭೂತಿಯ ನೆಲೆಯಲ್ಲಿ ಸರಿಸಾಟಿಯಾದಂಥ'ದ್ದು ಇಲ್ಲವೆಂದು ನನ್ನ ಎಣಿಕೆ. ಬೇಂದ್ರೆ ತಮ್ಮ ಬಿಡಿಗವನವೊಂದರಲ್ಲಿ, ಕುವೆಂಪು ತಮ್ಮ ಎರಡು ಗದ್ಯ ಮಹಾ ಕಾದಂಬರಿಗಳಲ್ಲಿ, ಕೆ.ಎಸ್.ನ. ತಮ್ಮ ಪ್ರಬಂಧದಲ್ಲಿ; ಅಷ್ಟೇಕೆ, ಮಹಾನುಭಾವಿಗಳಾದ ಬಸವೇಶ್ವರರು ತಮ್ಮ ಕೆಲವೊಂದು ಅವಿಸ್ಮರಣೀಯ ವಚನಗಳಲ್ಲಿ ಬಳಸಿರುವ ಉಪಮೆ, ರೂಪಕಾದಿಗಳಲ್ಲಿ ನಾಯಿಯನ್ನು ಕುರಿತಂತೆ ನೀಡಿರುವ ಅಮೋಘ ಚಿತ್ರಣ ಮತ್ತು ತನ್ಮೂಲಕ ಕರುಣಿಸಿರುವ ಅಪ್ತಾನುಭೂತಿ ಮನೋವಿದ್ರಾವಕ ಹಾಗೂ ಸುಸ್ಮರಣೀಯ ನಿಜ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ಕಣವಿಯವರ ಈ ಕವಿತೆಗಳ ಸಂವೇದಕ ಗುಣ, ಬಣ್ಣ, ತೂಕ ಪೂರ್ವೋಕ್ತ ಹಿರಿಯ ಕವಿಗಳ ಶ್ವಾನ ವಿಷಯಕ ರಚನೆಗಳಿಗಿಂತ ವಿಶಿಷ್ಟ ವಿಭಿನ್ನ ಹಾಗೂ ವೈಯಕ್ತಿಕಾನುಭವ ಸಂಪನ್ನ.

"ನಮ್ಮ 'ಮನು'ವಿನ ಕಥೆ" ಮತ್ತು " 'ಮನು'ವಿನ ಕೊನೆಯ ಗಳಿಗೆ' ಕವನಗಳಲ್ಲಿ ನಿರೂಪಿತವಾಗಿರುವ ಭಾವಪೂರ್ಣ ಸಂಗತಿಗಳ ಗಾಢತರವೂ ಸೂಕ್ಷ್ಮ ಸಂವೇದಿಯೂ ಆದ ಅನುಭವದ ಹೆಚ್ಚುಗಾರಿಕೆಯ ಲಾಭ ನಮಗೆ ತಕ್ಕಷ್ಟು ಪ್ರಮಾಣದಲ್ಲಿ ಆಗಬೇಕಾದರೆ ಹೃದಯವಂತ ಕವಿ ಕಣವಿಯವರ ಕಲ್ಪಕ ಕೌಶಲ, ಸಹಜೀವಿಗಳ ಬಗೆಗೆ ಅವರಲ್ಲಿರಬಹುದಾದ ಕರುಣಾನುಕಂಪೆಯ ಮಾರ್ದವ ಮನೋಭಾವಗಳ ತಿಳಿವು ನಮಗೆ ದಕ್ಕಬೇಕಾದರೆ ಈ ಕವಿತೆಗಳ ವಿಶದವಾದ ವಿವರಣೆ, ಅರ್ಥಾತ್ ಪ್ರಾಯೋಗಿಕ ಪರಿಶೀಲನೆಯ ಮೊರೆ ಹೋಗಬೇಕು. ಪಂಕ್ತಿಗಳ ಮೂಲಕ ಕವನ ಕೇಂದ್ರಿತ ವಸ್ತು ವ್ಯಕ್ತಗೊಳಿಸುವ ಸಾವಯವ ಬೆಳವಣಿಗೆ, ತತ್ಪರಿಣಾಮವಾಗಿ ಓದುಗನಲ್ಲಿ ಸಾಂದ್ರಗೊಳ್ಳುವ ಹೃದಯಾನುಭೂತಿ ಅತಿಶಯವಾಗಿ ಆಗುವುದು ವಿಶ್ಲೇಷಕ ವಿಧಾನದಿಂದ ಅದನ್ನು ಈಗ ಕೈಗೊಳ್ಳಬಹುದು.

೨

(ಅ) "ನಮ್ಮ 'ಮನು'ವಿನ ಕಥೆ" ಶುರುವಾಗುವುದು ಕವಿಯ ಕಿರಿಯ ಮಗ ನಾಯಿಯನ್ನು ಸಾಕುವ ಬಯಕೆಯಿಂದ ಹದಿನೈದು ದಿನಗಳ ಗಂಡು ಕುನ್ನಿಯನ್ನು ಹೊಸ ಮನೆಗೆ ತಂದಿರುವ ಸಂಗತಿಯ ಪೀಠಿಕೆಯಿಂದ. ಮುಂದೆ ಅದರ ಚಟುವಟಿಕೆಯನ್ನು ಕವಿ ಸವಿವರ ವರ್ಣಿಸುತ್ತಾರೆ.

ಕವಿತೆ ಮುಂದುವರಿದಂತೆ ಕವಿಯ ಹೃದಯದ ಸುಕೋಮಲ ಸ್ಪಂದನಶೀಲತೆ ಮತ್ತು ಅನುಕಂಪಭರಿತ ಭಾವಾರ್ದ್ರತೆಯ ಪರಿಚಯ ಪರೋಕ್ಷವಾಗಿ ಓದುಗನಿಗೆ ಆಗುತ್ತಾ ಹೋಗುತ್ತದೆ. ಕವಿಯ ಅಂತಃಕರಣದ ಪ್ರಥಮ ಹೊಳಹು ನಮಗೆ ದೊರಕುವುದು ಈ ಸಾಲುಗಳಲ್ಲಿ :

**'ಹಗಲು ಹೊತ್ತು ಕಾಲಲ್ಲೇ ಯಾವತ್ತು**
**ಯಾರಾದರೂ ಎಲ್ಲಿ ತುಳಿದುಬಿಡುತ್ತಾರೋ ಎಂದು ಭಯ-**
**ಹೇಗೋ ಪಾರಾಗಿಬಿಡುತ್ತಿತ್ತು, ದೇವರ ದಯ.**
**'ಕುಂಯ್' ಎಂದರೆ ಸಾಕು ನನ್ನ ಕಿವಿ ನಿಮಿರುತ್ತಿತ್ತು.**
**ಹುಡುಗರಿಗೆ ಬಾಯಿ ಮಾಡುತ್ತಿದ್ದೆ-ಅಲ್ಲೇ ಕುಳಿತಲ್ಲಿಯೇ.'**

ಕವಿ ಪತ್ನಿಯ, ಅರ್ಥಾತ್ ಮನೆಯ ಒಡತಿಯ ಸ್ವಭಾವವೇ ಬೇರೆ. ಆಕೆಗೆ ಈ ನಾಯಿಮರಿಯ ಬಗೆಗಿನ ಆಸ್ಥೆ ಅಷ್ಟಕ್ಕಷ್ಟೆ. ಅದು ಆ ಹೆಣ್ಣುಮಗಳ ತಪ್ಪಲ್ಲ. ಗಂಡ-ಮಕ್ಕಳ ದಿನಂಪ್ರತಿಯ ಆರೈಕೆಯ ಹೊಣೆಯೇ ಸಾಕಷ್ಟಿರುವಾಗ, ಹೊಸದಾಗಿ ಸೇರ್ಪಡೆಯಾದ ಈ ಪ್ರಾಣಿ ಇನ್ನಷ್ಟು ಹೊರೆಯಾಗಿ ಆಕೆಗೆ ಭಾಸವಾದರೆ ಅಚ್ಚರಿಯೇನಲ್ಲ. ಕವಿಗೆ ಮಾತ್ರ ಸದಾ ಅದರದೇ ಚಿಂತೆ. ಅದು ಹೊಮ್ಮಿಸುವ ನೋವಿನ ಉದ್ಗಾರ ಇವರ ನೆಮ್ಮದಿಗೆ ಶೂಲಪ್ರಾಯ. ಮಕ್ಕಳು ಎಲ್ಲಿ ಅದನ್ನು ಕೀಟಲೆ ಮಾಡಿ ಸತಾಯಿಸುತ್ತಾರೋ ಎಂದು ಕಳವಳಪಟ್ಟು ಅವರನ್ನು ಗದರಿಸುತ್ತಾರೆ. ಆದರೆ ಮನೆಯಾಕೆಗೆ ಕುನ್ನಿಯ ಈ ಆರ್ತ ಚೀರಾಟ ಬರಿಯ ಢೋಂಗಿತನದಂತೆ ಭಾಸವಾಗುತ್ತದೆ. ಅದಕ್ಕೇನೂ ಕಡಮೆಯಾಗಿಲ್ಲ, ಸುಮ್ಮನೆ ಕುಂಯ್‌ಗುಡುವ ನಾಟಕವಾಡುತ್ತಿದೆ ಎಂದು ಅವರು ಎಣಿಸುತ್ತಾರೆ. ಒಂದಲ್ಲ, ಎರಡಲ್ಲ ಐದು ಮಕ್ಕಳನ್ನು ಹೆತ್ತು ಹೊತ್ತು ಸಾಕಿಸಲಹಿ ಬೆಳೆಸಿದ ತ್ರಾಸದಾಯಕ ತುಂಬು ಅನುಭವ ಆ ತಾಯಿಯದು. ನಾಯಿ ಮರಿಯ ಆಕ್ರಂದನದ ಈ ಸಣ್ಣಪುಟ್ಟ ಸಂಗತಿಗಳು ಆಕೆಗೆ, ಚಿಕ್ಕಮಕ್ಕಳ ಅಕಾರಣ ರಂಪಾಟದಂತೆಯೇ ಮಾಮೂಲು ಹಾಗೂ ಸಹಜ. ಈ ಕಾರಣಕ್ಕಾಗಿ ಅವರು ಕವಿಯ ಹಾಗೆ ಕ್ಷಿಪ್ರವಾಗಿ ಆಗಿಂದಾಗ್ಗೆ ವಿಚಲಿತರಾಗುವುದಿಲ್ಲ, ಕಸಿವಿಸಿಗೊಳ್ಳುವುದಿಲ್ಲ. ಮನೆಯ ಬಿಡುವಿಲ್ಲದ ಕೆಲಸದ ಮಧ್ಯೆ ಈ ಕುನ್ನಿಗೆ ಹೊತ್ತು ಹೊತ್ತಿನ ನಿಗರಾನಿಯನ್ನು ಆಕೆ ಎಲ್ಲಿ ಮಾಡಿಯಾರು? ವಿಶೇಷ ದೇಖಬಾಲಿಯನ್ನು ಹೇಗೆ ನಿಭಾಯಿಸಿಯಾರು? ಆ ಪ್ರಾಣಿ ಆಗಾಗ್ಗೆ ವಿಸರ್ಜಿಸುವ ಮಲಮೂತ್ರಾದಿಗಳಿಂದ, ಕಿವಿ ಚಿಟ್ಟು ಹಿಡಿಸುವ ಬೊಗಳುವಿಕೆಯಿಂದ, ಮನೆಯೊಳಗೆ ಮೂಡುವ ಅವ್ಯವಸ್ಥೆಯಿಂದ ಅವರು ಬೇಸತ್ತು ಹೋಗದಿರಲು ಹೇಗೆ ಸಾಧ್ಯ ?

ಆದರೆ ಕವಿಗೆ ಇವೆಲ್ಲ ಲೆಕ್ಕಕ್ಕಿಲ್ಲ. ಅದು ಏನು ಮಾಡಿದರೂ ಪರವಾಗಿಲ್ಲ ಎನ್ನುವ ಉದಾರ ಮನೋಭಾವ. ಅವರ ಮೆಚ್ಚುಗೆಯ ದೃಷ್ಟಿಗೆ ಕುನ್ನಿಯ ದಿನವಹಿ ಸಾಮಾನ್ಯ. ಆಟ ಓಡಾಟದಲ್ಲೂ ಏನೋ ವಿಶೇಷ ಸ್ವಾರಸ್ಯ ಗೋಚರಿಸುತ್ತದೆ. ಇನ್ನು ಮಕ್ಕಳ ಪಾಲಿಗೋ ಅದೊಂದು ಆಪ್ತ ಸಂಗಾತಿ ಹೇಗೋ ಹಾಗೆಯೇ, ಕ್ರೀಡಾ ವಸ್ತು ಕೂಡ. ನಾಯಿ ಮರಿ ಬೆಳೆದು ದೊಡ್ಡದಾಗುತ್ತಿದ್ದಂತೆ ಅದರ ಉತ್ಸಾಹಶೀಲ ಚಟುವಟಿಕೆಗೆ ಮನೆಯ ಆವರಣ ಸಾಲದಾಗುತ್ತದೆ.

ಅದು ಸೀಮೋಲ್ಲಂಘನ ಮಾಡಿ ಅಕ್ಕಪಕ್ಕದ ಸ್ವಜಾತಿ ಜೀವಿಗಳ ಜೊತೆ ಚಿನ್ನಾಟ ಪ್ರಾರಂಭಿಸುತ್ತದೆ. ಅಷ್ಟೇ ಅಲ್ಲದೇ, ಬೀದಿಪೋರರ ಚೆಂಡಿನಾಟದಲ್ಲೂ ಪಾಲ್ಗೊಳ್ಳುವ ಬಡ್ತಿಯನ್ನು ಪಡೆಯುತ್ತದೆ. ಹಾಗೆಯೇ ದಾರಿಯಲ್ಲಿ ಹಾದುಹೋಗುವ ಆಗಂತುಕರನ್ನು ಕಂಡು ಕೆಲವೊಮ್ಮೆ ದುರುಗುಟ್ಟುವದರ ಜೊತೆಗೆ ಗುರುಗುಟ್ಟಲೂ ಶುರು ಮಾಡುತ್ತದೆ. ಅದರ ಹೆಸರನ್ನು ಕರೆದರೆ ಸಾಕು, ಥಟ್ಟೆಂದು ಪ್ರೀತಿಯಿಂದ ಬಾಲವಲ್ಲಾಡಿಸುತ್ತ ಧಾವಿಸಿ ಬರುತ್ತದೆ. ಇಂತಹ ಮುದ್ದುಗಾರ ನಾಯಿಯನ್ನು ಇಷ್ಟೆಲ್ಲ ಬಣ್ಣಿಸಿದ ಕವಿ ಅದರ ಹೆಸರನ್ನು ಹೇಳದೆ ಇರುತ್ತಾರೆಯೆ ? ಮನೆ ಮಂದಿಯೆಲ್ಲ ಯೋಚಿಸಿ ಅದಕ್ಕೆ ಇಟ್ಟ ಚೆಂದನೆಯ ಚಿಕ್ಕ, ಚೊಕ್ಕ ನಾಮಧೇಯ 'ಮನು'.

ಮನು ನೂರಕ್ಕೆ ನೂರರಷ್ಟು ಸಾಧು ಪ್ರಾಣಿ. ಕವಿಗೆ ಪರಿಚಯವಿರುವ ಯಾರಾದರೂ ಮನೆಗೆ ಬಂದರೆ ಅದು ತನ್ನ ಮುಗ್ಧ ಮಮತೆಯನ್ನು ಪ್ರದರ್ಶಿಸಿ ಆಹ್ವಾನಿಸುವುದು ಅವರ ಬಟ್ಟೆಯ ಮೇಲೆ ತನ್ನ ಎರಡೂ ಮುಂಗಾಲುಗಳನ್ನು ಎತ್ತಿ ಒತ್ತಿದ ಮೇಲೆಯೆ. ಬಂದವರಿಗೋ ಈ ಪ್ರಾಣಿ ಎಲ್ಲಿ ಕಚ್ಚಿಬಿಡುವುದೋ ಎಂಬ ದಿಗಿಲು. ಮನೆಯವರು ಅವರಿಗೆ ಎಷ್ಟು ಧೈರ್ಯ ನೀಡಿದರೂ ಹೆದರಿಕೆ ಹೋಗಿರುವುದಿಲ್ಲ. ಹಾಗೆ ನೋಡಿದರೆ, ಪಾಪ, ಅದು ಈ ತನಕ ಯಾರನ್ನೂ ಕಚ್ಚಿ ಗಾಯಗೊಳಿಸಿದ್ದಿಲ್ಲ. ಅಂಚೆ ಪೇದೆಯೋ, ದಿನಪತ್ರಿಕೆಯನ್ನು ವಿತರಿಸುವ ಬಾಲಕನೋ ಬಂದಾಗ ಈ ಕುನ್ನಿ 'ಗುರ್' ಎನ್ನುತ್ತದೆ. ಅಷ್ಟಕ್ಕೇ ಅವರಿಗೆ ಅಂಜಿಕೆ ಮೂಡಿ ಒಳಕ್ಕೆ ಬರುವ ಸಾಹಸ ಮಾಡದೆ ಗೇಟಿನಿಂದಲೇ ಬಿಸಾಡಿ ಹೋಗುತ್ತಾರೆ. ಇನ್ನು ತಮಟೆ ಮೊದಲಾದ ವಾದ್ಯಗಳನ್ನು ಬಾರಿಸುವ ದೇವರ ಕುಣಿತದವರು ಬಂದರೆನ್ನಿ. ಅದು ಯಾಕೋ ಸಹನೆ ಕಳೆದುಕೊಂಡಂತೆ ಒಂದೇ ಸಮನೆ ಬೊಗಳ ಹತ್ತುತ್ತದೆ. ವಿಚಿತ್ರ ಎಂದರೆ ತಿರುಪೆ ಬೇಡುವವರು ಬಂದಾಗ ಮಾತ್ರ ಸದ್ದಿಲ್ಲದೆ ಸುಮ್ಮನೆ ಬಿದ್ದುಕೊಂಡಿರುತ್ತದೆ. ಅವರ ಬಾಳಿನ 'ನಾಯಿಪಾಡು' ಅದಕ್ಕೂ ವೇದ್ಯವಾಗಿದೆಯೋ ಏನೋ !

ಮನುಷ್ಯರ ಬಗೆಗೆ ಅದರ ವರ್ತನೆ ಹೀಗಿದ್ದರೆ, ಪ್ರಾಣಿಗಳ ಮೇಲೆ ವ್ಯಕ್ತಪಡಿಸುವ ಸಿಟ್ಟು ರೋಷ ಮತ್ತಷ್ಟು ತೀವ್ರತರವಾದದ್ದು, ಕೋಳಿಯೊ, ಬೆಕ್ಕೊ ಈ ಕುನ್ನಿಯ ದೃಷ್ಟಿಗೆ ಬಿದ್ದರೆ ಸಾಕು ಅದನ್ನು ಓಡಿಸಿಕೊಂಡು ಹೋಗಿ ದೂರದವರೆಗೆ ಅಟ್ಟುವ ತನಕ ಅದಕ್ಕೆ ಸಮಾಧಾನವಿರದು. ಇನ್ನು ಯಾವುದಾದರೂ ಡೊಂಕುಬಾಲದ ಸ್ವಗೋತ್ರೀಯ ಪ್ರಾಣಿ ಅದರ ಅಕ್ಕಪಕ್ಕ ಅಪ್ಪಿ ತಪ್ಪಿ ಸುಳಿದಾಡಿತೋ ಅದರ ಕಥೆ ಮುಗಿದ ಹಾಗೆಯೇ. ಮತ್ತೊಮ್ಮೆ ಅದು ಈ ಕುನ್ನಿಯ ದಿಕ್ಕಿನತ್ತ ಪಾದ ಬೆಳೆಸುವುದಿರಲಿ, ಮುಖ ಕೂಡ ಹಾಕಿ ಮಲಗುವುದಿಲ್ಲ.

ತನ್ನಷ್ಟಕ್ಕೆ ತಾನು ತೆಪ್ಪಗೆ ಬಿದ್ದುಕೊಂಡಿರುವಾಗಲೂ ಈ ನಾಯಿಗೆ ಉಪದ್ರವ ತಪ್ಪಿದ್ದಲ್ಲ. ಅದರ ಒಡಲಿಗೆ ಗಟ್ಟಿಯಾಗಿ ಬಿಗಿದಪ್ಪಿರುವ ಅಸಂಖ್ಯಾತ ತೊಣಚಿಗಳು ಅದಕ್ಕೆ ಕೊಡುವ ಕಾಟ ಕಿರುಕುಳಗಳಿಗೆ ಈ ಪ್ರಾಣಿ ಸಿಟ್ಟಿಗೆದ್ದು ಪರಪರ ಕೆರೆದುಕೊಳ್ಳುತ್ತದೆ; ಹರಸಾಹಸ ಮಾಡಿ ಅವುಗಳನ್ನು ಮೂಲೋತ್ಪಾಟಿಸಲು ಹೆಣಗುತ್ತದೆ. ಈ ಪರಾವಲಂಬಿಗಳು ಅಷ್ಟು ಸುಲಭಕ್ಕೆ ಈ ಸುಖದ ಸುಪ್ಪತ್ತಿಗೆಯಂತಿರುವ ನಾಯಿಯ ಶರೀರವನ್ನು ಬಿಟ್ಟು ತೊಲಗುತ್ತವೆಯೆ ? ಹೋದಂತೆ ನಟಿಸಿ ಮತ್ತೆ ಅದರ ಒಡಲಿನ ಸುತ್ತಲೇ ರಿಂಗಣಗುಣಿಯುತ್ತಿರುತ್ತವೆ. ನಾಯಿಯ ಬೆಚ್ಚನೆಯ ದಟ್ಟ

ಕೂದಲೆಂದರೆ ಅದಕ್ಕೆ ಅಷ್ಟು ಖುಷಿ. ಮನೆಯವರು ಕುನ್ನಿಯ ರೋಮಾರಣ್ಯವನ್ನು ಸೂಕ್ಷ್ಮವಾಗಿ ತಡಕಾಡಿ, ಈ ಪರೋಪಜೀವಿಗಳನ್ನು ಪತ್ತೆ ಹಚ್ಚಿ ಗಡೀಪಾರು ಮಾಡಲು ಪ್ರಯತ್ನಿಸುತ್ತಾರೆ; ಆಗಿರುವ ಗಾಯಗಳಿಗೆ ಮದ್ದು ಹಾಕುತ್ತಾರೆ. ಆದರೆ ನಾಯಿ ಒಂದು ಬಗೆಯಲ್ಲಿ ತಾನೇ ಸ್ವಯಂ ಡಾಕ್ಟರಿಕೆ ಮಾಡಿಕೊಂಡು ಗಾಯಗಳನ್ನು ನೆಕ್ಕಿ ಗುಣಪಡಿಸಿಕೊಳ್ಳುವ ಉಪಾಯವನ್ನು ಅರಿತಿರುತ್ತದೆ. ಅಷ್ಟೇ ಅಲ್ಲ, ಹೊಟ್ಟೆ ಸರಿಯಿಲ್ಲದಿರುವಾಗ ಹುಲ್ಲು, ಸೊಪ್ಪುಸೆದೆ ವಗೈರೆ ವನಸ್ಪತಿಗಳನ್ನು ಮೆದ್ದು ವಾಸಿಗೊಳಿಸುತ್ತದೆ.

ಹಿಂದೆಯೇ ತಿಳಿಸಿದಂತೆ ಇದೊಂದು ನಿರುಪದ್ರವಿ ಪ್ರಾಣಿ. ಇದರಿಂದ ಯಾರಿಗೂ ಅಪಾಯವೊದಗುವ ಸಂಭವವಿಲ್ಲ. ಹೀಗೆಂದೇ, ಮನೆಯವರಿಗೆ ಅದನ್ನು ಮೂರು ಹೊತ್ತೂ ಕಟ್ಟಿ ಹಾಕುವ ಪ್ರಮೇಯ ಒದಗಿಲ್ಲ. ಕೊರಳಿಗೆ ಹಾಕಿದ್ದ ಪಟ್ಟಿ ಸಹ ಕೆಲವೇ ದಿವಸಗಳಲ್ಲಿ ಗೈರು ಹಾಜರು. ಯಾವ ಮಾಯದಲ್ಲಿ ಅದನ್ನು ಈ ಪ್ರಾಣಿ ಕಿತ್ತೊಗೆಯಿತೋ ಗೊತ್ತಿಲ್ಲ. ಮನೆ ಮಂದಿ ಹೊರಕ್ಕೆ ಹೋಗುವ ವೇಳೆ ಇದು ಎದ್ದು ಕುಕ್ಕುಲೋಟದಿಂದ ಅವರನ್ನು ಸೇರಿಕೊಳ್ಳುತ್ತದೆ. ಪ್ರಾತಃ ಕಾಲದ ಗಾಳಿ ಸಂಚಾರದ ಹೊತ್ತು ಇದು ಮುಂದಾಳತ್ವ ವಹಿಸಿ ದಾರಿ ತೋರಿಸುವಂತೆ ಮುನ್ನಡೆಯುತ್ತದೆ. ಇದರೊಂದಿಗೆ ತನ್ನ ಪ್ರಾತರ್ವಿಧಿಗಳನ್ನೂ ಪೂರೈಸುತ್ತದೆ.

ನಾಯಿಯನ್ನು ಕುರಿತು ಕಟ್ಟಿರುವ ಕೆಲವೊಂದು ಗಾದೆಗಳಲ್ಲಿ 'ಸಲಿಗೆ ಕೊಟ್ಟ ನಾಯಿ ತಲೆಗೇರಿತು' ಎನ್ನುವುದೂ ಒಂದಲ್ಲವೆ? ಆದರೆ ಇದರಲ್ಲಿ ಪೂರ್ಣ ಸತ್ಯಾಂಶವಿದ್ದಂತಿಲ್ಲ. ಈ ನಾಣ್ನುಡಿ ಕೇವಲ ಉತ್ಪ್ರೇಕ್ಷೆ ಎನ್ನುವಂತೆ ಈ ಕುನ್ನಿಯ ಸಭ್ಯ ನಡಾವಳಿ! ಇನ್ನು ಇದಕ್ಕೆ 'ಸಕಲ ಗುಣ ಸಂಪನ್ನ, ಏಕ ಗುಣ ಹೀನ' ಎಂಬ ರುದ್ರನಾಟಕದ ನಾಯಕನಂತೆ ಒಂದೇ ಅವಗುಣ. ಅದೆಂದರೆ, ಮನೆಯ ಸೋಫಾ, ಕುರ್ಚಿ ಅಥವಾ ಇನ್ನಾವುದೋ ಪೀಠೋಪಕರಣವನ್ನು ಆಗಾಗ್ಗೆ ಹತ್ತಿ ಕುಳಿತುಕೊಳ್ಳುವ ಚಾಳಿ, ಈ ದೃಷ್ಟಿಯಿಂದ ಪರಿಶೀಲಿಸಿದರೆ ನಾಯಿಗೂ ರಾಜಕಾರಣಿಗೂ ನಿಕಟವಾದ ನಂಟು. ಆದರೆ ಇದು ಪುಢಾರಿಗಿಂತ ಮೇಲು, ಯಾಕೆನ್ನುವಿರೊ ? ಕೊಂಚ ಗದರಿಸಿದರೆ ಸಾಕು ತತ್‌ಕ್ಷಣ ನಾಚುತ್ತ ಪೀಠದಿಂದ ಕೆಳಗಿಳಿಯುತ್ತದೆ. ಕಾರಣ, ಅದಕ್ಕೆ ರಾಜಕೀಯಸ್ಥನ ಹಾಗೆ ಮುಂಬರಲಿರುವ ಚುನಾವಣೆಯವರೆಗೆ ಕಾಯುವ ಗರಜಿಲ್ಲ.

-ಹೀಗೆ ಶ್ವಾನಪುರಾಣದ ಸೂಕ್ಷ್ಮ ನಿಬಿಡ ವಿದ್ಯಮಾನಗಳನ್ನು ಸೋಜಿಗ ಮೂಡಿಸುವಂತೆ ಬಣ್ಣಿಸಿದ ಕವಿ. ಈಗ ಪ್ರಸ್ತುತಕ್ಕೆ ಮರಳುತ್ತಾರೆ. ತಮ್ಮ ಮುಂದೆ ಮೈಯನ್ನು ಚಾಚಿ ಮಿಕಿಮಿಕಿ ನಿಟ್ಟಿಸುತ್ತ. ಜೊತೆಗೆ ಬಾಲವಾಡಿಸುತ್ತ ಕೂತಿರುವ ಕುನ್ನಿ ಈಗ ತನ್ನ ಮುಂಗಾಲುಗಳಿಂದ ಕವಿಯನ್ನು ಒತ್ತುತ್ತಿದೆ. ಇದಕ್ಕೆ ಹಸಿವಾಗಿರುವ ಸೂಚನೆ ಅದು. ಅದರ ಹೊಟ್ಟೆಗೆ ಗ್ರಾಸವೊದಗಿಸುವ ಕಾಯಕ ಈಗ ಕವಿಗೆ. ತತ್ಕಾರಣ ಅವರು ನಮಗೆ ವಿದಾಯ ಹೇಳುತ್ತಾರೆ. ಸಾಧ್ಯವಾದಾಗ ಮುಂದೊಮ್ಮೆ ಈ ಕುನ್ನಿಯನ್ನು ಕುರಿತ ಇತರ ಸಂಗತಿಗಳನ್ನು ನಿವೇದಿಸುತ್ತೇನೆ ಎಂಬ ಕವಿಯ ಆಶ್ವಾಸನೆಯೊಂದಿಗೆ "ನಮ್ಮ 'ಮನು'ವಿನ ಕಥೆ"ಯ ಹೆಸರಿನ ಕವನ ಮುಗಿಯುತ್ತದೆ. ಕೊನೆಯಲ್ಲಿ ನಾಯಿಯ ಅಗ್ಗಳಿಕೆಯನ್ನು ಕುರಿತ ಮನಃಸ್ಪರ್ಶಿಯಾದ ಮಾತೊಂದು ಮಕುಟದ ಮಣಿಯಂತೆ ತಣ್ಣಗೆ ಮಿರುಗುತ್ತದೆ. ಯಃಕಶ್ಚಿತ್ ಎಂದು ನಾವೆಲ್ಲ ಸಾಮಾನ್ಯವಾಗಿ ಭಾವಿಸುವ ಈ ಪ್ರಾಣಿಯನ್ನು

ಕುರಿತು ಕವಿಯ ಲೇಖನಿಯಿಂದ ಮಾನವೀಯ ಶ್ಲಾಘನೆಯೊಂದು -ಮಾಮೂಲು ಮಾತಿನಂತಿರುವ ಅತಿಶಯಾರ್ಥ ದ್ಯೋತಕ ಪ್ರಶಂಸೆಯೊಂದು -ಹೊಮ್ಮುತ್ತದೆ:

'ಬಾಯಿಯಿಲ್ಲ ಅನ್ನುವುದಷ್ಟೆ; ಇಲ್ಲದಿದ್ದರೆ
ಇದೂ ನಮ್ಮಂತೆಯೇ ಅಲ್ಲವೇ ?'

'ಹೌದು' ಎನ್ನದೆ ಇರಲು ಓದುಗರಿಗೆ ಸಾಧ್ಯವಾಗದು. ಮಾತು ಬಾರದ ನಾಯಿ, ಮನುಷ್ಯನ ಸಹವಾಸದಲ್ಲಿರುವ ಪ್ರಾಣಿಗಳಲ್ಲೇ ತುಂಬ ಪ್ರೀತಿಪಾತ್ರವಾದದ್ದು. ವಿಧೇಯವಾದದ್ದು. ಸಜ್ಜನ ವ್ಯಕ್ತಿಯಲ್ಲಿರುವ ಸದ್ಗುಣಗಳು ಪಶುವರ್ಗಕ್ಕೆ ಸೇರಿರುವ ನಾಯಿಯಲ್ಲೂ ಇವೆ. ಅವನ ಬುದ್ಧಿಶಕ್ತಿ, ಸ್ನೇಹಪರತೆ, ಕೃತಜ್ಞತಾಪೂರ್ವಕ ಧನ್ಯತಾಭಾವ ಮೊದಲಾದವು ಈ ಮೂಕ ಪಶುವಿನಲ್ಲೂ ಮನೆ ಮಾಡಿವೆ. ಅಷ್ಟೇ ಏಕೆ, ಹಲವು ಬಾರಿ ಈ ಹುಲುಪ್ರಾಣಿ, ತನ್ನನ್ನು ಸ್ವಾರ್ಥಕ್ಕಾಗಿ, ಸಂತಸ ಮೋಜುಗಳಿಗಾಗಿ, ಭದ್ರತೆ ಸುರಕ್ಷತೆಗಳಿಗಾಗಿ ಸಾಕುವ 'ನರ ಪ್ರಾಣಿ'ಗಿಂತ ಮಿಗಿಲೆನ್ನಿಸಿದರೆ ಆಶ್ಚರ್ಯವಿಲ್ಲ.

(ಆ) ಇನ್ನು ಎರಡನೆಯ ಹಾಗೂ ಇನ್ನೂ ಹೆಚ್ಚು ಅರ್ಥಪೂರ್ಣ ಹಾಗೂ ಹೃದಯ ಪರಿಸ್ಪಂದನ ಪ್ರಚೋದಕವಾದ " 'ಮನು'ವಿನ ಕೊನೆಯ ಗಳಿಗೆ" ಕವನವನ್ನು ಸವಿವರವಾಗಿ ಪರಿಶೀಲಿಸಬಹುದು. ಮೊದಲೇ ಉಲ್ಲೇಖಿಸಿದಂತೆ ಮೊದಲನೆಯ ಕವನದ ಕ್ರಿಯಾಶೀಲ ಲಗುಬಗೆ ಲವಲವಿಕೆಗಳ ಆಹ್ಲಾದಕರ ವಾತಾವರಣ, ಎರಡನೆಯ ಕವಿತೆಯಲ್ಲಿನ ನಿಷ್ಕ್ರಿಯ ನೀರವತೆ ದುಗುಡ ದುಮ್ಮಾನಗಳ ಹೆಚ್ಚಳಕ್ಕೆ ಗಣನೀಯ ಕೊಡುಗೆಯನ್ನು ಸೃಷ್ಟಿಸುತ್ತದೆ. ನಾಯಿಯ ಹಠಾತ್ತನೆಯ ಅಸ್ವಸ್ಥತೆ ಮನೆಯ ಮಂದಿಯನ್ನು ಆತಂಕ ನಿರ್ವಿಣ್ಣತೆಗಳ ಆಳದಲ್ಲಿ ಮುಳುಗಿಸುತ್ತದೆ. ಕಣವಿಯವರು ಸರಳ ಮಾತುಗಾರಿಕೆಯ ಮುಖೇನ ಮನಮುಟ್ಟುವ ಪರಿಣಾಮಕಾರಿತೆಯನ್ನು ಸಾಧಿಸುವುದರಲ್ಲಿ ಸಿದ್ಧಹಸ್ತರು. ಅವರ ಈ ಕುಶಲತೆಗೆ ಈ ಕವಿತೆಗಳೂ ಸಾಕ್ಷ್ಯ ನುಡಿಯುತ್ತವೆ.

'ಕಳೆದ ಐದಾರು ದಿನಗಳಿಂದ ಮನಸ್ಸಿಗೆ
ಸಮಾಧಾನವೇ ಇರಲಿಲ್ಲ -
ಒಳಗೂ ಹೊರಗೂ ಬಿಟ್ಟೂ ಬಿಡದೆ ಓಡಾಡಿಕೊಂಡು
ಬೇಡವೆಂದರೂ ಬಾಲವಲ್ಲಾಡಿಸಿ ಬೆಂಬತ್ತಿ ಬಂದು
ಮೊದಲೇ ಮುಂದಿನ ದಾರಿಯನ್ನು ಮೂಸಿ
ಹೊರಡುತ್ತಿದ್ದ 'ಮನು'
ಏಕಾಏಕಿ ಮಲಗಿಬಿಟ್ಟಿತು.'

-ಕವಿಯ ಈ ವ್ಯಾಕುಲಭರಿತ ಮಾತುಗಳಿಂದ ಪ್ರಾರಂಭವಾಗುವ ಕವಿತೆ, ಮುಂದೆ ಒದಗಲಿರುವ ದುರಂತದ ದೃಶ್ಯಕ್ಕೆ ತೋರಣ ರಚಿಸಿದಂತಿಗೆ. ಎಡೆಬಿಡದ ಒಡನಾಡಿಯಾಗಿದ್ದೂ ಬಯಸದಿದ್ದರೂ ಮುದ್ದು ಮಾಡುತ್ತ ನಲಿಯುತ್ತಿದ್ದ 'ಮನು' ಇದ್ದಕ್ಕಿದ್ದಂತೆ ಮೌನವನ್ನು ಹೊದ್ದು ನೆಲವನ್ನು ತಬ್ಬಿ ಜಡವಾಗಿ ಮಲಗಿಬಿಟ್ಟಿದೆ. ಕವಿಗೆ ಮೂರೂ ಹೊತ್ತೂ ನಾಯಿಯ ಈ

ದುರವಸ್ಥೆಯದೇ ತಳಮಳ. ಯಾವ ಕೆಲಸದಲ್ಲಿ ತೊಡಗಿದರೂ ಅದರದೇ ದಹ್ಯಮಾನ ನೆನಪು. ಕವಿಗೊ ಮೊದಮೊದಲು ನಾಯಿಯ ಈ ದಯನೀಯ ಸ್ಥಿತಿ ಕೇವಲ ಅಲ್ಪ ಸಮಯದ್ದು ಇರಬಹುದು ಅನ್ನಿಸುತ್ತದೆ. ಓಡಾಡದೆ ಒಂದೇ ಕಡೆ ಕೊರಡಿನಂತೆ ಹೀಗೆ ಬಿದ್ದುಕೊಂಡಿರುವುದಕ್ಕೆ ಕಾರಣ, ಚಳಿಗೆ ತನ್ನ ಮೈ ಬೆಚ್ಚಗಾಗಿಸಿಕೊಳ್ಳಲು ಇರಬಹುದೇನೋ ಎನಿಸುತ್ತದೆ. ಹಿಂದೆಯೂ ಅದು ಕೆಲವೊಮ್ಮೆ ಹೀಗೆ ದೇಹವನ್ನು ಹಿಡಿಯಷ್ಟು ಮಾಡಿಕೊಂಡು ಮುದುಡಿ ಮಲಗಿದ್ದುಂಟು. ಹೀಗಾಗಿ, ಪ್ರಾರಂಭದಲ್ಲಿ ಕವಿಗೆ ಅಂತಹ ಕಸಿವಿಸಿಯೇನೂ ಆಗಿರಲಿಲ್ಲ. ಆದರೆ ನಾಯಿಯ ಮೂಕ ಸಂಕಟದ ಶೋಚನೀಯ ಸ್ಥಿತಿ ಮುಂದುವರಿದಾಗ, ಅದಕ್ಕೆ ಯಾವುದೋ ಜಡ್ಡು ಬಾಧಿಸಿದೆ ಎನ್ನುವ ಸತ್ಯ ಖಾತ್ರಿಯಾಗುತ್ತದೆ. ಯಾರಾದರೂ ಹತ್ತಿರ ಸುಳಿದರೆ, ಮಾತಾಡಿದರೆ ಒಮ್ಮೆಯೂ ಅವರತ್ತ ದೃಷ್ಟಿ ಹೊರಳಿಸದೆ, ಬೊಗಳದೆ ಮೌನಿಯಾಗಿ ಬಿದ್ದುಕೊಂಡಿರುವುದು ಈ ಕುನ್ನಿಯ ಸ್ವಭಾವಕ್ಕೆ ತಕ್ಕದ್ದಲ್ಲ. ಕವಿಗೆ ಕಾರಣ ಗೊತ್ತಾಗದೆ ಮಮ್ಮಲ ಮರುಗುವ ಪರಿಸ್ಥಿತಿ ಎಡೆಬಿಡದೆ ಕಾಡಹತ್ತುತ್ತದೆ.

ನಾಯಿ ತನ್ನ ಕತ್ತನ್ನು ನೀಳವಾಗಿ ಚಾಚಿ ಏನನ್ನೂ ತಿನ್ನದೆ, ಕೊನೆಗೆ ನೀರನ್ನೂ ಸಹ ಮುಟ್ಟದೆ ಕಳಾಹೀನವಾಗಿ ಇರುವುದನ್ನು ಕಂಡು ಕವಿಗೆ ಮಾತ್ರವಲ್ಲ ಮನೆಯವರಿಗೆಲ್ಲಾ ಮರುಕ, ಒಳಗೊಳಗೇ ಕಿತ್ತು ತಿನ್ನುವ ವ್ಯಸನ. ಇವರೆಲ್ಲರ ಉತ್ಸಾಹವೂ ಗಾಳಿ ಬಿಟ್ಟ ಬಲೂನಿನಂತಾಗಿದೆ. ಔಷಧಿಯನ್ನೋ, ಹಾಲನ್ನೋ ಬಾಯಿಗೆ ಸುರುವಿದರೆ ಅದು ಗಂಟಲೊಳಕ್ಕೆ ಇಳಿಯದೆ ಮರಳಿ ಕಟವಾಯಿಯವರೆಗೆ ಬಂದುಬಿಡುತ್ತದೆ. ಕವಿಗೆ ಕನಿಕರ ಸಹಾನುಕಂಪೆ ತದಿತರ ಭಾವನೆಗಳು ಕಾಡಿ ಅನ್ನಿಸುವುದು ಹೀಗೆ : ಈ ಮೂಕ ಪಶುವಿಗೆ ಮನುಷ್ಯರ ಹಾಗೆ ಪವಾಡ ಸದೃಶವಾಗಿ ಒಮ್ಮೆಲೆ ಮಾತು ಬಂದು, ಕೇವಲ ಒಂದರೆ ಕ್ಷಣಕ್ಕಾದರೂ ತನಗೆ ಆಗುತ್ತಿರುವ ಯಾತನೆಯನ್ನು ತೋಡಿಕೊಳ್ಳಬಾರದೆ ? ಹಾಗೊಂದು ವೇಳೆ ಆದರೆ, ಅದರ ಬೇನೆಗೆ ತಕ್ಕ ಔಷಧಿಯನ್ನು ಕೊಟ್ಟು ವೇದನೆಯನ್ನು ತಗ್ಗಿಸಬಹುದು. ಆದರೆ ಕವಿಗೆ ಇದು ಅಶಕ್ಯವೆಂಬುದು ಗೊತ್ತಿದೆ. ನಾಯಿ, ತನ್ನ ಇಂತಹ ಚಿಂತಾಜನಕ ರುಗ್ಣ ಸ್ಥಿತಿಯಲ್ಲೂ ಕವಿ ಅದರ ಬಳಿ ಹೋದಾಗ ಕ್ಷೀಣನಾಗಿ ಬಾಲವಾಡಿಸುತ್ತದೆ. ಅದರಲ್ಲಿ ಒಡೆಯನ ಬಗೆಗಿನ ಅಮಿತ ಅಕ್ಕರೆ, ಕೃತಜ್ಞತಾ ಭಾವದ ಸೆಲೆಯೇ ಉಕ್ಕಿದಂತೆ ಭಾಸವಾಗುತ್ತದೆ.

ಕುನ್ನಿಯ ಈ ವಿಷಮ ಸ್ಥಿತಿಯಿಂದ ಕವಿಗೆ ಅದರ ಅಂತಿಮ ಕಾಲದ ಕ್ಷಣಗಣನೆ ಶುರುವಾಗಿದೆ ಎಂಬ ಸತ್ಯ ಮನದಟ್ಟಾಗುತ್ತದೆ. ಇಂತಹ ದುಸ್ಸಹ ಸಂಕಟದ ಗಂಭೀರ ಸನ್ನಿವೇಶದಲ್ಲೂ ಅದು ತನ್ನ ರೆಪ್ಪೆಗಳನ್ನು ಅಗಲಿಸಿ, ನೋಟದಲ್ಲೇ ಪ್ರಾಣವನ್ನು ಬಿಗಿ ಹಿಡಿದುಕೊಂಡ ಹಾಗೆ ಕಣ್ಣುಗುಡ್ಡೆಗಳನ್ನು ಸುತ್ತ ಹೊರಳಿಸುತ್ತದೆ. ಒಮ್ಮೆ ಅಕ್ಕಪಕ್ಕದಲ್ಲಿ ಗುಂಪುಗೂಡಿರುವ ಮನೆಯವರನ್ನು ಮೂಕ ದಿಟ್ಟಿಯಿಂದ ನೋಡುತ್ತದೆ. ಆ ನೋಟದ ಹಿಂದೆ ಎಂತಹ ಪ್ರಶಾಂತಿ, ನಿರಾಳ ಮನೆ ಮಾಡಿವೆ; ಎಂತಹ ಋಣ ಭಾರದ ಧನ್ಯ ನಿವೇದನೆ ಕುಡಿಯಾಡಿಸಿದೆ. ಆಗ, ಕವಿಗೆ ತಾನು ರಸಾನುಭವಿಸಿದ ಒಂದು ಮಹೋನ್ನತ ಭವ್ಯ ದೃಶ್ಯ ನೆನಪಿನ ಪಟಲದ ಮೇಲೆ ಸುಳಿದು ಹೋಗುತ್ತದೆ. ಮೊನ್ನೆ ತಾನೇ ಸಂಧ್ಯಾ ಸಮಯದ ಸುಂದರ ಗಗನದಲ್ಲಿ ಗೋಚರಿಸಿದ ಚಂದ್ರ ಮತ್ತು ಶುಕ್ರ ಗ್ರಹದ ಅಪೂರ್ವ ಕೂಟದ ಮನೋಜ್ಞ ನೋಟಕ್ಕೆ ಸರಿಮಿಗಿಲಾಗುವಂತೆ 'ಮನು'ವಿನ ದೃಷ್ಟಿಯಿತ್ತು

ಎನ್ನುತ್ತಾರೆ. ಬಾವ ನಿರ್ಭರರಾದ ಕವಿ. ಅಸಾಧಾರಣವಾದ ಈ ಭವ್ಯೋಪಮೆ ಸಮಯೋಚಿತ. ಧ್ವನಿಯುಕ್ತ:

'ಮೊನ್ನೆ ಸಂಜೆಯ ಅಪರೂಪದ ಆ ಚಂದ್ರ -ಶುಕ್ರ ಕೂಟ
ಮೂಡಿ ಮರೆಯಾಯಿತು-'

ಎನ್ನುವ ಕವಿಯ ಈ ಭಾವೋದ್ಗಾರದ ಹಿಂದಿನ ದೃಶ್ಯವನ್ನು ಕಲ್ಪಿಸಿಕೊಂಡಷ್ಟು ಅದನ್ನು 'ಮನು'ವಿಗೆ ಹೋಲಿಸಿಕೊಂಡಷ್ಟೂ ಅದು ಅರ್ಥಾಮೃತ ಧಾರೆಯನ್ನು ಕೆಚ್ಚಲಿಸುತ್ತಾ ಹೋಗುತ್ತದೆ. ಮುಂದಿನ ಪಂಕ್ತಿಗಳಿಂದ ಕವಿತೆ ವಾಸ್ತವದ ನೆಲೆಯಿಂದ, ಅಥವಾ ಅದರ ಜೊತೆಗೆ ತಾತ್ವಿಕಾರ್ಥದ ಪಾತಳಿಯಲ್ಲಿ ಸಂಚರಿಸತೊಡಗುತ್ತದೆ. ಪ್ರತಿ ಸಾಲೂ ಗಹನವಾದದ್ದನ್ನು ಸೂಚಿಸಲು ಹುರುಡುಗಟ್ಟಿದಂತೆ ಕೃತಾರ್ಥತೆಯ ಜಾಡನ್ನು ಹಿಡಿಯುತ್ತದೆ.

'ಹಣತೆಯ ಕುಡಿ ಸಣ್ಣದಾಗುತ್ತ ನಂದಿತು.
ಹೌದು ; ಆದರೆ ಆ ನೀಲ ಮಣಿ ಬೆಳಕು ಎಲ್ಲಿ ಹೋಯಿತು ?
ಕತ್ತಲೆಯನ್ನು ಭೇದಿಸಿ ಹೇಗೆ ಪಾರಾಯಿತು ?'

ಹಿಂದೆಲ್ಲ ಹೇಳಿಕೆಗಳ ರೂಪದಲ್ಲಿದ್ದ ಪದ್ಯ, ಮುನ್ನಾಗಿದಂತೆ ಪ್ರಶ್ನೆಗಳ ಸರಮಾಲೆಯನ್ನು ತೊಟ್ಟು ನಿಗೂಢಾರ್ಥವನ್ನು ದ್ಯೋತಿಸಲು ಸನ್ನದ್ಧವಾಗುತ್ತದೆ. ಆರುವ ಮುನ್ನ ದೀಪದ ಕುಡಿಯ ಪ್ರಕಾಶ ಒಮ್ಮೆಗೇ ದೇದೀಪ್ಯಮಾನವಾಗಿ, ಉಜ್ವಲ ದೀಪ್ತಿಮಂತವಾಗಿ ಮೆರೆದು, ಮರುಕ್ಷಣ ಮಂಕಾಗಿ ಕೊನೆಗೆ ಸ್ತಬ್ಧವಾಗುವ ಹಾಗೆ, ನಾಯಿಯ ಕಣ್ಣಿನ ಈ ಅಂತ್ಯಸಮಯದ ವಿದಾಯದ ನೋಟದಲ್ಲಿ ಎಂತಹ ತೇಜಃಪೂರ್ಣ ಭಾವ ಮಿಂಚಿ ಮರೆಗೆ ಸಂದಿತು !

'ಮನು'ವಿನ ಪ್ರಭಾಮಯ ಕಣ್ಬೆಳಕು ಆರಿ ಹೋಯಿತು, ನಿಜ. ಆದರೆ ಆ ನೀಲಿಗಣ್ಣಿನ ಸುಪ್ರಸನ್ನಕರ ಕಾಂತಿ ಯಾವ ಹಕ್ಕೆಯನ್ನು ಹುಡುಕಿ ಹೋಯಿತು? ಇದರಿಂದ ಮುಕ್ತಿ ಪಡೆದು, ಘೇರಾಯಿಸಿದ ಗಾಢಾಂಧಕಾರದಿಂದ ತಪ್ಪಿಸಿಕೊಂಡು ಮಾಯವಾದದ್ದಾದರೂ ಹೇಗೆ ? ಕವಿಯ ಅಂತಶ್ಚಿತ್ತದಲ್ಲಿ ಬದುಕು-ಸಾವಿನ ನಡುವಿನ ಜಿಜ್ಞಾಸೆಯನ್ನು ಮೊಳೆಸುವುದಕ್ಕೆ ಈ ಪ್ರಶ್ನೆ ನಾಂದಿಯಾಗುತ್ತದೆ. ಸಾಮಾನ್ಯ ಪಶುವೊಂದರ ಮೃತ್ಯು, ಅದರೊಂದಿಗಿನ ಭಾವಸಂಬಂಧದ ನಿಮಿತ್ತ ಕವಿ ಚೇತನವನ್ನು ಆಧ್ಯಾತ್ಮ ಚಿಂತನದ ಮೇಲ್ನೆಲೆಗೆ ಏರುವಂತೆ ಪ್ರೇರೇಪಿಸುತ್ತದೆ. ದೇಹ-ಜೀವಾತ್ಮಗಳ ರಹಸ್ಯಮಯ ನಂಟಿನ ಸ್ವರೂಪವನ್ನು ಮನನಿಸಲು ಮುಂದಾಗುತ್ತದೆ. ಕವಿಯ ತತ್ತ್ವಾಲೋಚನೆ ಉನ್ನತಿಗೆ ಏರಿ, ಕೌತುಕ ಮತ್ತು ಪ್ರಶ್ನೆಗಳ ಕೊಟ್ಟ ಕೊನೆಯ ಕುರುಡುಗಲ್ಲಿ ತಲುಪುವುದನ್ನು ಈ ಸಾಲುಗಳು ಮನಃಸ್ಪರ್ಶಿಯಾಗಿ ಕಟ್ಟಿಕೊಡುತ್ತವೆ:

'ಮಣ್ಣ ಹಣತೆಯನ್ನು ಮಣ್ಣಿಗೆ ಬಿಟ್ಟು
ಆಕಾಶದ ಯಾವ ಮೂಲೆಯಲ್ಲಿ ಚಿಕ್ಕೆಯಾಯಿತು?"

ಪ್ರಾಣಸ್ವರೂಪಿಯಾದ ಮೂಲ ಚೈತನ್ಯ ಜೀವಿಯ ಪಾಲಿಗೆ ನಭದ ಬೆಲೆಯುಳ್ಳ ಬಳುವಳಿ. ಸಕಲ ಧರ್ಮಗಳ ದರ್ಶನ ಸಾರದ ಉವಾಚವೂ ಇದೇ. ಆ ಚೈತನ್ಯ ತನ್ನ ಲೀಲೆಗೆಂದು ನಮ್ಮ ಭೂಮಿಯ

ಸಂಸರ್ಗ ಹೊಂದಿ ಕೆಲ ಕಾಲ ವಿಹರಿಸಿ, ತನ್ನ ಉದ್ದೇಶ ನೆರವೇರಿದ ಬಳಿಕ ಮರಳಿ ತನ್ನ ನೈಜ ನೆಲೆಗೆ ಹಾರಿಹೋಗುತ್ತದೆ. ಮಣ್ಣಿಗೆ ಸ್ವತಃ ಸ್ವಯಂ ದೀಪಕ ಶಕ್ತಿ ಅಶಕ್ಯವಷ್ಟೆ? ಆಕಾಶ ಮೂಲವಾದ ಚೈತನ್ಯ ಸತ್ವದ ಸಂಪರ್ಕದಿಂದ ಅದಕ್ಕೆ ಬೆಳಕಿನ ಪ್ರಾಪ್ತಿ. ಮುಂದೆ ಅದು ಮಣ್ಣಿನ ದೀಪವನ್ನು ಅದರ ತವರು ನೆಲದಲ್ಲೇ ಉಳಿಸಿ, ತಾನು ಆಕಾಶದ ಅನಂತ್ಯದಲ್ಲಿ ಲೀನವಾಗುತ್ತದೆ. ಅಲ್ಲಿನ ಅಜ್ಞಾನ ಮೂಲೆಯೊಂದರಲ್ಲಿ ನಕ್ಷತ್ರವಾಗಿ ಪ್ರಜ್ವಲಿಸುತ್ತದೆ.

ಮುಂದಿನ ಹಾಗೂ ಕೊನೆಯ 'ಪ್ಯಾರಾ'ದಲ್ಲಿ ಕವಿಯ ಉಮ್ಮಳ ಉಲ್ಬಣಿಸುವ, ನಾಯಿಯ ಒಡನಾಟದ ನೆನಪಿನಿಂದ ಚಿತ್ರ ವಿಚಲಿತಗೊಂಡು ಪ್ರಕ್ಷುಬ್ಧವಾಗುವ ಸಂಗತಿಯ ಬಯಾನಿಕೆ ಇದೆ. ಈಗ ಅದರ ಗತ ಸಾಹಸ ವೃತ್ತಾಂತವನ್ನು ಯಾರ ಮುಂದೆ ಬಿಚ್ಚಿಡುವುದು ? ಯಾರಿಗೆ ಬೇಕಾಗಿದೆ? ಅಲ್ಲದೆ, ಅದನ್ನು ಒಕ್ಕಣಿಸುವುದರಿಂದ ಏನು ಉಪಯೋಗ ? ಇಷ್ಟಕ್ಕೂ ಬೇರೆಯವರು ಕೇಳಿ ಮಾಡುವುದಾದರೂ ಏನು ?

ಬಹು ಸಮಯದ ನಾಯಿ ಮತ್ತು ಕವಿಯ ಮನಸ್ಸಂಬಂಧ ಹಾಗೂ ಗಾಢತರವಾದ ಆಪ್ತತೆ ಈಗ ಮಲ್ಲಿಗೆಯ ಹಂಬಿನ ಕಡ್ಡಿಯಂತೆ ಜೀವವೆಂಬ ಮಣ್ಣಿಗೆ ಬಲವಾಗಿ ಅಂಟಿಕೊಂಡಿದೆ. ಅದಕ್ಕೆ ನಲುಗುವ, ಸೊರಗುವ ಅಳುಕಿಲ್ಲ. ಆಂತರ್ಯದ ಆಳದಲ್ಲಿ ಬೇರನ್ನು ನಾಟಿಸಿರುವ ಅದು ಸ್ಮರಿಸಿಕೊಂಡಾಗೆಲ್ಲ ತಪ್ಪದೆ ಚಿಗಿಯುತ್ತದೆ. ಕಸುವಿಸಿ ಕಮನೀಯ ಕಂಪನ್ನು ಪಸರಿಸಿ ಜೀವಕ್ಕೆ ತಂಪು ನೀಡುವ ವೇಳೆಯಲ್ಲೇ ವಿಯೋಗದ ಕಾರಣಕ್ಕೆ ಅಂತರಂಗವನ್ನು ಕಲಕಿ, ಅತೀವ ಅಳಲನ್ನು ಅಮರಿಸುತ್ತದೆ. ಹೀಗೆ, ಮಿಶ್ರ ಭಾವನೆಗಳನ್ನು ಏಕ ಕಾಲಕ್ಕೆ ಮೂಡಿಸುವ 'ಮನು'ವಿನ ಸ್ನೇಹಾರ್ದ್ರ ಚಿತ್ರಣ ಹೃದಯಂಗಮವಾಗಿ ಇಡೀ ಕವಿತೆಯಲ್ಲಿ ನೆರವೇರಿದೆ. ಕವಿಯ ಅಂತಶ್ಚೇತನವನ್ನು ಹಳವಂಡಿಸಿ, ಕಲಕು-ಮಲಕುಗೊಳಿಸಿ, ಅಂತಿಮವಾಗಿ ಭಾವೋಪಶಮನದ ಶಾಂತ ಹಾಗೂ ತಿಳಿಯಾದ ಸ್ಥಿತಿಯಲ್ಲಿ ನಿಲ್ಲಿಸುವ ರೀತಿಯ ಸೂಚ್ಯಾಭಿವ್ಯಕ್ತಿ ತಾತ್ವಿಕ ನುಡಿಗಳು ಮನಃಸ್ಪರ್ಶಿ ಮಾತ್ರವಲ್ಲ ಮಾರ್ಮಿಕವೂ ಆಗಿವೆ :

**'ನೆಲ-ಬಾನುಗಳನ್ನು ಸುತ್ತಿ ಬೀಸುವ**
**ಎಲ್ಲರ ಉಸಿರಾಗಿರುವ, ಇದ್ದೂ ಇಲ್ಲದ ಹಾಗಿರುವ**
**ಈ ಗಾಳಿಯಲ್ಲಿ**
**ಇಂಥ ಎಷ್ಟು ಜೀವಗಳ ಪರಿಮಳ ಬೆರೆತು ಹೋಗಿದೆಯೋ-**
**ನೆಲದ ಮೇಲಿನ ಹೂವು, ಮುಗಿಲಲ್ಲಿಯ ಚುಕ್ಕಿ**
**ಅವೇ ಬಾಯಿಬಿಟ್ಟು ಹೇಳಬೇಕು.**

-ಹೌದು ; ವಾಯು ಭೂವ್ಯೋಮವ್ಯಾಪಿಯಾಗಿದ್ದರೂ ಸಕಲ ಜೀವಿಗಳ ಚೇತನ ಸ್ವರೂಪಿಯಾಗಿದ್ದರೂ, ತಂತಾನೆ ಬೀಸುತ್ತ ಸಚರ ಜೀವಿಗಳ ಇರವಿಗೆ ಕಾರಣವಾಗಿದ್ದರೂ ತಾನು ಇದ್ದೂ ಇಲ್ಲದ ಹಾಗೆ ಅದೃಶ್ಯರೂಪದಿಂದ ಮನೋವೇದ್ಯ ಮಾತ್ರವಾಗಿ ಸದಾ ಕ್ರಿಯಾತ್ಮಕವಾಗಿದೆ. ಇಂತಹ ಗಾಳಿಯ ಆಂತರ್ಯದಲ್ಲಿ ಈ ನಾಯಿಯಂತಹ ಎಷ್ಟೊಂದು ಬಾಳಿ ಅಗಲಿಹೋದ

ಜೀವಗಳ ನರುಗಂಪು ಮಿಲನವಾಗಿ ಹೋಗಿರುವುದೋ ಯಾವ ವ್ಯಕ್ತಿ ತಾನೆ ಬಲ್ಲ ? ಬಹುಶಃ ನಮ್ಮ ಧರೆಯ ಮೇಲೆ ನಳನಳಿಸಿರುವ ಸುಕುಮಾರ ವರ್ಣಾಕರ್ಷಕ ಪುಷ್ಪಗಳಿಗೋ, ಗಗನ ಮಂಡಲದಲ್ಲಿ ಪ್ರಕಾಶಮಾನವಾಗಿ ಕಣ್ ಕೋರೈಸಿರುವ ನಕ್ಷತ್ರಗಳಿಗೋ ಇದರ ತಿಳಿವು ಇರಬಹುದೇನೋ. ಅವು ತಾವಾಗಿ ಸತ್ಯವನ್ನು ಬಹಿರಂಗಗೊಳಿಸದಿದ್ದರೆ, ಜೀವಾಸ್ತಿತ್ವ ಮತ್ತು ಅದರ ಅಂತಿಮ ಗಂತವ್ಯವಾಗಿರುವ ಸಾವಿನ ಗುಹ್ಯತರ ಸ್ವರೂಪ ಬಯಲಾಗದು. ಮಾನುಷಪ್ರಜ್ಞೆಗೆ ವಿದಿತವಾಗದು.

ಐಹಿಕ ಮಜಲಿನಿಂದ ಅಲೌಕಿಕತೆಯ ಪಾತಳಿಗೆ, ಮೂರ್ತತೆಯ ಗಟ್ಟಿ ಮಗ್ಗುಲಿನಿಂದ ನಿರಾಕಾರ ಅಮೂರ್ತತತೆಯ ಹೊರಳಿಗೆ ಈ ಜೋಡಿಗವಿತೆ ಸಂಯುಕ್ತ ವಿಕಾಸಗೊಳ್ಳುವ ಪರಿ ಕುತೂಹಲಕಾರಿಯಾಗಿದೆ. ನಮ್ಮ ಪ್ರೀತ್ಯಾದರದ ಸಜ್ಜನ ಕವಿಗಳಾದ ಚೆನ್ನವೀರ ಕಣವಿಯವರ ಹೃದಯವಂತಿಕೆಯ ಹಿರಿಮೆ, ಮೇಲ್ಮೆಗಳಿಗೆ ದ್ಯೋತಕವಾಗಿರುವುದಷ್ಟೇ ಅಲ್ಲದೆ, ಕನ್ನಡದಲ್ಲಿ ನಾನು ಓದಿರುವ ವಾಙ್ಮಯದಲ್ಲಿ ಈ ತೆರನಾದ ವಿಶೇಷಾನುಭವವನ್ನು ನೀಡುವ ಜೋಡಿಗವಿತೆಗೆ ಹೆಗಲೆಣೆಯಾದದ್ದು ಮತ್ತೊಂದಿಲ್ಲವೆಂದರೆ ಅದು ಉಪಚಾರದ ಮಾತೇನಲ್ಲ.

**ಕೆ.ಎಸ್.ನಿಸಾರ್ ಅಹಮದ್**

## ೨

ಕವಿಯೊಬ್ಬ ನಿರಂತರವಾಗಿ ತನ್ನಲ್ಲಿಯ ಸಂವೇದನೆಗಳಿಗೆ ಕಿವಿಗೊಡುತ್ತ ಅವುಗಳಿಗೆ ಆಕಾರ ನೀಡಲು ಯತ್ನಿಸುತ್ತಾನೆ. ಹಾಗೆ ಮಾಡುವಾಗ ತನ್ನ ಪರಿಸರದ ಆಗುಹೋಗು, ಸವಾಲುಗಳನ್ನು, ದತ್ತವಾದ ಪರಂಪರೆಯ ಹಿನ್ನೆಲೆಯಲ್ಲಿ ಗ್ರಹಿಸುವ ಸೂಕ್ಷ್ಮಜ್ಞತೆ ತೋರುತ್ತಾನೆ. ಆಧುನಿಕ ಕನ್ನಡ ಕಾವ್ಯದಲ್ಲಿ ಇಂತಹ ಹಲವು ಪ್ರಯೋಗಗಳು ಕಾಣಿಸಿಕೊಂಡಿವೆ. ಕಳೆದ ಶತಮಾನದ ಐದನೆಯ ದಶಕದ ಆರಂಭದಿಂದಲೂ ಕಾವ್ಯದ ಜೊತೆಗೆ ಅನುಸಂಧಾನ ನಡೆಸುತ್ತ ಬಂದಿರುವ ಚೆನ್ನವೀರ ಕಣವಿ ಅವರ ಕಾವ್ಯವು ಪ್ರತಿಕ್ರಿಯೆ ಮತ್ತು ಶೋಧನಗಳಿಂದಾಗಿ ವಿಶಿಷ್ಟ ರಚನೆಗಳನ್ನು ನೀಡಿದೆ. "ಕಣವಿಯವರ ಸಾಮಾಜಿಕ ಕಾವ್ಯ ಪ್ರಸ್ತುತವಾಗುವುದು ಸಮಾಜದ ಆಗುಹೋಗುಗಳಿಗೆ ಪ್ರಾಮಾಣಿಕವಾಗಿ ಪ್ರತಿಕ್ರಿಯಿಸುವುದರ ಮೂಲಕ ಮತ್ತು ಈ ಪ್ರತಿಕ್ರಿಯೆಗಳಿಗೆ ಭಾಷೆಯಲ್ಲಿ ಆಕಾರ ಕೊಡುವುದರ ಮೂಲಕ"[೧] ಎಂಬ ಹೇಳಿಕೆ ಅವರ ಕಾವ್ಯಕ್ಕೆ ಚೆನ್ನಾಗಿ ಅನ್ವಯಿಸುತ್ತದೆ. ಈ ಎರಡು ಗುಣಗಳನ್ನು ಎಂದರೆ, ಕವಿಯ ಪ್ರಾಮಾಣಿಕ ಪ್ರತಿಕ್ರಿಯೆ ಮತ್ತು ಅದನ್ನು ಭಾಷೆಯಲ್ಲಿ ಸಮರ್ಪಕವಾಗಿ ಆಕಾರ ಕೊಡುವುದನ್ನು 'ಮನುವಿನ ಕೊನೆಯ ಗಳಿಗೆ' ಎಂಬ ಕವನದಿಂದ ಅರಿಯಬಹುದಾಗಿದೆ.

ತೀರ ಸರಳವಾಗಿ ಹೇಳಬಹುದು; ನಾಲ್ವತ್ತೆರಡು ಸಾಲಗಳ ಈ ಕವಿತೆಯಲ್ಲಿ ಒಂದು ಸಾಕುನಾಯಿಯ ಸಾವಿನ ವಿಚಾರ ತುಂಬಿಕೊಂಡಿದೆ. ಅದನ್ನು ಕವಿ 'ಮನುವಿನ ಕೊನೆಯ ಗಳಿಗೆ' ಎಂದು ಸಾರ್ಥಕವಾಗಿ ಹೆಸರಿಸಿದ್ದಾರೆ. ಕವಿತೆ ಆಪ್ತವಾದ ಧಾಟಿಯಲ್ಲಿ ಆರಂಭವಾಗುತ್ತದೆ.

**ಕಳೆದ ಐದಾರು ದಿನಗಳಿಂದ ಮನಸ್ಸಿಗೆ**
**ಸಮಾಧಾನವೇ ಇರಲಿಲ್ಲ -**
**ಒಳಗೂ ಹೊರಗೂ ಬಿಟ್ಟೂ ಬಿಡದೆ ಓಡಾಡಿಕೊಂಡು**
**ಬೇಡವೆಂದರೂ ಬಾಲವಲ್ಲಾಡಿಸಿ ಬೆಂಬತ್ತಿ ಬಂದು**
**ಮೊದಲೇ ಮುಂದಿನ ದಾರಿಯ ಮೂಸಿ**
**ಹೊರಡುತ್ತಿದ್ದ 'ಮನು'**
**ಏಕಾಏಕಿ ಮಲಗಿಬಿಟ್ಟಿತು.**

ನಿತ್ಯ ಬದುಕಿನ ತೆರೆ ಸರಿಸಿ ಸಹಜವಾಗಿ ಆರಂಭವಾಗುವ ಕವಿತೆ ನಿರುದ್ವಿಗ್ನವಾಗಿ ತನ್ನ ಕಥನ ಆರಂಭಿಸುತ್ತದೆ. 'ಮನಸ್ಸಿಗೆ ಸಮಾಧಾನವೇ ಇರಲಿಲ್ಲ' ಎಂಬುದು ನಿರೂಪಕನ ಸ್ಥಿತಿ ಎತ್ತಿ ತೋರಿ, ಅದಕ್ಕೆ ಕಾರಣವನ್ನು ಮುಂದೆ ಸ್ಪಷ್ಟಪಡಿಸುತ್ತದೆ. ಸಾಕುನಾಯಿ ತುಂಬ ಪ್ರಿಯವಾಗಿತ್ತು. ಮನೆ ಒಳಹೊರಗೆ ಓಡಾಡಿ ಕುಟುಂಬದ ಸಹ ಸದಸ್ಯನಾಗಿತ್ತು. ನಿರೂಪಕ ಹೋದಲ್ಲೆಲ್ಲ ಬೆನ್ನುಹತ್ತಿ ಹೋಗಿ ಬರುವ ಸಖ್ಯ ಹೊಂದಿತ್ತು ಎಂಬ ವಿವರಗಳು ಸಂಬಂಧದ ಗಾಢತೆಯನ್ನು ವಿವರಿಸುತ್ತವೆ. ಇಲ್ಲಿ ನಿರೂಪಣಾ ವಿಧಾನ ಸ್ವಗತದಂತೆ ಕಂಡರೂ, ಅದು ಸರ್ವಸಾಕ್ಷಿಕ ವಿಧಾನದಲ್ಲಿದೆ. 'ಒಳಗೂ ಹೊರಗೂ ಬಿಟ್ಟೂಬಿಡದೆ ಓಡಾಡಿಕೊಂಡು' ಎಂಬ ವಿವರ ನಿರೂಪಕ ಮತ್ತು ನಾಯಿಯ ಸಂಬಂಧವನ್ನು ಎತ್ತಿ ಹೇಳುತ್ತದೆ. ಇಂತಹ ವಿವರಗಳಲ್ಲಿ ನಿರೂಪಕನಿಗಿಂತ 'ಮನು'ವಿನ ವ್ಯಕ್ತಿತ್ವದ ಬಗ್ಗೆ ಹೆಚ್ಚು ವಿಚಾರಗಳು ಹೊರಬರುತ್ತವೆ. ಮನೆಯಲ್ಲಿ ಬೇಕಾದಲ್ಲಿ ಹೋಗುವ ಬರುವ ಸ್ವಾತಂತ್ರ್ಯ, ಹಕ್ಕು ಪಡೆದಿದ್ದ ಅದು, ಬಾಲವಲ್ಲಾಡಿಸಿ ಪ್ರೀತಿ ನಿಷ್ಠೆ ತೋರುವುದನ್ನೂ ಕಾಣಬೇಕು. ದಾರಿ ಗುರುತಿಸಿ, ಮೂಸಿ ಮುಂದೆ ಓಡುವ ಅದು ತೀಕ್ಷ್ಣಮತಿಯಾಗಿತ್ತು. ನಿಷ್ಠೆ, ಕರ್ತವ್ಯ, ದಕ್ಷತೆ, ಗುರುತಿಸುವಿಕೆಗಳಿಂದ ಸಾಕುನಾಯಿಗಳು ಎಂದಿಗೂ ಮನುಷ್ಯನಿಗೆ ಒಂದು ರಹಸ್ಯವೇ ಸರಿ. ಇಂತಹ ಪ್ರಿಯ 'ಮನು' ಒಂದು ದಿನ 'ಏಕಾಏಕಿ ಮಲಗಿಬಿಟ್ಟಿತು'. ಇದು ಕಥನಕ್ಕೆ ಹೊಸ ತಿರುವು ನೀಡುತ್ತದೆ. ಮುಂದಿನ ದುರಂತಕ್ಕೆ ಮುನ್ನುಡಿ ಬರೆದಂತಿದೆ. ಏಕಾಏಕಿ ಪದ ಇಲ್ಲಿ ತುಂಬ ಸಮರ್ಥ, ಏನೆಲ್ಲ ಹೇಳುವ ಪದವಾಗಿದೆ. ಭೌತಪ್ರಪಂಚದಲ್ಲಿ ನಮ್ಮೆದುರು ನಡೆಯುವ ಎಲ್ಲದಕ್ಕೂ ಎಲ್ಲ ಸಂದರ್ಭದಲ್ಲಿಯೂ ಕಾರಣ ಹೇಳಲಾಗದು. ಅದನ್ನು ಮನುಷ್ಯ ಏಕಾಏಕಿಯಂತಹ ಪದಗಳಿಂದ ಸರಿದೂಗಿಸುತ್ತಾನೆ.

ಕವನದ ಮುಂದಿನ ಆರು ಸಾಲುಗಳಲ್ಲಿ ದುರಂತ ಗಾಢವಾಗುತ್ತದೆ. ನೆನಪಿಗೆ ಹಾರುವ ಮನಸ್ಸು ಅಲ್ಲಿ ಸಾಂತ್ವನ ಪಡುವ ಯತ್ನಕ್ಕೆ ತೊಡಗುತ್ತದೆ. 'ಚಳಿಗಾಲದಲ್ಲಿ ಒಂದೊಂದು ದಿನ ಇದು ಹೀಗೇ ... ಮಲಗಿಕೊಳ್ಳುವುದೆಂದು ಸುಮ್ಮನಿದ್ದೆ' ಎಂಬ ಹೇಳಿಕೆಯಲ್ಲಿ ವಿಷಾದದ ತೀವ್ರತೆಯಿದೆ; ಹಿಂದಿನ ಚಳಿಯ ದಿನಗಳಲ್ಲಿ ಅದು ಮಲಗುತ್ತಿದ್ದ ಚಿತ್ರವೂ ಸ್ಮರಣೆಗೆ ಬರುತ್ತಿದ್ದ ವರ್ತಮಾನದ ಅಸಹನೀಯತೆಯನ್ನು ಭೂತದ ಸ್ಮರಣೆಗಳಿಂದ ತಗ್ಗಿಸುವ ಮನಃಸ್ಥಿತಿ ಇದು. ಆದರೆ ಕಣ್ಣ ಮುಂದಿನ ವಸ್ತುಸ್ಥಿತಿಗೆ ಕವಿತೆ ಕನ್ನಡಿ ಹಿಡಿಯುತ್ತದೆ;

**ಒದರದೆ, ಓಡಾಡದೆ, ಒಮ್ಮೆಲೆ**
**ಮೌನವಾಗಿಬಿಡುವುದೆ ?**

ಈ ಪ್ರಶ್ನೆ ನಿಗೂಢವಾಗಿದೆ. ಚುರುಕಾಗಿ ಓಡಾಡುವ, ಕೂಗುವ ನಾಯಿ ಇದ್ದಕ್ಕಿದ್ದಂತೆ 'ಮೌನ'ವಾಗುವುದೆಂದರೆ ಏನರ್ಥ ಎಂಬುದು ತಲ್ಲಣವನ್ನು ಸೂಚಿಸುತ್ತದೆ. ಅನಂತದತ್ತ ಮುಖ ಮಾಡಿ ರಹಸ್ಯ ಕೆಣಕುತ್ತದೆ. ನಾಯಿಯಂತೂ ಸಾವಿನ ದವಡೆಗೆ ಜಾರುವುದನ್ನು ಕವನ ಪರೋಕ್ಷವಾಗಿ ಹೇಳುತ್ತದೆ.

ಮುಂದಿನ ಎರಡು ಪದ್ಯಗಳು ಮಾನವೀಯ ಹೃದಯ ಸ್ಪಂದನದಲ್ಲಿ ಅರಳಿವೆ. ಮನು ಮತ್ತು ನಿರೂಪಕರ ಸಂಬಂಧ ಕೊನೆಯಾಗುತ್ತಿರುವ ಸೂಚನೆಗಳಿವೆ. 'ಕೂಳು ನೀರಿಲ್ಲದೆ ನಿಸ್ತೇಜ ಬಿದ್ದುಕೊಂಡುದ ಕಂಡು ತಣ್ಣಗಾದೆ' ಎಂಬಲ್ಲಿ ಆತಂಕ ಹಿರಿದಾಗಿದೆ. ಇದೊಂದು ಕರುಣಾರ್ದ್ರ ಸನ್ನಿವೇಶ.

**ಎಲ್ಲರಿಗೂ ಅದೇ ; 'ಮನು ಏಕೆ ಹೀಗಾದ ?'**
**ಹಾಕಿದ ಔಷಧ, ಕುಡಿಸಿದ ಹಾಲು, ಕಟವಾಯಿಗುಂಟ**

ಗೋಣು ಚಾಚು, ನಿಸ್ತೇಜ, ಔಷಧ ಕಟವಾಯಿಗುಂಟ ಪದಗಳೇ ಅಲ್ಲಿಯ ಸನ್ನಿವೇಶ ಬಿಂಬಿಸುತ್ತವೆ. ಸಾವಿನ ಅಂಚಿನಲ್ಲಿರುವ ಆ ಪ್ರಿಯ ಸಾಕುನಾಯಿಯನ್ನು ಉಳಿಸಿಕೊಳ್ಳುವ ಮಾನವೀಯ ಪ್ರಯತ್ನ ಮನ ಕಲಕುತ್ತದೆ. ಒಂದು ಕ್ಷಣ ಅದಕ್ಕೆ ಮಾತು ಬಂದು ಏನಾದರೂ ಹೇಳಲೆಂಬಾಸೆಯೂ ಮೊಳೆಯುತ್ತದೆ. ತೀವ್ರ ಒತ್ತಡ, ಆತಂಕಗಳಿಂದ ಅಸಾಧ್ಯ ವಿಚಾರಗಳೂ ಕಾಣಿಸುತ್ತವೆ. ಸನಿಹ ಹೋದರೆ ಆ ಸ್ಥಿತಿಯಲ್ಲಿಯೂ ಬಾಲವಲ್ಲಾಡಿಸಿ ಕೃತಜ್ಞತೆ, ನಿಷ್ಠೆ, ವಿದಾಯ ಸೂಚಿಸುತ್ತದೆ. ಕೊನೆಗೂ ದುರಂತ ಸಾಕಾರವಾಗಿ ನಾಯಿ ಸಾವಿಗೆ ಸಲ್ಲುತ್ತದೆ. ಆ ಕ್ಷಣ ಕವನದಲ್ಲಿ ಉಜ್ವಲವಾಗಿ ಬಿಂಬಿತವಾಗಿದೆ.

**ಕೊನೆಯ ಗಳಿಗೆಯಲ್ಲಿಯೂ ಮೆಲ್ಲಗೆ ಕಣ್ಣು ತೆರೆದು**
**ಕಣ್ಣಲ್ಲಿಯೇ ಜೀವ ಹಿಡಿದಂತೆ**
**ಗುಡ್ಡೆ ಹೊರಳಿಸಿ, ಒಮ್ಮೆ ಎಲ್ಲರನ್ನೂ ನೋಡಿದ**
**ಕೃತಜ್ಞತೆಯ ಆ ಪ್ರಶಾಂತ ನೋಟ-**
**ಮೊನ್ನೆ ಸಂಜೆಯ ಅಪರೂಪದ ಆ ಚಂದ್ರ-ಶುಕ್ರ ಕೂಟ**
**ಮೂಡಿ ಮರೆಯಾಯಿತು.**

ಕಣ್ಣು ತೆರೆದು ನೋಡಿದ ಕೊನೆಯ ನೋಟದೊಂದಿಗೆ ಇಲ್ಲವಾಯಿತು. ನಾಯಿಯ ಸಾವಿನ ಜೊತೆಗೆ ಕವನದ ಒಂದು ಘಟ್ಟ ಮುಗಿದು ಹೋಗುತ್ತದೆ. ಆದರೆ ಮುಗಿದ, ಸಾವಿನ, ಕೊನೆಯ ಹಂತದಲ್ಲಿಯೇ ಮೂಡುವ ಪ್ರಶ್ನೆ ಕವಿತೆಯನ್ನು ಇನ್ನೊಂದು ದಿಕ್ಕಿಗೆ ಸೆಳೆಯುತ್ತದೆ. ಆ ಪ್ರಶ್ನೆ ಎಂದರೆ ;

**ಹಣತೆಯ ಕುಡಿ - ಬೆಳಕು ಸಣ್ಣದಾಗುತ್ತ ನಂದಿತು.**
**ಹೌದು. ಆದರೆ ಆ ನೀಲಮಣಿ ಬೆಳಕು ಎಲ್ಲಿ ಹೋಯಿತು ?**
**ಕತ್ತಲೆಯನ್ನು ಭೇದಿಸಿ ಹೇಗೆ ಪಾರಾಯಿತು?**
**ಮಣ್ಣಿ ಹಣತೆಯನ್ನು ಮಣ್ಣಿಗೆ ಬಿಟ್ಟು**
**ಆಕಾಶದ ಯಾವ ಮೂಲೆಯಲ್ಲಿ ಚಿಕ್ಕೆಯಾಯಿತು?**

ನಾಯಿಯ ಸಾವಿನೊಂದಿಗೆ ಧುತ್ತನೆ ಏಳುವ ಈ ಅನೇಕಾನೇಕ ಪ್ರಶ್ನೆಗಳಿಗೆ ಆದಿಮ ಚರಿತ್ರೆಯೇ ಇದೆ. ಕಣ್ಣಲ್ಲಿಯ ಬೆಳಕು ಹೇಗೆ ನಂದಿತು ? ಅದು ಎಲ್ಲಿಗೆ ಹೋಯಿತು? ಅದೇ ಚಿಕ್ಕೆಯಾಯಿತೋ? ಹಾಗಾದರೆ ಸಾವು ಎಂದರೇನು ? ಎಂಬ ಪ್ರಶ್ನೆಗಳು ಕವಿತೆಯಲ್ಲಿ ಹುಟ್ಟಿ ಬೆಳೆದುಬಿಡುತ್ತವೆ. ಎಂದರೆ ಸಾವಿನಾಚೆಯ ಚಿಂತನೆಗೆ ಕವನ ತೊಡಗುತ್ತದೆ. ಈಗ ಸಾಕುನಾಯಿ ಸತ್ತು ಅದರ ವಿಚಾರ ಸ್ಮರಣೆಯ ಸಂಪುಟದಲ್ಲಿ ಜೀವ ತಾಳಿದೆ. ಇದೇ ಈಗ ತಣ್ಣಗಾಗಿ ಎದುರಲ್ಲಿಬಿದ್ದಿರುವ ನಾಯಿ ಈ ಹಿಂದೆ ಮನೆ ತುಂಬ ಓಡಾಡಿದೆ, ಆಟವಾಡಿದೆ. ಆತ್ಮೀಯವಾಗಿತ್ತು ಎಂಬುದನ್ನು ನಂಬಲೂ ಆಗದ ಹಾಗೆ ಎಲ್ಲ ಮುಗಿದುಬಿಡುತ್ತದೆ.

ಕವನದ ಕೊನೆ ತುಂಬ ಅರ್ಥವತ್ತಾಗಿದೆ. ನಾಯಿಯ ಸಾವು, ಒಟ್ಟು ಸಾವಿನ ಚರಿತೆಯಾಗಿ ಸುದೀರ್ಘ ಸ್ಮರಣೆ ಇತಿಹಾಸ ಕೆಣಕುವ ವಿಚಾರಿಸುವ ಭಾವ ಬಲಿಯುತ್ತದೆ. ಎಲ್ಲಾ ಪ್ರಶ್ನೆಗಳನ್ನು ಒಂದು ಅಪರಿಹಾರ್ಯ ಸ್ಥಿತಿಯಲ್ಲಿ ಬಿಡಲಾರದೆ, ತಾರ್ಕಿಕ ಅಂತ್ಯಕ್ಕೆ ಒಯ್ದು ತುಂಬ ಆಳದ ದನಿಯಲ್ಲಿ ಕವನ ಹೇಳುವುದಿಂತು;

**ನೆಲ-ಬಾನುಗಳನ್ನು ಸುತ್ತಿ ಬೀಸುವ**
**ಎಲ್ಲರ ಉಸಿರಾಗಿರುವ, ಇದ್ದೂ ಇಲ್ಲದ ಹಾಗಿರುವ**
**ಈ ಗಾಳಿಯಲ್ಲಿ**
**ಇಂಥ ಎಷ್ಟು ಜೀವಗಳ ಪರಿಮಳ ಬೆರೆತು ಹೋಗಿದೆಯೋ-**
**ನೆಲದ ಮೇಲಿನ ಹೂವು, ಮುಗಿಲಲ್ಲಿಯ ಚಿಕ್ಕೆ**
**ಅವೇ ಬಾಯಿಬಿಟ್ಟು ಹೇಳಬೇಕು.**

ಕಾಲಗರ್ಭದ ಅಗಣಿತ ಸಾವಿನ ಬಗ್ಗೆ ಉತ್ತರ ಹೇಳಬಲ್ಲವರು ಎಂದರೆ ಒಂದು ನೆಲ, ಇನ್ನೊಂದು ಆಕಾಶ ಎಂಬ ಸೂಚನೆಯಲ್ಲಿ ಮನುವಿನ ಕೊನೆಯ ಗಳಿಗೆಗಳು ಪೂರ್ಣಗೊಳ್ಳುತ್ತವೆ.

ಈ ಕವಿತೆಯಲ್ಲಿ ಎರಡು ನೆಲೆಗಳಿವೆ. ಹಾಗಾಗಿ ಅದರ ಆಕೃತಿ ಭೂಮವಾಗಿ ಬೆಳೆದು ನಿಲ್ಲುತ್ತದೆ. ಮೊದಲನೆಯ ನೆಲೆಯಲ್ಲಿ 'ಮನು' ಸಾಕುನಾಯಿಯ ಸಾವು ಗಾಢವಾಗಿದೆ. ಅದರ ಜೊತೆಗಿನ ಪ್ರೀತಿ ವಿಶ್ವಾಸದ ನಡೆ, ಅದರ ನಿಷ್ಠೆ ಕೃತಜ್ಞತೆಗಳು ಅದಕ್ಕೆ ಉದಾತ್ತ ವ್ಯಕ್ತಿತ್ವ ನೀಡಿವೆ. ಕವಿತೆಯಲ್ಲಿ ನಾಯಿಯ ಕೊನೆಯ ಗಳಿಗೆಗಳು ತೀವ್ರವಾಗಿ ಬಂದಿರುವಂತೆಯೇ ಅದಕ್ಕೆ ಧೀರೋದಾತ್ತ ಸ್ಥಾನವೂ ಪ್ರಾಪ್ತವಾಗಿದೆ. ನಾಯಿಯ ಬಗೆಗಿನ ವಿವರದಲ್ಲಿ ಮಹಾಕಾವ್ಯದ ನಾಯಕನ ಪ್ರೀತಿ, ನಂಬಿಕೆ, ತ್ಯಾಗ, ಬಲಿದಾನಗಳ ಛಾಯೆ ಕಂಡುಬರುತ್ತವೆ. ಹಾಗಾಗಿ ನಿರ್ಗಮನ

ಸಾಮಾನ್ಯವಾಗುವುದಿಲ್ಲ. ಮನುವಿನ ವೃತ್ತಾಂತ, ಅದರ ದುರಂತ ಗಾಢವಾಗಬೇಕೆಂದರೆ ಕಣವಿ ಅವರ ಇನ್ನೊಂದು ಕವಿತೆ 'ನಮ್ಮ ಮನುವಿನ ಕಥೆ'ಯನ್ನು ಪೂರಕವಾಗಿ ಗಮನಿಸಬೇಕು. ಅಲ್ಲಿ ಇದೇ ನಾಯಿಯ ಬಾಲ್ಯ ಮತ್ತು ಬೆಳೆದು ಮನೆಯ ಜನರಿಗೆ ಆಪ್ತವಾದ ವಿವರಗಳು ಸರಳವಾಗಿ ಚಿತ್ರಣವಾಗಿವೆ. ಅಲ್ಲಿ ಅದರೊಂದಿಗೆ ನಿರೂಪಕ ಪಡೆಯುವ ಒಡನಾಟ ನವಿರಾಗಿದೆ; ಮಾನವೀಯ ಸೆಲೆ ಚಿಮ್ಮಿಸುವಂತಿದೆ. ಅಲ್ಲಿ ಕವನ 'ನಮ್ಮ ಸಣ್ಣ ಹುಡುಗನಿಗೆ ನಾಯಿ ಸಾಕಬೇಕೆಂಬ ಆಸೆ' ಎಂದು ಆರಂಭಗೊಂಡು ೧೪-೧೫ ಪದ್ಯಗಳಲ್ಲಿ ವಿವರವಾಗಿ ಬೆಳೆದು ಕೊನೆಗೆ 'ಮತ್ತೊಮ್ಮೆ ಕೂಡಿದಾಗ ಅದರ ಕಥೆ ಮುಂದುವರೆಸುತ್ತೇನೆ. ಬಾಯಿಯಿಲ್ಲ ಎನ್ನುವುದಷ್ಟೇ, ಇಲ್ಲಿದಿದ್ದರೆ ಅದೂ ನಮ್ಮಂತೆಯೇ ಅಲ್ಲವೆ?' ಎಂದು ಮುಕ್ತಾಯ ಕಂಡಿದೆ. ಅದರ ಕಥೆ ಸಹೃದಯರಲ್ಲಿಯೇ ದುಃಖ ನೋವು ತರುತ್ತದೆ. ಕವಿಯ ದೃಷ್ಟಿ ಉದಾರ ಮಾನವೀಯ ಧೋರಣೆಯಾಗಿದೆ. "ಕವಿಯು ಇಂಥಲ್ಲಿ ಮಾನವೀಯ ಅನುಕಂಪ ಪ್ರಕಟಿಸುವುದು, ಕೇವಲ ನಾಯಿಗೆ ಮೀಸಲಾಗಿದ್ದರೆ ಅಷ್ಟೊಂದು ಮಹತ್ವ ಪ್ರಾಪ್ತವಾಗುತ್ತಿರಲಿಲ್ಲ. ಇದಕ್ಕೂ ಮೀರಿ ಬೇರೆಯಾದ ಸಾಮಾಜಿಕ ಛಿದ್ರ ನೋವುಗಳನ್ನೂ ಈ ಸ್ಥಿತಿಯ ಅರಿವು ಪರಿಚಯಿಸಿ ಕೊಡುವುದರಿಂದ ಇದು ಅಸಾಮಾನ್ಯ ಮನುಷ್ಯತ್ವದ ಸ್ತರಕ್ಕೆ ಕವಿ ತೋರಿದ ತನ್ಮಯ ಶಕ್ತಿಯೇ ಸರಿ"[೨] ಎಂದಿರುವುದು ಕೂಡ ವಿಚಾರಾರ್ಹವಾಗಿದೆ.

'ಮನು' ಕುರಿತಾದ ಎರಡೂ ಕವನಗಳು - 'ನಮ್ಮ ಮನುವಿನ ಕಥೆ' ಮತ್ತು 'ಮನುವಿನ ಕೊನೆಯ ಗಳಿಗೆ'- ಕಣವಿ ಅವರ 'ಜೀವಧ್ವನಿ' ಕವನ ಸಂಗ್ರಹದಲ್ಲಿವೆ. ಕವಿ ಈ ಸಂಕಲನದ ಹೊತ್ತಿಗಾಗಲೇ ನವೋದಯದ ಸೌಂದರ್ಯ, ಪ್ರೇಮ, ರಮಣೀಯ ಚಿಂತನೆಗಳಿಂದ ದೂರ ಸಾಗಿ, ಬಹುಮುಖೀ ಚಿಂತನೆಗಳಿಗೆ ತೊಡಗಿದ್ದರು. ಅಲ್ಲಿ ಮನುಷ್ಯ ಬದುಕು, ಅದರ ಒಳಿತು ಕೆಡಕುಗಳು, ಅನುಭಾವ, ಸಾವು, ಅತೀತಗಳ ಬಗ್ಗೆ ಆಳದಲ್ಲಿ ಚಿಂತನೆಗೆ ತೊಡಗಿದ್ದರು. "ಒಂದು ದೃಷ್ಟಿಯಿಂದ ಅದು ಹೆಚ್ಚು ಹೆಚ್ಚು ಸಮಾಜಮುಖವಾಗುತ್ತಿದ್ದಂತೆ ಕಂಡರೆ ಇನ್ನೊಂದು ದೃಷ್ಟಿಯಿಂದ ಮೊದಲಿಗಿಂತ ಎದ್ದು ಕಾಣುವ ರೀತಿಯಲ್ಲಿ ಚಿಂತನಾಪರವಾಗಿ ಚಿರಂತನ ಸತ್ವಗಳ ಶೋಧದಲ್ಲಿ ತೊಡಗಿರುವಂತೆ ಭಾಸವಾಗುತ್ತದೆ."[೩] ಇಲ್ಲಿ ನಾಯಿಯೊಂದರ ಕೊನೆಯ ಗಳಿಗೆಗಳನ್ನು ಯಥಾವತ್ತಾಗಿ ಬಿಡಿಸಿಟ್ಟಿರುವುದು ಮನಸ್ಸಿಗೆ ತಟ್ಟುತ್ತದೆ. ಕವನದಲ್ಲಿ ಏಕಾಏಕಿ, ಮೌನ, ಕಟವಾಯಿ, ಗುಡ್ಡೆ, ಮರೆಯಾಗು, ಹೊರಳಿಸು, ಬೆರೆತು ಹೋಗು ಪದಗಳೆಲ್ಲ ಸೂತಕದ ಸಾವಿನ ಛಾಯೆ ದಟ್ಟವಾಗಿಸಿಬಿಡುತ್ತದೆ. ಆದರೆ ಇಡೀ ಪದ್ಯದಲ್ಲಿ ಸಾವು, ಮೃತ್ಯು, ಮರಣ ಈ ಪದಗಳ ಪ್ರಯೋಗವಿಲ್ಲದಿರುವುದು ಗಮನಾರ್ಹವಾಗಿದೆ.

ಕವನದ ಎರಡನೆಯ ನೆಲೆ ಮಹತ್ವಪೂರ್ಣವಾಗಿದ್ದು, ಅದು ಆಶಯದಲ್ಲಿ ಒಂದು ಎತ್ತರವನ್ನು ಸ್ಪರ್ಶಿಸುತ್ತದೆ. 'ಮನು' ಎಂಬ ನಾಯಿಯೊಂದರ ಕಥನವು ಬರಬರುತ್ತ ಮನುಕುಲದ - ಒಟ್ಟು ಸಮಸ್ತ ಜೀವ ಕುಲದ - ಸಾವಿನರ್ಥ ಶೋಧಿಸುವ ಕಥನವಾಗುವಲ್ಲಿ ಕವಿತೆ ಭಾವ ಅರ್ಥಗಳಲ್ಲಿ ಬೆಳೆದು ನಿಲ್ಲುತ್ತದೆ. "ಆ ನೀಲಮಣಿ ಬೆಳಕು ಎಲ್ಲಿ ಹೋಯಿತು ?' ಎಂಬ ಪ್ರಶ್ನೆ ತಾತ್ವಿಕವಾಗಿ ಬೆಳೆಯುತ್ತದೆ. ಸಾವು ಎಂದರೇನು, ಸಾವಿನ ನಂತರ ಜೀವ ಎಲ್ಲಿಗೆ ಸಾಗುತ್ತದೆ ಎಂಬ ಚರ್ಚೆ ಕವನದ ಒಡಲಿಂದ ಹುಟ್ಟುಕೊಳ್ಳುತ್ತದೆ. ಅದರ ಬೆನ್ನು ಹತ್ತಿ ಕವಿ ಒಂದು ಪ್ರ

ಊಹೆ, ಥಿಯರಿ ಸೂಚಿಸಬಲ್ಲರು; 'ಇದ್ದೂ ಇಲ್ಲದ ಹಾಗಿರುವ ಈ ಗಾಳಿಯಲ್ಲಿ ಇಂಥ ಎಷ್ಟು ಜೀವಗಳ ಪರಿಮಳ ಬೆರೆತು ಹೋಗಿದೆ ಎಂಬುದರ ಗಣನೆಯದು. ಇಲ್ಲಿ ಸಾವಿನ ಬಗ್ಗೆ ಕಣವಿಯವರು ಚಿಂತಿಸುವ ಧಾಟಿಯಲ್ಲಿ ಬಳಕೆಗೊಂಡ ಪದಗಳಲ್ಲಿ ದೇಸಿ ಚಿಂತನೆ, ಜಾನಪದ ತತ್ವಜ್ಞಾನಗಳ ಬೆಂಬಲವಿದೆ. ವೇದ ಉಪನಿಷತ್ತು ಪುರಾಣ ಇತಿಹಾಸಗಳ ಹಿನ್ನೆಲೆಯೂ ಇದೆ. ಏಕಾಏಕಿ, ಕಣ್ಣುಗುಡ್ಡೆ, ಬಾಯಿ ಬಂದರೆ, ನೀಲಮಣಿ, ಜೀವ ಹೂವಾಗುವುದು, ತಾರೆಯಾಗುವುದೆಲ್ಲ ಜನಪದರ ನಂಬಿಕೆಗಳೇ ಆಗಿವೆ. ಹಣತೆ ಕುಡಿ ಬೆಳಕು ಕತ್ತಲೆ ಭೇದಿಸಿ ಮೇಲೆ ದಾಟುವುದು, ತಮಸ್ಸಿನಿಂದ ಜ್ಯೋತಿಯ ಕಡೆಗೆ, ಸಾವಿನಿಂದ ಅಮೃತದ ಕಡೆಗೆ.... ಉಪನಿಷತ್ತಿನ ದರ್ಶನವಾಗಿದೆ. ಕಣವಿಯವರು ಈ ಕವಿತೆಯ ಮೂಲಕ ಜೀವ, ಜಗತ್ತು ಬದುಕು ಸಾವುಗಳ ಚಿಂತನೆಯನ್ನು ತಾತ್ವಿಕವಾಗಿ ನಡೆಸಿದರೂ ಅದು ಕಲಾತ್ಮಕವೂ, ಧ್ವನಿಪೂರ್ಣವೂ ಆಗಿದೆ ಎಂಬುದು ಮುಖ್ಯ. ನಾಯಿಯ ಸಾವು ವೈಯಕ್ತಿಕ ಇಲ್ಲವೆ ಕೌಟುಂಬಿಕ ಹಾನಿಯ ವಿಷಾದ, ನೋವಿನಲ್ಲಿ ವಿರಮಿಸದೆ, ಸಾರ್ವತ್ರಿಕ ತತ್ವದ ಅನ್ವೇಷಣೆಯ ಪ್ರಜ್ಞೆಯನ್ನು ಹುಟ್ಟುಹಾಕುತ್ತದೆ. ಕವನ ಹಲವು ಸಾಧ್ಯತೆಗಳನ್ನು ತೆರೆದು 'ನೆಲದ ಮೇಲಿನ ಹೂವು, ಮುಗಿಲಲ್ಲಿಯ ಚಿಕ್ಕೆ, ಅವೇ ಬಾಯಿಬಿಟ್ಟು ಹೇಳಬೇಕು' ಎಂಬ ವಿಲಕ್ಷಣ ಬಯಕೆಯಲ್ಲಿ ಮುಕ್ತಾಯಗೊಂಡಿದೆ.

ಕಣವಿ ಕಾವ್ಯದ ಸೃಜನಶೀಲ ಶಕ್ತಿ-ಸಾಮರ್ಥ್ಯಗಳನ್ನು, ನಂಬಿಕೆ ಪರಂಪರೆಗಳ ಸಾತತ್ಯದಲ್ಲಿ ಇಲ್ಲಿ ಗುರುತಿಸಬಹುದು. ವಿಷಾದದ ದನಿಯಲ್ಲಿ ಆರಂಭವಾಗುವ ಕವಿತೆ ಚಿಂತನದಲ್ಲಿ ಮುಗಿದಿದೆ. ನಾಯಿಯ ಸಾವು ಹಲವು ಪ್ರಶ್ನೆಗಳನ್ನೆಬ್ಬಿಸಿ ಚಿಂತನೆಗೆ ತೊಡಗಿಸುತ್ತದೆ. 'ಪುಟ್ಟ ಹಕ್ಕಿಯ ಪಾಡು' ಕವಿತೆಯಲ್ಲಿ ಇಂತಹ ಒಂದು ಚಿತ್ರಣವಿದ್ದರೂ, ಅದು ಪ್ರಕೃತಿಯ ದಿನಚರಿಯ ಸಹಜ ಪುಟದಂತಿದೆ, ಅದು ತಾತ್ವಿಕ ಜಿಜ್ಞಾಸೆಗೆ ತೊಡಗುವುದಿಲ್ಲ. ಇಲ್ಲಿ 'ಮನು' ಅರ್ಥಪೂರ್ಣ ಕವನವಾಗಿ ಬೆಳೆದಿದೆ. ಇದರಿಂದ ಒಂದೆಡೆಗೆ ವಿಮರ್ಶಕರು ಹೇಳುವ ಈ ಮಾತುಗಳು ಸರಿಯಾಗಿ ಅನ್ವಯವಾಗುತ್ತವೆ. "ಜೀವನದ ಸಮಸ್ತ ಸವಾಲುಗಳಿಗೆ ಪ್ರತಿಸ್ಪಂದಿಸುತ್ತಲೇ ತಮ್ಮ ಸೃಜನಶೀಲತೆಯನ್ನು ಉಳಿಸಿಕೊಳ್ಳಬೇಕಾದ ಭಾರತದ ಈಗಿನ ಚಾರಿತ್ರಿಕ ಸಂದರ್ಭದಲ್ಲಿ ಕಣವಿಯವರ ಕಾವ್ಯಮಾರ್ಗ ಉದಾರವಾದಿ ಮಾನವತಾ ಧೋರಣೆ ಹೊಂದಿಯೂ ಅರ್ಥಪೂರ್ಣ ಕಾವ್ಯ ರಚಿಸಬಲ್ಲ ಸಾಧ್ಯತೆಯನ್ನು ಇದು ತೋರಿಸುತ್ತದೆ."[೪] 'ಮನುವಿನ ಕೊನೆಯ ಗಳಿಗೆ' ಹಲವು ಕಾರಣಗಳಿಂದ, ಸಾಧ್ಯತೆಗಳಿಂದ ಕಣವಿಯವರ ಉತ್ತಮ ರಚನೆಗಳಲ್ಲಿ ಒಂದಾಗಿದೆ.

**ಗುರುಪಾದ ಮರಿಗುದ್ದಿ**

ಟಿಪ್ಪಣಿಗಳು :

೧. ಡಾ. ಜಿ.ಎಸ್. ಆಮೂರ : ಕಣವಿ ಸಮಗ್ರ ಕಾವ್ಯ - ಪ್ರಸ್ತಾವನೆ ; ಪುಟ ೨೧.

೨. ಡಾ. ಗುಂಡಣ್ಣ ಕಲಬುರ್ಗಿ : ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ :ಪು. ೨೫೬

೩. ಡಾ. ಜಿ.ಎಸ್. ಆಮೂರ ; ಕಣವಿ ಸಮಗ್ರ ಕಾವ್ಯ - ಪ್ರಸ್ತಾವನೆ; ೨೦

೪. ಡಾ. ಡಿ. ಆರ್. ನಾಗರಾಜ್ ; ಶಕ್ತಿ ಶಾರದೆಯ ಮೇಳ : ಪು. ೨೫೦

# ೫೦. ಎದ್ದೀರಾ ? ನೀವು ಎದ್ದೀರಾ !

ಎದ್ದೆವೆದ್ದೆವು ಶರಣು
ಎದ್ದೀರಾ ? ನೀವು ಎದ್ದೀರಾ !

ದಿನವೂ ದಿಲ್ಲಿಗೆ ಹೋಗಿ
ಗುಲ್ಲು ಗದ್ದಲ ಹಾಕಿ
ಇಲ್ಲಿದ್ದವರ ಬಾಳೆ-ಬದುಕು ಕಲ್ಲಾಬಿಲ್ಲಿ
ಮಾಡೀರಾ ! ಕದ್ದು ಓಡೀರಾ ?

ಮೂವತ್ತು ವರುಷಾತು
ಮಾಡಿದ್ದೇ ಮಸಲತ್ತು
ಕೈ ಹಿಡಿದು ಕೇಳಾಕ ಯಾರಿಗೆ ಕುವ್ವತ್ತು ?
ಆಯೋಗ : ಸುಯೋಗ
ಒಂದೊಂದs ಹೊರಬಿತ್ತು
ಮುಚ್ಚೀರಾ ? ಕಣ್ಣು ತೆರೆದೀರಾ !

ತಿಂದಿದ್ದೆ ತಿಂದಿದ್ದು
ತಲೆಗೆ ಅಮಲೇರಿದ್ದು
ಕಾಡು ಪ್ರಾಣಿಗಳೆಲ್ಲ ಕಸರತ್ತು ಮಾಡಿದ್ದು
ಬುದ್ಧಿವಂತರ ಸದ್ದು
ಅಡಗೀಸಿ ಹಾಕಿದ್ದು
ಬಿಟ್ಟೀರಾ? ಬಾಯಿ ಕಟ್ಟೀರಾ !
ಕತ್ತಲು ಹಾಡೇ ಹಗಲು

ಇಡಿ ದೇಶದುದ್ದ
'ಎಲ್ಲರೂ ಮಲಗಿರಲು ಅವನೊಬ್ಬನೆದ್ದ'
ಬಿಡುಗಡೆ ತರಲೆಂದೆ
ಜೀವ ಹಿಡಿದಿದ್ದ
ತಿಳಿದೀರಾ ? ಮತ್ತೆ ಕಳೆದೀರಾ !

ಬಡವರ ಹೆಸರಿಲೆ
ತುಡುಗು ಮೇದವರೆಲ್ಲ
ಹಿಡಿಯಾಕ ಹೊಂಟಾರು ಗೆದ್ದ ಎತ್ತಿನ ಬಾಲ
ಸುತ್ತು ಕಾವಲು ಇರಲಿ
ಆಗ್ಯಾರ ಕಂಗಾಲ
ಬಿಟ್ಟೀರಾ ! ನೆನಪು ಇಟ್ಟೀರಾ ?

ನೆಟ್ಟಗಽ ನಡದರ
ಅಡಗಾಲು ಹಾಕಿ
ಕೆಡವಾಕ ನಿಂತಾರ ಅಲ್ಲಲ್ಲೆ ಜ್ಯಾಕಿ
ಅವರೂನು ಅಂದಾರು :
'ಭಾರತಮಾತಾಕಿ'
ಹೋದೀರಾ! ಮೋಸ ಹೋದೀರಾ !

ಆದದ್ದು ಆಗ್ಹೋಯ್ತು
ಅಂದಽರ ಹ್ಯಾಂಗ?
ಹುಗಿದಿದ್ದ ಇತಿಹಾಸ ಹೊರಬಂತು ಮ್ಯಾಗ
ಭಂಡರು ನಿಂತಾರ
ಸೆರಗು ಮರೆಯಾಗ
ಕಟ್ಟೀರಾ ? ಹಿಡಿದು - ಬಿಟ್ಟೀರಾ !
'ಬಿದ್ದೀಯಬೆ ಮುದುಕಿ' -
ಪದವ ಹಾಡುದು ಬಾಕಿ
ಎಷ್ಟು ಇಟ್ಟರು ಕೂಡ ಬರವಲ್ಲು ನಾಚಿಕಿ
ಬಾಲಬಡಕರಿಗಿನ್ನೂ ದೆವ್ವಽದ ಹೆದರಿಕಿ
ಬರತೀರಾ ? ಅಲ್ಲೇ ಇರತೀರಾ ?

ಎದ್ದೆವೆದ್ದೆವು ಶರಣು, ಎದ್ದೀರಾ ! ನೀವು ಎದ್ದೀರಾ ?
ಎದ್ದ ಮೇಲೂ ಬುದ್ಧಿ ಸ್ವಾಧೀನದಲ್ಲಿರಲಿ
ಹದ್ದು ಮೀರದ ಹಾಗೆ ನಮ್ಮೆಲ್ಲ ನಡವಳಿ
ತಿದ್ದೀರಾ ? ಜೋಕೆ, ಬಿದ್ದೀರಾ !

೧

ಚೆನ್ನವೀರ ಕಣವಿಯರ ಒಟ್ಟು ಕಾವ್ಯ ಕೃಷಿಯಲ್ಲಿ ರಾಜಕೀಯ ವಿಡಂಬನೆ, ಐರನಿ, ವ್ಯಂಗ್ಯಕ್ಕೆ ಎತ್ತಿ ಹೇಳಬಹುದಾದ ಮಹತ್ವದ ಸ್ಥಾನವಿಲ್ಲ. ಅದನ್ನು ಅವರು ಕ್ವಚಿತ್ತಾಗಿ, ಸಂದರ್ಭ, ಸನ್ನಿವೇಶ ಮತ್ತು ಆಯಾಯ ಕಾಲಮಾನದ ಒತ್ತಡಗಳಿಗೆ ಪ್ರತಿಕ್ರಿಯಾತ್ಮಕವಾಗಿ ಬಳಸಿದ್ದಾರೆ. ವಿಡಂಬನೆ, ವ್ಯಂಗ್ಯ, ಅಣಕು - ಇಂತಹವುಗಳ ಅತಿ ಬಳಕೆಗೆ ಕವಿ ದುಬಾರಿ ಬೆಲೆ ತೆರಬೇಕಾಗುತ್ತದೆಂಬ ಗಾಢ ಅರಿವೂ ಅವರಿಗಿದೆ. ಮೊನಚು ಕಳಕೊಂಡ ವಿಡಂಬನೆಯು ಅಥವ ಅರ್ಥಗರ್ಭಿತ ವಿಡಂಬನೆಯೂ ಆ ಕಾಲಕ್ಕೆ ಮಾತ್ರ ಪ್ರಸ್ತುತವಾಗಿ ನಂತರ ಅಪ್ರಸ್ತುತವಾಗಬಲ್ಲ ಅದರ ನಿಸ್ಸಾರತೆ ಮತ್ತು ನಶ್ವರತೆಯ ಅರಿವೂ ಮತ್ತು ಅಧೀರತೆಯೂ ಅವರಿಗಿದ್ದಂತಿದೆ. ನಮ್ಮ ಕನ್ನಡ ಕಾವ್ಯ ಪ್ರಪಂಚದಲ್ಲಿ ಇಂಥ ಹಾದಿಯನ್ನೆ ರಾಜಮಾರ್ಗವೆಂದು ಕ್ರಮಿಸಿ, ದಿಢೀರ್ ಪ್ರಸಿದ್ಧಿ, ಪ್ರಚಾರ ಗಳಿಸಿ, ತದನಂತರ ಅದೃಶ್ಯವಾದ ಮತ್ತು ಆಗುತ್ತಿರುವ ವಿಪುಲ ಕವಿಗಳ ಮತ್ತು ಕವಿತೆಗಳ ಉದಾಹರಣೆ ನಮ್ಮೆದುರು ಇದೆ.

ಚೆನ್ನವೀರ ಕಣವಿಯವರ ವಿಡಂಬನೆಯ ಮೊನಚು ಪ್ರಖರವಾಗಿ ಎದ್ದು ಕಾಣುವುದು ಅವರ 'ಜೀವಧ್ವನಿ' ಕವನ ಸಂಕಲನದಲ್ಲಿ. ಈ ಸಂಕಲದ ಬಹುತೇಕ ಪದ್ಯಗಳು ೧೯೭೪ರಿಂದ ೧೯೮೦ರ ಮಧ್ಯಾವಧಿಯಲ್ಲಿ ಬರೆದಂತಹವುಗಳು. ಈ ಆರು ವರ್ಷಗಳು ನಮ್ಮ ರಾಷ್ಟ್ರ ರಾಜಕಾರಣದಲ್ಲಿ ಬಹು ಆತಂಕದ ದಿನಮಾನಗಳು. ರಾಜಕೀಯವೇ ನಮ್ಮ ಒಟ್ಟು ಬದುಕಿನ ಮೇಲೆ, ನಮ್ಮ ಚಿಂತನೆಗಳ ಮೇಲೆ ತೀವ್ರ ಪರಿಣಾಮ ಬೀರಿದ ಅವಧಿಯಿದು. ಕನ್ನಡದ ಒಟ್ಟು ಸಾಂಸ್ಕೃತಿಕ ಸಂದರ್ಭ, ಸಾಹಿತ್ಯ, ರಾಜಕೀಯ ಇತ್ಯಾದಿಗಳಲ್ಲಿ ಹಲವು ಸ್ಥಿತ್ಯಂತರಗಳನ್ನು ಪಡಕೊಂಡ ನಿರ್ಣಾಯಕ ಘಟ್ಟವಿದು. ಎಲ್ಲೋ ದೂರವಿದ್ದ ರಾಜಕೀಯ ನಮ್ಮ ಅಂತಃಸಾಕ್ಷಿಯನ್ನು, ಆತ್ಮಾಭಿಮಾನವನ್ನು ಕೆಣಕಿ, ವಿಚಿತ್ರ ರೀತಿಯಲ್ಲಿ ಪ್ರಚೋದಿಸಿದ ಒಂದಲ್ಲ ಒಂದು ಪ್ರತಿಕ್ರಿಯೆಗೆ ನಮ್ಮನ್ನು ದೂಡಿದ ಕಾಲವಿದು.

ಅದರಲ್ಲೂ ಸ್ವಾತಂತ್ರ್ಯವನ್ನು, ಅದರ ಪಾರಮ್ಯವನ್ನು ಎತ್ತಿ ಹಿಡಿಯುವ ಚಿಂತನಶೀಲರನ್ನು ಧೃತಿಗೆಡಿಸಿ ಚಿಂತೆಗೆ ತಳ್ಳಿದ ಪ್ರಕ್ಷುಬ್ಧ ವಾತಾವರಣವಿದು. ಕಣವಿಯವರ 'ಜೀವಧ್ವನಿ' ಸಂಕಲನದ ಬಹುತೇಕ ಮುಖ್ಯ ಪದ್ಯಗಳು ಆಕಾರ ಪಡೆದುಕೊಂಡದ್ದು ಇದೇ ಸಂದರ್ಭವಾಗಿದೆ. ಕಣವಿಯವರನ್ನು ಪರಂಪರಾಗತವಾಗಿ - ಸುಕುಮಾರ ಕವಿ, ಸೂಕ್ಷ್ಮ ಕವಿ, ಮಳೆಗಾಲದ ಕವಿ, ಸಾತ್ವಿಕ ಕವಿ- ಎಂದೆಲ್ಲಾ ಕರೆಯುತ್ತಿದ್ದವರ ನಂಬಿಕೆಗಳನ್ನು ಅಲ್ಲಾಡಿಸುವಂತಹ, ಮರು ಪ್ರಶ್ನಿಸುವಂತಹ ಬಹುತೇಕ ಪದ್ಯಗಳು

ಇಲ್ಲಿ ಕಾಣಸಿಗುತ್ತವೆ. ಒಂದು ತಣ್ಣನೆಯ ರೋಷ, ಸಿಟ್ಟು, ಆವೇಶ ಈ ಪದ್ಯಗಳ ಒಡಲೊಳಗೆ ಪ್ರವಹಿಸಿದೆ.

ಈ ಸಂಕಲನದಲ್ಲಿನ ಹತ್ತಕ್ಕೂ ಹೆಚ್ಚಿನ ಪದ್ಯಗಳಲ್ಲಿ ಆ ಕಾಲದ ರಾಜಕೀಯವನ್ನು ಒಂದು ರೀತಿಯಲ್ಲಿ ಮುಖಾಮುಖಿಯಾಗುವ, ಪ್ರತಿರೋಧಿಸುವ, ಮನುಷ್ಯನ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವ ಪದ್ಯಗಳಿವೆ. ಅವರ ಕಾವ್ಯದಲ್ಲಿ ನಮ್ಮ ಕಣ್ಣಿಗೆ ಬೀಳದ ವ್ಯಂಗ್ಯ ವಿಡಂಬನೆಯ ದನಿ ಒಡೆದು ಕಾಣುತ್ತದೆ. ಸಮಾಜ ಕುರಿತಾದ ಅಥವಾ ವ್ಯವಸ್ಥೆಯ ಕುರಿತಾದ ಅವರ ಅಸಹನೆ ಬೇರೆ ಪದ್ಯಗಳಲ್ಲಿ ವಿಷಾದವಾಗಿ ಪರಿವರ್ತನೆಗೊಂಡಿದ್ದರೆ ಇಲ್ಲಿನ ಪದ್ಯಗಳಲ್ಲಿ ಅದಕ್ಕೆ ರಾಜಕೀಯ ಸೋಂಕು ಇರುವ ಪರಿಣಾಮವಾಗಿ ಅದು ವಿಡಂಬನೆಯ ರೂಪ ತಾಳಿದೆ. 'ರಾಜಕೀಯ'ವೇ ಏಕಮೇವಾದ್ವಿತೀಯ ವಸ್ತುವಾದಾಗ 'ದನಿ' ಕೂಡ 'ವ್ಯಂಗ್ಯ' ತಾಳುವುದು ಅಂಥ ವಸ್ತುಗಳನ್ನೊಳಗೊಂಡ ಪದ್ಯಗಳ ಮನೋಧರ್ಮವೇ ಇರಬಹುದೇನೋ ? ಅಡಿಗರ 'ನೆಹರೂ ನಿವೃತ್ತರಾಗುವುದಿಲ್ಲ' ಲಂಕೇಶರ 'ದೇಶಭಕ್ತ' ಸೂಳೆಮಗನ ಗದ್ಯ ಗೀತೆ' ಚಂಪಾರ 'ಗಾಂಧಿ ಸ್ಮರಣೆ' ಸಿದ್ಧಲಿಂಗಯ್ಯನವರ ರಾಜಕೀಯ ಪದ್ಯಗಳು - ಹಾಗೂ ಎಪ್ಪತ್ತರ ಅವಧಿಯಲ್ಲಿ ಪ್ರಕಟವಾದ ಬಹುತೇಕ ಪದ್ಯಗಳು ಇಂಥ ಗುಣ-ಲಕ್ಷಣ ಪ್ರಕಟಿಸಿರುವುದನ್ನು ನಾವು ನೋಡಬಹುದು.

ಇಂಥ ಮನೋಧರ್ಮ ಕಣವಿಯವರಲ್ಲಿ ಹೇಗೆ ಅಭಿವ್ಯಕ್ತಗೊಂಡಿದೆ ಎಂದು ಚರ್ಚಿಸಲೋಸುಗ ಅವರ 'ಎದ್ದೀರಾ? ನೀವು 'ಎದ್ದೀರಾ!'ಎಂಬ ಪದ್ಯವನ್ನು ಪರಿಶೀಲಿಸಬಹುದು. ಪದ್ಯದ ಶೀರ್ಷಿಕೆಯಲ್ಲಿಯೆ ವಿಡಂಬನೆಯ ದನಿಯೊಂದು ಅಡಗಿದೆ. ಪ್ರಶ್ನಾರ್ಥಕ ಮತ್ತು ಆಶ್ಚರ್ಯಸೂಚಕ ಚಿನ್ಹೆಗಳಲ್ಲಿಯೇ ಪದ್ಯ ಮುಂದೆ ಕೇಳಬಹುದಾದ ಪ್ರಶ್ನೆ ಮತ್ತು ಆ ಪ್ರಶ್ನೆಗೆ ಹುಟ್ಟಿಕೊಳ್ಳಬಹುದಾದ ಉತ್ತರಗಳೆಲ್ಲ ಒಂದು ಸಂಶಯ ಹಾಗೂ ಅನುಮಾನಗಳನ್ನು ಹುಟ್ಟಿಸುವಂತಿವೆ. ಇಡೀ ಪದ್ಯ ಸಂಬೋಧನೆಯ ಧಾಟಿಯಲ್ಲಿ ಬೆಳೆದರೂ ಅದು ಎಲ್ಲಿಯೂ ಲಯ ತಪ್ಪುವುದಿಲ್ಲ ಮತ್ತು ವಾಚ್ಯತೆಯ ಮಟ್ಟಕ್ಕೆ ಇಳಿಯುವುದಿಲ್ಲ. ಈ ಲಯ-ಪ್ರಾಸಗಳೇ ಈ ಪದ್ಯವನ್ನು ವಾಚ್ಯಕೀಕರಣದಿಂದ ರಕ್ಷಿಸಿವೆ. ಇಡೀ ತುರ್ತು ಪರಿಸ್ಥಿತಿಯ ಸಂದರ್ಭವೇ - ಪ್ರಶ್ನೆಗಳು ಮತ್ತು ಆಶ್ಚರ್ಯ ಸೂಚಕಗಳು ನೀಡಿರುವ 'ಬದುಕ'ನ್ನು ಸಾಂಕೇತಿಸುತ್ತವೆ.

ಎದ್ದವೆದ್ದೆವು ಶರಣು
ಎದ್ದೀರಾ ? ನೀವು ಎದ್ದೀರಾ !

ಎಂಬ ಸಾಲುಗಳಿಂದ ಶುರುವಾಗುವ ಪದ್ಯದಲ್ಲಿ 'ಶರಣು' ಎಂಬ ಮಾತಲ್ಲಿಯೇ ಒಂದು 'ಐರನಿ' ಅಡಗಿದೆ. ಜನಸಾಮಾನ್ಯರು ಬಳಸುವ ಈ 'ಶರಣು' ಏಕಕಾಲಕ್ಕೆ ಎರಡು ಅರ್ಥಗಳನ್ನು ಸೂಚಿಸುತ್ತದೆ. ನಾವು ಎಚ್ಚರಗೊಂಡದ್ದಕ್ಕೆ ಅಥವಾ ನಮ್ಮನ್ನು ಎಚ್ಚರಗೊಳಿಸಿದ್ದಕ್ಕೆ 'ಶರಣು' ಅಥವಾ 'ಶರಣಾಗಿ' ಬಿಟ್ಟಿದ್ದೇವೆಂಬ ದೈನ್ಯ-ಕೂಡ ಈ ಸಾಲುಗಳಲ್ಲಿ ಮನೆ ಮಾಡಿದಂತಿದೆ. 'ಎದ್ದೀರಾ?' ಎಂಬ ಪ್ರಶ್ನೆ ನೇರವಾಗಿ ರಾಜಕೀಯ ನೇತಾರರನ್ನೆ ಸಂಬೋಧಿಸುತ್ತಾ 'ನೀವು ಎದ್ದೀರಾ!'

ಎಂಬ ಆಶ್ಚರ್ಯ ಸೂಚಕ ಚಿಹ್ನೆಯ ಮಾತಲ್ಲಿ ನೀವು ಇನ್ನೂ ಎದ್ದಿರಲಿಕ್ಕಿಲ್ಲ ಎಂಬ ಅನುಮಾನವನ್ನು ಹುಟ್ಟಿಸುವಂತಿದೆ.

ಮುಂದೆ ಬೆಳೆಯುವ ಪದ್ಯದ - ಪ್ರತಿ ಸ್ಟ್ಯಾಂಜಾದಲ್ಲೂ ಇದೇ ಸಾಲುಗಳನ್ನು ಪುನರುಕ್ತಗೊಳಿಸುವುದರಿಂದ ಈ ಭಾವಗಳು ಪುನಃ ಪುನಃ ಅನುರಣನಗೊಂಡು ಪದ್ಯ ಹೊಮ್ಮಿಸುವ ಭಾವಕ್ಕೆ ಒಂದು ತೀವ್ರತೆಯನ್ನು ಪ್ರಾಪ್ತಗೊಳಿಸುತ್ತಾ ಸಾಗುತ್ತದೆ.

**ದಿನವು ದಿಲ್ಲಿಗೆ ಹೋಗಿ**
**ಗುಲ್ಲು ಗದ್ದಲ ಹಾಕಿ**
**ಇಲ್ಲಿದ್ದವರ ಬಾಳೆ-ಬದುಕು ಕಲ್ಲಾಬಿಲ್ಲಿ**
**ಮಾಡೀರಾ ! ಕದ್ದು ಓಡೀರಾ ?**

'ದಿಲ್ಲಿ' - 'ಹಳ್ಳಿ'ಯನ್ನು ಮರೆಸಿ ಪ್ರತಿದಿನ ಅತ್ತ ಮುಖ ಮಾಡುವಂತೆ ನಮ್ಮ ರಾಜಕೀಯ ನೇತಾರರನ್ನು ಪ್ರಚೋದಿಸಿರುವುದನ್ನು ಪ್ರಸ್ತಾಪಿಸಿರುವ ಈ ಸಾಲುಗಳು ಅದರ ಭೀಕರ ಪರಿಣಾಮ ಜನತೆಯ ಮೇಲೆ ಆಗಿರುವುದನ್ನು ಒತ್ತಿ ಹೇಳುತ್ತದೆ. ಪ್ರಜೆಗಳೇ -ಪ್ರಭುಗಳಾಗ ಬೇಕಾದ ಸಂದರ್ಭದಲ್ಲಿ, ಪ್ರಜೆಗಳಿಗಿಂತ ಮುಖ್ಯ - ಅಧಿಕಾರ ಕೇಂದ್ರೀಕರಣ ಗೊಂಡಿರುವ 'ದಿಲ್ಲಿ' ಒಂದು ಸರ್ವಾಧಿಕಾರಿ ವ್ಯವಸ್ಥೆಯನ್ನು ಸಂಕೇತಿಸುತ್ತದೆ. ಅಲ್ಲಿಗೆ ಪ್ರತಿಯೊಬ್ಬ ಪ್ರಜಾ ಪ್ರತಿನಿಧಿ 'ಕದ್ದು' ಆದರೂ ಓಡಬೇಕಾಗಿದೆ.

**ಮೂವತ್ತು ವರುಷಾತು**
**ಮಾಡಿದ್ದೇ ಮಸಲತ್ತು**
**ಕೈಹಿಡಿದು ಕೇಳಾಕ ಯಾರಿಗೆ ಕುವ್ವತ್ತು ?**
**ಆಯೋಗ :ಸುಯೋಗ**
**ಒಂದೊಂದ ಹೊರಬಿತ್ತು**
**ಮುಚ್ಚೀರಾ ? ಕಣ್ಣು ತೆರೆದೀರಾ !**

ದೇಶಕ್ಕೆ ಸ್ವಾತಂತ್ರ್ಯ ಬಂದು ಮೂವತ್ತು ವರುಷಗಳಾಗಿದ್ದರೂ - ಅದರ ಫಲ ಪ್ರಯೋಜನ ಜನಸಾಮಾನ್ಯರಿಗೆ ದಕ್ಕದೆ, ಅದು ಕೇವಲ ಬೆರಳೆಣಿಕೆಯ ಮಂದಿಯ ಮಸಲತ್ತಿಗಷ್ಟೇ ಪ್ರಯೋಜನವಾಗಿದೆ. ಇಂಥ ಮಸಲತ್ತನ್ನು ಕೇಳುವ ತಾಕತ್ತು-ಧೈರ್ಯ ಕೂಡ ಜನರಿಗೆ ಇಲ್ಲದಂತಾಗಿದೆ. ರಾಜಕೀಯ ನಾಯಕರು ಪ್ರಶ್ನಾತೀತರಾಗುತ್ತಿದ್ದು ಆಗೊಮ್ಮೆ -ಈಗೊಮ್ಮೆ ಆಯೋಗಗಳು, ನ್ಯಾಯಾಲಯಗಳು ಸತ್ಯವನ್ನು ಹೊರ ಹಾಕುತ್ತಿದ್ದರೂ - ಅವುಗಳನ್ನೂ ಕೂಡ ಕಣ್ಣೆತ್ತಿ ನೋಡದ 'ಕುರುಡು'ತನವನ್ನು ಪ್ರಕಟಿಸುತ್ತಿರುವುದನ್ನು ಪದ್ಯದ ಈ ಸಾಲುಗಳು ಪ್ರಸ್ತಾಪಿಸುತ್ತಿವೆ.

**ತಿಂದದ್ದ ತಿಂದದ್ದು**
**ತಲೆಗೆ ಅಮಲೇರಿದ್ದು**
**ಕಾಡು ಪ್ರಾಣಿಗಳೆಲ್ಲ ಕಸರತ್ತು ಮಾಡಿದ್ದು**
**ಬುದ್ಧಿವಂತರ ಸದ್ದು**
**ಅಡಗೀಸಿ ಹಾಕಿದ್ದು**
**ಬಿಟ್ಟೀರಾ ? ಬಾಯಿ ಕಟ್ಟೀರಾ !**

ಧನಮದ, ಅಧಿಕಾರ ಮದಗಳು ಉಚ್ಛ್ರಾಯ ಸ್ಥಿತಿಗೆ ಏರಿದಾಗ ಮನುಷ್ಯ ಮೃಗವಾಗುತ್ತಾನೆ. ಅವನ ಪಿತ್ತ ನೆತ್ತಿಗೇರುತ್ತದೆ. ನ್ಯಾಯ-ಅನ್ಯಾಯದ ಭೇದ ಮರೆತು ಹೋಗುತ್ತವೆ. ತನಗೆ ಎದುರಾಡುವವನ್ನು ಹತ್ತಿಕ್ಕಲು ಮುಂದಾಗುತ್ತಾನೆ. ಇದು 'ತುರ್ತು ಪರಿಸ್ಥಿತಿ'ಯ ಸಂದರ್ಭದಲ್ಲಿ ನಿಚ್ಚಳವಾಗಿ ಕಂಡು ಬಂದ ದೃಶ್ಯ. ಬುದ್ಧಿವಂತರ ಬಾಯಿ ಕಟ್ಟಿ ಅವರ ಸದ್ದನ್ನು ಅಡಗಿಸಿದ್ದು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕಿದ್ದು- ಎಲ್ಲವನ್ನು ಈ ಸಾಲುಗಳು ನಮ್ಮ ನೆನಪಿಗೆ ತರುವಲ್ಲಿ ಯಶಸ್ವಿಯಾಗಿವೆ.

**ಕತ್ತಲು ಹಾಡೇ ಹಗಲು**
**ಇಡಿ ದೇಶದುದ್ದ**
**'ಎಲ್ಲರೂ ಮಲಗಿರಲು ಅವನೊಬ್ಬನೆದ್ದ'**
**ಬಿಡುಗಡೆ ತರಲೆಂದೆ**
**ಜೀವ ಹಿಡಿದಿದ್ದ**
**ತಿಳಿದೀರಾ ? ಮತ್ತೆ ಕಳೆದೀರಾ !**

ಎರಡನೆಯ ಸ್ವಾತಂತ್ರ್ಯ ಚಳುವಳಿ ಎಂದು ಕರೆಯಲಾಗುವ ಈ ಕಾಲಾವಧಿಯಲ್ಲಿ "ಎಲ್ಲರೂ ಮಲಗಿರಲು ಅವನೊಬ್ಬ ಎದ್ದ" ಎಂಬ ಸಾಲುಗಲು 'ಜೆ.ಪಿ.'ಯನ್ನು ನೆನಪಿಸುತ್ತವೆ. ಗಾಂಧಿಯ ಹೋರಾಟ ಮತ್ತು ಜೆ.ಪಿ. ಯವರ ಹೋರಾಟಗಳಲ್ಲಿ ಒಂದು ಸಮಾನಾಂತರ ಅಂಶಗಳಿವೆ. ಜೆ.ಪಿ. ಕೂಡ ಅನಾರೋಗ್ಯದ ನಡುವೆಯೂ ಹೋರಾಟದ ನೇತೃತ್ವವನ್ನು ವಹಿಸಿದರು. ಬಿಡುಗಡೆಯನ್ನೂ ತಂದರು. ಅಂತಹ ಅಮೂಲ್ಯ ಸ್ವಾತಂತ್ರ್ಯವನ್ನು ಮತ್ತೆ ಕಳೆಯಬೇಡಿ ಎಂಬ ವಿನಂತಿಯೂ ಈ ಸಾಲುಗಳಲ್ಲಿ ನಮಗೆ ಕಾಣಸಿಗುತ್ತದೆ.

**ಬಡವರ ಹೆಸರೀಲೆ**
**ತುಡುಗು ಮೇದವರೆಲ್ಲ**
**ಹಿಡಿಯಾಕ ಹೊಂಟಾರು ಗೆದ್ದ ಎತ್ತಿನ ಬಾಲ -**
**ಸುತ್ತು ಕಾವಲು ಇರಲಿ**
**ಆಗ್ಯಾರ ಕಂಗಾಲ**
**ಬಿಟ್ಟೀರಾ! ನೆನಪು ಇಟ್ಟೀರಾ ?**

ಇಂಡಿಯಾ ಅಂದರೆ ಇಂದಿರಾ-ಇಂದಿರಾ ಅಂದರೆ ಇಂಡಿಯಾ - ಎಂಬ ಬಹುಪರಾಕು ಸಂಸ್ಕೃತಿಯನ್ನು ಲೇವಡಿ ಮಾಡುತ್ತಾ- ಇಂಥವರು ಏನು ಮಾಡುತ್ತಾರೆ ಎಂಬುದನ್ನು ಹೇಳುವ ಈ ಕೆಳಗಿನ ಸಾಲುಗಳು ಇನ್ನೂ ಹೆಚ್ಚಿನ ಧ್ವನಿ ಸಾಧ್ಯತೆಯನ್ನು ಒಳಗೊಳ್ಳುವಂತಿವೆ.

**ನೆಟ್ಟಗs ನಡದರ**
**ಅಡಗಾಲು ಹಾಕಿ**
**ಕೆಡವಾಕ ನಿಂತಾರ ಅಲ್ಲಲ್ಲೆ ಜ್ಯಾಕಿ**
**ಅವರೂನು ಅಂದಾರು :**
**'ಭಾರತಮಾತಾಕಿ'**
**ಹೋದೀರಾ! ಮೋಸ ಹೋದೀರಾ!**

ಎಂದು ಜನರನ್ನು ಎಚ್ಚರಿಸುತ್ತದೆ. ಸದಾ ದೇಶದ್ರೋಹದ ಕೆಲಸ ಮಾಡುತ್ತಾ, ದುಷ್ಟಚಿಂತನೆ ನಡೆಸುತ್ತಾ ದೇಶಭಕ್ತಿಯ ನಾಟಕ ಮಾಡುವ 'ಭಾರತ ಮಾತಾಕಿ ಜೈ' ಎಂದು ಹುಸಿ ಘೋಷಣೆ ಮಾಡುವ ಜನರ ಬಗ್ಗೆ ಎಚ್ಚರವಾಗಿರಬೇಕಾದ ಅನಿವಾರ್ಯತೆಯನ್ನು ಈ ಸಾಲುಗಳು ಸೂಚಿಸುತ್ತವೆ.

**ಆದದ್ದು ಆಗ್ಹೋಯ್ತು**
**ಅಂದsರ ಹ್ಯಾಂಗ ?**
**ಹುಗಿದಿದ್ದ ಇತಿಹಾಸ ಹೊರಬಂತು ಮ್ಯಾಗ**
**ಭಂಡರು ನಿಂತಾರ**
**ಸೆರಗು ಮರೆಯಾಗ**
**ಕಟ್ಟೀರಾ ? ಹಿಡಿದು - ಬಿಟ್ಟೀರಾ !**

ರಾಜಕಾರಣಿಗಳು ಅಧಿಕಾರ ಮದದಲ್ಲಿ ಮಾಡಬಾರದ್ದನ್ನು ಮಾಡಿ, ತದನಂತರ ಏನೋ ಅಚಾತುರ್ಯವಾಯ್ತು ಎಂಬ ನುಡಿಯ ಕೆಳಗೆ ಜಾರಿಕೊಳ್ಳುತ್ತಾರಲ್ಲ ಇದು ತೀರಾ ಅಪಾಯಕಾರಿ ಮತ್ತು ಕೆಟ್ಟ ಸಂಪ್ರದಾಯಕ್ಕೆ ಕಾರಣವಾಗುತ್ತದೆ. ತಮ್ಮ ಕಾಲದ ಇತಿಹಾಸವನ್ನು ತಮ್ಮ ಮೂಗಿನ ನೇರಕ್ಕೆ ಬರೆದು ಅದನ್ನು ಕಾಲಗರ್ಭದಲ್ಲಿ ಹೂತಿಟ್ಟರೂ ಅದು ಹೊರ ಬಂದಾಗ ಏನಾಗುತ್ತದೆ! ಹೀಗೆ ಮಾಡಿದ ಭಂಡರೆಲ್ಲಾ ತಮ್ಮ ರಕ್ಷಣೆಗೆ ಯಾರನ್ನೋ ಆಶ್ರಯಿಸಲು ನೋಡುತ್ತಾರೆ. 'ಭಂಡರು ನಿಂತಾರು ಸೆರಗ ಮರೆಯಾಗ' ಎಂಬುದನ್ನು ದಿ. ಇಂದಿರಾಗಾಂಧಿಯವರನ್ನೂ ಅವರ ಭಟ್ಟಂಗಿಗಳನ್ನೂ ನಮ್ಮ ನೆನಪಿಗೆ ತರುತ್ತದೆ. 'ಕೈ' ಮತ್ತು 'ಸೆರಗು' ಪ್ರಬಲವಾಗಿದ್ದ ದಿನಗಳವು.

**'ಬಿದ್ದೀಯಬೆ ಮುದುಕಿ' -**
**ಪದವ ಹಾಡುದು ಬಾಕಿ**

**ಎಷ್ಟು ಇಟ್ಟರು ಕೂಡ ಬರವಲ್ದು ನಾಚಿಕಿ**
**ಬಾಲಬಡಕರಿಗಿನ್ನೂ**
**ದೆವ್ವsದ ಹೆದರಿಕಿ**
**ಬರತೀರಾ ? ಅಲ್ಲೆ ಇರತೀರಾ?**

ಎಂಥ ಸರ್ವಾಧಿಕಾರಿ ಮತ್ತು ದಮನಕಾರಿ ವ್ಯವಸ್ಥೆಗೂ ಒಂದು ಅಂತ್ಯವಿದ್ದೆ ಇರುತ್ತದೆ. ಅಧಿಕಾರ ಕಳಕೊಂಡ ಬಳಿಕ - ನಾಚಿಕೆ, ಅವಮಾನ, ಸೋಲು, ಮಾಡಿದ ಕೃತ್ಯಗಳು ಬೆನ್ನ ಹಿಂದಿನ ದೆವ್ವದಂತೆ ಕಾಡುವ ಹೆದರಿಕೆ ಎಲ್ಲವೂ ಒಮ್ಮೆಲೆ ಆವರಿಸುತ್ತವೆ. ಸಾಮಾನ್ಯವಾಗಿ ಅದು ದುರಂತ ಹಾಗೂ ನಗೆಪಾಟಲಿನದಾಗಿರುತ್ತದೆ. 'ಬಿದ್ದಿಯಬೆ ಮುದುಕಿ'ಯ ಮಾದರಿಯ ಸೋಲು ಅದು. ಇಷ್ಟಾದರೂ ಅವರಿಗೆ ನಾಚಿಕೆ ಇರಲಾರದು. ಹಿಂದಿನ ಠೇಂಕಾರ ಮತ್ತು ದರ್ಪ ಇದ್ದೇ ಇರುತ್ತದೆ. ಅಂಥಹವರನ್ನುದ್ದೇಶಿಸಿ-

'ಬರತೀರಾ ? ಅಲ್ಲೆ ಇರತೀರಾ!' ಎಂಬ ಆಹ್ವಾನವನ್ನೂ ಕವಿಗಳು ಎಚ್ಚೆತ್ತವರ ಪರವಾಗಿ ನೀಡುತ್ತಾರೆ.

**ಎದ್ದವೆದ್ದವು ಶರಣು, ಎದ್ದೀರಾ! ನೀವು ಎದ್ದೀರಾ ?**
**ಎದ್ದ ಮೇಲೂ ಬುದ್ಧಿ ಸ್ವಾಧೀನದಲ್ಲಿರಲಿ**
**ಹದ್ದು ಮೀರದ ಹಾಗೆ ನಮ್ಮೆಲ್ಲ ನಡವಳಿ**
**ತಿದ್ದೀರಾ ? ಜೋಕೆ, ಬಿದ್ದೀರಾ !**

ಪದ್ಯ ಅಂತ್ಯದಲ್ಲಿ - ಇದುವರೆಗೂ ವ್ಯಕ್ತ ಮಾಡಿದ ಒಂದು ಕಾಲದ ರಾಜಕೀಯ ವಿಪ್ಲವವನ್ನೂ ಅದರ ಮೂಲಕ ಗ್ರಹಿಸಿದ ಅರ್ಥವನ್ನೂ ಸೂತ್ರೀಕರಿಸಿ ಮೇಲಿನ ಸಾಲುಗಳಲ್ಲಿ 'ಪ್ರಜಾಪ್ರಭುತ್ವ'ದ ಯಶಸ್ಸಿಗೆ ಏನು ಅವಶ್ಯವಿದೆ ಎಂಬ ಪ್ರಮೇಯವನ್ನು ಮಂಡಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆ ಹಾಗೂ ಪ್ರಜಾ ಪ್ರತಿನಿಧಿ ಈರ್ವರೂ ಎಚ್ಚರದ ಸ್ಥಿತಿಯಲ್ಲಿದ್ದಾಗ ಮಾತ್ರ ಎಲ್ಲವೂ ಸ್ವಾಧೀನದಲ್ಲಿರಬಹುದು. ಇಲ್ಲವಾದಲ್ಲಿ ನಡವಳಿಕೆ ಹದ್ದು ಮೀರುವಂತಾಗುತ್ತದೆ.

ಪ್ರಜೆ ಮತ್ತು ಪ್ರಜಾಪ್ರತಿನಿಧಿ - ಪ್ರಜಾಪ್ರಭುತ್ವದ ಆಧಾರಸ್ತಂಭಗಳು. ಒಬ್ಬರನ್ನೊಬ್ಬರು ಸಮಾನ ನಿಯಂತ್ರಣ ಮತ್ತು ಸಮಾನ ನಿರ್ದೇಶನದಲ್ಲಿರುವುದು ಅವಶ್ಯವೆಂಬುದನ್ನು "ಎದ್ದ ಮೇಲೂ ಬುದ್ಧಿ ಸ್ವಾಧೀನದಲ್ಲಿರಲಿ", "ಹದ್ದು ಮೀರದ ಹಾಗೆ ನಮ್ಮೆಲ್ಲ ನಡವಳಿ ತಿದ್ದೀರಾ?" ಎಂದು ಹೇಳುತ್ತಾ ಪುನಃ ಇಬ್ಬರಿಗೂ ಅನ್ವಯಿಸುವಂತೆ ಪುನಃ "ಜೋಕೆ ಬಿದ್ದೀರಾ?" ಎಂದು ಎಚ್ಚರಿಸುತ್ತಿದೆ.

ಇಡೀ ಪದ್ಯದ ಆಶಯವನ್ನು ನೋಡಿದರೆ ಈ ಪದ್ಯವು ತುರ್ತು ಪರಿಸ್ಥಿತಿ ಅಂತ್ಯಗೊಂಡ ಅಲ್ಪಾವಧಿಯಲ್ಲಿಯೇ ರಚಿತಗೊಂಡಿದೆ. ಹೀಗಾಗಿ ಪದ್ಯವು ತುರ್ತು ಪರಿಸ್ಥಿತಿಯ ಪೂರ್ವ ಮತ್ತು ಉತ್ತರಾರ್ಧಗಳ ಸನ್ನಿವೇಶವನ್ನು ಹಿಡಿಯಲು ಪ್ರಯತ್ನಿಸಿದೆ. ಪದ್ಯದ ಈ ಆಶಯವೇ ಈ ಪದ್ಯದ

ಆಕೃತಿ ಮತ್ತು ತಂತ್ರವನ್ನು ನಿಯಂತ್ರಿಸಿದೆ. ಆ ಕಾಲದಲ್ಲಿ ಪ್ರಕಟಗೊಂಡ ಬಹುತೇಕ ಪದ್ಯಗಳ ಆಕೃತಿಯೇ ಈ ಸ್ವರೂಪದ್ದು. ಪ್ರಶ್ನೆ, ಅನುಮಾನ, ಸಂಶಯ, ಸಿಟ್ಟು, ಸಿನಿಕತನ, ಭಯ ಇತ್ಯಾದಿಗಳೇ ಕಾವ್ಯ ಮೇಲ್ಮೆಯನ್ನು ಆಕ್ರಮಿಸಿದ್ದ ಸಂದರ್ಭವದು. ಕಣವಿಯವರು ಈ ಸಂದರ್ಭದಲ್ಲಿ ಹೇಗೆ ಸ್ಪಂದಿಸಿದರು ಎಂಬುದನ್ನು ಸ್ಫುಟವಾಗಿ ತೋರುವ ಪದ್ಯವಿದು.

ಸಮಕಾಲೀನ ರಾಜಕೀಯಕ್ಕೆ ಕಟ್ಟುಬಿದ್ದು ಕವಿತೆಗಳಿಗೆ ಕಲ್ಪಕತೆ, ಭಾವುಕತೆ, ದಾರ್ಶನಿಕತೆ, ವೈಶಾಲ್ಯತೆ - ಸಾರ್ವತ್ರಿಕತೆಗಳು ಲಭ್ಯವಾಗುವುದು ಅಪರೂಪ. ತತ್ಕಾಲೀನತೆಯ ಯಶಸ್ಸು ಮತ್ತು ಸಿದ್ಧಿಯೇ ಮುಖ್ಯವಾದ ಇಂಥ ಪದ್ಯಗಳು ಕಾಲದ ಹರಹಿನಲ್ಲಿ ಬಹುಕಾಲ ಉಳಿದರೆ ಆದು ಆ ಕವಿತೆಯ ಒಟ್ಟು ಸಾಧನೆಯ ಭಾಗ್ಯದಿಂದ ಮಾತ್ರ. ಚೆನ್ನವೀರ ಕಣವಿಯವರು ಅಂದಂದಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ತುರ್ತುಗಳಿಗೆ ನಿರಂತರವಾಗಿ ಪ್ರತಿಕ್ರಿಯಿಸುತ್ತಲೇ ಬಂದವರು. ಅವರ ಪ್ರತಿಕ್ರಿಯೆ ಅವರ ಪದ್ಯದ ಹಾಗೆ ಅಥವಾ ಅವರ ಪದ್ಯದ ಹಾಗೆ ಪ್ರತಿಕ್ರಿಯೆಯೇನೋ ಎನ್ನುವಂಥ ವಿಚಿತ್ರ ಸಾಮ್ಯತೆ ಇದೆ. ಸಾಮಾಜಿಕ ನಿರೀಕ್ಷೆ ಮತ್ತು ಒತ್ತಡಗಳನ್ನು ಕೂಡ ಹೇಗೆ ಉತ್ತಮ ಕಾವ್ಯವನ್ನಾಗಿ ಮಾಡಲು ಸಾಧ್ಯ ಎಂದು ಉದಾಹರಣೆಯಾಗಿ ತೋರಲು 'ಎದ್ದೀರಾ ? ನೀವು ಎದ್ದೀರಾ!' ಎಂಬ ಪದ್ಯವನ್ನು ಸದಾ ನಮ್ಮ ಮುಂದಿಟ್ಟುಕೊಳ್ಳಬಹುದು.

**ಪ್ರಹ್ಲಾದ ಅಗಸನಕಟ್ಟೆ**

# ೫೧. ಅದ್ದ ಮಳೆ

ಅದ್ದ ಮಳೆ ಹೊಡೆದು ಹೋಯಿತು-
ಗುಡ್ಡದಾಚೆಗೆ, ಹೊಲ-ಗದ್ದೆಗಳ ದಾಟ, ಬೇರೂರಿಗೆ.
ಅಲ್ಲಿಯೂ ನಮ್ಮಂತೆ ಚಡಪಡಿಸಿ, ಉಸಿರು
ಕಟ್ಟಿ ಕುಳಿತಿರಬಹುದು ಜನರು ; ಹೊಚ್ಚ ಹೊಸ ಮಳೆಗೆ.

ಉತ್ತರದ ಕಡೆಯಿಂದ ಬೀಸಿ ಬಂದಿತು ಗಾಳಿ
ದಕ್ಷಿಣಕೆ, ಮೋಡದೊಳಗೊಂದು ಮೋಡ
ಉದ್ಭವಿಸಿ ಆಕಾಶವನ್ನೆಲ್ಲ ವ್ಯಾಪಿಸಿತು
ನೋಡ ನೋಡುತ್ತ ನೆಲವ ಗದಗಮಿಸಿತು.

ಕೋಲ್ಮಿಂಚು ಕೊರೆದು ಕೋರೈಸಿ, ಗುಡುಗು ಹುಟ್ಟಿಸಿ ನಡುಗು
ಎಲ್ಲೊ ಬಡಿಯಿತು ಸಿಡಿಲು ; ಬಟಾ ಬಯಲು
ನಡುವೆ ತಣ್ಣಗೆ ತಂಪು, ನೀರೆಲ್ಲ ಕೆಂಪು ಹೊನಲು .
ಬಿರುಬಿಸಿಲಿನಾಳಿಕೆ ಬಗ್ಗು ಬಡಿದು ಹೊರಬಿದ್ದ ಬಿರುಗಾಳಿ
ಆಂದೋಲನದ ಅಮಾಯಕ ತಿರುವು; ಹೊಲಸೆಲ್ಲ
ತೊಳೆದು ಹೊಳೆದಿಹುದು ಹೊಸ ಜೀವನದ ಕಾಂತಿ.
ವಾತಾವರಣದಲ್ಲಿ ನಿರ್ಭೀತಿ, ನಿರಂಕುಶಮತಿ,.

ಕಳೆದ ಆರು ದಶಕಗಳಿಂದ ಕಾವ್ಯ ಮಾಧ್ಯಮದಲ್ಲಿ ನಿರಂತರವಾಗಿ ಕೃಷಿ ಮಾಡುತ್ತ ಬಂದಿರುವ ಕವಿಗಳಲ್ಲಿ ಕಣವಿಯವರು ಮುಖ್ಯರಾದವರು. ಅರ್ಧಶತಮಾನಕ್ಕೂ ಮಿಕ್ಕಿದ ಈ ಅವಧಿಯಲ್ಲಿ ದೇಶ ಕಂಡ ಅನೇಕ ಮಹತ್ವದ ಘಟನೆಗಳಿಗೆ ಅವರ ಕಾವ್ಯ ಅರ್ಥಪೂರ್ಣವಾಗಿ ಸ್ಪಂದಿಸುತ್ತ ಬಂದಿದೆ. ಅಂಥ ಘಟನೆಗಳಲ್ಲಿ ತುರ್ತು ಪರಿಸ್ಥಿತಿಯ ಕಾಲ ಮುಖ್ಯವಾದದ್ದಾಗಿದೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ಹೊರತುಪಡಿಸಿದರೆ, ಭಾರತೀಯರನ್ನು ಅತ್ಯಂತ ಆಳದಲ್ಲಿ ಅಲ್ಲೋಲಕಲ್ಲೋಲಗಳೊಳಿಸಿದ ಸಂದರ್ಭವೆಂದರೆ ತುರ್ತು ಪರಿಸ್ಥಿತಿಯ ಕಾಲವೇ ಆಗಿತ್ತು. ಒಂದು ಪರಕೀಯರ ವಿರುದ್ಧದ ಸಂಗ್ರಾಮವಾದರೆ ಇನ್ನೊಂದು ನಮ್ಮವರ ವಿರುದ್ಧವೇ ಹೋರಾಟ ನಡೆಸಬೇಕಾಗಿ ಬಂದದ್ದು ಆಗಿತ್ತು. ೧೯೭೫ರ ತುರ್ತು ಪರಿಸ್ಥಿತಿ ಕಡಿಮೆಯ ಅವಧಿಯದ್ದಾದರೂ ಅದರ ಕರಾಳ ಅನುಭವ ಮಾತ್ರ ದೀರ್ಘಕಾಲ ದೇಶದ ಜನತೆಯನ್ನು ದುಸ್ವಪ್ನವಾಗಿ ಕಾಡುವಂಥದ್ದಾಗಿದೆ.

ಜನತೆಯ ಮನಸ್ಸನ್ನು ಅತ್ಯಂತ ಆಳದಲ್ಲಿ ಕಲಕಿದ ತುರ್ತು ಕಾಲದ ಅನುಭವಗಳನ್ನು ಕುರಿತು ಅನೇಕ ಕವಿಗಳು ಕಾವ್ಯವನ್ನು ರಚಿಸಿದ್ದಾರೆ. ಆದರೆ ಕಣವಿ ಅವರು ಈ ಸಂದರ್ಭವನ್ನೇ ಕುರಿತು ಆರು ಕವನಗಳನ್ನು ರಚಿಸಿರುವುದು ವಿಶೇಷವಾಗಿದೆ. ಅವುಗಳಲ್ಲಿ ನಾಲ್ಕು ಕವನಗಳು ಕಳೆದುಹೋದ ಆ ಕಾಲದ ಕರಾಳ ಅನುಭವವನ್ನು ಮೆಲುಕಾಡಿಸುವಂಥವಾಗಿವೆ. ಈ ವಿಷಯಕ್ಕೆ ಸಂಬಂಧಿಸಿದ ಕಣವಿ ಅವರ ಎಲ್ಲ ಕವನಗಳು ಅವರ "ಜೀವಧ್ವನಿ" (೧೯೮೧) ಸಂಕಲನದಲ್ಲಿ ಸಂಕಲಿತವಾಗಿವೆ, "ಇಳಿದ ಬೆಲೆ", 'ಒಂದು ವ(ಂ)ಚನ" "ಒಣನಿಗ್ಗರ" "ಆದರೂ ಅವನ ನೆನಪು" ಇವು ತುರ್ತು ಸಂದರ್ಭದಲ್ಲೇ ರಚಿತವಾದ ಕವನಗಳಾದರೆ "ಎದ್ದೀರಾ? ನೀವು ಎದ್ದೀರಾ!" "ಅಡ್ಡ ಮಳೆ" ಕವನಗಳು ತುರ್ತು ಕಾಲದ ಅನಂತರ ರಚಿತವಾದವುಗಳಾಗಿವೆ. ಮೊದಲಿನ ನಾಲ್ಕೂ ಕವನಗಳು ಚಂಪಾ ಅವರಿಂದ ಈಗಾಗಲೇ ವಿಶ್ಲೇಷಣಗೊಳಗಾಗಿರುವುದು ಕಂಡುಬರುತ್ತದೆ.೧

ತುರ್ತು ಪರಿಸ್ಥಿತಿಯ ಮೂಲಕವಾಗಿ ದೇಶದಲ್ಲಿ ಸ್ಮಶಾನಮೌನ ಆವರಿಸಿದ ಸಂದರ್ಭದಲ್ಲಿ ಜಯಪ್ರಕಾಶ ನಾರಾಯಣ ಅವರು ಅನಾರೋಗ್ಯದಿಂದ ಜರ್ಜರಿತರಾಗಿದ್ದರೂ ನವನಿರ್ಮಾಣ ಕ್ರಾಂತಿಯ ಕರೆಯನ್ನು ನೀಡಿದರು. ಅದು ಮೊಟ್ಟ ಮೊದಲು ಗುಜರಾತ್‌ದಲ್ಲಿ ವಿದ್ಯಾರ್ಥಿಗಳ ಚಳುವಳಿಯಾಗಿ ಪ್ರಾರಂಭವಾಗಿದ್ದು, ಬಿಹಾರ, ಉತ್ತರಪ್ರದೇಶಗಳಲ್ಲಿ ಜನಾಂದೋಲನವಾಗಿ ಮಾರ್ಪಟ್ಟು ಇಡೀ ದೇಶವನ್ನೇ ಬಿರುಗಾಳಿಯಂತೆ ಆವರಿಸಿ ಬಿಡುಗಡೆಗೆ ಕಾರಣವಾದದ್ದು ಭಾರತದ ಸಂದರ್ಭದಲ್ಲೊಂದು ವಿಸ್ಮಯಕಾರಿಯಾದ ಘಟನೆಯಾಗಿದೆ. ಈ ಘಟನೆಯ ವಿಶಿಷ್ಟವಾದ ಅನುಭವವನ್ನೇ ಕಣವಿಯವರು ತಮ್ಮ "ಅಡ್ಡ ಮಳೆ" ಎಂಬ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

"ಅಡ್ಡ ಮಳೆ" ಇನ್ನೂ ಮಳೆಗಾಲ ಪ್ರಾರಂಭವಾಗುವ ಪೂರ್ವದಲ್ಲೇ ಬಿರುಬೇಸಗೆಯ ಝಳದಿಂದ ಭೂಮಿ ತತ್ತರಿಸಿ ನೆಲಜಲ ಕಾಯ್ದು ಮೋಡಗಟ್ಟಿ ಒಮ್ಮೆಲೆ ಗುಡುಗು ಸಿಡಿಲುಗಳಿಂದ ಅಬ್ಬರಿಸಿ ದುಮುಗಟ್ಟು ಹೊಡೆದು ಹೋಗುವಂಥದು. ಇಂಥ ಮಳೆಯ ಅನಿರೀಕ್ಷಿತ ಆಗಮನ ಆರ್ಭಟ ರಭಸಗಳು ಅಷ್ಟಾಗಿ ಮಳೆಗಾಲದ ಮಳೆಯಲ್ಲಿ ಕಂಡುಬರುವುದಿಲ್ಲ. ತುರ್ತು ಕಾಲದ ಈ ಅನಿರೀಕ್ಷಿತವಾದ ಜನಾಂದೋಲನದ ಅಬ್ಬರದ ಅಲೆಯನ್ನು "ಅಡ್ಡ ಮಳೆ" ಹುಟ್ಟಿದ ಸಂದರ್ಭ, ಅದರ ಸ್ವರೂಪ, ಕ್ರಿಯೆ ಆದ ಪರಿಣಾಮಗಳನ್ನು ನವನಿರ್ಮಾಣ ಕ್ರಾಂತಿಯ ಅಲೆ ಹುಟ್ಟಿದ ಹಿನ್ನೆಲೆ, ಅದು ರೂಪುಗೊಂಡ ಬಗೆ ಅದರ ಆವೇಗ ಪರಿಣಾಮಗಳೊಂದಿಗೆ ಸಂಲಗ್ನಗೊಳಿಸಿ ಕಣವಿ ಅವರು ಅಭಿವ್ಯಕ್ತಿಯನ್ನು ಸಾಧಿಸಿರುವ ರೀತಿ ವಿಶೇಷವಾಗಿದೆ.

ತುರ್ತು ಕಾಲದ ಉಸಿರುಗಟ್ಟಿಸುವ ಆ ವಾತಾವರಣದ ವಿರುದ್ಧದ ಕಸಿವಿಸಿ ಹೇಗೆ ಹಂತ ಹಂತವಾಗಿ ವ್ಯಾಪಿಸಿ ಒಂದು ದೊಡ್ಡ ಜನಾಂದೋಲನವಾಗಿ ರೂಪುಗೊಂಡು ಪರಿಣಾಮ ಬೀರಿತೆಂಬುದನ್ನು ಕಣವಿ ಅವರು:

**ಅಲ್ಲಿಯೂ ನಮ್ಮಂತೆ ಚಡಪಡಿಸಿ, ಉಸಿರು**
**ಕಟ್ಟಿ ಕುಳಿತಿರಬಹುದು ಜನರು; ಹೊಚ್ಚ ಹೊಸ ಮಳೆಗೆ.**

ಎಂಬಲ್ಲಿ ಸೂಚಿಸಿದ್ದಾರೆ. ಕಣವಿ ಅವರ ಈ ಕವನದ ಒಂದು ವಿಶೇಷತೆಯೆಂದರೆ; ಒಂದು ಇಡೀ ದೇಶವ್ಯಾಪಿ ನಡೆದ ವ್ಯಾಪಕವಾದ ಜನಾಂದೋಲನವನ್ನು ಆಪ್ತವಾದ ಒಂದು ಗ್ರಾಮ ಸಮುದಾಯದ ಸಣ್ಣ ಭಿತ್ತಿಯಲ್ಲಿ ಚಿತ್ರಿಸಿ ನಿಕಟವಾದ ಅನುಭವವನ್ನು ತಂದುಕೊಡಲು ಪ್ರಯತ್ನಿಸಿರುವುದು ಮೇಲಿನ ಸಾಲುಗಳಲ್ಲಿ "ಅಡ್ಡ ಮಳೆ"ಯ ಪ್ರಾರಂಭ, ಅದರ ಗತಿ, ನಿರೀಕ್ಷೆಗಳು ಚಿತ್ರಿತವಾಗಿದ್ದರೆ, ಜೆ. ಪಿ. ಅವರಿಂದ ಉಂಟಾದ ನವನಿರ್ಮಾಣ ಕ್ರಾಂತಿಯ ಅಲೆ ಉತ್ತರದಿಂದ ದಕ್ಷಿಣದ ರಾಜ್ಯಗಳಿಗೂ ವ್ಯಾಪಿಸುತ್ತ ಹೋದದ್ದನ್ನು:

**ಉತ್ತರದ ಕಡೆಯಿಂದ ಬೀಸಿ ಬಂದಿತು ಗಾಳಿ**
**ದಕ್ಷಿಣಕೆ.**

ಎಂಬ ಮಾತುಗಳಲ್ಲಿ ಸೂಚಿಸಿದ್ದಾರೆ. ಕ್ರಾಂತಿಯ ಕನಸು ಯುವ ಸಮುದಾಯದಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ಗುಂಪಿನಿಂದ ಗುಂಪಿಗೆ ಬೆಳೆಯುತ್ತ ದೊಡ್ಡ ಸಮೂಹ ಚಳುವಳಿಯಾಗಿ ಸ್ಫೋಟಗೊಂಡ ಬಗೆಯನ್ನು:

**ಮೋಡದೊಳಗೊಂದು ಮೋಡ**
**ಉದ್ಭವಿಸಿ ಆಕಾಶವನ್ನೆಲ್ಲ ವ್ಯಾಪಿಸಿತು.**

ಎಂದು, ಆಕಾಶ ವ್ಯಾಪಿಸಿ, ಭೂಮಿಯನ್ನೇ ಗದಗಮಿಸಿದ ಅದರ ಬೃಹತ್ ಸ್ವರೂಪದಲ್ಲಿ ಕಟ್ಟಿಕೊಟ್ಟಿದ್ದಾರೆ. ಹಂತ ಹಂತವಾಗಿ ಇಡೀ ದೇಶವನ್ನೇ ವ್ಯಾಪಿಸಿದ ಕ್ರಾಂತಿಯ ರಭಸ ಮತ್ತು ಪರಿಣಾಮಗಳು ಕಂಡು ಬಂದ ಬಗೆ ಈ ರೀತಿಯಾಗಿದೆ:

**ಕೋಲ್ಮಿಂಚು ಕೊರೆದು ಕೋರೈಸಿ, ಗುಡುಗು ಹುಟ್ಟಿಸಿ ನಡುಗು**
**ಎಲ್ಲೋ ಬಡಿಯಿತು ಸಿಡಿಲು : ಬಟಾಬಯಲು**

ಸಿಡಿಲು ಬಡಿದು ಎಲ್ಲ ಬಟ್ಟ ಬಯಲಾಯಿತು ನಿಜ, ಆದರೆ ಸಿಡಿಲು ಎಲ್ಲಿ ಬಡಿಯಿತು ತಿಳಿಯುವುದಿಲ್ಲ ಎಂದಿರುವುದು, ಆಂದೋಲನ ದುರಾಡಳಿತದ ಮೇಲೆ ಮಾಡಿರುವ ಮರ್ಮಾಘಾತವನ್ನು ಸೂಚಿಸುತ್ತದೆ. ತುರ್ತು ಕಾಲದ ಆಳ್ವಿಕೆಯ ದೌರ್ಜನ್ಯ ಅದನ್ನು ಪ್ರತಿಭಟಿಸಿ ನಡೆದ ಜನಾಂದೋಲನ ಅನಿರೀಕ್ಷಿತ ತಿರುವು ತೆಗೆದುಕೊಂಡ ರೀತಿಯನ್ನು ಬಗ್ಗುಬಡಿದು ಬಿರುಗಾಳಿ ಹೊರಬಿದ್ದ ಚಿತ್ರದಲ್ಲಿ ವ್ಯಕ್ತಪಡಿಸಲಾಗಿದೆ.

**ನಡುವೆ ತಣ್ಣಗೆ ತಂಪು, ನೀರೆಲ್ಲ ಕೆಂಪು ಹೊನಲು.**
**ಬಿರುಬಿಸಿಲಿನಾಳಿಕೆ ಬಗ್ಗು ಬಡಿದು ಹೊರಬಿದ್ದ ಬಿರುಗಾಳಿ**
**ಆಂದೋಲನದ ಅಮಾಯಕ ತಿರುವು ;**

ಕ್ರಾಂತಿಯ ಸಂದರ್ಭದ ಹಿಂಸೆ, ರಕ್ತಪಾತ, ತನ್ಮೂಲಕ ದುರಾಡಳಿತದ ಹೊಲಸೆಲ್ಲ ತೊಳೆದು ಕೊಚ್ಚಿ ಹೋಗಿರುವುದನ್ನು ಕೆಳಗಿನ ಸಾಲುಗಳು ಚಿತ್ರಿಸುತ್ತವೆ:

**.... ಹೊಲಸೆಲ್ಲ**
**ತೊಳೆದು ಹೊಳೆದಿಹುದು ಹೊಸ ಜೀವನದ ಕಾಂತಿ**
**ವಾತಾವರಣದಲ್ಲಿ ನಿರ್ಭೀತಿ, ನಿರಂಕುಶಮತಿ.**

ಒಟ್ಟು ಹೋರಾಟದ ಪರಿಣಾಮದಿಂದ 'ತಣ್ಣಗೆ ತಂಪು" "ಹೊಸ ಜೀವನದ ಕಾಂತಿ" ಮೂಡಿರುವುದನ್ನು ಇಡೀ ದೇಶದಲ್ಲಿ "ನಿರ್ಭೀತಿ" "ನಿರಂಕುಶಮತಿತ್ವ" ರೂಪುಗೊಂಡಿರುವುದನ್ನು ಉಲ್ಲೇಖಿಸಲಾಗಿದೆ. ಮನುಷ್ಯನ ಮೂಲಭೂತ ಹಕ್ಕುಗಳಿಗೇ ಸಂಚಕಾರ ಬಂದು ದೇಶವನ್ನೇ ಕತ್ತಲೆಯಲ್ಲಿ ನೂಕಿದ ಸಂದರ್ಭದಲ್ಲಿ ಜನತೆಯಲ್ಲಿ ಮುಖ್ಯವಾಗಿ ಯುವ ಜನಾಂಗದಲ್ಲಿ ನಿರ್ಭೀತಿ, ನಿರಂಕುಶಮತಿತ್ವಗಳು ಮೂಡಿ ಬಂದಿರುವುದನ್ನು "ಅಡ್ಡಮಳೆ," ಪ್ರತಿಮೆಯಲ್ಲಿ ವ್ಯಕ್ತಪಡಿಸಿರುವುದು ಕಣವಿ ಅವರ ಕಾವ್ಯದ ಹೆಗ್ಗಳಿಕೆಯಾಗಿದೆ. ಕವಿಯಾದವನ ಅಭಿವ್ಯಕ್ತಿಯ ಮಾರ್ಗ ಅನ್ಯೋಕ್ತಿಯದು. ಅವನು ಉಪಮೆ, ರೂಪಕ, ಪ್ರತಿಮೆಗಳಲ್ಲು ಮಾತನಾಡುವುದು ಅನಿವಾರ್ಯವಾಗಿರುತ್ತದೆ. ಕಣವಿ ಅವರ ಉಳಿದ ತುರ್ತು ಕವನಗಳಿಗೆ ಹೋಲಿಸಿದರೆ "ಅಡ್ಡಮಳೆ" ಅಂಥ ಯಾವುದೇ ವ್ಯಂಗ್ಯ, ಕಟಕಿಗಳಿಲ್ಲದೆ ಅತ್ಯಂತ ಸಂಯಮದಿಂದ ಸ್ವಯಂ ಪೂರ್ಣವಾದ ಪ್ರತಿಮೆಯನ್ನು ಕಟ್ಟಿಕೊಡುವ ಮೂಲಕವಾಗಿ ಸಾಂದ್ರವಾಗಿ ಅನುಭವವನ್ನು ಕೊಡುವಲ್ಲಿ ಯಶಸ್ವಿಯಾಗಿದೆಯೆಂದೇ ಹೇಳಬಹುದು.

**ಸಿ.ವಿ. ಪ್ರಭುಸ್ವಾಮಿಮಠ**

# ೫೨. ಧ್ವನಿ - ದನಿ

ಮುಂಜಾವಿನಿಂದ ಮುಂಜಾವು ; ಬಗೆ ಬಗೆಯ ಧ್ವನಿ-
ಗಳೇರಿಳಿವು ಋತು ಋತುವಿಗೊಂದು ಬನಿ.
ಎಷ್ಟೋ ದನಿಗೆ ಕಿವುಡರು ನಾವು ಕಂಡು ಕಂಡೂ.
ಮಹದನುಭವವ ಕಳೆದುಕೊಂಡು ಹಿಂದು-ಮುಂದಿರದ
ಸರಪಳಿ ತುಂಡು.

ತನಿಗೊಂಡ ಮಕ್ಕಳುಲಿ : ತಾಯಿ- ಮಗು ಸೆಳೆತ
ಯುಗ ಯುಗದ ಮಮತೆ ಓತಪ್ರೋತ, ಆಗಾಗ
ಬದುಕಿನ ಬಿರುಕಿನಿಂದೊಗೆವ ಅಸಹಾಯ ಕ್ಷೀಣ ಧ್ವನಿ
ಮಳೆ-ಗಾಳಿ ಹೊಯ್ಲು, ಉರುಳುರುಳಿ ನರಳುವ ರೈಲು ; ಅಬ್ಬರಿಸಿ
ನುಗ್ಗು -ತಡಸಲು, ಮೌನದಲಿ ಕಿನಿಗೊಟ್ಟ ಬಟ್ಟ ಬಯಲು.

ಸ್ನೇಹ ಕೂಟದ ಬೆಚ್ಚಗಿನ ದನಿ, ಸಂತಸದ ತುಂಬು -ತುಳುಕು.
ಪಯಣದಲಿ ಕೊಲ್ಹಾರಿ ಬಂಡಿಯ ಲಯದ ಗಿಲಕ್ ಗಿಲಕು.
ಟಾರು ಬೀದಿಯಲಿ ಟಾಂಗಾ ಕುದುರೆ ಟಕಕ್ ಟಕಕು.
ಮಟಮಟ ಮಧ್ಯಾಹ್ನ ಗೂಡಿನಲಿ ಗುಬ್ಬಿ -ಗುಟುಕು.

ಬಿರುಗಾಳಿ ಮುನ್ನ ಮರಮರವ ಹೊಕ್ಕು ತೀಡುವ ಗಾಳಿ,
ಭೆಟ್ಟಿಗೆ ಬರುವ, ಮರೆತ ಗೆಳೆಯನ ತ್ವರಿತ ಫೋನಿನುಲಿ.
ಹೊರಗಿನಿಂದ ಬಂದ ಮನೆಯವರ ನಗುಮೊಗದ ಕಲಕಲ ಮುದ್ದು.
ಬೇಲಿಯಾಚೆಗೆ ಬಣ್ಣ ಬಣ್ಣದ ಹಕ್ಕಿ ಹಾರಿದ ರೆಕ್ಕೆ ಸದ್ದು.
ನಿದ್ದೆಗೂಸಿನ ಉಸಿರಾಟ ನಿರಾಳ ಸೂಕ್ಷ್ಮ ಸೂತ್ರ ಧ್ವನಿ.

ಇರುಳಿನಲಿ ಹೊರಗೆ ಸಣ್ಣಗೆ ಬರುವ ಮಳೆಯು ಹನಿ.
ಅಟ್ಟದ ಮೇಲೆ ಮೇಷ್ಟ್ರು ಮಕ್ಕಳಿಗೆ ಹೇಳುವ ಗಣಿತ
ಹೊತ್ತುಗಳೆಯದೆ ಉಣ್ಣೆಯಂಗಿಯು ಹೆಣೆವ ಸೂಜಿಗಳ ಕ್ವಣಿತ
ಶಬ್ದಗಳ ಹುಡುಹುಡುಕಿ ಮೌನ ಭೇದಿಸುವ ಪ್ರೇಮಿಗಳ ಎದೆಯ ಮಿಡಿತ.

ದಂಡೆಗಪ್ಪಳಿಸಿ, ನಿಧಾನ ಹಿಂದೆ ಸರಿಯುವ ಕಡಲ ತೆರೆ.
ಬಳೆಬಳೆಯಾಗಿ ಬಂದು ಸುಳಿದು ಸಿಂಗರಿಸುವ ಕೆರೆಯ ಸಣ್ಣ ಅಲೆ.
ನೆರೆಮನೆಯ ಜಗಳ ಕದ್ದು ಕೇಳುವ ಕಿವಿಗೆ ಮುತ್ತಿನೋಲೆ.
ಆಕಾಶದುದ್ದ ಕೊರೆವ ಹದ್ದು-ಕಾಗೆಗಳ ಕರ್ಕಶ ಧ್ವನಿ,
ಸುಗ್ಗಿ ಮಾಡುವ ರೈತರುತ್ಸಾಹ ಕೇಕೆ. ಹೊಲದ ಬದುವಿನಲಿ
ಮೇಯುವ ದನದ ಕೊರಳ ಕಿಂಕಿಣಿ ಸರಣಿ, ಕರುವಿನಂಬಾ ದನಿ.

ಅಡುಗೆ ಮನೆಯಲಿ ತಾಟು-ಲೋಟಗಳ ಭರವಸೆಯ ಸಿಂಪನಿ.
ಮಧ್ಯಾಹ್ನ ಎದ್ದು ಆಕಳಿಸಿದಾಗ ಚಹದ ಕಪ್ಪು-ಬಸಿ ಒಪ್ಪಾಗಿ ಟಿಂಟಿಣಿ ದನಿ.
ಮಲಗಿ ಓದುತ್ತ ಕಾದಂಬರಿಯ ಕುತೂಹಲದ ಪುಟ ಪುಟ ದನಿ.
ತಲ್ಲೀನ ಕುಳಿತು ಗಾಯಕನ ಹಿಂದೆ ಮಾಯಕದ ತಂಬೂರಿ
ನರನರವ ಮೀಟಿ ಹೊರಡಿಸುವ ಜೀವಧ್ವನಿ.

ನಿರಂತರ ಉರುಳುರುಳಿ ಮೊರೆವ ಸಮುದ್ರ;
ಬಾನಿನಲಿ ಮತ್ತೆ ಗುಡುಗಿನ ದನಿ, ಎಲ್ಲಿ
ಏಕಾಂತದಲಿ ಮಿಡಿದು ಮಾರ್ದನಿಗೊಳುವ ನನ್ನೊಳದನಿ?
ಲೋಕಾಂತದಲಿ ಧ್ವನಿಗಳೇರಾಟ ಚೀರಾಟಗಳ ನಡುವೆ
ನಾನು ಮೌನಿ.

ಕಳೆದ ನಾಲ್ಕು ದಶಕಗಳಲ್ಲಿ ಕಣವಿಯವರ ಅನೇಕ ಕವನಗಳನ್ನು ಆಗಾಗ, ಅಲ್ಲಲ್ಲಿ ಅಷ್ಟಿಷ್ಟು ಓದಿ, ಸವಿದು ಮೆಚ್ಚಿ ಮರೆತಿದ್ದ ನನಗೆ ಇತ್ತೀಚೆಗೆ ಅವರ 'ಸಮಗ್ರ ಕಾವ್ಯ'ವನ್ನು ಆಮೂಲಾಗ್ರವಾಗಿ ಓದಿದಾಗ ಅರ್ಜುನನಿಗೆ ಶ್ರೀ ಕೃಷ್ಣನ ವಿಶ್ವರೂಪದ ದರ್ಶನವಾದಂತೆ ಒಂದು ಹೊಸ ಅನುಭವವೇ ಆಯಿತೆಂದು ಹೇಳಬಹುದು. ಕಣವಿಯವರ ಕಾವ್ಯದ ಎತ್ತರ, ಬಿತ್ತರ, ಆಳ, ಅಗಲ, ಸತ್ವ-ಮಹತ್ವಗಳ ಆ ದರ್ಶನ ಅದನ್ನು ಮತ್ತೆ ಮತ್ತೆ ಓದುವಂತೆ, ಮೆಲುಕು ಹಾಕುವಂತೆ ಮಾಡಿತು. ಮಹಾ ಕವಿ ಕುವೆಂಪು ಅವರ ಈ ಮಾತನ್ನು ನೆನಪಿಸಿತು. "ಉತ್ತಮ ಕಾವ್ಯವನ್ನು ಓದಿದಂತೆ ಇನ್ನೂ ಓದಬೇಕೆನಿಸುತ್ತದೆ. ಮತ್ತೆ ಮತ್ತೆ ಓದಿದಷ್ಟೂ ಅದರ ಮಹತ್ವ ಹೆಚ್ಚಾದಂತೆ ತೋರುತ್ತವೆ. ಹೊಸ ಹೊಸ ವಿಷಯಗಳು ಮನಸ್ಸಿನಲ್ಲಿ ಹೊಳೆಯುತ್ತವೆ. ಅದನ್ನು ಕಂಡ

ಕಂಡವರಿಗೆಲ್ಲ ಓದಿ ಹೇಳಬೇಕೆನಿಸುತ್ತದೆ. ಇಂತಹ ಸೊಗಸಾದ ಕಾವ್ಯ ಅನೇಕರಿಗೆ ಅಪರಿಚಿತವಾಗಿದೆಯಲ್ಲ ಎಂದು ದುಃಖವಾಗುತ್ತದೆ". (ಕುವೆಂಪು : ಕಾವ್ಯ ವಿಹಾರ. ಪು-೨೨)

ಕಣವಿಯವರ ಕಾವ್ಯ ನವೋದಯವೋ, ನವ್ಯವೋ, ಸಮನ್ವಯವೋ ಇದಾವುದೂ ಅಲ್ಲವೋ ಎಂಬ ಪ್ರಶ್ನೆಗಳು ನನ್ನಂತಹ ಓದುಗನಿಗೆ ಅಷ್ಟು ಮುಖ್ಯವಲ್ಲ. ಯಾವ ಪಂಥಕ್ಕೆ ಸೇರಲಿ ಅಥವಾ ಸೇರದಿರಲಿ, ಅದು ಕಾವ್ಯವಾಗಿದೆಯೋ, ಓದುಗನ ಹೃದಯವನ್ನು ಮುಟ್ಟುವುದೋ, ಮನಸ್ಸನ್ನು ತಟ್ಟುವುದೋ, ಅಂತರಂಗ ಮೆಚ್ಚಿ 'ಅಹುದಹುದು'ಎನಿಸುವುದೋ ಎನ್ನುವುದಷ್ಟೇ ಮುಖ್ಯ. ಆದ ಕಾರಣ ನಾನು ಈ ಬರಹವನ್ನು 'ಆನ್ವಯಿಕ ವಿಮರ್ಶೆ' ಎಂದು ಭಾವಿಸುವುದಿಲ್ಲ. ಏಕೆಂದರೆ ವಿಮರ್ಶೆಯ ಪರಿಕಲ್ಪನೆ, ಸ್ವರೂಪಗಳು ಕಾಲಕಾಲಕ್ಕೆ ಬದಲಾಗುತ್ತ ಬಂದಿದ್ದು ವಸ್ತುನಿಷ್ಠವಾದ ಸರ್ವಸಮ್ಮತವಾದ ತತ್ವವಾಗಲೀ, ಸಿದ್ಧಾಂತವಾಗಲೀ, ವಿಧಾನವಾಗಲೀ ಕಾಣುತ್ತಿಲ್ಲ. ನವ್ಯದ ಕಾಲದ 'ಕೃತಿನಿಷ್ಠ ವಿಮರ್ಶೆ'ಯ ನಂತರ ಬಂದಿರುವ ಸಾಂಸ್ಕೃತಿಕ ವಿಮರ್ಶೆ ಕೃತಿಯಿಂದ ಹೊರಟು ಕೃತಿಕಾರನ ಜಾತಿ, ಮತ, ರಾಜಕೀಯ ಮುಂತಾದ ವಿಷಯಗಳಲ್ಲಿ ವಿಹರಿಸುತ್ತ ಗೊಂದಲವನ್ನುಂಟು ಮಾಡಿದೆ. ಎರಡನೆಯದಾಗಿ, ವಿಮರ್ಶೆಯ ಪ್ರಕ್ರಿಯೆಯಲ್ಲಿ ಕೃತಿಯ ಗುಣದೋಷಗಳ ನಿರ್ಣಯ, ಕೃತಿ ಸಾಫಲ್ಯದ ಮೌಲ್ಯಮಾಪನ ಮುಂತಾದ ಆಶಯಗಳು ಅಂತರ್ಗತವಾಗಿರುವುದರಿಂದ, ಅವು ನನ್ನ ಕೈ ಮೀರಿದ್ದೆನಿಸುತ್ತದೆ. ಆದ್ದರಿಂದ ಈ ಬರಹ ಕಣವಿಯವರ ಒಂದು ಕವನದ ಆಸ್ವಾದನೆ (An appreciation)ಅಥವಾ ಪ್ರತಿಸ್ಪಂದನೆ ಅಷ್ಟೆ.

ಕಣವಿಯವರು ಸಹಜ ಕವಿ. ಅವರ ಕಾವ್ಯ ಉಸಿರಾಟದಂತೆ ಸಹಜವಾಗಿ, ಅನಾಯಾಸವಾಗಿ, ಸಲೀಸಾಗಿ. ಮೂಡಿ ಬರುವ ಕಾವ್ಯ. ಅದು ಮೊದಲ ಓದಿಗೇ ಓದುಗನಿಗೆ ಖುಶಿ ನೀಡುವುದಲ್ಲದೆ ಮತ್ತೆ ಮತ್ತೆ ಓದಲು ಪ್ರೇರಿಸುವ ವಿಶಿಷ್ಟ ಗುಣವುಳ್ಳದ್ದು. ಇಂಥ ಕಾವ್ಯವನ್ನು ಅಸಾಧಾರಣ ಪ್ರತಿಭೆಯುಳ್ಳ ಕವಿಯಷ್ಟೇ ರಚಿಸಲು ಸಾಧ್ಯ. ಕಣವಿಯವರ ಕಾವ್ಯ ಓದುಗನ ಅಂತರಂಗವನ್ನು ಅರಳಿಸುವ ಕಾವ್ಯ; ಕೆರಳಿಸುವ ಕಾವ್ಯವಲ್ಲ. ಬದುಕಿನ ಆ ಸುಂದರ ಮುಖಗಳನ್ನು ಅವರು ನೋಡಬಲ್ಲವರಾದರೂ, ರೌದ್ರ, ಭಯಾನಕ, ಭೀಭತ್ಸಗಳ ಅಭಿವ್ಯಕ್ತಿಯಲ್ಲಿ ಆಸಕ್ತರಲ್ಲ. ಶಿವವೂ ಸುಂದರವೂ ಆದ ಸತ್ಯದ ಅನುಭವವೇ ಅವರಿಗೆ ಇಷ್ಟ. ಸುಲಲಿತವಾದ ಅಚ್ಚ ಕನ್ನಡದ ದೇಸಿಪದಗಳಿಂದಲೇ ಅವರು ತಮ್ಮ ಸೂಕ್ಷ್ಮಾತಿಸೂಕ್ಷ್ಮ ಅನುಭವಗಳನ್ನು ಭಾವನೆಗಳ ಚಿಂತನೆಗಳ ಭವ್ಯ ಕಾವ್ಯವನ್ನು ಕಟ್ಟುತ್ತಾರೆ. ಮೆಲುದನಿಯ ಮೃದು ನುಡಿಗಳಿಂದಲೇ ತಮ್ಮ ಆಶಯವನ್ನು ಅತ್ಯಂತ ಪರಿಣಾಮಕಾರಿಯಾಗಿ ಸಾಧಿಸುತ್ತಾರೆ.

'ಧ್ವನಿ-ದನಿ' ಕಣವಿ ಅವರ ಉತ್ತಮ ಕವನಗಳಲ್ಲೊಂದು. 'ಜೀವಧ್ವನಿ' ಸಂಕಲನದಲ್ಲಿರುವ ಈ ಕವನ ಕಣವಿ ಕಾವ್ಯದ ಒಂದು ಪ್ರಾತಿನಿಧಿಕ ಮಾದರಿಯಂತಿದೆ. ಸಾಮಾನ್ಯ ಮನುಷ್ಯನೊಬ್ಬನ ಜೀವನಾನುಭವದ ಪರಿಧಿಯಲ್ಲಿ ಕೇಳಿ ಬರುವ ವಿವಿಧ ದನಿಗಳನ್ನೂ, ಅವುಗಳ ಹಿಂದಿನ ಧ್ವನಿಗಳನ್ನೂ, ಅಷ್ಟೇ ಮುಖ್ಯವಾದ 'ಮೌನ'ವನ್ನೂ ಇಲ್ಲಿ ಕವಿ ಒಂದು ಸಮಗ್ರಾನುಭವದ ಸುಂದರ ಅಭಿವ್ಯಕ್ತಿಯಾಗಿ ಸಾಧಿಸುವುದರಲ್ಲಿ ಸಫಲರಾಗಿದ್ದಾರೆ. ಈ ಕವನ ಆಗ ತಾನೇ ಅರಳಿದ ಸೌರಭ ಸೂಸುತ್ತಿರುವ ಗುಲಾಬಿ ಹೂವಿನಂತಿದೆ. ಅದರ ಚೆಲುವಿಗೆ, ಸೌರಭಕ್ಕೆ ತೆರೆದುಕೊಳ್ಳುವುದಷ್ಟೆ

ಓದುಗನಿಗೆ ಸಾಧ್ಯ. ಇದೊಂದು ಸ್ವಯಂಪೂರ್ಣವಾದ, ಸ್ವಯಂ ವೇದ್ಯವಾದ, ಸ್ವಯಂ ದೀಪಕವಾಗಿರುವ ಕವನ. ಇದನ್ನು ಸವಿಯಲು ಸಹೃದಯತೆಯಿದ್ದರೆ ಸಾಕು. ವಿವರಣೆ, ವಿಶ್ಲೇಷಣೆ, ವ್ಯಾಖ್ಯಾನ, ವಿಮರ್ಶೆಗಳ ನೆರವು ಬೇಕಿಲ್ಲ.

'ಧ್ವನಿ-ದನಿ' ಕವನದಲ್ಲಿ ದನಿ, ಧ್ವನಿ ಮತ್ತು ಮೌನ- ಈ ಮೂರೂ ಸೇರಿವೆ. ದನಿ ಎಂದರೆ ಶಬ್ದ. ಧ್ವನಿಯೆಂದರೆ ಅಲ್ಲಮ ಹೇಳುವಂತೆ 'ಶಬ್ದದೊಳಗಿನ ನಿಶ್ಶಬ್ದ' ಅಥವಾ ಡಾ। ಜಿ.ಎಸ್.ಎಸ್. ಹೇಳುವಂತೆ 'ತಿಳಿಯುವ ಅರ್ಥದೊಂದಿಗೆ ಹೊಳೆಯುವ ಅರ್ಥ'. ಮೌನದಲ್ಲಿ ಶಬ್ದವಿಲ್ಲ. ಆದರೆ ಅರ್ಥ ಅಗಾಧ. ಈ ಮೂರೂ ಜೀವನದಲ್ಲೂ, ಸಾಹಿತ್ಯದಲ್ಲೂ ಸದಾ ಅಸ್ತಿತ್ವದಲ್ಲಿದ್ದು ಅಂತಃಸಂಬಂಧ ಹೊಂದಿರುವಂತಹವು. ಅವುಗಳ ಅನುಬಂಧದಿಂದ ಜೀವನವೂ, ಸಾಹಿತ್ಯವೂ ಸಾರ್ಥಕವಾಗುತ್ತವೆ ಎಂದು ಹೇಳಬಹುದು. 'ಧ್ವನಿ-ದನಿ' ಕವನ ಹೀಗೆ ಆರಂಭವಾಗುತ್ತದೆ:

**ಮುಂಜಾವಿನಿಂದ ಮುಂಜಾವು; ಬಗೆ ಬಗೆಯ ಧ್ವನಿ**
**ಗಳೇರಿಳಿವು. ಋತು ಋತುವಿಗೊಂದು ಬನಿ.**
**ಎಷ್ಟೋ ದನಿಗೆ ಕಿವುಡರು ನಾವು ಕಂಡು ಕಂಡೂ.**
**ಮಹದನುಭವವ ಕಳೆದುಕೊಂಡು ಹಿಂದು ಮುಂದಿರದ**
**ಸರಪಳಿ ತುಂಡು.**

ದಿನವಿಡೀ ಋತುಗಳ ಬನಿಗನುಸಾರವಾಗಿ ಬಗೆ ಬಗೆಯ ಧ್ವನಿಗಳು ಕೇಳಿಸುತ್ತವೆ. ಆದರೆ ನಾವು ಎಷ್ಟೋ ದನಿಗಳನ್ನು ಕೇಳುವುದಿಲ್ಲ. ಅವು ನೀಡುವ ಮಹದನುಭವಗಳಿಗೆ ಮನ ತೆರೆದುಕೊಳ್ಳುವುದಿಲ್ಲ. ನಿಸರ್ಗದ ಶ್ರುತಿಯೊಂದಿಗೆ ಸೇರದೆ, ತುಂಡಾದ ಸರಪಳಿಯಂತೆ, ಪ್ರತ್ಯೇಕಿತರಾಗಿ ಉಳಿಯುತ್ತೇವೆ. ಇಲ್ಲಿ ವಿಷಾದದ ಮಂದ್ರ ಧ್ವನಿ ಇದೆ.

ಮುಂದಿನ ಐದು ಸಾಲುಗಳಲ್ಲಿ ನಿಸರ್ಗದ ದನಿಗಳ ಜತೆಗೆ ಮನುಷ್ಯರ ದನಿಗಳೂ ಸೇರಿಕೊಳ್ಳುತ್ತವೆ. ಮಕ್ಕಳ ಉಲಿ, ತಾಯಿ-ಮಗುವಿನ ಮಮತೆಯ ಪ್ರೀತಿಯ ದನಿಗಳು ಕೊಂಚ ಉಲ್ಲಾಸ ನೀಡುತ್ತಿದ್ದರೆ 'ಬದುಕಿನ ಬಿರುಕಿನಿಂದ ಒಗೆವ ಅಸಹಾಯಕ ಕ್ಷೀಣಧ್ವನಿ'ಯೂ ಕೇಳಿಸುತ್ತದೆ. ಬದುಕಿನಲ್ಲಿ ಬಂಧವೂ ಇದೆ, ಬಿರುಕೂ ಇದೆ. ನೋವು ನಲಿವುಗಳ ನೇಯ್ಗೆಯಂತಿರುವ ಬದುಕಿನಲ್ಲಿ ಯಾವ ಸಂಬಂಧವೂ ಒಂದೇ ರೂಪದಲ್ಲಿ ಸದಾಕಾಲವೂ ಇರುವುದಿಲ್ಲ. ಅದು ಬದಲಾಗುತ್ತದೆ, ಅದರಲ್ಲಿ ಬಿರುಕುಂಟಾಗುತ್ತದೆ. ಅದರಿಂದ ಹೊರಡುವ ಧ್ವನಿ ಕ್ಷೀಣ, ಅಸಹಾಯಕ. ಈ ಸನ್ನಿವೇಶಕ್ಕೆ ಕವನದಲ್ಲಿ ಮುಂದೆ ಬರುವ ಪ್ರತಿಮೆಗಳು ಮತ್ತಷ್ಟು ಪುಷ್ಟಿ ನೀಡುತ್ತವೆ.

**ಮಳೆ-ಗಾಳಿ ಹೊಯ್ಲು, ಉರುಳುರುಳಿ ನರಳುವ ರೈಲು ; ಅಬ್ಬರಿಸಿ**
**ನುಗ್ಗು-ತಡಸಲು, ಮೌನದಲಿ ಕಿವಿಗೊಟ್ಟ ಬಟ್ಟ ಬಯಲು.**

ಮಳೆಗಾಳಿಯ ಹೊಯ್ಲು, ಅಬ್ಬರಿಸಿ ನುಗ್ಗುವ ತಡಸಲು ಬದುಕಿನ ಪ್ರಕ್ಷುಬ್ಧತೆಯನ್ನೂ, ಉರುಳಿ ಉರುಳಿ ನರಳುವ ರೈಲು ಸಂಕಟವನ್ನೂ ಸೂಚಿಸುತ್ತದೆ. ಉರುಳಿ ನರಳುವ ರೈಲಿನ

ಪ್ರತಿಮೆ ಮೌಲಿಕವೂ, ಸಹಜವೂ ಪರಿಣಾಮಕಾರಿಯೂ ಆಗಿರುವುದನ್ನು ಗಮನಿಸಬೇಕು. ರೈಲು ನಿಲ್ಲುವ ಮೊದಲು ಮೂಡುವ ಶಬ್ದ ನರಳಾಟದ ದನಿಯಂತಿರುವುದು ವಿಶಿಷ್ಟ ವಾಸ್ತವ. ಕವಿ ಇದನ್ನು ಬಳಸಿಕೊಂಡ ರೀತಿ ಗಮನಾರ್ಹ. ಆದರೆ ಈ ಎಲ್ಲ ಪ್ರಕ್ಷುಬ್ಧತೆ, ಸಂಕಟಗಳೆಲ್ಲವನ್ನೂ ಬಟ್ಟಬಯಲು ಮೌನವಾಗಿ ನೋಡುತ್ತಿದೆ. ಬದುಕಿನ ನೋವು, ಸಂಕಟ ಪ್ರಕ್ಷುಬ್ಧತೆಗೆ ಬಾಹ್ಯ ಪ್ರಪಂಚದ ಮೌನವೇ ಉತ್ತರವಾಗಿದೆ. ಇಲ್ಲಿಯೂ ವಿಷಾದದ ಧ್ವನಿ ದಟ್ಟವಾಗಿದೆ.

ಮುಂದಿನ ಸಾಲುಗಳಲ್ಲಿ ಉಲ್ಲಾಸದ, ಲವಲವಿಕೆಯ, ಸುಖಸಂತೋಷಗಳನ್ನು ಸೂಚಿಸುವ ಪ್ರತಿಮೆಗಳು ಬರುತ್ತವೆ. ಸ್ನೇಹಕೂಟದ ಬೆಚ್ಚಗಿನ ದನಿ, ಸಂತಸದ ತುಂಬುತುಳುಕು, ಪಯಣದಲಿ ಕೋಲ್ನಾರಿ ಬಂಡಿಯ ಲಯದ ಗಿಲಕ್ ಗಿಲಕು, ಟಾಂಗಾ ಕುದುರೆಯ ಟಕಕ್ ಟಕಕ್ ದನಿ, ಗುಬ್ಬಿ ಗುಟುಕು, ತೀಡುವ ಗಾಳಿ, ಗೆಳೆತನದ ತ್ವರಿತ ಫೋನಿನುಲಿ, ಮನೆಯವರ ಕಲಕಲ ಮುದ್ದು, ಬೇಲಿಯಾಚೆಗೆ ಬಣ್ಣಬಣ್ಣದ ಹಕ್ಕಿ ಹಾರಿದ ಸದ್ದು... ಹೀಗೆ ಪ್ರಕೃತಿ ಸೃಷ್ಟಿಸುವ ವೈವಿಧ್ಯಮಯ ಧ್ವನಿಗಳ ಜತೆಗೆ ಮನುಷ್ಯನ ಕೌಟುಂಬಿಕ ಜೀವನದ ಉಲ್ಲಾಸದ ಕ್ಷಣಗಳು ಹೊರಡಿಸುವ ದನಿಗಳೂ ಸೇರಿ ಶಬ್ದ, ಚಿತ್ರ, ನಾದ, ಲಯಗಳ ಸೊಗಸಾದ ಕುಸುರಿ ಕೆಲಸ ಓದುಗನ ಮನಸ್ಸನ್ನು ಸೂರೆಗೊಳ್ಳುತ್ತದೆ.

ಕವಿಯ ಸೂಕ್ಷ್ಮ ದೃಷ್ಟಿ ಚುರುಕಾದ ಕಿವಿ ಎಂತಹ ಚಿಕ್ಕ ಪುಟ್ಟ ದೃಶ್ಯಗಳನ್ನೂ, ಸಣ್ಣ ದನಿಗಳನ್ನೂ ಗ್ರಹಿಸುತ್ತದೆ, ಹಾಗೂ ಎಷ್ಟು ಸೊಗಸಾಗಿ, ಸಹಜವಾಗಿ ಕಾವ್ಯವಾಗಿ ಪರಿವರ್ತಿಸುತ್ತದೆ ಎನ್ನುವ ಬೆರಗನ್ನು ಪ್ರತಿ ಸಾಲಿನಲ್ಲೂ ನೋಡಬಹುದು. ಈ ಸಾಲುಗಳನ್ನು ನೋಡಿ :

**ಅಡುಗೆ ಮನೆಯಲಿ ತಾಟು -ಲೋಟಗಳ ಭರವಸೆಯ ಸಿಂಪನಿ.**
**ಮಧ್ಯಾಹ್ನ ಎದ್ದು ಆಕಳಿಸಿದಾಗ ಚಹದ ಕಪ್ಪು-ಬಸಿ ಟಿಂಟಿಣಿ ದನಿ.**
**ಮಲಗಿ ಓದುತ್ತ ಕಾದಂಬರಿಯ ಕುತೂಹಲದ ಪುಟ ಪುಟ ದನಿ.**
**ತಲ್ಲೀನ ಕುಳಿತ ಗಾಯಕನ ಹಿಂದೆ ಮಾಯಕದ ತಂಬೂರಿ**
**ನರನರವ ಮೀಟಿ ಹೊರಡಿಸುವ ಜೀವಧ್ವನಿ.**

'ತಾಟು-ಲೋಟಗಳ ಸಿಂಪನಿ'ಯಲ್ಲಿ 'ಸಿಂಪನಿ' (Symphony) ಎಂಬ ಇಂಗ್ಲೀಷ್ ಶಬ್ದ ಕಣವಿಯವರ ಕೈಯಲ್ಲಿ ಸಿಕ್ಕಿ ಕನ್ನಡವೇ ಆಗಿಬಿಡುತ್ತದೆ. ಕೇವಲ ನವಿರಾದ ಸ್ವಭಾವೋಕ್ತಿಯಿಂದಲೇ ಕವನವನ್ನು ಹೃದ್ಯವಾಗಿ ಮೂಡಿಸುವ ಅದ್ಭುತ ಕಲೆಗಾರಿಕೆ ಇಲ್ಲಿ ಹೊಸ ಎತ್ತರವನ್ನು ಏರಿದೆ.

ಕವನದ ಮುಕ್ತಾಯದ ಹಂತದಲ್ಲಿ ಕವಿ "ಎಲ್ಲಿ ಏಕಾಂತದಲಿ ಮಿಡಿದು ಮಾರ್ದನಿಗೊಳುವ ನನ್ನೊಳ ದನಿ?" ಎಂದು ಪ್ರಶ್ನಿಸಿ ಲೋಕಾಂತದಲ್ಲಿ ಧ್ವನಿಗಳೇರಾಟ ಚೀರಾಟಗಳ ನಡುವೆ ನಾನು ಮೌನಿ" ಎಂದುತ್ತರಿಸುವಾಗ ಉಂಟಾಗುವ ಅನಿರೀಕ್ಷಿತ ಅರ್ಥಸ್ಫೋಟ ಕವನದ ಶಿಖರವಾಗಿದೆ- ಸಾರ್ಥಕ ಮುಕ್ತಾಯವಾಗಿದೆ. ಈ ಮೌನದಲ್ಲಿ ಏನಿದೆ ? ಎಂದು ಕೇಳುವುದಕ್ಕಿಂತ ಏನಿಲ್ಲ? ಎಂದು ಕೇಳಿಕೊಳ್ಳುವುದೇ ಸರಿ.

ಬಿ.ವಿ. ಕೆದಿಲಾಯ

# ೫೩. ಈಗ ಕವಿತೆ ಬರೆಯಲು ...

ಈಗ ಕವಿತೆ ಬರೆಯಲು ನಾನು ಹೊರಟಿಲ್ಲ;
ಹೊರಟದ್ದು ಆಫೀಸಿಗೆ ; ಉಂಡು ಅವಸರದಿಂದ -
ಸಿಕ್ಕರೆ ಬಸ್ಸು ಹಿಡಿದು, ಇಲ್ಲ, ಮೆಲ್ಲಗೆ ನಡೆದು;
ಸಡಿಲಾಗಿರುವ ಕೋಟು ಪ್ಯಾಂಟುಗಳನ್ನು ಇದ್ದು -
ದರಲ್ಲಿ ಸರಿಪಡಿಸಿಕೊಂಡು. ಎಷ್ಟೋ ವರ್ಷಗಳ
ಹಿಂದೆ ಎಡಗಾಲ ಹಿಂಬಡ ಗಾಯ ಮಾದದ್ದು
ಈಗ ಮತ್ತೆ ನೋವು. ಮದುವೆಯಲ್ಲಿ ಕಟ್ಟಿದ ವಾಚು
ಆಗೀಗ ಬಂದುಬಿದ್ದರೂ ಅದರಂತರಂಗದದ್ಭುತ -
ಸೂಕ್ಷ್ಮ ಯಂತ್ರಕ್ಕೆ ಸಾಗಿದ ನಾನು ಮಂತ್ರಮುಗ್ಧ.

ನನ್ನ ದಾರಿಗೆ ಅಡ್ಡ ಎಮ್ಮೆಗಳು (ನಮ್ಮೂರ ದೊಡ್ಡ
ಹೆಮ್ಮೆಗಳು) ಉದ್ದಕ್ಕೂ ಉಚ್ಚೆ ಹೊಯ್ಯುತ್ತ, ಸಗಣ
ಹಾಕುತ್ತ, ಅತ್ತಿತ್ತ ಸುಖವಾಗಿ ಬಾಲ ಜಾಡಿಸುತ್ತ;
ಸೈಕಲ್ಲು, ಕಾರು, ಸ್ಕೂಟರು ಜಾರಿ, ತಮ ತಮಗೆ ದಾರಿ
ಮಾಡಿಕೊಂಡು. ಚೀಲದ ತುಂಬ ಪುಸ್ತಕ ಭಾರ ಹೊತ್ತು
ಶಾಲೆಗೆ ನಡೆದ ಮಕ್ಕಳುತ್ಸಾಹಕ್ಕೆ, ಎಡಬಲದ
ಗಿಡಮರಗಳಲ್ಲಿ ಚೈತ್ರ ನಗುವ ಚಿಗುರು.
ಆಫೀಸಿನ ಕುರ್ಚಿ ಮೇಜುಗಳ ರೀತಿ ರಿವಾಜು
ಗಳಲ್ಲಿ ಫೈಲುಗಳು: ಪತ್ರಕುತ್ತರ ಮತ್ತೆ ಸುತ್ತೋಲೆ:
ಟೀಕೆ-ಟಿಪ್ಪಣಿ ಸರಣಿ: ದೂರವಾಣಿಯಲಿ ದೂರುಗಳು
ಸುಸೂತ್ರ ಸಾಗುತ್ತಿದ್ದಂತೆ ಕೆಂಪು ಪಟ್ಟಿಯಲಿ ಕಗ್ಗಂಟು
ಹೀಗೆ ಇಪ್ಪತ್ತೆಂಟು ಗಲಿಬಲಿಯ ನಡುವೆ, ಬಿಟ್ಟೂ

ಬಿಡದೆ ಟೈಪರ್ರೈಟರಿನ ಲಯಬದ್ಧ ನಡಿಗೆ; ಕೊನೆಗೆ
ಕೆಳಗಿಂದ ಮೇಲಿನ ತನಕ ರುಜುವಾಗಿ, ಹೊರ ಜಗತ್ತಿಗೆ
ರವಾನೆ, (ಹೇಗಿದ್ದರೂ ಮುಗಿಸಬೇಕಾದ ಕೆಲಸ ತಾನೆ?)

ಹೊತ್ತು ಇಳಿಯುವ ಸಮಯ; ಬಾಗಿದ ಬೆನ್ನು ಎತ್ತಿ
ಹೊರಗಿನ ಗಾಳಿ ಬೆಳಕಿಗೆ ತೇಲಿ ಬರುವಾಗ
ಮೇದು ಮೆಲುಕಾಡಿಸುತ ಬರುವ ದನ-ಕರುಗಳು;
ಹುಡುಗನ ಹೆಗಲಲ್ಲಿ ಜೋತ ಟ್ರಾನ್ಸಿಸ್ಟರಿನ ಹಾಡು.
ಕಟ್ಟಿಗೆ ಹೊರೆ ಹೊತ್ತು ದಣಿದ ಹೆಜ್ಜೆಯ ಹೆಣ್ಣು
ಮಕ್ಕಳ ಹಣೆಯ ಬೆವರು. ಗುಡ್ಡವನ್ನಿಳಿದು
ಸಾಗಿದ ನೆರಳು. ಬಾನ ಮನಸಿಗೆ ಅವಿಸ್ಮರಣೀಯ
ನೆನಪುಗಳ ಮೆಲ್ಲ ತೇಲಿಸಿ ತರುವ ಬೆಳ್ಳಕ್ಕಿ ಸಾಲು.
ಆಟದ ಬಯಲಿನಲ್ಲಿ ಬರೀ ಕ್ರಿಕೆಟ್ಟು.

ಮನೆಯ ಮೆಟ್ಟಿಲು ಹತ್ತಿ ಹಾಗೆ ಹೊರಳಿದರೆ-
ದಿನದ ದುಡಿಮೆಯ ಕೆಂಪು, ಬಾನಿನಲಿ ಮೆಲ್ಲಗೆ
ನಂದಿ ಒಂದೆರಡು ಅಸ್ಪಷ್ಟ ಚುಕ್ಕಿಗಳು ಮೂಡಿ
ಗೂಡಿನಲಿ ಸ್ತಬ್ಧ ಹಕ್ಕಿಗಳು.

ಈ ದಿವಸ ಮಾಡಿ ಮುಟ್ಟಿದ್ದೇನು? ಎದೆಯ ತಟ್ಟಿದ್ದೇನು ?
ನಿನ್ನೆಗಳ ಇಂದು ಎಳೆತಂದ, ನಾಳೆಗುತ್ತರವ
ಹುಡುಕುವ ಉತ್ತರೋತ್ತರ ಕೆಲಸ. ಈ ಜಗತ್ತು-
ವಿವಿಧ ಛಂದಸ್ಸಿನಲಿ ಕಸರತ್ತು ಲಯವಾಗಿ, ಈಗೀಗ
ವಿರಳ ಸರಳ ರಗಳೆಯ ಹೊಕ್ಕು ಹೊರಬಂದು
ಮುಕ್ತಛಂದದ ಹೆಸರಿನಲ್ಲಿ ನಿದಾನ ಹೆಜ್ಜೆನಿಂದು.

ಕವಿತೆಯಲ್ಲಿ ಯಾವುದು 'ಚಿತ್ರಣ' ಯಾವುದು 'ರೂಪಕ' ಎಂಬುದನ್ನು ಸಾಮಾನ್ಯವಾಗಿ ನಾವು ಕೆಲವು ನಿರ್ದಿಷ್ಟ ಮಾನಗಳಿಂದ ಗುರುತಿಸುತ್ತೇವೆ. 'ಚಿತ್ರಣ'ವು ಭೂಮ ಬದುಕಿನ ಯಾವುದೋ ಒಂದು ಸ್ತರದಲ್ಲಾದರೂ ಸಹಜವಾಗಿ, ಒಂದು 'ಅನುಭೂತ-ಸತ್ಯ'ವಾಗಿ ಮನುಷ್ಯರಿಗೆ ದಕ್ಕುವ ಒಂದು 'ಲೋಕ-ವಾಸ್ತವ'ದ ನಿರೂಪಣೆಯಾಗಿರುತ್ತದೆ. ಆದರೆ 'ರೂಪಕ'ಕ್ಕೆ ಮಿತಿಯಿಲ್ಲ. ಲೋಕ-ವಾಸ್ತವಗಳ ವಿಭಿನ್ನ ಕ್ರಮದ ಮರು ಜೋಡಣೆಯಿಂದ, ಅದಕ್ಕೊಂದು ವಿಶಿಷ್ಟ ಧ್ವನಿ-

ಕಾವ್ಯಗುಣವನ್ನು ತರಲು ಕವಿಯು ನಿರಂತರವಾಗಿ ಪ್ರಯತ್ನಿಸುವದು, ಕಾವ್ಯೋದ್ಯೋಗದ ಒಂದು ಮುಖ್ಯ ಕ್ರಿಯಾ ಘಟಕವೇ ಆಗಿದೆ. ಹಾಗೆ ನೋಡಿದರೆ ಚಿತ್ರಿತ -ಶಕ್ತಿಯನ್ನಷ್ಟೇ ನೆಚ್ಚುವ ಕವಿಯ ಶ್ರಮ ಹೆಚ್ಚಿನದು. ಏಕೆಂದರೆ ಲೋಕ-ವಾಸ್ತವಗಳ ಮಾಂಸಲ -ಶರೀರದೊಳಗಿನಿಂದಲೇನೆ ಆತ 'ಭಾಷಿಕ -ವೀಣೆ'ಯನ್ನು ಮಿಡಿಯಬೇಕಾಗುತ್ತದೆ. ರೂಪಕ ಶಕ್ತಿಯ ಕವಿಯೂ ಕೂಡ ಲೋಕ-ವಾಸ್ತವದ ಒಂದು ಆಂಶಿಕ -ಭಾಗವನ್ನು ಇನ್ನೊಂದು ಸಂಬಂಧವೇ ಇಲ್ಲದ ಲೋಕ- ವಾಸ್ತವದ ಭಾಗದೊಂದಿಗೆ, ಕಾವ್ಯದ ಅಗತ್ಯಕ್ಕೆ ತಕ್ಕಂತೆ, ಕತ್ತರಿಸಿಕೊಂಡು. ಅಂಟಿಸಿಕೊಳ್ಳಬಲ್ಲ ಕೆಲಸವನ್ನು ಮಾಡಬೇಕಾಗುತ್ತದೆ. ಆದರೆ 'ಚಿತ್ರಕ-ಶಕ್ತಿ'ಯ ಕವಿಗಿದ್ದಂತೆ, 'ಚಿತ್ರ'ದ ಸ್ವರೂಪ, ಆ ಚಿತ್ರ ಮೂಡಿಬಂದ ಲೋಕ-ವಾಸ್ತವದ, ಜೀವಂತ ಭಾಗವೇ ಆಗಿರಬೇಕಾದ ಹೊಣೆ, ಸ್ವಲ್ಪ ಕಡಿಮೆ ಎಂದೇ ಎನ್ನಬೇಕು.

ಆದರೆ ಈ 'ಚಿತ್ರಕ-ಶಕ್ತಿ'ಯ 'ರೂಪಕ ಶಕ್ತಿ'ಯನ್ನಾಗಲಿ ಕವಿಯು ಯಾದೃಚ್ಛಿಕವಾಗಿ ಬಳಸಲು ಸಾಧ್ಯವಿಲ್ಲ.ಕವಿತೆಯಲ್ಲಿ ಕವಿಯು ಅನುಸಂಧಾನಿಸಿಕೊಂಡಿರುವ ವಸ್ತು-ತತ್ವವೇ ತನ್ನ ಪಂಥವನ್ನೂ, ಆಕೃತಿಯ ಸ್ವರೂಪವನ್ನು ನಿರ್ಧರಿಸಿಕೊಳ್ಳುತ್ತದೆ. ಹೀಗೆ 'ವಸ್ತು-ತತ್ವ' ಮತ್ತು ಅದರ ಆಂತರಂಗಿಕ ಅಗತ್ಯಕ್ಕನುಗುಣವಾದ ಆಕೃತಿ, ಎರಡೂ ಮೇಳವಿಸದಿರುವ ಕವಿತೆಯನ್ನೇ ನಾವು 'ದುರ್ಬಲ' ಕವಿತೆ ಎಂದು ಕರೆಯುತ್ತೇವೆ. ಕವಿತೆಯ ಉದ್ದೇಶ ಆಂಶಿಕವಾಗಿ ಒಂದೇ ಇದ್ದರೂ, ಒಂದು ಕವಿತೆ 'ಚಿತ್ರಕ -ಶಕ್ತಿ'ಯನ್ನು ಬಳಸಿ ಗೆಲ್ಲಬಹುದು. ಇನ್ನೊಂದು ಕವಿತೆ ರೂಪಕ-ಶಕ್ತಿಯನ್ನು ಅನುಸರಿಸಿ ಗೆಲ್ಲಬಹುದು. ಅಡಿಗರ 'ಭೂಮಿಗೀತ' ಒಂದು ರೂಪಕ-ನಿಷ್ಠ ಕವಿತೆ. ಆದರೆ ಅದೇ ಕಾವ್ಯದ ಸಂಕೀರ್ಣತೆಯನ್ನು ಹಲಸಂಗಿಯ ಖಾಜಾ ಸಾಹೇಬರ ಒಂದು ಶೃಂಗಾರ - ಲಾವಣಿಯು ತನ್ನ ಚಿತ್ರಕ-ಶಕ್ತಿಯ ಮೂಲಕ, ಶಕ್ತವಾಗಿ ಬಿಂಬಿಸುವುದೂ ಸಾಧ್ಯವಿದೆ.

ಆದರೆ, ಕೆಲವು ಸಲ ಕವಿಯು, ಕವಿತೆಯುದ್ದಕ್ಕೂ ಬಳಸುವ ಒಂದು ಗಾಢವಾದ ಚಿತ್ರ,. ಏಕಕಾಲಕ್ಕೆ ಅದು ಚಿತ್ರವಾಗಿಯೂ ಬೆಳೆಯುತ್ತದೆ. ಅಖಂಡವಾದ ಅದರ ದರ್ಶನದಲ್ಲಿ ಅದು, ಇಡೀ ಚಿತ್ರವೇ ಒಂದು ಪ್ರಚ್ಛನ್ನ ರೂಪಕವಾಗಿಯೂ ಕೆಲಸ ಮಾಡಿರುತ್ತದೆ. ಢಾಳವಾಗಿ ಕಾಣುವ ಅದರ ಲೋಕ-ವಾಸ್ತವದ ವಿವರಗಳೆಲ್ಲ ಒಟ್ಟುಗೂಡಿ, ನಮ್ಮನ್ನು ತಮ್ಮ ಚಿತ್ರಗಳ ಮೂಲಕವೇ ಒಂದು ಧ್ವನಿಪೂರ್ಣ ರೂಪಕಾನುಭವಕ್ಕೆ ಕರೆದುಕೊಂಡು ಹೋಗುತ್ತವೆ. ಕವಿಯು, ತನ್ನ ಕಾವ್ಯ-ನಿಷ್ಠೆಯಲ್ಲಿ ಸಹಜತೆ ಮತ್ತು ಕಲಾತ್ಮಕತೆ ಎರಡನ್ನೂ, ಒಂದೇ ಭಾಷಿಕ-ಪ್ರಯೋಗದಲ್ಲಿ ಸಾಧಿಸುವ ಈ ಬಗೆ, ರುಚಿ ಮತ್ತು ಸತ್ವ ಎರಡೂ ತುಂಬಿದ, ಕವಿ ಕೌಶಲದ ಪಾಕವೇ ಸರಿ.

ಕನ್ನಡದ ಖ್ಯಾತ ಕವಿ ಶ್ರೀ ಚೆನ್ನವೀರ ಕಣವಿಯವರ ಕಾವ್ಯದ ಮೂಲ-ಸ್ರೋತವೇ ರುಚಿ ಮತ್ತು ಸತ್ವಗಳನ್ನು ಏಕಕಾಲಕ್ಕೆ ದಕ್ಕಿಸಿಕೊಳ್ಳುವ ಪ್ರಯತ್ನವಾಗಿದೆ. ಅವರ ಉತ್ತರಾರ್ಧದ ಕಾವ್ಯದಲ್ಲಿ, ಬಹಳ ಸಲ ಅವರು ರುಚಿಗೆ ಹೆಚ್ಚು ನಿಷ್ಠರಾದಂತೆ ಕಂಡರೂ ಅವರ ಪೂರ್ವಾರ್ಧದ ಕಾವ್ಯದ ಸತ್ವ-ನಿಷ್ಠೆ, ಅವರ ಅನಂತರದ ಎಲ್ಲ ಕವಿತೆಗಳಲ್ಲೂ ಕನಿಷ್ಠ ಪ್ರಮಾಣದ ತನ್ನ ಹಾಜರಾತಿಯನ್ನು ಸೂಚಿಸುತ್ತಲೇ ಬಂದಿದೆ. ಬದುಕಿನಲ್ಲಿರುವ 'ದುಷ್ಟತನ' (Evil) ಮತ್ತು 'ಜೀವನ-

ಪ್ರೀತಿ' ಇವುಗಳ ನಡುವೆ ಅವರು ಸಾಧಿಸಿಕೊಳ್ಳಲು ಪ್ರಯತ್ನಿಸಿದ ಸಮನ್ವಯ, ಅವರ ಕಾವ್ಯದ ವಸ್ತುವಿನ ನೆಲೆಯಲ್ಲಿ ನಮಗೆ ಪ್ರಾಗಢವಾಗಿ ಕಂಡರೆ, ಕಾವ್ಯಾನುಸಂಧಾನದ ಕ್ರಮದಲ್ಲಿ ಅವರು ಸಾಧಿಸಲೆತ್ನಿಸಿದ, ರುಚಿ ಮತ್ತು ಸತ್ವಗಳ ಸಮನ್ವಯ, ಕೂಡ ಅರ್ಥಪೂರ್ಣವಾಗಿದೆ.

ಚಿತ್ರಕ-ಶಕ್ತಿಯೇ ತನ್ನ ಚರಮ-ಸ್ಥಿತಿಯಲ್ಲಿ ಒಂದು ರೂಪಕವಾಗಿ ಕಾಣುವ ಒಂದು ಸುಂದರ ಕವಿತೆ "ಈಗ ಕವಿತೆ ಬರೆಯಲು ..." ("ಜೀವಧ್ವನಿ' ಸಂಗ್ರಹ) ಈ ಇಡೀ ಕವಿತೆಯಲ್ಲಿ ಮಾತನಾಡುತ್ತಿರುವ ಅಥವಾ ಮಾತನಾಡಿಕೊಳ್ಳುತ್ತಿರುವ ಒಬ್ಬ ನಡುವಯಸ್ಕ ಗೃಹಸ್ಥನಿದ್ದಾನೆ. ಈತ ಕಚೇರಿಯೊಂದರಲ್ಲಿ ಕೆಲಸ ಮಾಡುವ ವ್ಯಕ್ತಿ, ಅಧಿಕಾರಿಯೂ ಆಗಿರಬಹುದು. ಅಥವಾ ಸಾಮಾನ್ಯ ನೌಕರನೂ ಆಗಿರಬಹುದು. ಆದರೆ ಈತನಲ್ಲೊಂದು ಗಾಢ ಚಿಂತನ ಶಕ್ತಿ ಇದೆ. ಗತ-ಸ್ಮೃತಿಗಳನ್ನೆಲ್ಲ ಜೋಡಿಸಿಕೊಳ್ಳುತ್ತ ಎದುರು ಕಾಣುವ ಲೋಕ-ವಾಸ್ತವದ ಚಿತ್ರಗಳು ತನ್ನ ಮನಸ್ಸಿನ ಸುತ್ತಲೂ ರೂಪಿಸುವ ವಾತಾವರಣದ ಕಾವನ್ನು ಆಪ್ತ ಭಾವದಲ್ಲಿ ಅನುಭವಿಸುತ್ತ, ಅರ್ಥವಿಸಿಕೊಳ್ಳುತ್ತ, ಈ ಅರ್ಥವಿಸಿಕೊಳ್ಳುವ ಪ್ರಕ್ರಿಯೆಯ ಸಾರ್ಥಕತೆ, ವಿಫಲತೆಗಳನ್ನು ಪರಿಭಾವಿಸುತ್ತ, ಬದುಕಿದ ಕ್ರಮ, ಮತ್ತು ಬದುಕಬೇಕಿತ್ತೆಂದುಕೊಂಡ ಕ್ರಮಕ್ಕು ಇರುವ ಅಂತರವನ್ನು ವಿಷಾದದಿಂದ ಸ್ವೀಕರಿಸುತ್ತ ಗುದ್ದಾಡುವ ವ್ಯಕ್ತಿಯೊಬ್ಬ ಈ ಕವಿತೆಯೊಳಗಿದ್ದಾನೆ. ಬದುಕಿನ ಒಂದು ದಿನದ ಒಂದು ನಿಯತ ಕರ್ಮ-ಚಕ್ರದ ವಿವರಣೆಯೊಂದಿಗೆ ಪ್ರಾರಂಭವಾಗುವ ಕವಿತೆ, ಕವಿತೆಯೊಳಗಿನ ಮನುಷ್ಯ, ಹೆಜ್ಜೆ ಹೆಜ್ಜೆಗೆ ಅನುಭವಿಸುವ ಸೋಲು, ದಣಿವು, ಅಸಹಾಯಕತೆಗಳನ್ನು ತುಂಬ ಶಕ್ತವಾಗಿ ಚಿತ್ರಿಸುತ್ತದೆ. ಕವಿತೆ ಪ್ರಾರಂಭವಾಗುವುದು ಹೀಗೆ:

**ಈಗ ಕವಿತೆ ಬರೆಯಲು ನಾನು ಹೊರಟಿಲ್ಲ;**
**ಹೊರಟದ್ದು ಆಫೀಸಿಗೆ; ಉಂಡು ಅವಸರದಿಂದ -**
**ಸಿಕ್ಕರೆ ಬಸ್ಸು ಹಿಡಿದು, ಇಲ್ಲ, ಮೆಲ್ಲಗೆ ನಡೆದು;**
**ಸಡಿಲಾಗಿರುವ ಕೋಟು ಪ್ಯಾಂಟುಗಳನ್ನು ಇದ್ದು-**
**ದರಲ್ಲಿ ಸರಿಪಡಿಸಿಕೊಂಡು. ಎಷ್ಟೋ ವರ್ಷಗಳ**
**ಹಿಂದೆ ಎಡಗಾಲ ಹಿಂಬಡ ಗಾಯ ಮಾದದ್ದು**
**ಈಗ ಮತ್ತೆ ನೋವು, ಮದುವೆಯಲ್ಲಿ ಕಟ್ಟಿದ ವಾಚು**
**ಆಗೀಗ ಬಂದುಬಿದ್ದರೂ ಅದರಂತರಂಗದದ್ಭುತ -**
**ಸೂಕ್ಷ್ಮ ಯಂತ್ರಕ್ಕೆ ಸಾಗಿದ ನಾನು ಮಂತ್ರಮುಗ್ಧ.**

ಕವಿತೆಯನ್ನು ಕೇವಲ ಕಾವ್ಯಾನಂದಕ್ಕೆ ಆಸ್ವಾದಿಸುವ ಕಾಲದಿಂದ ತಾನು ಹೊರತಾಗಿರುವ ತನ್ನ ಸಂಕಟದ ತುರ್ತಿನಿಂದಲೇ ಕವಿ ತನ್ನ ಕಾವ್ಯದ ಬಗೆಗಿನ ಗಂಭೀರ ನಿಲುವನ್ನೂ ವ್ಯಕ್ತಪಡಿಸುತ್ತದೆ. ಉಂಡು ಅವಸರದಿಂದ ಆಫೀಸಿಗೆ ಹೊರಡಬೇಕಾದ ಈ ವ್ಯಕ್ತಿಯ ಕೋಟು-ಪ್ಯಾಂಟುಗಳು ಸಡಿಲಾಗಿವೆ. ಎಂದೋ ಆಗಿ, ಮಾಯ್ದು ಹೋಗಿದೆ ಎಂದು ತಿಳಿದ ಹಿಂಬಡ ಗಾಯ ಮತ್ತೆ ನೋಯುತ್ತಿದೆ. ಒಂದೆಡೆ ವರ್ತಮಾನದ ತುರ್ತು, ಇನ್ನೊಂದೆಡೆ ಭೂತದ ಅರಿವು ತಂದುಕೊಟ್ಟ

ನೋವು, ಇವುಗಳಿಂದ ಈ ಮನುಷ್ಯನ ಮುಖ ಸೋತಿದೆ. ಮದುವೆಯ ವಾಚು, ಅದೆಷ್ಟೋ ಸಲ ಬಂದಾಗಿದ್ದರೂ ಅದರ ಅಂತರಂಗದ ಸೂಕ್ಷ್ಮ ವ್ಯವಸ್ಥೆಗೆ ಕವಿತೆಯೊಳಗಿನ ಮನುಷ್ಯ ಮುಗ್ಧವಾಗಿ ಉಳಿಸಿದ್ದಾನೆ. ಕಾಲದ ನೋವು ಒಂದೆಡೆಗೆ, ಕಾಲದ ಬಗೆಗಿನ ನಿಷ್ಕ್ರಿಯ ಕುತೂಹಲ. ಇವೆರಡರಿಂದಲೂ, ಈ ಮನುಷ್ಯನ ಸಂವೇದನೆ ಗಾಢವಾಗಿ ಪ್ರಭಾವಿತವಾಗಿದೆ.

ಆದರೆ ಮನುಷ್ಯನು ವ್ಯಕ್ತಿಯಾಗಿ ತಾನೆಷ್ಟೇ ಸಂವೇದನಾಶೀಲವಾದರೂ, ಅವನ ಸುತ್ತಲಿನ ಜಗತ್ತು, ಇವನ ಸಂವೇದನಾ -ಶಕ್ತಿಯನ್ನು ಗಮನಿಸದೇ ತನ್ನದೇ ಆದ ವಿಶೃಂಖಲ, ಉನ್ಮತ್ತ ಭಾವದಲ್ಲಿ ಮೈ ಮರೆತಿದೆ. ಜೀವ-ಜಗತ್ತಿನ ಈ ಬರ್ಬರ ಸಂವೇದನಾ - ರಹಿತ ಪ್ರಪಂಚದಲ್ಲಿ, ಮನುಷ್ಯನು ತನ್ನ ಸುಖಕ್ಕಾಗಿ ಸೃಷ್ಟಿಸಿಕೊಳ್ಳುತ್ತಿರುವ ಯಂತ್ರ- ನಾಗರಿಕತೆಯೂ ಒಂದಾಗಿದೆ. ಪುಸ್ತಕದ ಭಾರ ಹೊತ್ತು ನಡೆದ ಶಾಲಾ ಮಕ್ಕಳ ಉತ್ಸಾಹಕ್ಕೆ, ಎಡಬಲದ ಗಿಡ -ಮರಗಳಲ್ಲಿ ಚೈತ್ರದ ಚಿಗುರು ನಗುವಂತಿದೆ ಎನ್ನುತ್ತಾನೆ. ಕಾವ್ಯ-ನಾಯಕ. ಆದರೆ ಈ 'ನಗೆ' ಒಂದು ಬಗೆಯ ಪ್ರೋತ್ಸಾಹಕ, ಉತ್ಸಾಹದ ನಗೆಯೂ ಆಗಬಹುದು. ಅಥವಾ ವ್ಯಂಗ್ಯವೂ ಆಗಬಹುದು.

ಕವಿತೆಯೊಳಗಿನ ಮನುಷ್ಯ ಕಚೇರಿಯನ್ನು ತಲುಪಿದ ಮೇಲೆ, ಕಚೇರಿಯಲ್ಲಿ ಆತ ಅನುಭವಿಸುವ ಒಂದು ಕಚೇರಿಯ ಒಟ್ಟೂ ಕ್ರಿಯಾ -ಸರಪಣಿಗಳು ವಿವರಿತವಾಗಿದ್ದರೆ, ಉತ್ತರಾರ್ಧದಲ್ಲಿ, ಕಚೇರಿಯಿಂದ ದಣಿದು ಸುಸ್ತಾಗಿ ಮರಳುವಾಗ ಎದ್ದು ಕಾಣುವ ಹಲವಾರು ಚಿತ್ರಗಳು, ಕಚೇರಿಯಿಂದ ಮರಳುತ್ತಿರುವವನ ಮನಸ್ಸಿನ ಮೇಲೆ ಕಚೇರಿಯ ಒಟ್ಟು ವ್ಯವಹಾರಗಳು ಮೂಡಿಸಿದ ಹಲವು ದ್ವಂದ್ವಮಾನ ಮೆಲುಕುಗಳನ್ನು ತುಂಬ ಗಾಢವಾಗಿ ಕವಿತೆ ಚಿತ್ರಿಸುತ್ತದೆ.

ಆಫೀಸಿನ ಕುರ್ಚಿ ಮೇಜುಗಳ ರೀತಿ ರಿವಾಜು
ಗಳಲ್ಲಿ ಫೈಲುಗಳು : ಪತ್ರಕುತ್ತರ ಮತ್ತೆ ಸುತ್ತೋಲೆ :
ಹೊತ್ತು ಇಳಿಯುವ ಸಮಯ : ಬಾಗಿದ ಬೆನ್ನು ಎತ್ತಿ
ಹೊರಗಿನ ಗಾಳಿ ಬೆಳಕಿನಲಿ ತೇಲಿ ಬರುವಾಗ
ಮೇದು ಮೆಲುಕಾಡಿಸುತ ಬರುವ ದನ-ಕರುಗಳು.
ಹುಡುಗನ ಹೆಗಲಲ್ಲಿ ಜೋತ ಟ್ರಾನ್ಸಿಸ್ಟರಿನ ಹಾಡು.
ಕಟ್ಟಿಗೆ ಹೊರೆ ಹೊತ್ತು ದಣಿದ ಹಜ್ಜೆಯ ಹೆಣ್ಣು
ಮಕ್ಕಳ ಹಣೆಯ ಬೆವರು. ಗುಡ್ಡವನ್ನಿಳಿದು
ಸಾಗಿದ ನೆರಳು. ಬಾನ ಮನಸಿಗೆ ಅವಿಸ್ಮರಣೀಯ
ನೆನಪುಗಳ ಮೆಲ್ಲ ತೇಲಿಸಿ ತರುವ ಬೆಳ್ಳಕ್ಕಿ ಸಾಲು.
ಆಟದ ಬಯಲಿನಲ್ಲಿ ಬರೀ ಕ್ರಿಕೆಟ್ಟು.

ಕವಿತೆಯ ಈ ಭಾಗದ ಮೊದಲ ಎಂಟು ಸಾಲುಗಳಲ್ಲಿ ಹುದುಗಿದ ಕಚೇರಿಯ ಚಿತ್ರದಲ್ಲಿ, ಬಹಳ ಸೂಕ್ಷ್ಮ ಚಿತ್ರಣಗಳಿವೆ. 'ಆಫೀಸು' ಎನ್ನುವುದೇ ಮೂಲತಃ ಮನುಷ್ಯ ತನ್ನ ಪ್ರಗತಿಗೆ,

ಸುಖಕ್ಕೆ ಹಮ್ಮಿಕೊಂಡಿರುವ ಒಂದು ಹೊಸ-ವ್ಯವಸ್ಥೆಯ ಪ್ರತೀಕವಾಗಿದೆ. ಅದೊಂದು ಸಿದ್ಧ-ಪ್ರಕ್ರಿಯೆಗಳ ಜಗತ್ತು. ಅಲ್ಲೂ ದೂರುಗಳಿವೆ, ಸುತ್ತೋಲೆಗಳಿವೆ, ಕೆಂಪು- ಪಟ್ಟಿಯ ಕಗ್ಗಂಟುಗಳಿವೆ. ಈ ಇಪ್ಪತ್ತೆಂಟು ಗಲಿಬಿಲಿಯ ನಡುವೆಯೂ ಟಾಯಿಪ್ ರೈಟರಿನ ನಿಯತ ನಡಿಗೆ ಇದೆ. ಕೆಳಗಿನಿಂದ ಮೇಲಿನ ತನಕ ರುಜುವಾಗಿ, ಹೊರ ಜಗತ್ತಿಗೆ ಹೋಗುವ ಪತ್ರಕುತ್ತರಗಳೂ ಈ ಗಲಿಬಿಲಿಯನ್ನೇನೂ ಕಡಿಮೆ ಮಾಡಿಲ್ಲವೆಂಬುದೂ ಖಾತ್ರಿಯಾಗಿದೆ. ಮನುಷ್ಯ ತನ್ನ ಸುಖಕ್ಕಾಗಿ ಈ ರೀತಿಯಾಗಿ ವ್ಯರ್ಥವೆಂದು ತಿಳಿದೂ, ತೊಡಗಲೇಬೇಕಾದ ಹೊರ-ಜಗತ್ತಿನ ಲೋಕ -ವಾಸ್ತವವೂ ಮನುಷ್ಯನನ್ನು ಇನ್ನಷ್ಟು ಬಧಿರನನ್ನಾಗಿಸುತ್ತದೆ. ತಾನು ಮಾಡುತ್ತಿರುವ ಕ್ರಿಯೆ, ಮತ್ತು ಅಂತರಂಗದ ಅನುಸಂಧಾನ ಇವುಗಳಿಂದ ಮನುಷ್ಯ ಅನುಭವಿಸುವ ಕ್ರೂರ ಅಸಹಾಯಕತೆಯ ಬಗೆಗೆ ಮಾರ್ಕ್ಸ್ ಹೇಳಿದ "ಏಲಿಯೇನೇಶನ್"ನ ಒಂದು ಮಾದರಿಯೂ ಇದಾಗಿದೆ. ಇದರಿಂದಾಗಿಯೇ ಭಾರತೀಯ ಮನಸ್ಸು, ಆಧುನಿಕ ಕಾಲದ ಒತ್ತಡವನ್ನು, ಅಸ್ತಿತ್ವೀಯ ಅಗತ್ಯಕ್ಕಾಗಿ ಎಷ್ಟೇ ಆತುಕೊಂಡಿದ್ದರೂ, "ಹೇಗಿದ್ದರೂ ಮುಗಿಸಬೇಕಾದ" ಕೆಲಸವನ್ನಾಗಿಯೇ ತನ್ನ ಸಮಗ್ರ ಭಾಗಿತ್ವವನ್ನು ತಾನು ಪರಿಭಾವಿಸುತ್ತದೆ. ನಶ್ವರತೆ, ಸಾವು ಇತ್ಯಾದಿ ಮೂಲಭೂತ ಸತ್ಯಗಳ ಸಂಸ್ಕಾರವಿರುವ ಮನಸ್ಸಿನ ಕ್ರೂರ ದ್ವಂದ್ವವಿದು. ಅತ್ತ ಕಣ್ಣೆದುರಿನ ವಾಸ್ತವದಿಂದ ವಿಮುಖನಾಗುವ ಶಕ್ತಿಯೂ ಇಲ್ಲದೆ, ಆಳವಾಗಿ, ಉತ್ಸಾಹದಿಂದ ಶ್ರದ್ಧೆಯಿಂದ ತೊಡಗುವ ಪ್ರಜ್ಞೆಯ ಬಲವೂ ಇಲ್ಲದೆ "ಆಧುನಿಕತೆ" ಎಂಬ ಕಾಲೋಚಿತ ಒತ್ತಡದಲ್ಲಿ ಸುಸ್ತಾದ ವ್ಯಕ್ತಿಯ ದುರಂತವಿದು.

ಕಚೇರಿಯಿಂದ ಮರಳಿ ಹೋಗುವಾಗ ಇಂಥ ತ್ರಸ್ತ ಮನುಷ್ಯನಿಗೆ ಕಾಣುವ "ಮೇದು ಮೆಲುಕಾಡಿಸುತ ಬರುವ ದನ-ಕರುಗಳು" "ಹೆಗಲಲ್ಲಿ ಜೋತ ಟ್ರಾನ್ಸಿಸ್ಟರ್‌ನಲ್ಲಿ ಹಾಡು ಕೇಳುತ್ತ ಬರುವ ದನ ಕಾಯುವ ಹುಡುಗ", "ಕಟ್ಟಿಗೆಯ ಹೊರೆ ಹೊತ್ತು ದಣಿದ ಬೆವೆತ ಹೆಣ್ಣು ಮಕ್ಕಳು" "ಬೆಳ್ಳಕ್ಕಿಗಳ ಸಾಲು" "ಆಟದ ಬಯಲಲ್ಲಿ ನಡೆದ ಕ್ರಿಕೆಟ್ಟು" ಇವೆಲ್ಲವೂ ಬಿಡಿ ಬಿಡಿ ಚಿತ್ರಗಳೂ ಒಟ್ಟಾಗಿ, ಕಚೇರಿಗೆ ಹೋಗಿ ಬರುವ ಮನುಷ್ಯನ ಒಟ್ಟು ವ್ಯವಸ್ಥೆಯ ಬಗೆಗೆ ಉದಾಸೀನವಾಗಿವೆ ಎಂಬ ಸಂಕಟದ ಚಿತ್ರವೂ ಇದೆ. ಜೊತೆಗೆ ಮೈಮರೆತು ಬದುಕುವ ಈ ಜಗತ್ತಿನ ಜೀವಗಳೆದುರು, ಸ್ವಪ್ರಜ್ಞೆಯಿಂದ ಬಾಳಿನ ಅರ್ಥ ಹುಡುಕಲು ಹೊರಟ ಮನುಷ್ಯನ ಚಿಂತನ- ಕಚೇರಿಯನ್ನೇ ವ್ಯಂಗ್ಯವಾಡುವಂತೆಯೂ ಇವೆ. ಕವಿತೆಯ ಕೊನೆಯ ಭಾಗ, ಕಚೇರಿ ಕಾಯಕದ ಮನುಷ್ಯ ಮನೆ ತಲುಪಿ, ಹೊರಳಿ ನೋಡಿದರೆ ಅಲ್ಲಿರುವ ನೂರೆಂಟು ಮೂಲಭೂತ ಪ್ರಶ್ನೆಗಳು, ಅವನ ಇಡೀ ದಿನದ ಒಟ್ಟೂ ಬದುಕಿನ ಬಗೆಗೆ ಅವನಿಗೇ ಭೀತಿ, ಆತಂಕ ನಿರಾಶೆಯನ್ನು ಹುಟ್ಟಿಸುವಂತಿವೆ.

> ಈ ದಿವಸ ಮಾಡಿ ಮಟ್ಟಿದ್ದೇನು ? ಎದೆಯ ತಟ್ಟಿದ್ದೇನು?
> ನಿನ್ನೆಗಳ ಇಂದು ಎಳೆತಂದು, ನಾಳೆಗುತ್ತರವ
> ಹುಡುಕುವ ಉತ್ತರೋತ್ತರ ಕೆಲಸ. ಪುರಸತ್ತಿರದೆ
> ಸುತ್ತುವುದು ಹೀಗೆ ನಮ್ಮ ಸುತ್ತು: ಈ ಜಗತ್ತು-

ಪ್ರಶ್ನೆಗಳೇನೋ ಇವೆ. ಅವುಗಳ ಅಭಿವ್ಯಕ್ತಿಗೆ ಸೃಜನಶೀಲನಾದವನಿಗೆ ದಾರಿಯೂ ಇದೆ ಎಂದರೆ, ಆ ದಾರಿಯೂ ಈಗ

**ವಿವಿಧ ಛಂದಸ್ಸಿನಲಿ ಕಸರತ್ತು ಲಯವಾಗಿ, ಈಗೀಗ**
**ವಿರಳ ಸರಳ ರಗಳೆಯ ಹೊಕ್ಕು ಹೊರಬಂದು**
**ಮುಕ್ತಛಂದದ ಹೆಸರಿನಲ್ಲಿ ನಿದಾನ ಹೆಜ್ಜೆನಿಂದು**

ಹೇಗೆ ಕಳೆಗುಂದಿದೆ, "ವಿವಿಧ ಛಂದಸ್ಸಿನ ಕಸರತ್ತು" ಅಥವಾ 'ಸರಳ-ರಗಳೆ' ಇವೆರಡೂ ಇಲ್ಲದ ಸೃಜನ ಜಗತ್ತೂ ದುರ್ಬಲವಾಗಿದೆ. ಒಂದರ್ಥದಲ್ಲಿ "ವಿವಿಧ ಛಂದಸ್ಸಿನ ಕಸರತ್ತು" ರೂಪಕ - ಶಕ್ತಿಯ ಪ್ರತೀಕವಾದರೆ, 'ವಿರಳ-ಸರಳ-ರಗಳೆ' ಸಹಜವಾದ 'ಚಿತ್ರಕ-ಶಕ್ತಿ'ಯ ಪ್ರತೀಕವಾಗಿದೆ. ಹೇಗೆ ಬದುಕಿನಲ್ಲೂ, ಬದುಕಿನ ಅಭಿವ್ಯಕ್ತಿ ಕ್ರಮದಲ್ಲೂ, ಮನುಷ್ಯ ಕಳೆದುಕೊಂಡ, ಆತ್ಮ-ವಿಶ್ವಾಸದ, ಮೂರ್ತ ಹುಟ್ಟಿದ ತೀವ್ರ-ತಲ್ಲಣ, ಮತ್ತು ಸೋಲುಗಳನ್ನು ಈ ಕವಿತೆ ಹಿಡಿದಿಡುತ್ತದೆ.

ಏನಿದ್ದರೂ ಇಲ್ಲಿನ ಮನುಷ್ಯ, ಕಟ್ಟಿಗೆ ಹೊರೆ ಹೊತ್ತು ಬರುವ ಬೆವೆತ ದುಡಿಮೆಯ ಹೆಣ್ಣುಮಕ್ಕಳನ್ನು ನೋಡಬಲ್ಲ ಕಾಲದವನು. ದನ ಕಾಯುವ ಹುಡುಗನ ಹೆಗಲಲ್ಲಿ 'ಟ್ರಾನ್ಸಿಸ್ಟರ್' ಇರುವುದನ್ನು ಮಾತ್ರ ಕಂಡವನು. ಅವನ ಕಚೇರಿಯಲ್ಲಿ ಇನ್ನೂ ಗಣಕ-ಯಂತ್ರ ಕಾಲಿಟ್ಟಿಲ್ಲ. "ಕಾಗದ ರಹಿತ ಕಛೇರಿ"ಯ ಪರಿಕಲ್ಪನೆ ಕಾಲಿಟ್ಟಿಲ್ಲ. ಮದುವೆಯಲ್ಲಿ ಕೊಟ್ಟ ವಾಚನ್ನು ಇನ್ನೂ ಕಟ್ಟಿಕೊಳ್ಳುವಷ್ಟಾದರೂ 'ಭೂತ-ಪ್ರೀತಿ'ಯನ್ನಿಟ್ಟುಕೊಂಡವನು. "ಈ ದಿವಸ ಮಾಡಿ ಮಟ್ಟಿದ್ದೇನು?" ಎಂದು ಮನೆ ತಲುಪಿದ ಮೇಲಾದರೂ ಕೇಳಿಕೊಳ್ಳಬೇಕಾಗುವಷ್ಟು ಅಂತರಂಗವನ್ನು ಜೀವಂತವಾಗಿಟ್ಟುಕೊಂಡವನು. ಹೀಗಾಗಿ ಇಡೀ ಕವಿತೆ, ತಾನು ಸ್ಫೋಟಿಸಬೇಕೆಂದು ಕೊಂಡಿರುವ ದೀರ್ಘ-ನಿಟ್ಟುಸಿರಿಗೆ, ಅನುಕೂಲಕರವಾದ ಲೋಕ - ವಾಸ್ತವವನ್ನು ದಟ್ಟವಾಗಿ ಚಿತ್ರಿಸುವ ಸನ್ನಾಹದಲ್ಲಿ ಸಫಲವಾಗಿದೆ.

ಆದರೆ ಇಂದು ಕಚೇರಿಗಳೂ ಹಾಗೆ ಉಳಿದಿಲ್ಲ. ಮನುಷ್ಯನೂ ಆ ರೀತಿಯಾಗಿ ಉಳಿದಿಲ್ಲ. ಹಿಂಬಡದ ಗಾಯವನ್ನು 'ನೋವು -ನಿವಾರಕ'ಗಳಿಂದ ಮರೆಯುವ ಚಟಕ್ಕಿಳಿದ ಮನುಷ್ಯನಿಗೆ ಗಡಿಯಾರದ ಅಂತಂರಂಗ ಅದ್ಭುತವಾಗಿಯೂ ಕಾಣಲಾರದು. ಆದರೆ ಕಣವಿಯವರ ಈ ಕವಿತೆ, ಬದುಕಿನ ನೋವೂ ಕೂಡ, ಬದುಕಿನ ಅರ್ಥಶೋಧನೆಗೆ ಪೂರಕವಾಗಿ ಕೆಲಸ ಮಾಡಬಲ್ಲ ದೇಶ-ಕಾಲಗಳ ಚಿತ್ರಗಳ ಸಂಕಲನವಾಗಿದೆ. ಅಂತೆಯೇ ಅದು ನಮಗೆಲ್ಲ ಆಸೆಬುರುಕರಂತೆ ಓದಲು ಕರೆಯುತ್ತದೆ. ಯಾಂತ್ರಿಕ ಬದುಕಿನ ನೀರಸತೆ ಕೂಡ ಆಧ್ಯಾತ್ಮಿಕ ವಿಷಾದ-ಯೋಗವಾಗಬಲ್ಲ ಒಂದು ಪ್ರಕ್ರಿಯೆಯ ಮಾದರಿಯನ್ನು ಈ ಕವಿತೆ ತುಂಬ ಗಾಢವಾಗಿ ಹಿಡಿದಿಡುತ್ತದೆ.

ಯಾವುದೇ ಕವಿತೆಯ ಬಗೆಗೆ ಎಷ್ಟು ಹೇಳಿದರೂ ಅದು ಲಿಂಚಿ ಹೇಳುವಂತೆ "ಹೊಳೆಯ ಪಕ್ಕದಲ್ಲಿ ಕುಳಿತು ನೀರನ್ನು ಮಾರುವ" ಕೆಲಸವೇ. ನಾನು ಪ್ರೀತಿಯಿಂದ ಅನುಭವಿಸಿದ ಈ ಕವಿತೆ ಎಂಬ ಚಂದ್ರನಿಗೆ ನನ್ನ ಲೇಖನ ಒಂದು ಕಿರು- ತೋರುಬೆರಳು ಎಂಬುದು ನನಗೆ ಗೊತ್ತಿದೆ. ಬೆರಳಿನ ನೆರವು ಪಡೆದವರಿಗೆ ಧನ್ಯವಾದ. ಬೆರಳನ್ನು ಸರಿಸಿ ಹೋದವರಿಗೆ ಶರಣು ಶರಣಾರ್ಥಿಗಳು.

**ಆನಂದ ಝುಂಜರವಾಡ**

# ೫೪. ಇರುವೆ

ಈಟಿರುವೆ
ಕೀಟಿರುವೆ; ಬಾಲ್ಯದಿಂದಲು ನನ್ನ
ಕಣ್ಣೊಳಗೆ ನಾಟಿರುವೆ.
ಎಲ್ಲಿದ್ದರೂ ಸ್ವಲ್ಪವೂ ಸದ್ದಿಲ್ಲದಿರುವೆ.
ಇದೀಗ
ಗುದ್ದಿನೊಳಗಿಂದ ಪುದು ಪುದು ಎದ್ದು
ಸ್ಪರ್ಶಾಂಗಗಳ ಗಾಳಿಗಾಡಿಸಿ
ಮೂಸಿ, ಗುರುತಿಸಿ, ಅದ್ದಿ
ಆತಂಕಗಳ ದಾಟಿರುವೆ.
ಎಲ್ಲ ತುಳಿದಾಟದಲಿ, ನಿನ್ನದೇ
ಹಾದಿಯನು ಹಿಡಿದು ಹೊರಟಿರುವೆ.

ಕೆಂಪಿರುವೆ
ಕಪ್ಪಿರುವೆ; ಗುಂಪುಗಳ
ಕಟ್ಟಿರುವೆ ; ಒಮ್ಮೊಮ್ಮೆ
ಬಿಟ್ಟಿರುವೆ. ಆದರೂ ಸೌಹಾರ್ದದಲಿ
ಮತ್ತೆ ಸಾಲುಗೊಂಡಿರುವೆ.
ಮನೆ-ಹೊಸತಿಲು-ಬೀದಿ ಮೇಲೆ ಸರಸರ ಹರಿದು
ಎಲ್ಲೆಡೆಗು ದೌಡಾಯಿಸಿರುವೆ
ಎಲ್ಲಿಗೆಲ್ಲಿಗೆ ದಾಳಿ ?
ಗೆದ್ದಲಿನ ಹುತ್ತ, ಕೀಟಗಳ ತೋಟ

ಹೂವ ಮಕರಂದ, ಧಾನ್ಯಗಳ ಕಣಜ
ಮೇಯಲಿಕ್ಕೆ ?
ಹೊಸ ಬಿಡಾರವ ಹುಡುಕಿ ತಂಗಲಿಕ್ಕೆ ?
ನೆಲ ಕೊರೆದು
ಮಣ್ಣ ಕಣ ಕಣವ ಪೇರಿಸಿ
ರಾಣಿಗರಮನೆಯ ಕಟ್ಟಿ ಕಾಪಾಡುವುದಕೆ?
ಇಲ್ಲ -
ವೈರಿಯ ಜೊತೆಗೆ ಹೋರಾಟಕೆ ?

ಸತ್ತ ಜೀವಿಗಳನೆತ್ತಿ ಎಳೆದು ಹಾಕಿರುವೆ.
ಬಿಳಿ ತತ್ತಿಗಳ ಒಂದೊಂದೆ ಹೊತ್ತು
ದೂರ ಸಾಗಿರುವೆ.
ಎಂಬತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ
ನಾನು ಮೇಲಿರುವೆ - ಎನುವಾಗ
ಗುಪ್ತಸ್ಥಳವನು ಹೊಕ್ಕು
ಕಚ್ಚಿಬಿಟ್ಟಿರುವೆ.

೧

ಚೆನ್ನವೀರ ಕಣವಿಯವರ ಕಾವ್ಯದ ಬಗ್ಗೆ ಇಲ್ಲಿಯವರೆಗೆ ನಡೆದ ಅಧ್ಯಯನಗಳಲ್ಲಿ ಚರ್ಚಿತವಾದ ಮುಖ್ಯ ಸಂಗತಿಗಳನ್ನು ಸಂಗ್ರಹಿಸುವುದಾದರೆ - ನಿಸರ್ಗ, ಪ್ರೇಮ-ಕಾಮ- ದಾಂಪತ್ಯ, ವಾತ್ಸಲ್ಯ, ಕಾಲ, ಸಮಕಾಲೀನ ಪ್ರಜ್ಞೆ, ಪರಂಪರೆ, ಸಾತತ್ಯ, ಅನನ್ಯತೆ, ಕಾವ್ಯಭಾಷೆ, ಪ್ರತಿಮಾ ವಿಧಾನ, ಸುನೀತ, ಮಾಧ್ಯಮಶ್ರದ್ಧೆ, ಕಟ್ಟುವಿಕೆ ಇತ್ಯಾದಿ. ಈ ಚರ್ಚೆಯಲ್ಲಿ ಅವರ ಕೆಲವು ಕವಿತೆಗಳು ಪ್ರಸ್ತಾಪಗೊಳ್ಳುವುದಿಲ್ಲ ಅಥವಾ ಮುಖ್ಯ ಅನ್ನಿಸಿಲ್ಲ. ಉದಾ : ಕಾಡು ಮಲ್ಲಿಗೆ, ಒಂದು ಪುಟ್ಟ ಹಕ್ಕಿಗೆ, ಬೇಲಿಯ ಮೇಲಿನ ನೀಲಿಯ ಹೂಗಳು, ಜೀನಿಯಾ, ಜರ್ಬರಾ, ಮಿಂಚುಹುಳ, ಸೊಳ್ಳೆ, ಕೀಟಕ, ಹುಲ್ಲು, ಇರುವೆ.... ಇತ್ಯಾದಿ. ಇದಕ್ಕೆ ಕಾರಣ ಇವು ಸಣ್ಣಪುಟ್ಟ ಸಂಗತಿಗಳಾಗಿರುವುದು. ಮೇಲೆ ಉದಾಹರಿಸಿದ ಮತ್ತು ಇಂಥ ಇನ್ನಷ್ಟು ಕವಿತೆಗಳನ್ನು ಒಟ್ಟಾಗಿ ಗಮನಿಸಿದರೆ ಅವರ ಕಾವ್ಯ ಮತ್ತೊಂದು ಬಗೆಯ ಚರ್ಚೆಯನ್ನು ಬಯಸುವಂತೆ ತೋರುತ್ತದೆ. ಸಣ್ಣಪುಟ್ಟ ಸಂಗತಿಗಳೊಳಗಿನ ಸೂಕ್ಷ್ಮ. ಕ್ರಿಯಾಶೀಲ ಹಾಗೂ ವಿಶಾಲ ಜಗತ್ತಿನೊಂದಿಗೆ ಕಣವಿಯವರು ಸಾಧಿಸಿದ ಧ್ಯಾನಸ್ಥ ತಾದಾತ್ಮ್ಯ ಹಾಗೂ ಅನುಸಂಧಾನಗಳನ್ನು ಈ ಕವಿತೆಗಳು ನಿರೂಪಿಸುತ್ತವೆ. ಸರಳ, ಸಹಜ, ಸಾಮಾನ್ಯ, ಲೌಕಿಕ ಬದುಕಿನ ವಿನ್ಯಾಸಗಳಲ್ಲಿಯ ಸೂಕ್ಷ್ಮ ಸಂಘರ್ಷ ಹಾಗೂ ಒಳನೋಟಗಳನ್ನು ಒಳಗೊಂಡಿವೆ.

ಗುಬ್ಬಿಯ ಪುಟ್ಟ ಆಕೃತಿ
ಮರೆಯಾಗಿ
ತಾಯಿಯ ವಿಶಾಲ ಹೃದಯದಲ್ಲಿ
ಕರಗಿ ಹೋಗುತ್ತೇನೆ (ಗುಬ್ಬಿ)

ಸಿಮೆಂಟು ಗೋಡೆಯ ಬಿರುಕು, ಟಾರು ಬೀದಿಯ ಒಡಕು
ಎಂಥ ಇಕ್ಕಟ್ಟಿನಲ್ಲೂ ಹೊರಬರುತ್ತದೆ
ತುರಾಯಿ ಹಚ್ಚಿಕೊಂಡು (ಹುಲ್ಲು)

ಚಿಟ್ಟಿಗುಬ್ಬಿ ಪುಟ್ಟ ಗುಬ್ಬಿ
ಮುಳ್ಳುಬೇಲಿಯನ್ನು ತಬ್ಬಿ
ಚೀರಿ ಚೀರಿ ಗಂಟಲುಬ್ಬಿ
ಒಡೆಯುವಂತೆ ಹಾಡಿತು (ಒಂದು ಪುಟ್ಟ ಹಕ್ಕಿಗೆ)

ಬಗೆಬಗೆಯ ಆಟ ಬೇಟ
.........................
ಕಟ್ಟಿದ ಹುಟ್ಟು
ಎಟುಕದಂತಿದೆ ಇಂದಿಗೂ
ಆ ಕಲೆಯ ಗುಟ್ಟು (ಕೀಟಕ)

ಬೇಕಿಲ್ಲ ದಿನವೂ ನೀರಿನಾರೈಕೆ
ವಾಸನೆಯ ಸೋಕಿಲ್ಲ
ಗಟ್ಟಿ ಬಣ್ಣದ ನಿಂತ ನಿಲುವಿನಲೆ
ತಟ್ಟನೇ ಕಣ್ಣು ಸೆಳೆಯುವುದು
ಕವಿ ಸಮಯದ ಕುಸುಮ ಕೋಮಲತನಕ್ಕೆ
ಧಕ್ಕೆ ! (ಜೇನಿಯಾ)

ಜರ್ಬರಾ
ಅಬ್ಬರವಿಲ್ಲದ ಅಪ್ಪಟ ಕವಿತೆ (ಜರ್ಬರಾ)

ಮೇಲೆ ಉದಾಹರಿಸಿದ ಅಥವಾ ಈ ಮಾದರಿಯ ಕವಿತೆಗಳು ಕಣವಿಯವರ ಮೊದಲ ಸಂಕಲನದಿಂದ ಕೊನೆಯ ಸಂಕಲನದವರೆಗೂ ಕಂಡುಬರುತ್ತವೆ. 'ಅಸ್ತಿತ್ವದ ಪ್ರಶ್ನೆ'ಯನ್ನು

ಮುಖ್ಯವಾಗಿಟ್ಟುಕೊಂಡು ಅದರ ವಿಭಿನ್ನ ಆಯಾಮಗಳನ್ನು ಕುರಿತು ಚಿಂತಿಸುತ್ತವೆ. ಇಲ್ಲಿ ವಸಾಹತುಶಾಹಿ ಚೌಕಟ್ಟಿನೊಳಗೆ ದೇಶೀ ಮನಸ್ಸಿನ ಅಸ್ತಿತ್ವದ ಹುಡುಕಾಟವಿದೆ. ಬಹುದೊಡ್ಡ ಕಾವ್ಯ ಪರಂಪರೆ ಹಾಗೂ ವರ್ತಮಾನದ ಘನವಾದ ಸಾಹಿತ್ಯಕ-ಸಂದರ್ಭಗಳ ನಡುವೆ ಕವಿಯ ಸ್ವಅಸ್ತಿತ್ವದ ಹುಡುಕಾಟವೂ ಇದೆ. ಅಸ್ತಿತ್ವ ಹಾಗೂ ಅಭಿವ್ಯಕ್ತಿಗಳ ನಡುವಿನ ಸಂಬಂಧವನ್ನು ನಿರ್ವಚಿಸಿಕೊಳ್ಳುವ ವಿಧಾನವೂ ಇದೆ. ಆಶ್ರಿತ - ಜೀವದ ಸಂಭ್ರಮವನ್ನೂ, ವೈವಿಧ್ಯತೆಯ ಚೆಲುವನ್ನೂ ಸಣ್ಣಪುಟ್ಟ - ವಸ್ತು, ವಿಷಯ ಜೀವರಾಶಿಗಳ ಒಡಲಾಳದ ತುಡಿತಗಳನ್ನೂ ಗ್ರಹಿಸಲು ಕವಿಗೆ ಸಾಧ್ಯವಾಗಿದೆ. ಕಳೆದು ಹೋಗುವ ಭಯ, ನಿರ್ಲಕ್ಷ್ಯಕ್ಕೊಳಗಾದ ವಿಷಾದ, ಪರಂಪರೆಯನ್ನು ಆಸ್ವಾದಿಸುವ ಸಂಭ್ರಮ. ಅದನ್ನರಗಿಸಿಕೊಂಡು ಅನನ್ಯತೆಯ ಹುಡುಕಾಟ - ಹೋರಾಟ ಮತ್ತು ಸಾಧಿಸುವ ಪ್ರಕ್ರಿಯೆ ಬಗೆಗಿನ ತೃಪ್ತಿಗಳು ಇಂಥ ಕವಿತೆಗಳಲ್ಲಿವೆ. ಕಣವಿಯವರ ಸೃಜನಶೀಲ ವಿಕಾಸದ ಕ್ರಮವನ್ನು ಕುರಿತು ಒಳನೋಟಗಳನ್ನು ನೀಡಬಲ್ಲ ಈ -ಇಂಥ ಕವಿತೆಗಳ ಬಗ್ಗೆ ಹೆಚ್ಚು ಚರ್ಚೆಯಾಗಬೇಕಿದೆ.

೨

ಈ ಇರುವೆಯ ಮೇಲೆ
ನನ್ನ ಭಾರವಾದ ಹೆಜ್ಜೆಯನ್ನಿಟ್ಟೆ
ತುಸುಕಾಲದ ನಂತರ ತೆಗೆದೆ
ಇರುವೆ ಮತ್ತೆ ಚಲಿಸುತಿದೆ
ಏ, ಸೂಜಿಗಾತ್ರದ ಜೀವವೇ
ನನ್ನ ಭಾರ ಹೊರುವ
ನಿನ್ನ ಬೆನ್ನಿಗೆ ಶರಣು (ಎನ್.ಕೆ. ಹನುಮಂತಯ್ಯ)

ಹೆಜ್ಜೆಯ ಮೇಲೆ ಹೆಜ್ಜೆ
ಯಾರೂ ಕೇಳದ ಗೆಜ್ಜೆ
ಜಾರುತಿದೆ ಹೈವೇ ಮೇಲೊಂದು ಕಪ್ಪು ಇರುವೆ
(ಕಪ್ಪು ಇರುವೆ ಕಚ್ಚುವುದಿಲ್ಲ
ಕೆಂಪು ಇರುವೆ ಕಚ್ಚುತ್ತದೆ ನಂಬಿ?)
ಅಂಚೆಗಾಲಿನ ಕೂಸು ಕುಂಡೆಯನು ಎತ್ತೆತ್ತಿ ಇಟ್ಟಂತೆ
ಮನೆಬಿಟ್ಟು ಬಂದ ಪುಟ್ಟ ಪೋರ ದಾರಿ ತಪ್ಪಿದಂತೆ
ಒಂಟಿ ರೈಲು ಡಬ್ಬಿಯಂತೆ
ಕಪ್ಪು ಟಾರಿನ ಮೇಲೆ ಉರುಳುವ ಕಪ್ಪು ಇರುವೆ
ಕಣ್ಣಿಗೆ ಕಾಣುವದೊಂದು ಸೋಜಿಗವೇ ? (ಆರೀಫ ರಾಜ್)

ದಿನದ ಮೂಲೆಯಲಿ ಕುಳಿತು
ಇರುವೆಗಳು ಹರಿಯುವ ದಾರಿಯನ್ನು ನೋಡುತ್ತ
ಬರುವ ಸೂಚನೆಯೆಂಬಂತೆ
ಮಳೆಯೋ ಚೆಗಾವರನೋ ನೆರೂಡನೋ ಅಲ್ಲಮನೋ
ಇತ್ತ ಕಡೆ ಬರುಬಹುದೆಂದು ಕಾಣುತ್ತೆ (ಸುಬ್ಬು ಹೊಲೆಯಾರ)

ಸಮಕಾಲೀನ ಕನ್ನಡ ಕಾವ್ಯದಲ್ಲಿ ಇರುವೆ ಮರಳಿ ಮರಳಿ ಮೈದಾಳುತ್ತಿದೆ. ಹೊಸತಲೆಮಾರಿನ ತುಂಬ ಸಂವೇದನಾಶೀಲ ಕವಿಗಳು ತಮ್ಮ ಅಸ್ತಿತ್ವ ಮತ್ತು ತಲ್ಲಣಗಳ ಅಭಿವ್ಯಕ್ತಿಗೆ ರೂಪ ನೀಡಲು ಇರುವೆಯ ರೂಪಕವನ್ನು ಸಾರ್ಥಕವಾಗಿ ಬಳಸುತ್ತಿದ್ದಾರೆ. ಎಲ್ಲ ಬಗೆಯ ತುಳಿತಗಳನ್ನೂ ಜೀರ್ಣಿಸಿಕೊಂಡು ಬದುಕಿನೆಡೆ ಮುಖ ಮಾಡುವ ದಲಿತ - ಸಂಸ್ಕೃತಿಯ ಸಂಕಟ ಮತ್ತು ಜೀವನ್ಮುಖತೆಯ ಘನತೆಗೆ ಕವಿ ಶರಣು ಹೇಳುತ್ತಾರೆ. ಜಾಗತೀಕರಣದ ಅಭಿವೃದ್ಧಿ ಪಥ (?) ದಲ್ಲಿ ತಳ ಸಮುದಾಯದ ಮನಸ್ಸು ಅನುಭವಿಸುತ್ತಿರುವ ಒಂಟಿತನ, ಅಸಹಾಯಕತೆ ಅಸ್ತಿತ್ವಕ್ಕಾಗಿ ನಡೆಸಿರುವ ಮೌನ ಹೋರಾಟ, ಕೀಳರಿಮೆಗಳು ಎರಡನೆ ಕಾವ್ಯಭಾಗದಲ್ಲಿ ಮಡುಗಟ್ಟಿವೆ. ಕವಿ ಇರುವೆಯ ಸಾಲುಗಳ ಹರಿದಾಟದಲ್ಲಿ ಹೋರಾಟದ ಕನಸು ಹಾಗೂ ಜ್ಞಾನದ ದಾರಿಗಳನ್ನು ನಿರೀಕ್ಷಿಸುತ್ತಾನೆ. ಸನಾತನ ವರ್ಣವ್ಯವಸ್ಥೆ ಹಾಗೂ ನವ ವಸಾಹತುಶಾಹಿಯ ಹತ್ಯಾತ್ಮಕ ಆಕ್ರಮಣಕ್ಕೆ ತುತ್ತಾಗಿ ದುರ್ಬಲಗೊಂಡಿರುವ, ಛಿದ್ರ ಛಿದ್ರವಾಗುತ್ತಿರುವ ಸಾಂಸ್ಕೃತಿಕ ನೆಲೆಗಳ ವರ್ತಮಾನದ ಸಂಕಟ, ಅಸ್ತಿತ್ವದ ಹೋರಾಟ ಹಾಗೂ ಅನನ್ಯತೆಯ ಶೋಧ ಅದರೆಲ್ಲ ಸಂಕೀರ್ಣತೆ ಮತ್ತು ಸೂಕ್ಷ್ಮಗಳೊಂದಿಗೆ ಮೇಲಿನ ಕವಿತೆಗಳಲ್ಲಿ ಅನಾವರಣಗೊಂಡಿವೆ. ಕಣವಿಯವರ 'ಇರುವೆ' ಕವಿತೆಯ ಚರ್ಚೆಗೆ ಈ ವರ್ತಮಾನಸಂವೇದನೆಗಳು ಮುಖಾಮುಖಿ ಭಿನ್ನ ದಾರಿಯನ್ನು ತೋರಿಸಬಹುದೆಂದು ಭಾವಿಸುತ್ತೇನೆ.

'ಇರುವೆ' ('ಜೀವಧ್ವನಿ' ಸಂಗ್ರಹ) ನಾಮಪದವಾದಾಗ ಒಂದು ಕೀಟ, ಅತೀ ಸಣ್ಣ ಜೀವ. ಕ್ರಿಯಾಪದವಾದಾಗ ಇರುವಿಕೆ ಅಥವಾ ಅಸ್ತಿತ್ವ. ಎರಡೂ ಮಿಳಿತವಾದರೆ ಪುಟ್ಟ ಜೀವವೊಂದರ ಇರುವಿಕೆ, ಚಿಕ್ಕಪುಟ್ಟ ವಿಷಯಗಳು ತಮ್ಮ ಅಸ್ತಿತ್ವವನ್ನು ತಾವೇ ಘೋಷಿಸಿಕೊಳ್ಳಬೇಕಾದ ಅನಿವಾರ್ಯತೆಗೆ ಒಳಗಾಗುತ್ತಿವೆ. ವ್ಯವಸ್ಥೆಯ ಕೇಂದ್ರದಲ್ಲಿ ಅಧಿಕಾರ ಸ್ವಶಕ್ತಿಗಳು ಸ್ಥಾಪನೆಗೊಂಡು 'ಪ್ರಧಾನ'ವೆಂಬ ಪಟ್ಟವೇರಿರುವಾಗ ಅಂಚಿನಲ್ಲಿರುವ ಸಂಗತಿಗಳು 'ನಾವೂ ಇದ್ದೇವೆ' ಎಂದು ತಾವೇ ಹೇಳಿಕೊಳ್ಳಬೇಕಾಗುತ್ತದೆ. ಇರುವೆ ಕವಿತೆಯಲ್ಲಿ ಅಸ್ತಿತ್ವದ ಸ್ವಯಂ ಘೋಷಣೆಯ ವಿಷಾದ ನೋವುಗಳನ್ನು ಧ್ವನಿಸುತ್ತದೆ.

ಇರುವೆ ಕವಿತೆಯನ್ನು ಹೀಗೆ ಅರ್ಥೈಸಿಕೊಳ್ಳಬಹುದು :

೧. ಇರುವೆ ಸ್ವಗತದಲ್ಲಿ ಹೇಳಿಕೊಂಡಂತೆ
೨. ಕವಿ ಇರುವೆಯೊಂದಿಗೆ ಸಂವಾದ ನಡೆಸಿದಂತೆ
೩. ಆಳದಲ್ಲಿ ಎರಡನ್ನೂ ಮುಖಾಮುಖಿಯಾಗಿಸಿದಂತೆ

ಈ ಮೂರು ಬಗೆಯ ನಿರೂಪಣೆಗಳಲ್ಲಿ ದಕ್ಕುವ ಅರ್ಥ ಸಾಧ್ಯತೆಯನ್ನು ಹೊಸ ತಲೆಮಾರಿನ ಕವಿಗಳ ಅಭಿವ್ಯಕ್ತಿಯೊಂದಿಗೆ ಮುಖಾಮುಖಿಯಾಗಿಸುತ್ತ ಕಣವಿಯವರ ಇರುವೆ ಕವಿತೆಯ ಆಶಯಗಳನ್ನು ವಿಮರ್ಶಿಸಲಾಗಿದೆ.

ಈಟಿರುವೆ
ಕೀಟಿರುವೆ; ಬಾಲ್ಯದಿಂದಲು ನನ್ನ
ಕಣ್ಣೊಳಗೆ ನಾಟಿರುವೆ.
ಎಲ್ಲಿದ್ದರೂ ಸ್ವಲ್ಪವೂ ಸದ್ದಿಲ್ಲದಿರುವೆ.
ಇದೀಗ
ಗುದ್ದಿನೊಳಗಿಂದ ಪುದು ಪುದು ಎದ್ದು
ಸ್ಪರ್ಶಾಂಗಗಳ ಗಾಳಿಗಾಡಿಸಿ
ಮೂಸಿ, ಗುರುತಿಸಿ, ಅಡ್ಡಿ-
ಆತಂಕಗಳ ದಾಟಿರುವೆ.
ಎಲ್ಲ ತುಳಿದಾಟದಲಿ, ನಿನ್ನದೇ
ಹಾದಿಯನು ಹಿಡಿದು
ಹೊರಟಿರುವೆ.

ಸದ್ದಿಲ್ಲದೆ ಇರುವಿಕೆ ಹಾಗೂ ತುಳದಾಟದ ಹಾದಿ ಇಲ್ಲಿಯೂ ಎದುರಾಗಿದೆ. ಅಲ್ಲಿರುವ ತಲ್ಲಣ ಸಂಕಟಗಳು ಇಲ್ಲಿಲ್ಲ. ಬದಲಿಗೆ ಜೀವನಾನ್ವೇಷಣದ ಉತ್ಸಾಹವಿದೆ. ಕಣವಿಯವರ ಭಾಷಿಕ ಕ್ರಮದಲ್ಲಿ ಒಂದು ಬಗೆಯ ಉತ್ಸಾಹ ಜೀವಂತಿಕೆ ಇದೆ. ಮನರಂಜನಾತ್ಮಕತೆ ಇದೆ. ಉದಾರವಾದಿ ನೆಲೆ ಹಾಗೂ ಸಮಾಜವಾದಿ ನೆಲೆಗಳ ಗ್ರಹಿಕೆಯ ಸಾಮೀಪ್ಯ ಹಾಗೂ ವ್ಯತ್ಯಾಸಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಇರುವೆಯ ಜೀವನಕ್ರಮವನ್ನು ಸಹಜವಾಗಿ ಕವಿ ಕಟ್ಟಿಕೊಡುತ್ತಾರೆ.

ಕೆಂಪಿರುವೆ
ಕಪ್ಪಿರುವೆ; ಗುಂಪುಗಳ
ಕಟ್ಟಿರುವೆ ;ಒಮ್ಮೊಮ್ಮೆ
ಬಿಟ್ಟಿರುವೆ. ಆದರೂ ಸೌಹಾರ್ದದಲಿ
ಮತ್ತೆ ಸಾಲುಗೊಂಡಿರುವೆ .
ಮನೆ-ಹೊಸಿತಿಲು-ಬೀದಿ ಮೇಲೆ ಸರಸರ ಹರಿದು
ಎಲ್ಲೆಡೆಗೂ ದೌಡಾಯಿಸಿರುವೆ.
ಎಲ್ಲಿಗೆಲ್ಲಿಗೆ ದಾಳಿ ?
ಗೆದ್ದಲಿನ ಹುತ್ತ, ಕೀಟಗಳ ತೋಟ?
ಹೂವ ಮಕರಂದ, ಧಾನ್ಯಗಳ ಕಣಜ-

ಮೇಯಲಿಕ್ಕೆ ?
ಹೊಸ ಬಿಡಾರವ ಹುಡುಕಿ ತಂಗಲಿಕ್ಕೆ ?
ನೆಲ ಕೊರೆದು
ಮಣ್ಣ ಕಣ ಕಣವ ಪೇರಿಸಿ
ರಾಣಿಗರಮನೆಯ ಕಟ್ಟಿ ಕಾಪಾಡುವುದಕೆ ?
ಇಲ್ಲ -
ವೈರಿಯ ಜೊತೆಗೆ ಹೋರಾಟಕೆ ?

ಸತ್ತ ಜೀವಿಗಳನೆತ್ತಿ ಎಳೆದು ಹಾಕಿರುವೆ.
ಬಿಳಿ ತತ್ತಿಗಳ ಒಂದೊಂದೆ ಹೊತ್ತು
ದೂರ ಸಾಗಿರುವೆ.

ಮನುಷ್ಯ ಬದುಕಿನ ಬಹುಮುಖೀ ಸಂಕೀರ್ಣ ಆಯಾಮಗಳೊಂದಿಗೆ ಇರುವೆಯ ಬದುಕು ತಳುಕು ಹಾಕಿಕೊಳ್ಳುತ್ತದೆ. ಮನುಷ್ಯನ ಒಳ್ಳೆಯ, ಕೆಟ್ಟ, ಕಠಿಣ ಸೂಕ್ಷ್ಮ ದಾರಿಗಳು ಇಲ್ಲಿ ಸಂಗ್ರಹಿಸಲ್ಪಡುತ್ತವೆ. ಗುಂಪುಗಾರಿಕೆ, ಜಾತೀಯತೆ, ಸೌಹಾರ್ದತೆ, ಆಕ್ರಮಣಶೀಲತೆ, ಸಂಗ್ರಹಶೀಲತೆ, ಕೌಟುಂಬಿಕತೆ, ಜೀವನ ಪ್ರೀತಿ, ಸ್ವಾರ್ಥಪರತೆ, ವೈರತ್ವ, ದ್ವೇಷಸಾಧನೆ, ಸಂತಾನಾಭಿವೃದ್ಧಿ... ಹೀಗೆ ಎಲ್ಲ ಹಂತಗಳಲ್ಲೂ ಮನುಷ್ಯ ಮತ್ತು ಇರುವೆಯ ಬದುಕಿನ ನಡುವೆ ಅವಿನಾಭಾವ ಸಂಬಂಧವೇರ್ಪಡುತ್ತದೆ. ಸಕಲ ಜೀವರಾಶಿಗಳ ಇರುವಿಕೆಯಲ್ಲಿ ಏಕಸೂತ್ರತೆಯನ್ನು ಕಾಣುವ ಯತ್ನ ಇದಾಗಿದೆ. ಇಲ್ಲಿ ಇರುವೆ ಮತ್ತು ಮನುಷ್ಯನ ಅನನ್ಯತೆಗಳು ಇಲ್ಲವಾಗುತ್ತವೆ. ನಾನು ಉಲ್ಲೇಖಿಸಿದ ಹೊಸ ತಲೆಮಾರಿನ ಕವಿತೆಗಳಿಗೆ ಒಂದು ವರ್ಗೀಯ ಹಿನ್ನೆಲೆಯಿದೆ. ಅಲ್ಲಿ ಇರುವೆ ಶೋಷಿತ ಸಮುದಾಯದ ನೋವು-ನಲಿವು ಜೀವನ ವಿಧಾನಗಳನ್ನು ಮಾತ್ರ ಪ್ರತಿನಿಧಿಸುತ್ತದೆ. ಆತ್ಯಂತಿಕವಾಗಿ ಅಲ್ಲಿ ಸಂಘರ್ಷವೇ ಮುಖ್ಯ. ಮೇಲ್ವರ್ಗದ ಜೀವನ ವಿಧಾನವನ್ನು ಉದಾರವಾದಿ ನೆಲೆ ಸಾರ್ವತ್ರೀಕರಣಗೊಳಿಸುವ ಸಮಸ್ಯೆ ಇಲ್ಲಿ ಎದುರಾಗುತ್ತದೆ.

ಎಂಬತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ
ನಾನು ಮೇಲಿರುವೆ -ಎನುವಾಗ
ಗುಪ್ತ ಸ್ಥಳವನ್ನು ಹೊಕ್ಕು
ಕಚ್ಚಿ ಬಿಟ್ಟಿರುವೆ.

ಇಲ್ಲಿ ಇರುವೆ ತನ್ನ ನಿಜವಾದ ಅಸ್ತಿತ್ವವನ್ನು ಸಾಬೀತುಪಡಿಸುತ್ತದೆ. ಜೀವರಾಶಿಗಳಲ್ಲಿ ತಾನೇ ಮೇಲೆಂದು ಗರ್ವದಿಂದ ಬೀಗುವ ಮನುಷ್ಯನ ಗುಪ್ತ ಸ್ಥಳವನ್ನು ಹೊಕ್ಕು ಕಚ್ಚಿ ಅವನ ಅಹಂಕಾರಕ್ಕೆ ಪೆಟ್ಟು ನೀಡುತ್ತದೆ. ತನ್ನ ಅಹಂಕಾರವನ್ನು ಮೆರೆಯುತ್ತದೆ. ವಿಶ್ವದ ಅತ್ಯಂತ - ಚಿಕ್ಕ ಜೀವಕ್ಕೂ ತನ್ನದೆಯಾದ ವಿಶಿಷ್ಟ ಶಕ್ತಿಯಿದೆ ಮತ್ತು ಅದು ದೊಡ್ಡದು ಎಂದು

ಭಾವಿಸಲಾಗಿದ್ದನ್ನು ಹಿಮ್ಮೆಟ್ಟಿಸುವ ಸೋಲಿಸುವ ಸಾಮರ್ಥ್ಯವನ್ನು ಪಡೆದಿದೆ. ಕಣವಿಯವರ ಹುಲ್ಲು, ಸೊಳ್ಳೆ ಮೊದಲಾದ ಕವಿತೆಗಳೂ ಇದನ್ನೇ ಹೇಳುತ್ತವೆ. ಮನುಷ್ಯ ಶ್ರೇಷ್ಠತೆಯ ನಿರಾಕರಣೆ ಹಾಗೂ ಜೀವ ಸಮಾನತೆಯ ಪ್ರತಿಪಾದನೆ ಇಲ್ಲಿ ಮುಖ್ಯವಾಗುತ್ತದೆ. ಆರೀಫ್‌ರಾಜ್ ಕವಿತೆಯಲ್ಲಿ ಹೈವೇದಲ್ಲಿ ಹಾದಾಡುವ ಬಸ್ಸು, ಟ್ರಕ್ಕು ಬೈಕುಗಳ ಸದ್ದಿಗೆ ಹೆದರಿ ಆಕ್ಸಿಡೆಂಟ್‌ನಲ್ಲಿ ಪೆಟ್ಟು ತಿಂದು ತೆರೆಸಾ ಆಸ್ಪತ್ರೆಗೋ ಹರಿಶ್ಚಂದ್ರ ಘಾಟಿನೆಡೆಗೋ ಹೊರಟ ಇರುವೆಯ ಚಿತ್ರಣವಿದೆ. ಜಾಗತೀಕರಣದ ಅಪಾಯಕ್ಕೆ ಸಿಲುಕಿದ ಮಾನವ ಬದುಕಿನ ದುರಂತದೆಡೆಗೆ ಆ ಕವಿತೆ ಗಮನ ಸೆಳೆಯುತ್ತದೆ.

೪

ಇಲ್ಲಿಯವರೆಗಿನ ಚರ್ಚೆಯ ಮೂಲಕ ಎರಡು ಸಂಗತಿಗಳನ್ನು ಗಮನಿಸಬೇಕೆಂದು ಸೂಚಿಸಬಯಸುತ್ತೇನೆ. ಕನ್ನಡದ ಬಹುದೊಡ್ಡ ಕವಿಗಳ ಕಾವ್ಯದ ಮುಖ್ಯ ವಸ್ತುವಿಷಯಗಳ ಬಗ್ಗೆ ಚರ್ಚೆ ನಡೆದಿದೆ. ಆದರೆ ಅವರು ಸಣ್ಣಪುಟ್ಟ ಸಂಗತಿಗೊಳೊಂದಿಗೆ ನಡೆಸಿದ ಅನುಸಂಧಾನಗಳನ್ನು ಮುಖ್ಯವೆಂದು ಪರಿಗಣಿಸಿ ಚರ್ಚಿಸಬೇಕಿದೆ. ವಿಶೇಷವಾಗಿ ಕಣವಿಯವರ ಕಾವ್ಯವನ್ನು ಕುರಿತಾಗಿ ಇಂಥ ಸುದೀರ್ಘವಾದ ಚಿಂತನೆ ನಡೆಯಬೇಕಿದೆ. ಎರಡನೆಯದಾಗಿ ನಾನು ಹೊಸ ತಲೆಮಾರಿನ ಹಾಗೂ ಕಣವಿಯವರ ಕವಿತೆಗಳನ್ನು ಮುಖಾಮುಖಿಯಾಗಿಸಿದ್ದು ಯಾವುದು ಶ್ರೇಷ್ಠ ಯಾವುದು ಸಾಮಾನ್ಯವೆಂದು ನಿರ್ಧರಿಸಲು ಅಲ್ಲ. ಬದಲಾಗಿ ಕನ್ನಡ ಸೃಜನಶೀಲ ಮನಸ್ಸು ಕಾಲಾಂತರದಲ್ಲಿ ಬದಲಾವಣೆಗಳನ್ನು ಅರಗಿಸಿಕೊಂಡು ವಿಕಾಸಗೊಳ್ಳುತ್ತಿರುವ ಕ್ರಮವನ್ನು ಚರ್ಚಿಸಲು, ಬೇಂದ್ರೆ-ಕುವೆಂಪು, ಬಸವ-ಅಲ್ಲಮ ಈ ಬಗೆಯ ಮುಖಾಮುಖಿಯಷ್ಟೇ ಕಣವಿ-ಎನ್. ಕೆ. ಹನುಮಂತಯ್ಯನಂಥವರ ಮುಖಾಮುಖಿಯೂ ಮಹತ್ವದ್ದೆಂಬುದು ನನ್ನ ಅಭಿಪ್ರಾಯ.

ಎಂ. ಡಿ. ಒಕ್ಕುಂದ

# ೫೫. ಬೆಳುವಲದ ಬಾಗಿನ

ಬಯಲುಸೀಮೆಯ ಬಿರುಬಿಸಿಲಿಗೆ ಎರೆ ಹೊಲದೆದೆಯ
ಎರಕಲು ಬೀಡು ಕಾದು ಕಂಗೆಡಿಸಿರಲು, ಮುಗಿಲು
ಮುಂಗಾರು ಹದಗೊಳಿಸಿ ಮುಂದಿನ ತಲೆಗೆ ಮಿಗಿಲು
ಹಾರೈಸಿ; ಹಿಂಗಾರು : ಜೋಳ ಗೋದಿಯ ತೆನೆಯ
ಸಿಂಗಾರ, ಕಡಲೆ ಮಿಡಿಗೆ ಕೊಡರ್ ಕೊಂಚೆ ಹಿಂಡು.
ಕುಸುಬೆ ಸಾಲಿನ ಹೂವಿನಂಚೆಲ್ಲ ಜರತಾರಿ.
ಬಿಸಿಲು ಕಾಸಿದ ಬೆಳ್ಳಿ: ಹತ್ತಿ ತೊಳೆ ರೂವಾರಿ,
ಮಾವು, ಹುಣಸೆಯು, ಬೇವು ಗುಡಿಹುಣ್ಣಿಮೆಗೆ ಈಡು.
'ಬೆಳುವಲದ ಮುನ್ನೂರು' : ನೆಲ -ನೀರು -ಗಾಳಿಯಲಿ
ಹಲವು ಹಂಬಲ ತುಂಬಿ ಬಿಂಬ ಪ್ರತಿಬಿಂಬದಲಿ
ಒಲವಿನೊಂದೇ ರೂಪ; ಆರೋಗಣೆಯುಂಬಲಿ.
ಬಯಲು ದೀಪ ಸ್ತೂಪ ಹೇಗೊ ಹಿಡಿದಿದೆ ಜೋಲಿ.
ದುಡಿಮೆಯೊಳಗೊಂದು ಸುಖ, ನೋವು -ನಲಿವಿನ ಜೀಕ
ಪಡೆದ ಭಾಗ್ಯವು ಬೇರೆ; ಸಂಸ್ಕೃತಿ ಭೂಮಿ ತೂಕ.

ಮಲೆನಾಡಿನ ಮಳೆ ಹೇಗೋ ಹಾಗೆ ಬಯಲು ನಾಡಿಗೆ ಬಿಸಿಲು. ಮಳೆ ಬಂದರೆ ಮೈ ಮನಗಳಲ್ಲೇನೋ ಒಂದು ಬಗೆಯ ಉಲ್ಲಾಸ, ಹರುಷ, ನೀರ ಧಾರೆಯಲ್ಲಿ ಪುಟಿದೇಳುವ ಜೀವನೋತ್ಸಾಹ. ಬಿಸಿಲೆಂದರೆ ಧಗೆ, ಬೆವರು, ಸಂಕಟ ನಿರುತ್ಸಾಹದ ಗೋಣಗಾಟ. ಆಶ್ಚರ್ಯದ ಸಂಗತಿ ಎಂದರೆ ಬಿರುಬಿಸಿಲಿನ ಬೇಗೆಯಲ್ಲಿಯೂ ಬಯಲು ಹಸಿರಾಗುವ, ಬದುಕು ಚೆಲುವಾಗುವ ಕ್ರಮವೊಂದಿದೆಯಲ್ಲಾ! ಅದು ನಿಸರ್ಗ ಶಿಲ್ಪಿನ ಅದ್ಭುತವಾದ ಕಲೆಗಾರಿಕೆ. ನಿಸರ್ಗದ ಈ ಕಲೆಯನ್ನು ಕಾಣುತ್ತ ಕವಿ ಮನಸು ಅನುಭವಿಸುವ ಆನಂದದ ಅನುಭೂತಿಯ ಕಾವ್ಯಕಲೆಗೆ ಅನೇಕ ದಾರಿಗಳನ್ನು

ತೆರೆಯುತ್ತದೆ. ಪ್ರಕೃತಿಯಲ್ಲಿ ಪ್ರತಿಕ್ಷಣವೂ ಹೊಸದು; ಅದರ ಹೊಸತನವು ಕವಿಗೆ ಲೀಲೆಯಾಗಿ, ಪ್ರಕೃತಿಯ ಸಹಜ ಸಂಸ್ಕೃತಿಯಾಗಿ ತೋರುತ್ತದೆ. ಚೆನ್ನವೀರ ಕಣವಿಯವರ ಬಹಳಷ್ಟು ಕವನಗಳು 'ನೆಲ-ಮುಗಿಲು'ವಿನ ಅನೇಕ ಲೀಲೆಗಳನ್ನು 'ಮಣ್ಣಿನ ಮೆರವಣಿಗೆ'ಯ ತರತರದ ನೋಟಗಳನ್ನು ಒದಗಿಸುತ್ತವೆ. ಅವುಗಳನ್ನು ಓದಿ ಅನುಭವಿಸುವುದೇ ಒಂದು ರಸಯಾತ್ರೆ.

ಕನ್ನಡ ನಾಡಿನಲ್ಲಿ ಭೂ ಸಂಪತ್ತಿಗೆ ಹಾಗೂ ಸಾಂಸ್ಕೃತಿಕ ಶ್ರೀಮಂತಿಕೆಗೆ ಹೆಸರಾದುದು ಬೆಳುವಲದ ನಾಡು. 'ಬೆಳುವಲದ ಬಾಗಿನ' ಕವನವು ಇಲ್ಲಿಯ ವೈಭವವನ್ನು ಚಿತ್ರಿಸುತ್ತದೆ. ಇದು 'ಜೀವಧ್ವನಿ' (೧೯೮೧) ಸಂಕಲನದಲ್ಲಿಯ ಒಂದು ಸುನೀತ.

ಈ ಕವನದ ಮೊದಲೆರಡು ಸಾಲುಗಳು ಬಯಲುನಾಡಿನ ಬಿಸಿಲನ್ನು ಪರಿಚಯಿಸುತ್ತವೆ.

**ಬಯಲು ಸೀಮೆಯ ಬಿರುಬಿಸಿಲಿಗೆ ಎರೆ ಹೊಲದೆದೆಯ**
**ಎರಕಲು ಬೀಡು ಕಾದು ಕಂಗೆಡಿಸಿರಲು ...**

ಏಪ್ರಿಲ್, ಮೇ ತಿಂಗಳುಗಳಲ್ಲಿ ಬಯಲು ಸೀಮೆಯ ಬಿಸಿಲಿನ ತಾಪ ಹೇಳತೀರದು. ಬಿಸಿಲಿನ ತಾಪಕ್ಕೆ, ಭೂಮಿ ಬಾಯ್ ಬಿಟ್ಟಿರುತ್ತದೆ. ಕಲಬುರ್ಗಿ, ಬಿಜಾಪುರ, ಬಾಗಲಕೋಟೆ, ಬಳ್ಳಾರಿ, ರಾಯಚೂರು ಜಿಲ್ಲೆಯ ಜನರಿಗೆ ಈ ಬಿಸಿಲಿನ ಪ್ರಖರತೆ ಪರಿಚಿತವಾದುದು. ದೊಡ್ಡ ದೊಡ್ಡ ಎರಕಲು ಬೀಡುಗಳಿಂದ ಬರಿದಾದ ನೆಲ ನಕಾಶೆಯ ಹಾಗೆ ಕಾಣಿಸುತ್ತದೆ. ಬದುಕಿನ ಆಶೆಯನ್ನೇ ಕಂಗೆಡಿಸುವಂಥ ಬಿಸಿಲಿದು. ಬೆಳಗಿನ ಹೊತ್ತಲ್ಲೂ ಬಿಸಿ ಬಿಸಿ ಉಸಿರು; ಹನಿ ಹನಿ ಬೆವರು. ಬಿಸಿಲು ಝಳದಲ್ಲಿ ಕಾಣುವ ಬಯಲು ಒಣ ಒಣ , ಭಣ ಭಣ. ಇಂಥ ಬೆಂಕಿ ನೆಲದಲ್ಲಿ ಹಸಿರು ಕಾಣುವುದೆಂತು? ಎಂಬ ದಿಗಿಲು. ನಿರಾಶಾದಾಯಕ ವಾತಾವರಣದಲ್ಲಿ ಒಂದು ದಿನ ಮುಂಗಾರು ಮಿಂಚಿ ಭರವಸೆ ಮೂಡಿಸುತ್ತದೆ. 'ಕಾರಹುಣ್ಣಿಮೆ' (ಮಳೆಯ ಹುಣ್ಣಿಮೆ)ಗೆ ಉದುರಿನ ಹನಿಗಳು ಕಾದ ನೆಲಕ್ಕೆ ಮುದ ನೀಡುತ್ತವೆ. ಹಿತವಾದ ಮಣ್ಣಿನ ವಾಸನೆ ಎದ್ದು ಕಂಗೆಟ್ಟವರ ಎದೆಯಲ್ಲಿ ಆಶೆ ಚಿಗುರಿಸುತ್ತದೆ.

ಮುಂಗಾರು ಬಂದು ಬೆಳುವಲ ಭೂಮಿಯನ್ನು ಹದಗೊಳಿಸುತ್ತದೆ. ಹಿಂಗಾರು ಬೆಳೆಗೆ ಭೂಮಿಕೆ ಸಿದ್ಧವಾಗುತ್ತದೆ. ಮುಂಗಾರು ಬೆಳೆಗಳ ಬಗೆಗೆ ಕವನ ಮಾತನಾಡುವುದಿಲ್ಲ. ಆಗ ಏನಿದ್ದರೂ ಅಲ್ಪಾವಧಿಯ ಬೆಳೆಗಳು. ಸಜ್ಜೆ, ಹೆಸರು ಇತ್ಯಾದಿ. ಆದರೆ ಬಯಲು ನಾಡಿನಲ್ಲಿ ಹಿಂಗಾರು ಬೆಳೆಗಳದ್ದೇ ಒಂದು ವೈಭವ.

**...ಹಿಂಗಾರು; ಜೋಳ ಗೋದಿಯ ತೆನೆಯ**
**ಸಿಂಗಾರ. ಕಡಲೆ ಮಿಡಿಗೆ ಕೊಡರ್ ಕೊಂಚ ಹಿಂಡು.**
**ಕುಸುಬೆ ಸಾಲಿನ ಹೂವಿನಂಚೆಲ್ಲ ಜರತಾರಿ.**
**ಬಿಸಿಲು ಕಾಸಿದ ಬೆಳ್ಳಿ; ಹತ್ತಿ ತೊಳೆ ರೂವಾರಿ.**

ಜೋಳ, ಗೋದಿ, ಕಡಲೆ, ಕುಸುಬೆ, ಹತ್ತಿ ಇವು ಪ್ರಮುಖ ಹಿಂಗಾರಿ ಬೆಳೆಗಳು. 'ಉತ್ತರಿ ಜ್ವಾಲಾ ಬಿತ್ತರಿ' ಎನ್ನುವ ಗಾದೆ ಬಯಲುಸೀಮೆಯಲ್ಲಿ ಚಾಲ್ತಿಯಲ್ಲಿದೆ. ಉತ್ತರೀ ಮಳೆಯಿಂದಲೇ ಹಿಂಗಾರಿ ಬೆಳೆಗಳಿಗೆ ರಂಗ ಸಜ್ಜಾಗುವುದು. ಆಮೇಲೆ ತಿಂಗಳೊಪ್ಪತ್ತಿನಲ್ಲಿ ಭೂಮಿತಾಯಿ ಹಸಿರುಟ್ಟು ನಲಿದಾಡುವ, ತೆನೆಬಿಟ್ಟು ತೂನೆದಾಡುವುದನ್ನು ನೋಡುವುದೇ ಕಣ್ಣಿಗೆ ಹಬ್ಬ. ಜೋಳ, ಗೋದಿ ತೆನೆ ಹಿಡಿದ ಕಾಲದಲ್ಲಿ ಕಡಲೆ ಮಿಡಿ ಹಿಡಿಯುತ್ತದೆ. ಕುಸುಬೆ ಹೂ ಬಿಡುತ್ತದೆ. ಈ ದೃಶ್ಯವು ಮೇಲಿನ ಪಂಕ್ತಿಗಳಲ್ಲಿ ಸುಂದರ ಕಾವ್ಯವಾಗಿ ಮೂಡಿ ಬಂದಿದೆ.

ಹಸಿರು ಬೆಳೆಯಲ್ಲಿ ಬಂಗಾರ ಬಣ್ಣದ ಕುಸುಬೆ ಹೂವಿನ ಸಾಲು, ಹಸಿರು ಸೀರೆಯ ಜರತಾರಿ ಸೆರಗಿನಂತೆ ಕಂಗೊಳಿಸಿದರೆ; ಬಿಸಿಲಲ್ಲಿ ಬಿಚ್ಚಿದ ಹತ್ತಿಯ ತೊಳೆಗಳು ಪತ್ತಾರನ ಕುಲುಮೆಯಲ್ಲಿ ಕಾಯ್ದು ಪರಿಶುಭ್ರ ಬೆಳ್ಳಿಯಂತೆ ಹೊಳೆಯುತ್ತವೆ. ಕವಿ ಕಣವಿಯವರು ಹತ್ತಿ ಮತ್ತು ಕುಸುಬೆಯನ್ನು ಬೆಳ್ಳಿ ಬಂಗಾರದ ಜೊತೆಗೆ ಸಮೀಕರಿಸಿ ಅವುಗಳ ಸೌಂದರ್ಯ ಬಣ್ಣಿಸಿದ್ದು ಸೊಗಸಾದ ಶಬ್ದಚಿತ್ರ. ರೂಪ ಮತ್ತು ಗುಣ (ಬೆಲೆ) ಎರಡರಲ್ಲಿಯೂ ಈ ಎರಡು ಬೆಳೆಗಳು ಬೆಳ್ಳಿ ಬಂಗಾರವನ್ನೇ ಹೋಲುತ್ತವೆ. ಬಂಗಾರ ಬೆಳ್ಳಿ ಬೆಂಕಿಯಲ್ಲಿ ಕಾಯ್ದು, ಕಸವನ್ನೆಲ್ಲ ಕಳೆದುಕೊಂಡು ಪರಿಶುದ್ಧವಾಗಿ ಹೊಳೆಯುತ್ತಿರುವಂತೆಯೇ ಕಪ್ಪುಮಣ್ಣಿನಲ್ಲಿ ಬೆಳೆದ ಈ ಬೆಳೆಗಳು ಬಿಸಿಲಲ್ಲಿ ಅರಳಿ ಉತ್ತಮ ಫಲ ಕೊಡುವುದನ್ನು ಕವನ ಧ್ವನಿಪೂರ್ಣವಾಗಿ ನಿರೂಪಿಸುತ್ತದೆ.

ಬೆವರು ಸುರಿಸಿ ದುಡಿದ ರೈತನಿಗೆ ಭೂಮಿ ತಾಯಿ ಒಲಿದು ಕಾಣಿಕೆ ಕೊಡುವ ಕಾಲ-ಸುಗ್ಗಿಕಾಲ. ಹತ್ತಿ ತೊಳೆ ಬಿಡಿಸಿ, ಜೋಳ, ಗೋದಿ, ಕಡಲೆ ರಾಶಿ ಮಾಡಿ, ಕಣದೊಳಗಿನ ಧಾನ್ಯ ಕಾಳು ಅಕ್ಕಡಿಗಳನ್ನು ಪೂಜೆ ಮಾಡಿ ರೈತ ಮನೆ ತುಂಬಿಸಿಕೊಳ್ಳುತ್ತಾನೆ. ಅಷ್ಟು ಹೊತ್ತಿಗೆ ಚೈತ್ರದ ಆಗಮನ. ಮೈತುಂಬ ಹೂಬಿಟ್ಟ ಮಿಡಿ ತೊಟ್ಟ ಮಾವು, ಹುಣಸೆ, ಬೇವು ಗುಡಿಹುಣ್ಣಿಮೆಗೆ (ಚೈತ್ರದ ಹುಣ್ಣಿಮೆ-ದವನದ ಹುಣ್ಣಿಮೆ) ಕಾಣಿಕೆ ಸಲ್ಲಿಸುತ್ತವೆ. ಹೀಗೆ ಕಾರಹುಣ್ಣಿಮೆಯಿಂದ ಗುಡಿಹುಣ್ಣಿಮೆಯವರೆಗಿನ ಬಯಲು ನಾಡಿನ ಕೃಷಿ ಸಂಸ್ಕೃತಿಯನ್ನು ಪ್ರಸ್ತುತ ಸುನೀತ ರಮ್ಯವಾಗಿ ಚಿತ್ರಿಸುತ್ತದೆ.

ಸುನೀತದ ಮೊದಲ ಭಾಗವು ಬಿಸಿಲು, ಮಳೆ, ಬೆಳೆಗಳ ಸುಂದರ ಚಿತ್ರವನ್ನು ಕೊಡುತ್ತದೆ. ಭೂಮಿಯ ಸೃಷ್ಟಿಶೀಲತೆಯನ್ನು ಬಣ್ಣಿಸುತ್ತದೆ. ಅದರ ಘನತೆಯನ್ನು ಎತ್ತಿ ತೋರಿಸುತ್ತದೆ. ಎರಡನೆಯ ಭಾಗವು ಭೂಮಿಗೂ ಮನುಷ್ಯನಿಗೂ ಅಂಟಿರುವ ಜೀವ-ಜೀವಂತಿಕೆಯ ನೆಂಟನ್ನು ವಿಶ್ಲೇಷಿಸುತ್ತದೆ. ರಾಜೇಂದ್ರ ಚೆನ್ನಿಯವರು ಗುರುತಿಸುವಂತೆ- 'ಕಣವಿಯವರ ಕಾವ್ಯ ನಿಸರ್ಗದ ಆಸ್ವಾದನೆಯನ್ನು ವರ್ಣಿಸುವ ಕಾವ್ಯವಲ್ಲ. ಅವರ ಜೀವನಾನುಭವದ ಅತ್ಯಂತ ಆಳವಾದ ಕೇಂದ್ರವೊಂದು ಸದಾ ನಿಸರ್ಗದೊಂದಿಗೆ ಸಂವಾದದಲ್ಲಿ ತೊಡಗಿಕೊಂಡಿರುತ್ತದೆ. ಒಂದು ಕಡೆ ಅದು ಅವರ ಸಮೃದ್ಧವಾದ ರೂಪಕ ಸೃಷ್ಟಿಯ ನೆಲೆಯಾಗಿ ಕೆಲಸ ಮಾಡಿದರೆ, ಇನ್ನೊಂದು ಕಡೆಗೆ ಮನುಷ್ಯ ಜೀವನ ಹಾಗೂ ನಾಗರಿಕತೆಗಳನ್ನು ಬೆಲೆಗಟ್ಟಲು ಒಂದು ನೆಲೆಗಟ್ಟನ್ನು ಒದಗಿಸಿ ಕೊಡುತ್ತದೆ' ('ಸುನೀತ ಸಂಪದ'ದ ಪ್ರಸ್ತಾವನೆ)

ಮಳೆ, ಮಳೆಯಿಂದ ಬೆಳೆ, ಬೆಳೆಯಿಂದ ಬದುಕು ಇದು ಇಳೆಯ ಸಂಸ್ಕೃತಿ, ನಿಸರ್ಗದ ಶಿಸ್ತು. ಬರುವ ಕಾಲಕ್ಕೆ ಮಳೆ ಬರದಿದ್ದರೆ ಭೂಮಿಯ ಸ್ಥಿತಿ ಏನು ? ಜೀವಕೋಟಿಯ ಗತಿ ಏನು? ಬಯಲುಸೀಮೆಯ ಕೃಷಿಯಂತೂ ಮಳೆಯನ್ನೇ ಅವಲಂಬಿಸಿರುವುದು. ಒಂದು ವರುಷ ಸರಿಯಾಗಿ ಮಳೆಯಾಗಿ ಸುಕಾಲವಾದರೆ ಮತ್ತೊಂದು ವರುಷ ಬರಗಾಲದ ಬವಣೆ ತಪ್ಪಿದ್ದಲ್ಲ. ಈ ಅತಂತ್ರದ ಜಿಜ್ಞಾಸೆಯಿಂದ ಸುನೀತದ ಎರಡನೆಯ ಭಾಗವು ಗಮನಾರ್ಹವೆನಿಸುತ್ತದೆ.

'ಆರೋಗಣೆಯಂಬಲಿ' 'ಬಯಲ ದೀಪ ಸ್ತೂಪ ಹೇಗೋ ಹಿಡಿದಿದೆ ಜೋಲಿ' 'ದುಡಿಮೆಯೊಳಗೊಂದು ಸುಖ, ನೋವು, ನಲಿವಿನ ಜೀಕ' ಇತ್ಯಾದಿ ಕಾವ್ಯಪಂಕ್ತಿಗಳಲ್ಲಿ ಬಯಲುಸೀಮೆಯ ಕೃಷಿ ಸಂಸ್ಕೃತಿ ಚೆನ್ನಾಗಿ ಮೈದಾಳಿದೆ. ಬೆಳುವಲ ನಾಡಿನ ಬರಗಾಲ ಚಿತ್ರ ಗಂಭೀರವಾದುದು. ಮಳೆಗಾಲದಲ್ಲಿ ಒಂದು ಹನಿಯೂ ಮಳೆಯಾಗುವುದಿಲ್ಲ. ಹೊಳೆ ಹಳ್ಳ ಬಾವಿಗಳೆಲ್ಲ ಒಣಗಿಬಿಡುತ್ತವೆ. ದನಕರುಗಳು ನೀರಿಲ್ಲದೆ, ಮೇವಿಲ್ಲದೆ ಹಲುಬುತ್ತವೆ. ಅವುಗಳ ಮೂಕವೇದನೆ ಸಹಿಸಲಾಗದೆ ರೈತರು ಮನೆ ಮುಂದೆ ಕಟ್ಟಿದ ದನ ಕರುಗಳನ್ನು ಬಿಚ್ಚಿ ಬಿಡುತ್ತಾರೆ. ಜನರು ಹೊಟ್ಟೆಪಾಡಿಗಾಗಿ ಗುಳೇ ಹೊರಡುತ್ತಾರೆ. ಮಳೆಯ ಅಭಾವದಲ್ಲಿ ದಾರುಣಗೊಳ್ಳುವ ಜನಜೀವನದ ಚಿತ್ರವನ್ನು 'ಬಯಲದೀಪ ಸ್ತೂಪ ಹೇಗೋ ಹಿಡಿದಿದೆ ಜೋಲಿ' ಎಂಬ ಪಂಕ್ತಿ ಧ್ವನಿಪೂರ್ಣವಾಗಿ ಚಿತ್ರಿಸುತ್ತದೆ. ಬಯಲುಸೀಮೆಯ ಕೃಷಿ ಆಧಾರಿತ ಬದುಕೆಂದರೆ ಬಯಲೊಳಗಿಟ್ಟ ದೀಪ. ಮಳೆ ಇಲ್ಲದೆ ಬರಿ ಗಾಳಿ ಬೀಸತೊಡಗಿದರೆ ಬಯಲ ದೀಪ ಹೊಯ್ದಾಡುವಂತೆ ಇಲ್ಲಿಯ ಬದುಕೂ ಹೊಯ್ದಾಡುತ್ತದೆ. ಸಮತೋಲನ ತಪ್ಪುತ್ತದೆ. ಇನ್ನೇನು? ಇನ್ನೇನು? ಎಂದು ಆತಂಕಪಡುತ್ತಿರುವಾಗಲೇ ಮೇಲ್ಗಾಳಿ ಬೀಸಬಹುದು. ಮೋಡಗಳನ್ನು ಎಳೆದು ತರಬಹುದು. ಮಳೆಯಾಗಬಹುದು. ಆಗದೆಯೂ ಇರಬಹುದು. ಇಂಥ ಪರಿಸ್ಥಿತಿಯಲ್ಲಿ ಅಂತೂ ಬಯಲುನಾಡಿನ 'ಜೀವದೀಪ' ಜೋಲಿ ಹಿಡಿದಿರುವುದೇ ಒಂದು ಚಮತ್ಕಾರ. 'ಹೇಗೋ ಹಿಡಿದಿದೆ ಜೋಲಿ' 'ನೋವು ನಲಿವಿನ ಜೀಕ' ಎಂಬ ಮಾತುಗಳು ಇಲ್ಲಿ ತುಂಬ ಅರ್ಥಪೂರ್ಣ. ಅಲ್ಲದೆ ಬಯಲುಸೀಮೆಯ ಹೋರಾಟದ ಬದುಕನ್ನು ಸಮರ್ಥವಾಗಿ ಧ್ವನಿಸುತ್ತವೆ. ಮಳೆ ಬೆಳೆಯ ಸಮೃದ್ಧಿಯಿಂದ ಒಂದು ವರುಷ ಮುನ್ನಡೆ ಸಾಧಿಸಿದ ಬದುಕು ಬರಗಾಲ ಬಿದ್ದರೆ ಹಿಂದಕ್ಕೆ ಸರಿಯುತ್ತದೆ. ಈ ನೋವು ನಲಿವಿನ ಜೀಕವು ಬಯಲುಸೀಮೆಯ ಬದುಕಿಗೆ ತಪ್ಪಿದ್ದಲ್ಲ. ಆದ್ದರಿಂದಲೇ 'ಆರೋಗಣೆಗೆ ಅಂಬಲಿ', ಉಂಡುಟ್ಟು ಮೆರೆಯುವ ಧಾರಾಳತನಕ್ಕೆ ಇಲ್ಲಿ ಕಡಿವಾಣ. ನಾಳೆಯ ಅಂಬಲಿಗಾಗಿ ಹಿಡಿ ಜೋಳವನ್ನಾದರೂ ಕಾಯ್ದುಕೊಳ್ಳುವ ಎಚ್ಚರ, ಇದು ಬಯಲು ಸೀಮೆಯ ಲೆಕ್ಕಾಚಾರ. ಕಷ್ಟದೊಳಗೇ ಸುಖ ಕಾಣುವ ಇಲ್ಲಿಯ ಜೀವನ ಸಂಸ್ಕೃತಿ ಅಪರೂಪದ್ದೆಂಬ ಭಾವನೆ ಇಲ್ಲಿ ಗಾಢವಾಗಿದೆ.

ಕವನದ ಕೊನೆಯ ಸಾಲು:

'ಪಡೆದ ಭಾಗ್ಯವು ಬೇರೆ; ಸಂಸ್ಕೃತಿ ಭೂಮಿ ತೂಕ' ಬೆಳುವಲ ಭೂಮಿಯ ಶ್ರೀಮಂತಿಕೆಯನ್ನು ವರ್ಣಿಸುತ್ತ, ಕೊನೆಗೆ ಅಲ್ಲಿಯ ಸಂಸ್ಕೃತಿಯೂ ಭೂಮಿ ತೂಕದ್ದೆಂದು ಹೇಳಿ ಕವನ ವಿರಮಿಸುತ್ತದೆ.

ಸಂಸ್ಕೃತಿ ಕೂಡ ಭೂಮಿ ಕೊಟ್ಟ ಫಲ. ನೆಲ, ನೀರು, ಗಾಳಿ ಬಿಟ್ಟು ಸಂಸ್ಕೃತಿ ಹುಟ್ಟಲು ಸಾಧ್ಯವಿಲ್ಲ. ಭೂಮಿ-ಸಂಸ್ಕೃತಿಗಳದ್ದು ಬಿಂಬ-ಪ್ರತಿಬಿಂಬ ಸಂಬಂಧ. ಭೂಮಿ ಬಿಂಬವಾದರೆ ಗಿಡ, ಮರ, ಪಶು, ಪಕ್ಷಿ, ಬೆಳೆ, ಬದುಕು ಇವೆಲ್ಲ ಅದರ ಪ್ರತಿಬಿಂಬ. ಬಿಂಬ ಸತ್ಯ, ಪ್ರತಿಬಿಂಬ ಭ್ರಮೆ ಎಂದು ಅರ್ಥಯಿಸುವುದೂ ಇದೆ. ಆದರೆ ಕಣವಿಯವರ ದೃಷ್ಟಿಯಲ್ಲಿ ಬಿಂಬದ ಫಲವೇ ಪ್ರತಿಬಿಂಬ; ಎರಡೂ ಸತ್ಯ. 'ಬಿಂಬ ಪ್ರತಿಬಿಂಬದಲಿ ಒಲವಿನೊಂದೇ ರೂಪ' ಇದು ಕವಿದರ್ಶನ. ಭೂಮಿಯ ಸಂಸ್ಕೃತಿ ಎಂದರೆ ನಿರಂತರ ಬೆಳವಣಿಗೆ, ಬದಲಾವಣೆ, ಕೊಟ್ಟು ಪಡೆಯುವ ಭಾಗ್ಯ.

ಬಯಲನಾಡಿನಲ್ಲಿ ಕಾರಹುಣ್ಣಿಮೆಯಿಂದ ಯುಗಾದಿವರೆಗೆ ಬರುವ ಹಬ್ಬಗಳೆಲ್ಲ, ವಿಶೇಷವಾಗಿ ಬನದ ಹುಣ್ಣಿಮೆ, ಭಾರತ ಹುಣ್ಣಿಮೆ (ತೆನೆ ಕಟ್ಟು ಹುಣ್ಣಿಮೆ)ಗಳಂದು ನಡೆಯುವ ಆಚರಣೆಗಳೆಲ್ಲ ಭೂಮಿಗೇ ಸಂಬಂಧಿಸಿವೆ. ಭೂಮಿಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ಆರಂಭದಲ್ಲಿ ರೈತನು ಬಿತ್ತುವ ಮೂಲಕ ಭೂಮಿತಾಯಿಯ ಉಡಿಯನ್ನು ತುಂಬಿದರೆ ಸುಗ್ಗಿಯ ಕಾಲದಲ್ಲಿ ಭೂಮಿತಾಯಿ ಫಸಲು ಕೊಡುವುದರ ಮೂಲಕ ರೈತನ ಉಡಿ ತುಂಬುವಳು 'ಬಾಗಿನ' (ಬಾಗಿಣ/ಬಾಗಣಾ) ಎಂದರೆ ಉಡಿ ತುಂಬಿ ಹರಸುವುದು. ಇದು ಕೂಡ ಬಿಂಬ ಪ್ರತಿಬಿಂಬ ಕ್ರಿಯೆಯೇ.

ಕವಿ ಹೇಳುವಂತೆ, ಬಯಲುಸೀಮೆಯ ಬದುಕು ಕಂಡರಿಸಿಕೊಂಡ ಸಂಸ್ಕೃತಿ ಕೂಡ ಅಷ್ಟೇ ತೂಕದ್ದು. 'ಆರೋಗಣೆಯಂಬಲಿ' 'ದುಡಿಮೆಯೊಳಗೊಂದು ಸುಖ' - ಈ ಬಗೆಯ ಮೌಲ್ಯಗಳು, ಚಿಂತನೆಗಳು ಇಲ್ಲಿಯ ಭೂಮಿಯಿಂದಲೇ ರೂಪುಗೊಂಡಿರುವಂತಹವು, ಕಷ್ಟದೊಳಗೆ ಸುಖ ಕಾಣುವುದು, ನೋವು ನಲಿವಿನಲ್ಲೂ ಧೃತಿಗೆಡದೆ ಜೀಕುವುದು ಬೆಳವಲ ನಾಡಿನ ಸಂಸ್ಕೃತಿ. ಬಯಲುಸೀಮೆಯ ಪ್ರಕೃತಿ ಮತ್ತು ಸಂಸ್ಕೃತಿಗಳ ಸುಂದರ ಅಭಿವ್ಯಕ್ತಿಯಾಗಿದೆ 'ಬೆಳುವಲದ ಬಾಗಿನ' ಕವನ.

ವಸುಂಧರೆಯ ವಿನ್ಯಾಸವೇ ಈ ಕವನದ ಮೂಲ ಧಾತು. ಋತುಮಾನದ ಆವರಣದಲ್ಲಿ ಹಗಲಿರುಳು ಬದಲಾಗುವ ರೂಪ ಲಾವಣ್ಯದ ಮತ್ತು ವಾತ್ಸಲ್ಯದ ಪ್ರತಿಬಿಂಬವನ್ನು ಈ ಕಾವ್ಯದಲ್ಲಿ ಕಾಣಬಹುದು.

ರಾಮಕೃಷ್ಣ ಮರಾಠೆ

# ೫೬. ಮಳಲು ಹಾಡುತ್ತದೆ

ರಶಿಯದ ಕಾರಾಕುಮ್ ಮರುಭೂಮಿಯಲ್ಲಿ
ಮಳಲು ಹಾಡುತ್ತದೆ-
ಹಾಗೆಂದು ಮೊನ್ನೆ ಪತ್ರಿಕೆಯಲ್ಲಿ ಸುದ್ದಿ.
ಬಿರುಗಾಳಿ ಬೀಸಿದೊಡನೆ
ಉಸುಕಿನ ತರಂಗಗಳ ತಂತಿ ಮೀಟುತ್ತ
ಹಾಡಿದಂತೆ, ಗರ್ಜಿಸಿದಂತೆ
ಕೆಲವೊಮ್ಮೆ ರೋದಿಸಿದಂತೆ - ಕೇಳುತ್ತದಂತೆ.

ಶತಮಾನಗಳಿಂದ ಸುಡುವ, ತಣ್ಣಗೆ ಕೊರೆವ
ಮರುಭೂಮಿಯ ರಹಸ್ಯಗಳ ದಿಕ್ಕು ಹಿಡಿದು
ಹೊರಡುವುದು ಕಷ್ಟ.
ಒಂಟೆಯ ಮೇಲೆ ಒಂಟಿಯಾಗಿ, ಹಿಂದಕ್ಕೂ
ಮುಂದಕ್ಕೂ ತೂಗುತ್ತ ಸಾಗಿದಾಗ
ಎಲ್ಲೊ ದೂರದಲ್ಲಿ
ಓಯಾಸಿಸ್ ಕಂಡರೂ ಕಾಣಬಹುದು.
(ಇಲ್ಲವಾದರೆ ಒಂಟೆಯ ಬೆನ್ನನ್ನೇ ಬಗಿದು
ನೀರು ಕುಡಿಯಬಹುದು.)

ಸಾಧುವಲ್ಲದ ಈ ಪ್ರಾಣಿಯನ್ನು ಸಾಕಬಹುದು.
ತಾಳ್ಮೆಯಿದ್ದರೂ ಹಟಮಾರಿ, ಕಾಡಾದರೂ ವಿಧೇಯ.
ಮೊಳಕಾಲೂರಿಸಿ ಹಿಂಬದಿಯಿಂದ ಹತ್ತುವಾಗ ಸವಾರ
ರೇಗಿಸದೆಯೂ ಮೈಮೇಲೆ ಏರಿ ಬರಬಹುದು.

ಹಿಂದೂ ಮುಂದೂ ಕೂಡಿಯೇ ಒದೆಯಬಹುದು
ಸಮೀಪ ಸಿಕ್ಕುದನು ಹಿಡಿದು ಕಚ್ಚಬಹುದು.

ಒಮ್ಮೆ ಹತ್ತಿಸಿಕೊಂಡು ಹೊರಟಿತೊ-
ಕಣ್ಣುಗಳನರೆಮುಚ್ಚಿ ತನ್ಮಯತೆಯಲಿ
ಸೂರ್ಯ, ಚಂದ್ರ, ನಕ್ಷತ್ರಗಳ ಕೆಳಗೆ
ಮರುಭೂಮಿಯ ಹಡಗು ಈಸುವುದು ಒಂದೇ ಗತಿಗೆ.

ಮಳಲು ಹಾಡುತ್ತದೆಂದ ಮೇಲೆ-
ಮಾನವ ಸಹಜ ಭಾವನೆಯ ಬಿಮ್ಮನೆ ಬಿಗಿದುಕೊಂಡಿರುವ
ಮರಳುಗಾಡಿನ ಆ ಸುತ್ತು ನಾಡಿನಲ್ಲಿ
ಹೇಳಲಾರದೆ ಹುಗಿದ ಭಾವಗಳು
ಈಗ ಹೊರಹೊಮ್ಮಬಹುದು.
ಯಂತ್ರಗಳ ಕೈಗೆ ಸಿಗದ, ಒಂದಿಷ್ಟು ನಗೆಮೊಗದ
ಕನಸುಗಳ ಕಾರಂಜಿ ಚಿಮ್ಮಬಹುದು.

ಆದರೆ ಮಳಲಿನ ಈ ವರ್ತನೆ
ಭೂಕಂಪಕ್ಕೆ ಮುನ್ಸೂಚನೆ ಎಂದು ವಿಜ್ಞಾನಿಗಳ ಶಂಕೆ,
ಆದರೂ ಏರುತ್ತಲೇ ಇದೆ
ಅಣ್ವಸ್ತ್ರಗಳ ಸಂಖ್ಯೆ.

ಕೆಲವು ಕವಿತೆಗಳು ಮೇಲುನೋಟಕ್ಕೆ ಸರಳವೆನಿಸಿದರೂ ವ್ಯಾಖ್ಯಾನಕ್ಕೆ ಪೂರ್ತಿಯಾಗಿ ಸಿಗದೆ ನುಣುಚಿಕೊಳ್ಳುತ್ತವೆ. ಅನುಭವಿಸುವಾಗಿನ ಹೊಳಹುಗಳು ವಿವರಿಸುವಾಗ ದಕ್ಕದೆ ಹೋಗುತ್ತವೆ. ಅವುಗಳ ಸ್ವರೂಪವೇ ಅಮೂರ್ತ ಚಿತ್ರಗಳ ರೀತಿಯದು. ಕಣವಿಯವರ 'ಕಾರ್ತಿಕದ ಮೋಡ' ಸಂಗ್ರಹದ (೧೯೮೬) 'ಮಳಲು ಹಾಡುತ್ತದೆ' ಕವಿತೆ ಈ ಬಗೆಯದು. ಮಳಲು ಹಾಡುವದು ಪ್ರಕೃತಿಯ ವಿಸ್ಮಯವೇ, ವಿಸ್ಮಯವಾದರೂ ವಾಸ್ತವ. ಕವಿತೆಯ ಆರಂಭದ ಸಾಲುಗಳಿವು.

ರಶಿಯದ ಕಾರಾಕುಮ್ ಮರುಭೂಮಿಯಲ್ಲಿ
ಮಳಲು ಹಾಡುತ್ತದೆ-
ಹಾಗೆಂದು ಮೊನ್ನೆ ಪತ್ರಿಕೆಯಲ್ಲಿ ಸುದ್ದಿ.

ಈ ಸುದ್ದಿ ಅಸಂಖ್ಯಾತ ಓದುಗರ ಗಮನ ಸೆಳೆದು ಬೆರಗಿಗೆ ಕಾರಣವಾಗಿ ರದ್ದಿಯಾಗಿ ಹೋಗುತ್ತದೆ. ಆದರೆ ಇದೇ ಸುದ್ದಿ ಕವಿಗೆ ಬದುಕನ್ನು ಶೋಧಿಸಿಕೊಳ್ಳುವ ಅಂತರ್‌ದೃಷ್ಟಿಯ ಮಿಂಚಿನ ಸೆಳಕಾಗಿ ಒದಗುವುದು ಮತ್ತೊಂದು ವಿಸ್ಮಯವೇ.

ಮಳಲು ಹಾಡುವುದು ಕವಿಯ ಕಲ್ಪನೆಯಾಗಿದ್ದರೆ ಅದೊಂದು ಅತಿಮಾನುಷ ರೂಪಕವಾಗಿ, ಅಸಂಭಾವ್ಯತೆಯ ದೋಷವಾಗಿ ಕೃತಕವೆನಿಸಬಹುದಾಗಿತ್ತೇನೋ. ಆದರೆ ಮಳಲು ಹಾಡುವ ಸುದ್ದಿ ರದ್ದಿಯಾದರೂ ಸಮುದಾಯದ ಪ್ರಜ್ಞೆಯ ಭಾಗವಾಗಿ ಕವಿಯ ಅಭಿವ್ಯಕ್ತಿಗೆ ಪ್ರೇರಣೆಯಾಗುತ್ತದೆ. ಸುದ್ದಿಯ ಹಿಂದಿನ ವೈಜ್ಞಾನಿಕ ಸತ್ಯವೂ ಅಷ್ಟೇ ಸರಳವಾಗಿದೆ. ಕವಿತೆಯ ಸಾಲುಗಳಾಗಿ ಅದು ಮೂಡಿದ್ದು ಹೀಗೆ:

**ಬಿರುಗಾಳಿ ಬೀಸಿದೊಡನೆ**
**ಉಸುಕಿನ ತರಂಗಗಳ ತಂತಿ ಮೀಟುತ್ತ**
**ಹಾಡಿದಂತೆ, ಗರ್ಜಿಸಿದಂತೆ**
**ಕೆಲವೊಮ್ಮೆ ರೋದಿಸಿದಂತೆ - ಕೇಳುತ್ತದಂತೆ.**

ಇದೂ ಸುದ್ದಿಯ ಭಾಗವೇ. ಆದರೆ ಈ ಸರಳ ವೈಜ್ಞಾನಿಕ ವಿವರಗಳನ್ನು ಕವಿ ಅಷ್ಟೇ ಸರಳ ಪದಗಳ ಸಂಯೋಜನೆಯಲ್ಲಿ ಕಾವ್ಯ ವಿಸ್ಮಯದ ಭಾಗವಾಗಿಸುತ್ತಾನೆ. ವೈಜ್ಞಾನಿಕ ವಿವರಗಳ ನಿರೂಪಣೆ ಕವಿಯ ಉದ್ದೇಶವಲ್ಲ. ಅದನ್ನು ಪತ್ರಿಕೆಯ ಸುದ್ದಿಯೇ ಪೂರೈಸಿದೆ.

ಬಿರುಗಾಳಿ ಬೀಸುವುದಕ್ಕೂ ಮಳಲು ಹಾಡುವುದಕ್ಕೂ ಇರುವ ಸಂಬಂಧ ಕವಿತೆಯ ಭಿನ್ನ ಧ್ವನಿಗಳ ಅನುಭವಕ್ಕೆ ದಿಕ್ಸೂಚಿಯಾಗುತ್ತದೆ. ಬಿರುಗಾಳಿ ಮನುಷ್ಯನ ಯುದ್ಧ ಪಿಪಾಸೆಯೆನಿಸಿ ಅದರಿಂದ ಉಂಟಾದ ಚರಿತ್ರೆಯ ಮರುಳುಗಾಡಿನಲ್ಲಿ ಕೆಲವು ಸುಸ್ವರಗಳು, ಕೆಲವು ಮನುಷ್ಯನ ದುರಹಂಕಾರದ ಗರ್ಜನೆಗಳು, ಇನ್ನು ಕೆಲವು ಅಮಾಯಕರ ರೋದನಗಳು ಸೇರಿಕೊಂಡಿವೆ. ಹಾಡುವ ಮಳಲು ಚರಿತ್ರೆಯ ಅಂತರ್ವಾಣಿಯಾಗುವುದು ಕವಿತೆಯ ಸಹಜ ಸಿದ್ಧಿ, ಮನುಷ್ಯ ಪ್ರಜ್ಞೆಯ ತಳಾತಳದ ಅಜ್ಞಾತ ಮರುಳುಗಾಡಿನಿಂದ ಹೊಮ್ಮುವ ಹಾಡಾಗಿ, ಅಹಮ್ಮಿನ ಗರ್ಜನೆಯಾಗಿ, ಅಸಹಾಯಕತೆಯ ರೋದನವಾಗಿ ಮಳಲು ಹಾಡುವುದರ ಇನ್ನೊಂದು ಅನುಭವ ಸಂವೇದ್ಯವಾಗಬಹುದು.

**ಶತಮಾನಗಳಿಂದ ಸುಡುವ, ತಣ್ಣಗೆ ಕೊರೆವ**
**ಮರುಭೂಮಿಯ ರಹಸ್ಯಗಳ ದಿಕ್ಕು ಹಿಡಿದು**
**ಹೊರಡುವುದು ಕಷ್ಟ**

ಚರಿತ್ರೆಯ ಹಿಮ್ಮುಖ ಯಾತ್ರೆಯೋ ಬದುಕಿನ ವಿಸ್ಮಯಗಳ ನಿರಂತರ ಹುಡುಕಾಟವೋ ಅಷ್ಟು ಸುಲಭವಲ್ಲ. ಅದು ಮರುಳುಗಾಡಿನ ಯಾತ್ರೆಯೇ. 'ಅರಿವಿ'ನ ಒಂಟೆಯೇರಿ ಸಾಗಿದರೆ ಓಯಾಸಿಸ್ ಸಿಗಬಹುದು. ಇಲ್ಲವೆ 'ಒಂಟೆಯ ಬೆನ್ನನ್ನೇ ಬಗಿದು ನೀರು ಕುಡಿಯುವ' ಸ್ವಾರ್ಥಕ್ಕೆ ಅರಿವು

ಬಳಕೆಯಾಗಬಹುದು. ಸ್ವಾರ್ಥ ಕೇಂದ್ರಿತ, ಸ್ವಾರ್ಥ ನಿಯಂತ್ರಿತ ಎನಿಸುವ ಇಂದಿನ ಎಲ್ಲ ಶಾಖೆಗಳ ನಿರರ್ಥಕತೆಯನ್ನು ಕವಿ ಇಲ್ಲಿ ಅತ್ಯಂತ ಸೂಚ್ಯವಾಗಿ ಧ್ವನಿಸಿರುವುದು ಕವಿಯ ಕಾವ್ಯಶಕ್ತಿಯ ಪ್ರತೀಕವೂ ಹೌದು. ಜ್ಞಾನದ ದುರ್ಬಳಕೆಯ ವಕ್ರ, ವಿಕಾರ ಮುಖಗಳನ್ನು ಅದರಿಂದುಂಟಾಗಬಹುದಾದ ದುರಂತಗಳನ್ನು ಕವಿ ಒಂಟೆಯ ಸ್ವಭಾವದ ಮೂಲಕವೇ ಚಿತ್ರಿಸಿರುವುದರಿಂದ ಕವಿತೆಯ ಸಹಜ ನಡೆಗೆ ಎಲ್ಲೂ ಧಕ್ಕೆ ಉಂಟಾಗಿಲ್ಲ.

**ಸಾಧುವಲ್ಲದ ಈ ಪ್ರಾಣಿಯನ್ನು ಸಾಕಬಹುದು.**
**ತಾಳ್ಮೆಯಿದ್ದರೂ ಹಟಮಾರಿ, ಕಾಡಾದರೂ ವಿಧೇಯ.**
**ಮೊಳಕಾಲೂರಿಸಿ ಹಿಂಬದಿಯಿಂದ ಹತ್ತುವಾಗ ಸವಾರ**
**ರೇಗಿಸದೆಯೂ ಮೈಮೇಲೆ ಏರಿ ಬರಬಹುದು.**
**ಸಮೀಪ ಸಿಕ್ಕುದನು ಹಿಡಿದು ಕಚ್ಚಬಹುದು.**

ಒಂಟೆಯನ್ನು ಅರಿವು, ಜ್ಞಾನ ಎಂದೆಲ್ಲ ವ್ಯಾಖ್ಯಾನಿಸಿದರೂ ಅದಾವುದೂ ಆಗಿರದೆ ಮತ್ತೇನನ್ನೋ ಧ್ವನಿಸಬಹುದು. ನಮಗೆ ಪ್ರಾಪ್ತವಾಗುವ ಬದುಕೇ ಈ ಒಂಟೆಯಾಗಬಹುದು. ತರ್ಕದ ಮಿತಿಯಲ್ಲಿ ಕಾವ್ಯದ ಧ್ವನಿಸಾಧ್ಯತೆಗಳನ್ನು ಬಂಧಿಸಲಾಗದು. ಅದು ಒಂದರಿಂದ ಮತ್ತೊಂದಕ್ಕೆ ಚಾಚಿಕೊಳ್ಳುತ್ತ ಸಾಗುವ ಭಾವದ ಹರಿಣ.

**ಒಮ್ಮೆ ಹತ್ತಿಸಿಕೊಂಡು ಹೊರಟಿತೊ-**
**ಕಣ್ಣುಗಳನರೆಮುಚ್ಚಿ ತನ್ಮಯತೆಯಲಿ**
**ಸೂರ್ಯ, ಚಂದ್ರ, ನಕ್ಷತ್ರಗಳ ಕೆಳಗೆ**
**ಮರುಭೂಮಿಯ ಹಡಗು ಈಸುವುದು ಒಂದೇ ಗತಿಗೆ.**

ಇಲ್ಲಿ ಅಡಕವಾಗಿರುವ ಬಹುಮುಖ್ಯ ರಾಜಕೀಯ ಧ್ವನಿಯೊಂದನ್ನು ಗಮನಿಸಬೇಕು. ಮಳಲು ಹಾಡುತ್ತಿರುವುದು ರಶಿಯದ ಮರುಭೂಮಿಯಲ್ಲಿ. ರಶಿಯಾದ ಕಮ್ಯುನಿಷ್ಟ ಸರಕಾರ ನಿರ್ಮಿಸಿದ ಉಸಿರುಗಟ್ಟಿಸುವ ವಾತಾವರಣ ೮೦ರ ದಶಕದ ಕೊನೆಯ ವರ್ಷಗಳಷ್ಟೊತ್ತಿಗೆ ಸಡಿಲಾಗತೊಡಗಿದ್ದು, ಮುಕ್ತತೆಯ ಕಡೆಗೆ ತಿರುಗತೊಡಗಿದ್ದು ಇಲ್ಲಿ ಸೂಚಿತವಾಗಿದೆ. ಅಷ್ಟೇ ಅಲ್ಲ

**ಯಂತ್ರಗಳ ಕೈಗೆ ಸಿಗದ, ಒಂದಿಷ್ಟು ನಗೆಮೊಗದ**
**ಕನಸುಗಳ ಕಾರಂಜಿ, ಚಿಮ್ಮಬಹುದು.**

ಎನ್ನುವಲ್ಲಿ ಕವಿ ಯಂತ್ರ ನಾಗರಿಕತೆಯನ್ನು ಮೀರಿ ಮನುಷ್ಯ ಮಾನವೀಯ ನೆಲೆಗಳತ್ತ ತಿರುಗಿಕೊಳ್ಳುವುದರ ಅಗತ್ಯವನ್ನು ಹಾಗೂ ಆ ವ್ಯಕ್ತಿಯೆ ಆರಂಭಗೊಳ್ಳುವುದರ ಭರವಸೆಯನ್ನು ಹೊಂದಿರುವುದನ್ನು ಕಾಣುತ್ತೇವೆ. ಮಳಲೇ ಹಾಡುತ್ತಿರುವಾಗ ಮನುಷ್ಯನಲ್ಲಿ ಈ ಸಾಧ್ಯತೆಗಳು ಇದ್ದೇ ಇವೆ ಎಂಬುದನ್ನು ಕವಿಯ ಭರವಸೆಯ ಹಿಂದಿನ ತರ್ಕ. ಭಾರತದ, ಕರ್ನಾಟಕದ ಸಂದರ್ಭದಲ್ಲಿ ಇದು ಕೆಳವರ್ಗಗಳು ಎಚ್ಚೆತ್ತುಕೊಳ್ಳುತ್ತಿರುವುದಕ್ಕೆ ಪ್ರತೀಕ ಏಕಾಗಬಾರದು? ತೃತೀಯ

ಜಗತ್ತಿನ ಎಲ್ಲ ರಾಷ್ಟ್ರಗಳ ಸಾಮಾನ್ಯರ ಆರ್ತತೆಯೂ ಆಗಬಹುದಲ್ಲವೇ?

ಆದರೆ ಮಳಲಿನ ಈ ವರ್ತನೆ
ಭೂಕಂಪಕ್ಕೆ ಮುನ್ಸೂಚನೆ ಎಂದು ವಿಜ್ಞಾನಿಗಳ ಶಂಕೆ,
ಆದರೂ ಏರುತ್ತಲೇ ಇದೆ
ಅಣ್ವಸ್ತ್ರಗಳ ಸಂಖ್ಯೆ.

ಮನುಷ್ಯ ಪ್ರಕೃತಿಯ ಮೇಲಿನ ಅತಿಕ್ರಮಣ ಜೀವರಾಶಿಗಳಿಗೆ ಕುತ್ತಾಗಿರುವುದನ್ನು ಮಳಲಿನ ವರ್ತನೆಯ ಮೂಲಕ ಬಿಂಬಿಸುವ ಕವಿ ಅದಕ್ಕೆ ವೈಜ್ಞಾನಿಕ ಅಧಿಕೃತತೆಯನ್ನು ನೀಡುವುದು ಕಣ್ಣೆದುರಿನ ವಾಸ್ತವವನ್ನೇ ಒತ್ತಿ ಹೇಳುವ ಉದ್ದೇಶದಿಂದ ಕೂಡಿದೆ. ಇಡೀ ಭೂಮಿಯನ್ನೇ ದುರಂತದ ಅಂಚಿಗೆ ತಳ್ಳಿರುವ ಮನುಷ್ಯ ಯುದ್ಧದ ಪೈಪೋಟಿಗೆ ತೊಡಗಿ ಅಹಂಕಾರ ಮೆರೆಯುವ ವಿಪರ್ಯಾಸವನ್ನು ಕವಿ ಕೊನೆಯ ಸಾಲುಗಳಲ್ಲಿ ಧ್ವನಿಸಿದ್ದಾನೆ. 'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ನೆಗೆವ' ಪರಿ ಇದು.

ಹೀಗೆ ಕವಿತೆ ಒಂಟೆಯಾಗಿ ಮರುಳುಗಾಡನ್ನು ಸ್ತುತಿಸಿ ಹಾಡುವ ಮಳಲಿನ ವಿಭಿನ್ನ ಸ್ವರಗಳ ಮೂಲಕ ಸಮಕಾಲೀನ ಬದುಕಿನ ಜ್ವಲಂತ ವಾಸ್ತವಗಳಿಗೆ ಧ್ವನಿಯಾಗುತ್ತದೆ. ಮನುಷ್ಯನ ಆಂತರ್ಯದ ಶೋಧಕ್ಕೆ ಕನ್ನಡಿಯಾಗುತ್ತದೆ. ಕಣವಿಯವರ ಕಾವ್ಯಸಿದ್ಧಿಯ ಅಪೂರ್ವ ಆಂತರ್ಯದ ಶೋಧಕ್ಕೆ ಕನ್ನಡಿಯಾಗುತ್ತದೆ. ಕಣವಿಯವರ ಕಾವ್ಯಸಿದ್ಧಿಯ ಅಪೂರ್ವ ಮಾದರಿಯಾಗಿರುವ ಈ ಕವಿತೆ ನನ್ನನ್ನು ನಿರಂತರ ಕಾಡುತ್ತದೆ, ವಿಸ್ಮಯಗಳ ಜಾಡಿನಲ್ಲಿ ಹೊಸದೇನನ್ನೋ ನೀಡುವ ಬಹುಮುಖೀ ಗ್ರಹಿಕೆಗೆ ಕಾರಣವಾಗುತ್ತದೆ.

ಬಸವರಾಜ ಒಕ್ಕುಂದ

## ೫೭. ಹಲ್ಲಿಗಳ ಸಹವಾಸ

ಗೋಡೆಯ ಮೇಲೆ ರಾಜಾರೋಷ ಓಡಾಡುವ
ಈ ಹಲ್ಲಿಗಳಿಗೆ
ಎಲ್ಲೂ, ಯಾರ ಭಯವೂ ಇಲ್ಲವೆ?
ಆಯ ತಪ್ಪಿ, ಎಂದೋ ಒಮ್ಮೆ ಲೊಟ್ ಎಂದು
ಕೆಳಗೆ ಬಿದ್ದಾಗಲೂ
ಕದ, ಕಿಡಕಿ, ಕಪಾಟುಗಳ ಹಿಂದೆ
ನಾಗಾಲೋಟದಿಂದ ಮರೆಯಾಗಿಬಿಡುತ್ತವೆ.
ಆಮೇಲೆ
ಗೊತ್ತಾಗದಂತೆ ಮತ್ತೆ ಸ್ವಸ್ಥಾನಕ್ಕೆ ಏರುತ್ತವೆ.

ಗೋಡೆಯ ಮೇಲೆ ಬರೆದಂತೆ, ಹಾಡೇ ಹಗಲು
ಬೇಟೆಯಾಡುತ್ತವೆ;
ದೂರದಿಂದಲೇ ನೆದರಿಟ್ಟು, ಮೆಲ್ಲಗೆ ಸರಿಯುತ್ತ
ಬಾಲವನ್ನು ಅತ್ತಿತ್ತ ಒಡಮುರಿದು, ಅಂತರದಲ್ಲಿ
ಆಡಿಸುತ್ತ, ಧೇನಿಸುತ್ತ
ಗಬಕ್ಕನೆ ಹಿಡಿದು, ಮುಳ್ಳುನಾಲಗೆಯಲ್ಲಿ ಮಡಿಚಿಬಿಡುತ್ತವೆ.

ಹೊತ್ತು ಮುಳುಗಿದ ಮೇಲೆ ಯಾವುದೋ
ಮೂಲೆಯನ್ನಾಶ್ರಯಿಸಿ
ಆರಾಮದಿಂದ ಲೊಚಗುಟ್ಟಿದರೆ-
ದಿಕ್ಕು ಕಂಡು ಹಿಡಿದು, ದಿಕ್ಕಿಲ್ಲದವರು ಶಕುನ ಹೇಳುತ್ತಾರೆ.
ಹರಿದಾಡುತ್ತವೆ ಕೈಗೆ ಸಿಕ್ಕ ಬೀಳದ ಹಾಗೆ.

ಆಕಸ್ಮಾತ್ತಾಗಿ ಬಾಗಿಲ ಇರುಕಿನಲ್ಲಿ ಬಾಲ
ಕತ್ತರಿಸಿ ಹೋದಾಗಲೂ, ಮತ್ತೆ ಚಿಗುರಿ
ಬದುಕಿರುವುದನ್ನು ಕಂಡಿದ್ದೇವೆ.
ಹೇಸಿಗೆಪಟ್ಟರೂ ಹೊಂದಿಕೊಂಡಿದ್ದೇವೆ ಹೀಗೆ
ಅವುಗಳ ಜೊತೆಗೆ.
ಅಂದ ಮೇಲೆ, ಅವುಗಳನ್ನು ಹಿಡಿದುಕೊಟ್ಟವರಿಗೆ
ಬಹುಮಾನವಿಡುವ ಪ್ರಸಂಗವೇ ಬಂದಿಲ್ಲ.
ಕೊಂದರೆ ಪಾಪವೆಂದು ಬೇರೆ ಹೇಳಬೇಕಿಲ್ಲ.

ಚೆನ್ನವೀರ ಕಣವಿ ಅವರ ಕಾವ್ಯದ ಒಟ್ಟಾರೆ ಮೌಲ್ಯಮಾಪನದಲ್ಲಿ ನಿಜಕ್ಕೂ ಕಾಡು ನೋಡುವ ತವಕದಲ್ಲಿ ನಮಗೆ ಗಿಡಮರಗಳು ಗೋಚರಿಸುವುದಿಲ್ಲ ಎನ್ನುತ್ತಾರಲ್ಲ, ಹಾಗಾಗಿ ಬಿಡುತ್ತದೆ. ನಾನು ಅತ್ಯಂತ ಇಷ್ಟಪಟ್ಟ ಅವರ ಡಜನ್ ಕವನಗಳುಂಟು. ಆದರೆ ನಾನಿಲ್ಲಿ ಆ ಗುಚ್ಛವನ್ನು ಸ್ಥೂಲವಾಗಿ ಪ್ರತಿನಿಧಿಸುವ ಒಂದನ್ನು ಕುರಿತು ಟಿಪ್ಪಣಿಸುವೆ. ಪ್ರಸ್ತುತ ಗುಚ್ಛ ನಮ್ಮ ಜೀವನದ ಚಿಕ್ಕಪುಟ್ಟ ವಸ್ತುಗಳ ಮೇಲೆ ಕೇಂದ್ರಿತಗೊಂಡಿದೆ; ಪುಟ್ಟ ಜೀವಿಗಳು, ಹೂಗಳು, ಇತ್ಯಾದಿ ತಮ್ಮ ಅದ್ಭುತ ಅಸಲ್ ಮತ್ತು ಸೃಜನಾತ್ಮಕ ಚಿತ್ರಣದಿಂದ ಚಿಕ್ಕಪುಟ್ಟ ವಸ್ತುಗಳ ಮೂಲಕ ಬೃಹತ್ ಆಧ್ಯಾತ್ಮಿಕ ಮತ್ತು ವಿಶ್ವಾತ್ಮಕ ಸಂಗತಿಗಳ ಹುಡುಕಾಟ ಕಣವಿ ಕಾವ್ಯದ ಸುಸ್ಪಷ್ಟ ಲಕ್ಷಣವೆಂದು ನನಗನಿಸುತ್ತದೆ. ಈ ಕವನಗಳು ಕಣವಿ ಅವರ ಪ್ರಜಾಸತ್ತಾತ್ಮಕ ಚೇತನವನ್ನು ಪ್ರತಿಫಲಿಸುತ್ತವೆ. ಅವರ ಈ ಚೇತನ ನಮ್ಮ ವಾಸ್ತವ ಬದುಕಿನ ಸಾಮಾನ್ಯ ಘಟನೆಗಳು ಮತ್ತು ನಿತ್ಯಗಟ್ಟಲೆಯ ಸಂಗತಿಗಳೊಂದಿಗೆ ನಿರಾಳವಾಗಿದೆ.

'ಹಲ್ಲಿಗಳ ಸಹವಾಸ' ('ಕಾರ್ತಿಕದ ಮೋಡ' - ಸಂಗ್ರಹ) ನಾನು ಆಯ್ಕೆ ಮಾಡಿಕೊಂಡ ಕವನ. ಗೋಡೆಗುಂಟ ಹರಿದಾಡುವ ಹಲ್ಲಿಗಳ ನಿರ್ಭಯ ಜೀವನದ ನೇರ ಹಾಗೂ ನಿಕಟವಾಗಿ ನಿರುಕಿಸಿದ ವರ್ಣನೆಯೊಂದಿಗೆ ಕವನ ಆರಂಭಗೊಳ್ಳುತ್ತದೆ. ಅವುಗಳ ಚಲನೆಯನ್ನು ಅನಲಂಕೃತ, ಹಾಗಾಗಿ ಬಲು ಶಕ್ತಿಯುತ ಭಾಷೆಯಲ್ಲಿ ಪ್ರೀತಿಯ ಕಾಳಜಿಯಿಂದ ಸೆರೆ ಹಿಡಿಯಲಾಗಿದೆ. ಕವಿಯ ತೀಕ್ಷ್ಣ ಕಣ್ಣುಗಳು ನಿರೀಕ್ಷಿಸಿದ ವಿವರಗಳಿಂದ ಅವುಗಳ ಚಲನವಲನಗಳನ್ನು ಕಟ್ಟಿಕೊಡಲಾಗಿದೆ. ಹಲ್ಲಿಯ ಲೊಚಗುಡುವಿಕೆಯನ್ನು ಅದರ ಭವಿಷ್ಯವಾಣಿಯ ಶಕ್ತಿಯಲ್ಲಿ ನೆಟ್ಟಿರುವ ಮಾನವ ನಂಬಿಕೆಯೊಂದಿಗೆ ಬೆಸೆದಿರುವ ರೀತಿಯಲ್ಲಿ ಪ್ರಕೃತಿಯನ್ನು ಮಾನವ ಸಂಸ್ಕೃತಿಯೊಂದಿಗೆ ಜೋಡಿಸುವ ಸಾಮರ್ಥ್ಯವನ್ನು ಕಣವಿಯವರಲ್ಲಿ ನೋಡಬಹುದಾಗಿದೆ. ತನ್ನ ಬಾಲ ಬಾಗಿಲಲ್ಲಿ ಸಿಕ್ಕು ಕತ್ತರಿಸಿ ಹೋದಾಗ ಹೊಸ ಬಾಲವನ್ನು ಪುನರ್ ಸೃಷ್ಟಿಗೊಳ್ಳುವ ಹಲ್ಲಿಯ ಸಾಮರ್ಥ್ಯ ಕುರಿತು ಒಂದು ಅದ್ಭುತ ಚಿತ್ರಣ ನೀಡಲಾಗಿದೆ. ಮಾನವ ತಾನು ಪ್ರೀತಿಸಲಾರದ ಜೀವಿಗಳೊಂದಿಗೆ ಬದುಕುವ ಅನಿವಾರ್ಯತೆಯನ್ನು ಕವಿ ಸೂಚಿಸುತ್ತಾನೆ. ಅದು ಕಾರಣ, ಹಲ್ಲಿಗಳು ಮಾನವ ಕ್ರೌರ್ಯಕ್ಕೆ ಬಲಿಯಾಗುವುದಿಲ್ಲ. ಏಕೆಂದರೆ, ಅವುಗಳನ್ನು ಕೊಲ್ಲುವುದು ಪಾಪವೆಂಬ ಸಾಂಸ್ಕೃತಿಕ ಸಂಹಿತೆಯಿದೆ.

ಮೂವತ್ತಕ್ಕೂ ಕಡಿಮೆ ಸಾಲುಗಳಲ್ಲಿ ಕಣವಿ ಹಲ್ಲಿಗಳ ಮಹಾಗಾಥೆಯನ್ನು ನಮ್ಮೆದುರು ಬಿಚ್ಚಿಡುತ್ತಾರೆ. ನಿಜಕ್ಕೂ, ಕಣವಿಯವರ ಕಾವ್ಯಶಕ್ತಿ ಸಾಮಾನ್ಯವಾದುದನ್ನು ಅಸಾಮಾನ್ಯದಲ್ಲಿ ಪರಿವರ್ತಿಸುವಲ್ಲಿ ಅಡಗಿದೆ. ನವೋದಯ ಪರಂಪರೆಯ ಭಾವುಕತೆ ಮತ್ತು ಆದರ್ಶವಾದಿತ್ವದಿಂದ ಮಾತ್ರವಲ್ಲದೆ ನವ್ಯ ಕವಿಗಳ ಸ್ವವ್ಯಾಮೋಹದಿಂದಲೂ ಕಣವಿ ಕಾವ್ಯ ದೂರ ನಿಲ್ಲುತ್ತದೆ. ನಿರ್ಲಿಪ್ತತೆಯಿಂದ ನಿರೀಕ್ಷಿಸಿದ ವಾಸ್ತವವನ್ನು ಸೂಕ್ಷ್ಮ ವಿವರಗಳ ಮೂಲಕ ಬಣ್ಣಿಸುವುದರ ಮೇಲೆ ಕವಿಯ ಗಮನ ಕೇಂದ್ರಿತಗೊಂಡಿದೆ. ಸಲೀಸು ಅವರ ಕಾಣ್ಕೆಗೆ ಸರಿ ದೊರೆಯಾಗಿದೆ. ತನ್ನ ಮೇಲ್ನೋಟದ ಸರಳತೆಯಡಿ ಕಣವಿ ಕಾವ್ಯವು ಮಾನವ ದೈವದ ಮೂಲಭೂತ ಲಕ್ಷಣಗಳು ಮತ್ತು ಪರಿಸರದೊಂದಿಗೆ ಅದರ ಬಿಡಿಸಲಾಗದ ನಂಟುಗಳಿಗೆ ಸಂಬಂಧಿಸಿದೆ. ಬಹುಶಃ ಕಣವಿ ಅವರ ಗ್ರಾಮೀಣ ಹಿನ್ನೆಲೆಯು ಮಾನವ ಬದುಕು ಮತ್ತು ಪ್ರಕೃತಿ ಮಧ್ಯೆ ಇರುವ ಗಾಢ ಸಂಬಂಧವನ್ನು ತೀವ್ರವಾಗಿ ಅನುಭವಿಸಲು ಸಾಧ್ಯವಾಗಿಸಿದೆ. ನಗರಪೋಷಿತ ಸಾಹಿತಿಗಳಲ್ಲಿ ಈ ಸಂಬಂಧದ ತಿಳಿವು ಅಷ್ಟೊಂದಾಗಿ ಕಂಡುಬರುವುದಿಲ್ಲ. ಈ ಕವನ ಕಣವಿಯವರ ಅತ್ಯಂತ ಪರಿಣಾಮಕಾರಿ ಕವನಗಳಲ್ಲೊಂದು ಎಂದು ನಾನು ಪರಿಗಣಿಸುತ್ತೇನೆ. ಏಕೆಂದರೆ, ಅದು ಕಣವಿಯವರ ಅನುಭವದ ವೈಪುಲ್ಯವನ್ನೆಲ್ಲ ಮೇಲ್ನೋಟಕ್ಕೆ ಸರಳ, ಆದರೆ ಆಂತರ್ಯದಲ್ಲಿ ಸಂಕೀರ್ಣವಾದ, ಅಗಾಧ, ಭಾಷಿಕ ಸಂಪತ್ತಿನಲ್ಲಿ ಹೆಣೆದಿಟ್ಟಿದೆ.

ಕೆ. ರಾಘವೇಂದ್ರ ರಾವ್

(ಇಂಗ್ಲಿಷ್‌ನಿಂದ ಅನುವಾದ: ಸದಾನಂದ ಕನವಳ್ಳಿ)

# ೫೮. ಶ್ರಾವಣ

ನೆತ್ತಿಯ ಮೇಲೆ ಸಮುದ್ರ ತೇಲಿದ ಹಾಗೆ ಮುಗಿಲು
ಸುರಿವ ಜಡಿಮಳೆ, ತುಂಬಿ ಹೊರಚೆಲ್ಲಿದುದ್ವೇಗ,
ಮನೆಮನೆಯು ನಡುಗಡ್ಡೆ, ಮನ -ದಿಗಂತಕೆ ದಿಗಿಲು.

ನೆಲದ ಕೊರತೆಯನೆಲ್ಲ ತುಂಬಿ ಕೊಟ್ಟಿದೆ ಹಸುರು.
ನಂಬಿಕೆಯ ಹಿಡಿದು ಅಲುಗಿಸಿ ಗಟ್ಟಿಗೊಳಿಸಿರುವ
ಬೆಟ್ಟದ ಮುಡಿಯ ಚಿಕ್ಕೆ: ರೆಕ್ಕೆ ಬೀಸುವ ಚದುರು.

ಶ್ರಾವಣವು ಸೂರೆಗೊಳಿಸಿದ ಹೂವು ನಸುಕಿನಲಿ
ಕಣ್ಣು ತೆರೆದು, ಸಂಜೆಯವರೆಗು ಮಾಸದ ಬಣ್ಣ.
ದಿನ ದಿನವು ಪರ್ವ; ಆಡಿ ಬಿಟ್ಟಿರುವ ಜೋಕಾಲಿ.

ಮುರುಕು ಜೋಪಡಿ, ಹರಕು ಚಿಂದಿ ಮಂದಿಯ ಬದುಕು.
ಕಂಡ ಕಂಡಲ್ಲಿ ಕೈಯೊಡ್ಡಿ ಕೇಳುವ ಪ್ರಶ್ನೆ -
ಪುಸ್ತಕವ ಬಿಟ್ಟು ವಾಸ್ತವದಿ ಉತ್ತರ ಹುಡುಕು.

ವ್ರತ, ನಿಯಮ, ಇಷ್ಟ-ಕುಲ-ಗ್ರಾಮ ದೈವತ ಪೂಜೆ-
ಮುಗಿಯಿತೇ ? ಈ ಸಮಷ್ಟಿಗೆ ಸೃಷ್ಟಿ ನೀಡಿರುವ ಕೊಡುಗೆ ?

ಸುನೀತದ ಬಿಗಿಯಾದ ಬಂಧ, ತಪ್ಪದ ಲಯಗಾರಿಕೆ. ಅರ್ಥಪೂರ್ಣ ಭಾಷಾ ಬಳಕೆ, ಭಾವದ ಚೌಕಟ್ಟನ್ನು ಹೊಂದಿಸುವ ರೀತಿಯಿಂದಾಗಿ ಕಣವಿಯವರ ರಚನೆಗಳು ಕನ್ನಡದ ಶ್ರೇಷ್ಠ ಸುನೀತಗಳೇ ಆಗಿವೆ: ಬೇರೆ ಬೇರೆ ಭಾವಕ್ಕೆ ತಕ್ಕನಾಗಿ ಅವು ತಮ್ಮ ಆಕೃತಿಯನ್ನು

ರೂಪಿಸಿಕೊಳ್ಳುತ್ತವೆ. ವ್ಯಕ್ತಿ-ವ್ಯಕ್ತಿತ್ವ, ನಿಸರ್ಗ ಸ್ಪಂದನ, ಕೃತಿ-ಆಕೃತಿ, ನಿವೇದನೆ, ಜಿಜ್ಞಾಸೆ ಹೀಗೆ ಬಿಡು ಬೀಸಾದ ಮತ್ತು ವೈವಿಧ್ಯದಲ್ಲಿ ಎಲ್ಲಿಯೂ ಸುನೀತ ಮಾಧುರ್ಯಕ್ಕೆ ಎರವಾಗುವುದಿಲ್ಲ. ಆರಂಭದಿಂದ, ಅಂದರೆ ನಲವತ್ತರ ದಶಕದಿಂದ ಹಿಡಿದು ಇಲ್ಲಿಯವರೆಗೂ ಬಂದಿರುವ ಅವರ ಎಲ್ಲ ಸುನೀತಗಳಿಗೂ ಈ ಮಾತು ಅನ್ವಯವಾಗಬಲ್ಲುದು, ಹೀಗಿರುವಾಗ ಯಾವುದನ್ನು ಆರಿಸಿಕೊಳ್ಳಬೇಕು ಎಂಬುದೇ ಕಷ್ಟ, ಹಾಗಾಗಿ ನಿಸರ್ಗ ಸ್ಪಂದನದ ಅನೇಕ ಶ್ರೇಷ್ಠ ಸಾನೆಟ್ಟುಗಳಲ್ಲಿ 'ಶ್ರಾವಣ'ವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ('ಕಾರ್ತಿಕದ ಮೋಡ'ಸಂಗ್ರಹ)

ನವೋದಯ ಕಾವ್ಯಕ್ಕೆ ಮೂಲ ಸ್ಫೂರ್ತಿಯನ್ನೊದಗಿಸಿದ 'ನಿಸರ್ಗ' ಆ ಕಾಲದ ಮಹಾಕವಿಗಳ ಕೃತಿಗಳಲ್ಲಿ ಕೊಳ್ಳೆ ಹೊಡೆಸಿಕೊಂಡಿದೆ. ಒಬ್ಬೊಬ್ಬ ಕವಿಯೂ ಅದನ್ನು ಗ್ರಹಿಸಿದ ರೀತಿ, ಹಿಡಿದು ಆಕೃತಿಗೊಳಿಸಿದ ವಿಶೇಷ. ಅತಿ ಸೂಕ್ಷ್ಮವಾದ ಸ್ಪಂದವನ್ನು ಕಾಣಿಸಿದ್ದು, ಪ್ರಜ್ಞಾ-ವಿವೇಕ ಭಾವದ ತಕ್ಕ ಬೆಸುಗೆಯಲ್ಲಿ ನಿಸರ್ಗ ವ್ಯಾಪಾರವನ್ನು ಆಧ್ಯಾತ್ಮದ, ಭಕ್ತಿಕಾಮದ ನೆಲೆಗೆ ಕೊಂಡೊಯ್ದದ್ದು ಸಾಧಾರಣವಾದ್ದೇನಲ್ಲ. ಆ ಕಾಲಘಟ್ಟದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದ ಕಣವಿಯವರು ಕನ್ನಡ ಕಾವ್ಯದ ಈ ವಿಶಿಷ್ಟತೆಯನ್ನು ಮೈಗೂಡಿಸಿಕೊಂಡೇ ಬೆಳೆದವರು. ಹಾಗಾಗಿ ನಿಸರ್ಗ ಅವರ ಉಸಿರು. ರಕ್ತದೊಳಗೇ ಸೇರಿಕೊಂಡಂತಿದೆ ಎಂಬ ಅನನ್ಯತೆ ಇದ್ದೇ ಇದೆ. ಆದ್ದರಿಂದ ಅವರು ಕನ್ನಡ ಕಾವ್ಯದ ಎಲ್ಲ ಸ್ಥಿತ್ಯಂತರಗಳಲ್ಲೂ ಈ ಮೂಲ ಆಶಯವನ್ನು ಸ್ಥಾಯಿಯಾಗಿಟ್ಟುಕೊಂಡೇ ಅಭಿವ್ಯಕ್ತಿಯನ್ನು ಸಾಧಿಸಿದ್ದಾರೆ. ನಿಸರ್ಗ ಸ್ಪಂದನದ ಅವರ ಸಾನೆಟ್ಟುಗಳಲ್ಲಂತೂ ಇದು ಗರಿಷ್ಠ ಪ್ರಮಾಣದಲ್ಲಿ ಸಾಧಿತಗೊಂಡಿದೆ.

ಪ್ರಕೃತಿ ಎನ್ನುವುದು ಬೆರಗಿನ, ಸೌಂದರ್ಯದ, ಕುತೂಹಲದ, ಭಯದ ಆಗರ. ಅದರ ಎಲ್ಲ ಸೂಕ್ಷ್ಮಗಳಂತೂ ನರಮಾನವನಿಗೆ ಯಾವಾಗಲೂ ನಿಗೂಢದ ದಿಗಿಲು ಹುಟ್ಟಿಸುವಂಥವೇ. ಬೀಜ ಮೊಳಕೆಯಾಗುವ, ಮೋಡ ಮಳೆಯಾಗುವ ಗಾಳಿ ಬೀಸುವ, ಬೆಂಕಿ ಉರಿಯುವ ಎಲ್ಲ ಎಲ್ಲವೂ ಪಂಚಭೂತಗಳ ಅಪಾರ ಕ್ರಿಯಾಶಕ್ತಿಯ ಫಲಗಳೇ. ತಾತ್ವಿಕರಿಗೆ, ವಿಜ್ಞಾನಿಗಳಿಗೆ ಕಾಡಿದಷ್ಟೇ ಪ್ರಮಾಣದಲ್ಲಿ ಕವಿಗೂ ಕಾಡಿರುವ ಪ್ರಕೃತಿ ತನ್ನ ಗುಟ್ಟುಗಳನ್ನು ಅಷ್ಟು ಸಲೀಸಾಗಿ ಬಿಟ್ಟುಕೊಡುವಂಥದಲ್ಲ. ಅದಕ್ಕೆ ಮನುಷ್ಯ ಈ ಭೌಮತೆಯ ಮುಂದೆ ಕಿಂಕರನಾಗಿ, ವಿನೀತನಾಗಿ ತಲೆ ಬಾಗುತ್ತಾನೆ. ಅದರ ರೌದ್ರವರ್ತನೆಗೆ ನಲುಗಿ ಅನೇಕ ನಂಬಿಕೆಗಳನ್ನು ಕಟ್ಟಿಕೊಂಡಿದ್ದಾನೆ. ಎಷ್ಟು ಮೊಗೆದರೂ ಮತ್ತೂ ಮತ್ತೂ ಉಳಿಯುವ ಈ ರಹಸ್ಯಕ್ಕೆ ಆತಂಕಗೊಂಡು ಅನೇಕ ಆಚರಣೆಗಳನ್ನೂ ರೂಢಿಸಿಕೊಂಡಿದ್ದಾನೆ. ಋತುಗಳ ನಿಷ್ಪೃಷ್ಟ ಅಂತರ, ಗುರುತ್ವದ ದೈವೀಸ್ವರೂಪ, ಹೊಳೆಯುವ ಚಿಕ್ಕೆಗಳು, ಇರುಳಿನ ಕಗ್ಗಂಟುಗಳು, ಹಗಲಿನ ವಹಿವಾಟುಗಳು, ಸೂರ್ಯ, ಚಂದ್ರ, ಉಲ್ಕೆ, ಹಾಲು-ಹಾದಿಯ ನಿಬ್ಬೆರಗಿನಲ್ಲಿ ಸೋಜಿಗದ ಮೂರ್ತಿಯಾಗಿ ಅವಕ್ಕೆ ನಮಿಸುತ್ತಿದ್ದಾನೆ. ಅದರ ಒಂದು ಅಂಗವಾದ ತಾನೂ ಒಂದು ನಿಗೂಢವಾಗಿ ತನ್ನನ್ನು ತಾನೇ ಅರ್ಥೈಸಿಕೊಳ್ಳಲು ಪರಿತಪಿಸುತ್ತಿದ್ದಾನೆ. ಮಳೆ, ಬಿಸಿಲು, ಚಳಿ ಎಲ್ಲವೂ ಅವನನ್ನು ಕಾಲಕಾಲಕ್ಕೆ ಪೊರೆಯುವ ಚೈತನ್ಯಗಳಾಗಿ ಅವನಲ್ಲಿ ಅನಂತ ಆಸಕ್ತಿಯನ್ನು ಕೆರಳಿಸಿವೆ ಮತ್ತು ಉಳಿಸಿವೆ. ಜೀವನೋತ್ಸಾಹಕ್ಕೆ

ಬೇಕಾದ ಎಲ್ಲ ದ್ರವ್ಯಗಳನ್ನೂ ಈ ಪ್ರಕೃತಿ ಒದಗಿಸುತ್ತಾ ಹುಟ್ಟಿನ ಬೆರಗನ್ನೂ, ಸಾವಿನ ಅನಿವಾರ್ಯತೆಯನ್ನೂ ಅವನಿಗೆ ಮನಗಾಣಿಸುತ್ತಾ ಕೋಟ್ಯಂತರ ವರ್ಷಗಳ ಲೀಲೆಯಾಳವನ್ನು ಆಡುತ್ತಲೇ ಇದೆ.

ಈ ಹಿನ್ನಲೆಯಲ್ಲಿ ತನ್ನ ಬದುಕಿಗೆ ಬೇಕಾಗುವ ಎಲ್ಲ ಲೌಕಿಕ ಸಾಮಗ್ರಿಗಳನ್ನು ಮಾನವ ಪಡೆಯುವುದು ನಿಸರ್ಗದಿಂದಲೇ. ಹಾಗೆಯೇ ಅದರೊಳಗಿನ ಅಲೌಕಿಕ ಸತ್ಯವನ್ನು ಹುಡುಕುವುದೂ ಅಲ್ಲಿಂದಲೇ. ಪ್ರಾಕೃತಿಕ ಕೌತುಕಕ್ಕೆ ತನ್ನದೇ ವ್ಯಾಖ್ಯಾನವನ್ನು ಮಾಡುತ್ತಾ ಮನುಷ್ಯ ಅದರ ಬೇರೆ ಬೇರೆ ಮೂಡ್‌ಗಳನ್ನು ಗುರುತಿಸಿ ಋತುಗಳನ್ನಾಗಿ, ಮಾಸಗಳನ್ನಾಗಿ, ದಿನ, ನಕ್ಷತ್ರಗಳನ್ನಾಗಿ ಅತ್ಯಂತ ವೈಜ್ಞಾನಿಕವಾಗಿಯೇ ವಿಂಗಡಿಸಿದ್ದಾನೆ. ಎಲ್ಲ ಋತುಗಳೂ ಕರಾಕುವಾಕ್ಯಾದ ಚಲನೆಗೆ ಬದ್ಧವಾಗಿರುವುದನ್ನೂ, ಆಯಾ ಮಾಸಗಳು ತಮ್ಮ ನಿರ್ದಿಷ್ಟ ಕ್ರಿಯೆಗಳಲ್ಲಿ ತೊಡಗುವುದನ್ನೂ ಮನುಷ್ಯ ಕತೆಮಾಡಿ, ಕವನ ಮಾಡಿ ಅಪಾರ ನಾಟಕೀಯ ಚಲನೆಯಲ್ಲಿ ತನ್ಮಯವಾಗಿ ಹಾಡಿದ್ದಾನೆ. ಭಾರತೀಯ ಸಂಸ್ಕೃತಿಯಲ್ಲಂತೂ ಅದು ಅಗಾಧವಾಗಿಯೇ ವ್ಯಕ್ತಗೊಂಡಿದೆ. ಕನ್ನಡ ಸಂಸ್ಕೃತಿ ಕೂಡ ಅದಕ್ಕೆ ಹೊರತಲ್ಲ.

ಮಾಸಗಳಲ್ಲಿ ಶ್ರಾವಣ ಅತ್ಯಂತ ವೈಭವಯುತವಾದದ್ದು. ಅದನ್ನು ಹಾಡದ ಕವಿಯಿಲ್ಲ. ವಸಂತ ಹೇಗೋ ಹಾಗೆ ಗ್ರೀಷ್ಮದ ನಂತರದ ವರ್ಷವೈಭವವಾಗಿ ಬರುವ ಶ್ರಾವಣ ನಮ್ಮ ಸಂಸ್ಕೃತಿಯ ಪ್ರಧಾನ ಮಾಸ. ಶ್ರವಣದ ಕಾಲ ಅದು. ಪುಣ್ಯ ಕತೆ,. ಪುರಾಣಗಳನ್ನು ಶ್ರವಣ ಮಾಡುತ್ತಾ ಗುಡಿಗೋಪುರಗಳಲ್ಲಿ ಹಬ್ಬಗಳನ್ನಾಚರಿಸುವ ತಂಪಿನ ಕಾಲ ಅದು. ಸಣ್ಣ ಸೋಮವಾರದಲ್ಲಿ ಸೋಮೇಶ್ವರ ಕಾಣುವುದು ಅನಿವಾರ್ಯ ಎನ್ನುತ್ತಾರೆ ಕವಿ ಬೇಂದ್ರೆ. ಕಣವಿಯವರ 'ಶ್ರಾವಣ' ಈ ದೃಷ್ಟಿಯಿಂದ ಅತಿ ಮಹತ್ವದ್ದು. ನಿಸರ್ಗದ ಎಲ್ಲ ಮಾಧುರ್ಯವನ್ನು ತುಂಬಿಕೊಂಡಂತಿರುವ ಈ ಮಾಸ ಮುಂಬರುವ ಸುಗ್ಗಿಯ ಅರ್ಥಪೂರ್ಣ ಮುನ್ನುಡಿಯೂ ಹೌದು. ಮಳೆಯ ಧಾರಾಕಾರ ಸುರಿಯುವಿಕೆಯಿಂದಾಗಿ ಮುಂಗಾರಿನ ಸಂಪತ್ತು ಸ್ಪಷ್ಟವಾಗಿ ಗೋಚರವಾಗುತ್ತಾ ಪ್ರಕೃತಿ ತನ್ನ ಲಾವಣ್ಯವನ್ನೆಲ್ಲ ಮೈದೋರುವ ಕಾಲ ಅದು. ಶ್ರಾವಣ ವೈಭವಕ್ಕೆ ತನ್ನ ಕಷ್ಟಗಳನ್ನೆಲ್ಲ ನೀಗುವ ಶಕ್ತಿ ಇದೆ ಎಂದೇ ಅನೇಕ ನಂಬಿಕೆಯ ಆಚರಣೆಗಳನ್ನು ಮಾನವ ಹೆಸರಿಟ್ಟುಕೊಂಡೇ ಹುಟ್ಟುತ್ತವೆ. ಮಂಗಳಗೌರಿ ತನ್ನನ್ನು ಪೂಜಿಸಿಕೊಳ್ಳುತ್ತಾಳೆ. ವರಮಹಾಲಕ್ಷ್ಮಿಯೂ ಮನೆ ಮನೆಗೆ ಬರುತ್ತಾಳೆ. ಪ್ರತಿದಿನವೂ ಹಬ್ಬವಾಗಿ, ಸಂಭ್ರಮದ ಕ್ಷಣಗಳಾಗಿ ಈ ಮಾಸ ಪೂರ್ಣವಾಗಿ ಮಾನವ ಹೃದಯದೊಳಗೆ ಪ್ರತಿಷ್ಠಾಪಿತವಾಗಿ ಬಿಟ್ಟಿರುತ್ತದೆ. ಕವಿ ಕಣವಿಯರ 'ಶ್ರಾವಣ' ಈ ಸಮೃದ್ಧಿಯನ್ನೂ, ಅದರೊಳಗಿನ ವಿಪರ್ಯಾಸವನ್ನೂ ರೂಪಕ ಮಾದರಿಯಲ್ಲಿ ಅಭಿವ್ಯಕ್ತಿಸುತ್ತದೆ.

'ಸಮುದ್ರ ತೇಲಿದ ಹಾಗೆ ಮುಗಿಲು' ಎನ್ನುವಲ್ಲಿ ಸಮುದ್ರದ ತವರು ಮನೆಯಿಂದಲೇ ಬಂದ ಈ ಮೋಡಗಳ ರಾಶಿ ಸಮುದ್ರಕ್ಕೆ ವಾಪಸ್ಸಾಗುವಾಗ ಜಡಿಮಳೆಯಾಗಿ ಸುರಿದು, ಭುಮಿಯನ್ನೆಲ್ಲ ತುಂಬುವಂತೆ ನಿಸ್ವಾರ್ಥದಿಂದ ಹೊರಚೆಲ್ಲುತ್ತದೆ. ಅದು ಎಷ್ಟು ಪ್ರಮಾಣದ್ದೆಂದರೆ 'ಮನೆ ಮನೆಯೂ ನಡುಗಡ್ಡೆ'ಯಾಗುವಷ್ಟು. 'ನಡುಗಡ್ಡೆ'ಯ ರೂಪಕ ಮನದಿಂಗಿತದ ದಿಗಿಲನ್ನು

ಇಮ್ಮಡಿಗೊಳಿಸುವುದು. ಮಳೆಯ ರಭಸ, ಜೀಗುಟ್ಟುವಿಕೆ, ಸೋಗುಟ್ಟುವಿಕೆ ಹಲವು ಬಾರಿ ರೇಜಿಗೆಯನ್ನೂ ಹುಟ್ಟಿಸಬಲ್ಲದು. ಆದರೆ ಅದಿಲ್ಲದೆ ಬದುಕಿಲ್ಲ ಎಂಬ ತಿಳುವಳಿಕೆಯೂ ಅಲ್ಲಿರುತ್ತದೆ. ಹಾಗಾಗಿ ಅದನ್ನು ತಡೆದು ಕೊಳ್ಳುವುದು ಅನಿವಾರ್ಯವೂ ಹೌದು. ಈ ದಿಗಿಲಿನಾಚೆಗೂ ಅದು ನೆಲದ ಕೊರತೆಯನ್ನು ತುಂಬುವ ಹಸುರನ್ನೂ ಕೊಟ್ಟಿದೆ. ಹಸುರು ಸತ್ವದ ಸಂಕೇತವೂ ಹೌದು, ಸಮೃದ್ಧಿಯ ಸಂಕೇತವೂ ಹೌದು. ಕಣ್ಣಿಗೆ ಹರ್ಷದ ತಂಪನ್ನು ನೀಡುತ್ತಾ ನಮ್ಮ ಆಯಾಸವನ್ನು ನಿವಾರಿಸುವ ಅದಮ್ಯಶಕ್ತಿ ಅದಕ್ಕಿದೆ. ಈ ಹಸುರಿನಿಂದಲೇ ಹೊಮ್ಮುವ ಹೂವುಗಳನ್ನೂ ಶ್ರಾವಣ ಸೂರೆಗೊಂಡಿದೆ ಎನ್ನುತ್ತಾರೆ ಕವಿ. ಬೆಳಿಗ್ಗೆ ಅರಳಿದ ಹೂವು ಸಂಜೆಯ ತನಕ ತಾಜಾ ಆಗಿರುವದೇ ಶ್ರಾವಣ ಮಾಸದಲ್ಲಿ. ಹೂವು, ಸೌಂದರ್ಯದ ಸಂಕೇತವಲ್ಲವೇ ? ಆದ್ದರಿಂದ ಜಗದ ಸೌಂದರ್ಯವನ್ನು ತನ್ನಲ್ಲಿಟ್ಟುಕೊಂಡ ಶ್ರಾವಣ ಶಿವದ ಹಾರೈಕೆ ಮಾಡಬೇಕು. ಇದು ಆಶಯ. ಆದರೆ ಈ ಸೌಂದರ್ಯದ ಒಡಲಲ್ಲೇ ಕುರೂಪವೂ ಮೊಳೆಯುತ್ತಿರುತ್ತದೆ. ಇಲ್ಲಿಯವರೆಗೆ ಇಡೀ ಕವಿತೆ ತನ್ನ ಬಂಧದಲ್ಲಿ ಹಸಿರು, ಹೂವು, ನೀರು, ಮೋಡ, ಸಮುದ್ರ ಪ್ರತಿಮೆಗಳ ಸಮೃದ್ಧ ಲೋಕವನ್ನೇ ತುಂಬಿಕೊಂಡಿದೆ. ಎರಡನೆಯ ಭಾಗಕ್ಕೆ ಬಂದಂತೆ ಬೇರೆಯದೇ ಲೋಕಕ್ಕೆ ಸಂಚಾರ ಬೆಳೆಸುತ್ತದೆ. ಈ ಮಾರ್ಗಾಂತರ ಸಂಚಾರದ ಸೂಚನೆ ಆರಂಭದಲ್ಲೇ ಇದೆ. 'ನಂಬಿಕೆಯ ಹಿಡಿದು ಅಲುಗಿಸಿ ಗಟ್ಟಿಗೊಳಿಸಿ' ಎಂಬ ರೂಪಕ, 'ಬೆಟ್ಟದ ಮುಡಿಯ ಚುಕ್ಕಿ ಮತ್ತು 'ರೆಕ್ಕೆ ಬೀಸುವ ಚದುರು' ಎಂಬ ರೂಪಕ ಅದನ್ನು ಸೂಚಿಸುವಂತಿದೆ. ಮಾನವ ಅನೇಕ ನಂಬಿಕೆಗಳಲ್ಲಿ ಬದುಕುತ್ತಿರುತ್ತಾನೆ. ಆ ನಂಬಿಕೆಗಳು ದುರ್ಬಲಗೊಳ್ಳಲೂ ಬಹುದು. ಹಾಗೆ ದುರ್ಬಲಗೊಂಡಂತೆಲ್ಲಾ ಕಾಲದ ಚಲನೆಯ ಆಳದಲ್ಲಿ ಅವು ಅಲುಗಾಡುತ್ತಾ ಮತ್ತೆ ಮತ್ತೆ ತಮ್ಮನ್ನು ಗಟ್ಟಿಗೊಳಿಸಿಕೊಳ್ಳುತ್ತ ಇರಬಲ್ಲವು. ಹೊಸ ನಂಬಿಕೆಗಳಾಗಿಯೂ ಅವು ಹೊಸರೂಪಧರಿಸಬಲ್ಲವು. ಕಾಲ ಸುಮ್ಮನೆ ಚಲಿಸುತ್ತಲೇ ಇರುತ್ತದೆ. ಮನುಷ್ಯ ತನ್ನ ಬದುಕಿನ ಹಸನಿಗಾಗಿ ನಂಬಿಕೆಗಳ ಪುನರ್ ನಿರ್ಮಾಣ ಮಾಡಿಕೊಳ್ಳುತ್ತಲೇ ಇರುತ್ತಾನೆ. 'ಬೆಟ್ಟದ ಮುಡಿಯ ಚುಕ್ಕಿ'ಯ ಆದರ್ಶದಲ್ಲಿ ರೆಕ್ಕೆ ಬೀಸುವ ಚದುರಿನ ಕಾಲಾಂತರದ ಪ್ರಶ್ನೆಯನ್ನಿಟ್ಟುಕೊಂಡೇ ನಂಬಿಕೆಯ ಬೇರುಗಳು ಭದ್ರವಾಗಲು ಪ್ರಯತ್ನಿಸುತ್ತವೆ. ಈ ನಂಬಿಕೆಗಳ ಊರುಗೋಲು ನಡಿಗೆ ಬದಲಾವಣೆಯ ಹಣಾಹಣಿಯಲ್ಲಿ ದಿನದಿನವೂ ಲಭ್ಯವಾಗಿದ್ದು ಕೂಡ 'ಆಡಿ ಬಿಟ್ಟಿರುವ ಜೋಕಾಲಿ'ಯ ಏಕಾಂಗಿ ಜೀಕುವಿಕೆಯ ಏಕಾಂತ ಮೌನವನ್ನು ಕವಿಸಿ ಒಂದು ರೀತಿಯ ವಿಷಾದವನ್ನು ಹಬ್ಬಿಸಬಲ್ಲದು. ನಿಸರ್ಗದ ವೈಭವದ ಗರ್ಭದೊಳಗೇ ಅಡಗಿರುವ ಈ ವಿಷಣ್ಣಕಣ ಸಮರ್ಥ ಕವಿಯೊಬ್ಬನಿಗೆ ಮಾತ್ರ ಕಾಣುವಂಥದು. ಅದು ಭೋಗದ ಸುತ್ತ ತುದಿಯಲ್ಲಿದ್ದ ಆದಿದೇವನಿಗೆ ಬೆಳ್ಳಿ ಕೂದಲು, ನೀಲಾಂಜನೆ ಕಂಡಂತೆ. ಶ್ರಾವಣದ ಸಮೃದ್ಧ ನಡಿಗೆಯಲ್ಲೂ ಕುಂಟು ಆಕಳಿಕೆಯೊಂದು ಬಂದು ಬೇಸರದ ಕ್ಷಣವನ್ನು ಪ್ರಕಟಿಸಬಲ್ಲದು. ಇಲ್ಲಿ ಕವಿಯ ಕಾಣ್ಕೆ ಇಷ್ಟಕ್ಕೆ ಸೀಮಿತವಾದದ್ದಲ್ಲ. ಏಕಾಂತದ ಏಕಾಂಗಿ ವಿಷಾದದ ತಾತ್ವಿಕತೆಯನ್ನು ಮೀರಿದ್ದು, ಅದಕ್ಕೇ ಕವಿತೆಯ ಎರಡನೇ ಭಾಗ ಈ ಸೌಂದರ್ಯಾತ್ಮಕ ಮುಖದ ಮತ್ತೊಂದು ಮಗ್ಗುಲನ್ನು ಪ್ರಕಟಿಸುತ್ತದೆ. ಕೆಡುಕು ಮತ್ತು ಒಳಿತಿನ ಮೇಳವಾದ ಈ ನೈಸರ್ಗಿಕ ಬದುಕು ಎರಡು ಕಡೆ ನಿರ್ದಾಕ್ಷಿಣ್ಯವಾಗಿ ಜೀಕುವ ಜೋಕಾಲಿಯಂತೆ. 'ಜೋಕಾಲಿ'ಯ ಪ್ರತಿಮೆ

ಇಡೀ ಪದ್ಯದಲ್ಲಿ ತೊನೆದಾಟದ, ಮಾರ್ಗಾಂತರ ಈ ಪರಿಯದಲ್ಲ ಅದು. ಸ್ಪಷ್ಟವಾಗಿ ಮಾನವ ನಿರ್ಮಿತವಾದದ್ದು, ಕೃತಕವಾದದ್ದು. ಆದ್ದರಿಂದಲೇ ಎರಡನೇ ಭಾಗ ಅತ್ಯಂತ ನಿರ್ಣಾಯಕ ಭಾಗ.

ಎರಡನೇ ಭಾಗ ಈ ಸಮೃದ್ಧವಾದ ಪ್ರಕೃತಿಯ ಒಡಲಲ್ಲೇ ಮುರುಕು ಜೋಪಡಿ, ಹರಕು ಚಿಂದಿ, ಭಿಕ್ಷೆಯ ಕೈಗಳ ಪ್ರತಿಮೆಗಳನ್ನು ಕಾಣಿಸುತ್ತದೆ. ಎಲ್ಲ ರಮ್ಯವಾದದ್ದು ಒಂದು ಸುಂದರ ಕನಸು ಬೀಜ ಮೊಳೆಯುವಾಗಿನ ನೋವು, ಹೂವು ಅರಳುವಾಗಿನ ನೋವು, ದುಂಬಿ ಮಧು ಹೀರುವಾಗಿನ ನೋವು ಕಾಣದ ರೀತಿಯದು, ಅದು ನೋವೇ ಎಂದರೆ ನೋವಲ್ಲ. ಹೊಸ ಸೃಷ್ಟಿಯ ಸಹಜ ಕ್ರಿಯೆಗಳು. ಆದರೆ ಪದ್ಯದಲ್ಲಿ ಬರುವ ಜೋಪಡಿ, ಚಿಂದಿ ಇವೆಲ್ಲ ನಿಸರ್ಗ ಕೊಡುಗೆಗಳಲ್ಲ. ಆ ಎಲ್ಲ ನೈಸರ್ಗಿಕ ಸಮೃದ್ಧಿಯನ್ನು ಸ್ವಾರ್ಥ ನುಂಗಿದಾಗ ಮಾನವ ಕೃತಕವಾಗಿ ಸೃಷ್ಟಿಸಿದಂಥವು ಆರ್ಥಿಕ ಅಸಮಾನ ಹಂಚಿಕೆಯಿಂದ ಉಂಟಾದ ಏರುಪೇರುಗಳು. ನಿಸರ್ಗ ಸಮೃದ್ಧಿ ಕೊಟ್ಟ ಎಲ್ಲವನ್ನೂ ದುರ್ಬಳಕೆ ಮಾಡಿಕೊಂಡಿದ್ದರಿಂದ ಆದ ಈ ವ್ಯತ್ಯಾಸಗಳಷ್ಟೇ ಅಲ್ಲ. ನಿಸರ್ಗದ ನಿಗೂಢಗಳಿಗೆ ಒಡ್ಡಿಕೊಂಡ 'ನಂಬಿಕೆ'ಗಳಲ್ಲೂ ಈ ದ್ವಂದ್ವ ಒಡೆದು ಕಾಣುತ್ತದೆ. 'ನಂಬಿಕೆಯ ಅಲುಗಿಸಿ ಗಟ್ಟಿಗೊಳಿಸುವ' ಕ್ರಿಯೆ ಇದೇ ಆಗಿದೆ. ಎಲ್ಲ ರಮ್ಯವಾದದ್ದು 'ಪುಸ್ತಕದ ಓದು'. ಈ ಓದು ಒಂದು ಪ್ರಜ್ಞೆಯನ್ನು ಹುಟ್ಟಿಸುವಂಥದು. ಆದರೆ ಈ ಜ್ಞಾನ ವಾಸ್ತವದಲ್ಲಿ ಕ್ರಿಯಾಶಾಲಿಯಾಗುವಂತೆ ಮಾಡುತ್ತಿಲ್ಲ. ನಂಬಿಕೆಯೂ ಅಷ್ಟೇ, ಅದೊಂದು ಕುರುಡು ಆಚರಣೆ. ವಾಸ್ತವದಲ್ಲಿ ಉತ್ತರ ಹುಡುಕು ಎಂಬ ಕ್ರಿಯಾರೂಪಕ ಅಪಾರವಾದ ಜೀವನ ಪ್ರೀತಿಯಲ್ಲಿ ವ್ಯಕ್ತವಾಗುವ ಕ್ರಿಯಾಶಾಲಿ ಚೈತನ್ಯವನ್ನು ಬೇಡುವಂಥದು.

ಧಾರ್ಮಿಕ ವ್ರತ, ವಿಧಿ, ನಿಯಮ, ಆಚರಣೆ ಇವೆಲ್ಲ ನಿಸರ್ಗ ಸಂಬಂಧಿಯಾಗಿ ಬಂದರೂ ಈ ನಂಬಿಕೆಗಳೇ ಪರಿಪೂರ್ಣವಲ್ಲ ಎಂಬ ದಟ್ಟ ಇಂಗಿತ ಪದ್ಯದ ಕೊನೆಯ ಎರಡು ಸಾಲುಗಳಲ್ಲಿ ಬಲವಾಗಿ ವ್ಯಕ್ತಗೊಳ್ಳುತ್ತದೆ. 'ವ್ರತ, ನಿಯಮ, ದೈವತ ಪೂಜೆ' ಇಷ್ಟರಲ್ಲೇ ಮುಗಿಯಿತೆ ಎಲ್ಲವೂ? ಸೃಷ್ಟಿಯ ಭಂಡಾರದ ಉಪಯುಕ್ತತೆ ಸಮಷ್ಟಿಯ ಸಮಾನತೆಯಲ್ಲಿ ಪೂರ್ಣಗೊಳ್ಳುವಂಥದು. ಧರ್ಮವೆನ್ನುವುದು ಪ್ರಕೃತಿಯ ಒಳಗೇ ಗುಪ್ತವಾಗಿರುವಂಥದು. ಧರ್ಮವೆಂಬುದು ಸಂಸ್ಥೆಯಾದಾಗ ಅದು ಹಾಳುಗೆಡುತ್ತದೆ. ಅದು ಒಂದು ಋತ, ಅದು ಸತ್ಯದ ಪ್ರತಿನಿಧಿ. ಅದೇ ಎಲ್ಲ ಜೀವಕ್ಕೂ ಶ್ರೀರಕ್ಷೆ. ಅದಕ್ಕೆ ಭೇದದ ಎಣಿಕೆಯಿಲ್ಲ. ಅದು ಒಳಿತನ್ನೂ ಕೆಡುಕನ್ನೂ ಸಮಾನತೆಯ ಆಧಾರದ ಮೇಲೇ ಹಂಚಿಕೆ ಮಾಡುವಂಥದು. ಸಮಷ್ಟಿ ಎನ್ನುವುದು ಇಂಥಾ ಧರ್ಮದ ಕಕ್ಷೆಯೊಳಗೇ ಬರಬೇಕು. ಇಲ್ಲದಿದ್ದರೆ ಅದಕ್ಕೆ ಅರ್ಥವಿಲ್ಲ. 'ಪೂರ್ಣಮದಸ್ಯ' ಎಂದರೆ ಇದೇ. ಅದಕ್ಕೊಂದು 'ಶಿವ'ದ ಗುರಿಗೆ ಸತ್ಯ ಸೌಂದರ್ಯಗಳು ಕೂಡಿ ಕಲೆಯಲೇಬೇಕು. ಆದರೆ ಪ್ರಕೃತಿಯ ಕೂಸಾದ ಮಾನವ ಈ ಅಗಾಧ ಸೃಷ್ಟಿಯ ಆಶಯದೆದುರೇ ಸೆಡ್ಡು ಹೊಡೆದು ನಿಂತಿದ್ದಾನೆ. ವಿಕಾರಗಳನ್ನು ಹಡೆಯುತ್ತಿದ್ದಾನೆ. ಈ ವಿಕಾರದ ಪ್ರತಿನಿಧಿ ಈ ಜೋಪಡಿ, ಈ ಚಿಂದಿ.

ಗತಿ ತಾರ್ಕಿಕತೆಯ ವಿನ್ಯಾಸದಲ್ಲಿ ಈ ಸುನೀತ ತನ್ನ ಆಕೃತಿಯನ್ನು ಸ್ಪಷ್ಟವಾಗಿ ಕಟ್ಟಿಕೊಂಡಂತಿದೆ. ಪ್ರಕೃತಿ, ವ್ಯಷ್ಟಿ, ಸಮಷ್ಟಿಯ ತ್ರಿವಳಿಯಲ್ಲಿ ಕಾಣುವ ಈ ದ್ವಂದ್ವ ಅಂತಿಮವಾಗಿ

ಪ್ರಕೃತಿಸಮಷ್ಟಿಯಾಗುವ ಆಶಯವನ್ನು ಅಪೇಕ್ಷಿಸುತ್ತದೆ. ನಿಸರ್ಗ ವ್ಯಾಪಾರದ ಅಸಲು ಕಸುಬೇ ಇಂಥದು. ಕಾವ್ಯದ್ದೂ ಕೂಡ. ಬೇಂದ್ರೆ ಕವಿ ಹೇಳುತ್ತಾರೆ. 'ಕಾವ್ಯ ಕರ್ಮ, ಅದು ಪುರುಷಾರ್ಥಪೂರ್ಣವಾಗಲಿ, ಬರಿ ಆಕೃತಿ ವಿಲಾಸವಾಗದಿರಲಿ - ಎಂಬುದೇ ಕಾವ್ಯಯೋಗ'. ಈ ಆಶಯವೇ ಕಣವಿಯವರ ಸಾನೆಟ್ಟಿನಲ್ಲಿದೆ. ಅಲ್ಲಿ ಪ್ರಕೃತಿಯ ವಿಲಾಸವಷ್ಟೇ ಇಲ್ಲ. ಮಾನವಾಭಿಲಾಷೆಯ ಕೊಂಕೂ ಕೂಡಿಕೊಂಡು ಕಾವ್ಯಯೋಗವಾಗುತ್ತದೆ.

ದೊಡ್ಡ ಕವಿಯೊಬ್ಬನಿಗೆ ಮಾತ್ರ ಸೂಕ್ಷ್ಮಗಳನ್ನು ಕಾಣಿಸುವ ಕಾಣ್ಕೆ ಇರುತ್ತದೆ. ಶ್ರೀ ಕಣವಿ ಅವರು ತಮ್ಮ ಪಳಗಿದ ಭಾಷಿಕ ಹದದಲ್ಲಿ, ಸಾನೆಟ್ಟಿನಂಥ ಕ್ಲಿಷ್ಟ ಆಕೃತಿಯಲ್ಲಿ ಈ ಸೂಕ್ಷ್ಮಗಳನ್ನು ಕಾಣಿಸಬಲ್ಲರು. ಸೌಂದರ್ಯಾತ್ಮಕ ರಮ್ಯತೆಯಲ್ಲಿ ಪರವಶವಾಗಿ ಬಿಡಬಹುದಾದ ಕ್ಷಣಗಳನ್ನು ಮೀರಿ ವಾಸ್ತವ ಪ್ರಜ್ಞೆಗೆ ಕನ್ನಡಿ ಹಿಡಿಯುವ ಪ್ರಾಮಾಣಿಕ ಕೆಲಸವನ್ನು ಕಾವ್ಯಕಲೆಯಲ್ಲಿ ಅತ್ಯಂತ ಗಂಭೀರವಾಗಿ, ಯಶಸ್ವಿಯಾಗಿ ಮಾಡಿದ್ದಾರೆ. ದ್ರಷ್ಟಾರ ನೋಟವೊಂದು ಅವರಲ್ಲಿರುವುದರಿಂದಲೇ ಇದೆಲ್ಲ ಸಾಧ್ಯವಾಗಿದೆ.

ಚಂದ್ರಶೇಖರ ತಾಳ್ಯ

# ೫೯. ಹಕ್ಕಿಗಳು

ಬರಿ ಬೆಳಗಿನಲ್ಲಿಯೇ ಹಕ್ಕಿಗಳು ಹಾಡುತ್ತ -
ವೆಂದೇನಲ್ಲ : ಆ ಉತ್ಸಾಹ ದಾಹ ಬೇರೆ.
ಕತ್ತಲೆಯ ಕರಗಿಸುತ ಬೆಳಕ ಚಿಮ್ಮಿಸುವ ಕರೆ.
ಮಧ್ಯಾಹ್ನ ಮೂರು ಗಂಟೆಯ ಹೊತ್ತು ಮನೆಸುತ್ತ
ಗಿಡಗಂಟಿ ಬೇಲಿಯಲಿ ಕತ್ತು ಕೊಂಕಿಸಿ ಸಿಳ್ಳು
ಹಾಕುತ್ತ, 'ಬಿಸಿಲಳಿಯಿತೇಳಿ, ಅಗೊ ತಂಗಾಳಿ'
ಎಂಬುಲಿವು. ತಮ್ಮ ತಮ್ಮೊಳಗೆ ಸಣ್ಣ ಚಿಲಿಪಿಲಿ
ಜಗಳ, ಮತ್ತೆ ಹಾರುವವೆತ್ತೊ ಕೂಡಿ ಕರುಳು.
ಸಂಜೆಗಂತೂ ಸರಿಯೆ, ಹಿಂಡುಹಿಂಡಾಗಿ ಬಾ -
ನೆಲ್ಲ ಗುತ್ತಿಗೆ ಹಿಡಿದ ಹಾಗೆ ಸಾಲು ಮೇಲಾಗಿ
ಹರಗಿ, ನುಣ್ಣಗೆ ಚಿಕ್ಕೆಗಳ ಬಿತ್ತಿ, ಮರೆಯಾಗಿ
ಎಲ್ಲಿಯೋ ಗೂಡಿನಲಿ ನಿದ್ದೆ : ಕಣ್ಣು ತುಂಬಾ.
ಎಲ್ಲರೆದೆ ಗೂಡಿನಲಿ ಹಕ್ಕಿ ಮರಿ ಮಾಡುವದು
ಜೋಪಾನ, ಹಾರಬಿಡು : ಹಾಡು ಬೆಳಕಾಗುವದು.

ಇಂದು ನಾವು -ಪ್ರಕೃತಿ ಮತ್ತು ನಮ್ಮ ನಡುವೆ ಇರುವ ಮತ್ತು ಇರಬೇಕಾಗಿದ್ದ ಸಂಬಂಧಗಳನ್ನು -ಯುಗಯುಗಗಳಿಂದ ಮರೆತಷ್ಟು ಸಹಜವಾಗಿ ಬದುಕುತ್ತಿದ್ದೇವೆ. ಈ ಪ್ರಕೃತಿಯಲ್ಲಿರುವ ನೀರು ಗಾಳಿ ಮರಗಿಡಗಳೆಲ್ಲ ನಮಗೆ ತೀರಾ ಜಡವಸ್ತುಗಳು. ಇನ್ನೂ ಹೆಚ್ಚೆಂದರೆ ಅವೆಲ್ಲ - ನಮಗಾಗಿಯೇ ಸೃಷ್ಟಿಯಾದಂಥವು. ಹಾಗಾಗಿ ಅವುಗಳ ಬಗೆಗೆ ಚಿಂತಿಸುವದಾಗಲಿ ಅವುಗಳೊಳಗೆ ನಮ್ಮೊಳಗೆ ಇರುವ ಹಾಗೆ ಇನ್ನೊಂದು 'ಆತ್ಮ' ಇದೆ ಎಂದು ಕಲ್ಪಿಸಿಕೊಳ್ಳುವುದಾಗಲೀ ಸಾಧ್ಯವಾಗುತ್ತಿಲ್ಲ. (ಇದಕ್ಕೆ ಏನು ಕಾರಣ ಎಂಬುದೆಲ್ಲ ಪ್ರಸ್ತುತವಾದರೂ ಈ ಲೇಖನದಲ್ಲಿ ಈ ಕ್ಷಣಕ್ಕೆ ಅದು ಅಪ್ರಸು.ತ ಎಂದೇ ಇಟ್ಟುಕೊಳ್ಳೋಣ.) ಆದರೆ ನಾಲ್ಕೈದು ದಶಕಗಳ ಹಿಂದೆ,

ನವೋದಯ ಸಾಹಿತ್ಯ ಸೃಷ್ಟಿಯಾಗುತ್ತಿದ್ದ ದಿನಗಳಲ್ಲಿ ಭೂಮಿಯನ್ನು ನಮಗೆ ಅಂದರೆ ಕವಿಗಳಿಗೆ ಮಾತ್ರವಲ್ಲ -ಜನಸಾಮಾನ್ಯರಿಗೆ ಕೂಡ ತಾಯಿ ಎಂದು ಪರಿಗಣಿಸಿ, ಆರಾಧಿಸುವ ಕಲ್ಪನೆ ಸಾಧ್ಯವಿತ್ತು. ಆದರಿಂದ ಪ್ರಯೋಜನ ಅಥವಾ ಅಂಥ ಕನಸು /ಕಲ್ಪನೆಗಳಿಂದ ವಾಸ್ತವ ಬದುಕು ಹೇಗೆ ಅರ್ಥಪೂರ್ಣವಾಗುತ್ತದೆ ಎಂಬ ತರ್ಕಗಳು ಎದ್ದದ್ದರಿಂದ, ನವೋದಯಕ್ಕಿಂತ ಭಿನ್ನವಾಗಿ ಯೋಚಿಸುವ ಮನುಷ್ಯನ ಅಸ್ತಿತ್ವದಲ್ಲೇ ಹುಡುಕಾಟ ನಡೆಸುವ ಅನಾಥಪ್ರಜ್ಞೆ ಪರಕೀಯತೆಗಳಲ್ಲೇ ಗಿರಕಿ ಹೊಡೆಯುವ ವೈಚಾರಿಕತೆಯೇ ಬದುಕಿನ ಪರ್ವ ಎಂಬ ನಿಲುವಿನ (ಆಮೇಲೆ ನವ್ಯ ಸಾಹಿತ್ಯ ಎಂಬ ಹಣೆಪಟ್ಟಿ ಹಚ್ಚಿಕೊಂಡ) ಸಾಹಿತ್ಯ ನಮ್ಮಲ್ಲಿ ಹುಟ್ಟಿಕೊಂಡಿತು. ಈ ಸಾಹಿತ್ಯ ಪ್ರಕಾರವು ಉತ್ತುಂಗ ಸ್ಥಿತಿಗೆ ತಲುಪಿದಾಗ, ನಾವು ನಮ್ಮ ಎಲ್ಲಾ ಸಂವೇದನೆಗಳನ್ನು ಕಳೆದುಕೊಳ್ಳುತ್ತಿದ್ದೇವೆ ಎಂಬ ಎಚ್ಚರ ಮತ್ತು ಮನುಷ್ಯ ನಡುವಿನ ಸಂಬಂಧಗಳು ಸೃಷ್ಟಿಸುವ ಶೋಷಣೆ ಘರ್ಷಣೆಗಳೇ ಮುಖ್ಯವಾಗಿ ಅಲಭ್ಯರಾಗಿ - ದಲಿತಪರ (ಅಥವಾ ಜೀವಪರ ಎನ್ನಲೂಬಹುದೆನ್ನಿ) ಸಾಹಿತ್ಯ ಸೃಷ್ಟಿಗೆ - ಸಾಹಿತ್ಯ ಕ್ಷೇತ್ರದಲ್ಲಿ ಬಂಡಾಯದ ಕಹಳೆ ಮೊಳಗಿತು. ಇದೆಲ್ಲ ಸೃಜನಶೀಲತೆ ಮತ್ತು ಬದುಕಿನ ವಾಸ್ತವದ ನಡುವಿನ ತಾತ್ವಿಕ ನೆಲಗಟ್ಟುಗಳಲ್ಲಿ ಹುಟ್ಟಿಕೊಂಡ ಸಂಘರ್ಷವೋ ಸಂಬಂಧವೋ ಆಗಿರುವುದರಿಂದ ಇದೆಲ್ಲವೂ ಸಾಹಿತ್ಯಕ್ಕೆ ವೈವಿಧ್ಯತೆ, ವೈಶಿಷ್ಟ್ಯತೆಗಳನ್ನು ತಂದು ಕೊಟ್ಟಿರುವುದನ್ನು ನಾವು ಮರೆಯಲಾಗದು. ಆದರೆ ಈಚೆಗಿನ ದಿನಗಳಲ್ಲಿ ನಾವು ಬದುಕನ್ನು ಅತ್ಯಂತ ಯಾಂತ್ರಿಕತೆಗೆ ಒಗ್ಗಿಸಿಕೊಳ್ಳುತ್ತಾ ಹೋಗುವುದರಿಂದ, ಸಾಹಿತ್ಯವು ಬದುಕಿಗೆ ಅನಿವಾರ್ಯವಾದ್ದೇನೂ ಅಲ್ಲ ಎಂಬಂತಹ ನಿಲುವಿಗೆ ಬಂದ ಹಾಗೆ ಇರುವುದರಿಂದ ಸಾಹಿತ್ಯಕ ಸಂವೇದನೆಯ ಮಾತು ಬಿಡಿ, ಮನುಷ್ಯನಲ್ಲಿ ಇರಬೇಕಾಗಿರುವ ಮನುಷ್ಯ ಸಹಜ ಸಂವೇದನೆಯನ್ನು ಕೂಡಾ ಕಳೆದುಕೊಳ್ಳುತ್ತಿದ್ದೇವೆ ಎಂಬಲ್ಲಿಗೆ ಬಂದು ನಿಂತಿದ್ದೇವೆ. ಇಂತಹ ಸ್ಥಿತಿಯಲ್ಲಿ -ಒಬ್ಬ ಕವಿಯ ಮಾತು ಬಿಡಿ, ಸಾಮಾನ್ಯನು ಕೂಡಾ ಹುಲ್ಲು, ಮರ, ಹಕ್ಕಿ ಪಕ್ಕಿಗಳ ಬಗ್ಗೆ ಮಾತನಾಡುತ್ತಾನೆ ಎಂದಾದರೆ, ಅದು ಈಗ ಬೆರಗೆನ್ನುವಷ್ಟು ಬೆರಗಾಗುವಲ್ಲಿಗೆ ಬಂದು ನಿಂತಿದೆ. ಇಂತಹ ಸ್ಥಿತಿಯಲ್ಲಿ - ನಮ್ಮ ನಡುವಿನ ಅಪರೂಪದ ಕವಿ ಕಣವಿಯವರು - "ಎಲ್ಲರೆದೆಗೂಡಿನಲಿ ಹಕ್ಕಿ ಮರಿ ಮಾಡುವುದು, ಜೋಪಾನ, ಹಾರಿಬಿಡು ಹಾಡು ಬೆಳಕಾಗುವುದು" ಎನ್ನುವುದು ನನ್ನಂಥವನಿಗೆ ತೀವ್ರ ರೋಮಾಂಚನವನ್ನುಂಟು ಮಾಡುವ ಸಂಗತಿಯಾಗುತ್ತದೆ.

ನಮ್ಮ ಕಣವಿಯವರು (ನನಗೆ ಅವರು ನಮ್ಮ ಅಥವಾ ನನ್ನ ಎಂಬ ವಿಶ್ಲೇಷಣೆ ಇಲ್ಲದೆ ಹೇಳಲು ಕಷ್ಟವಾಗುತ್ತದೆ!) ನನಗೆ ಈ ಕಾರಣಕ್ಕೆ ಹಿಂದೆಯೂ ಇಂದೂ ಮತ್ತು ನಾಳೆಯೂ ಮುಖ್ಯರಾಗುವುದು. ಅವರನ್ನು ಇಂದಿನ ನಮ್ಮ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರನ್ನು ನಮ್ಮ ವಿಮರ್ಶಕರು ಸಮನ್ವಯ ಕವಿಗಳು ಎಂದು (ಶ್ರೇಷ್ಠತೆಯ ವ್ಯಸನದಿಂದ ಕೀಳಂದಾಜಿಸಲೋ ಅಥವಾ ಮೇಲಂದಾಜಿಸಲೋ ತಿಳಿಯೆ!) ಕರೆದರು. ಅದನ್ನು - ಎಲ್ಲರೂ ಬಹಳ ಸುಲಭವಾಗಿ ಸಲೀಸಾಗಿ ಎಂಬಂತೆ ಒಪ್ಪಿಕೊಂಡರು. ಹಾಗೆ ಕರೆಯುವಾಗ ಕರೆದಂಥವರಿಗೆ ಎಂತಹ ಭಾವನೆ ಇತ್ತೋ ತಿಳಿಯೆ. ಆದರೆ ನೇರವಾದ ಅರ್ಥದಲ್ಲಿ - ಈ ಇಬ್ಬರು ಹಿರಿಯರೂ ಆಧುನಿಕ ಕನ್ನಡ ಕಾವ್ಯ - ಬೇರೆ ಬೇರೆ ತಿರುವುಗಳನ್ನು ಪಡೆದಾಗ ಅದನ್ನು ಧಿಕ್ಕರಿಸಲೂ ಇಲ್ಲ, ಪೂರ್ತಿ ಒಪ್ಪಿಕೊಳ್ಳಲೂ

ಇಲ್ಲ. ಹಾಗಾಗಿ ಇವರಿಂದ ಕಾವ್ಯಕ್ಕೆ ಅನ್ಯಾಯ ಆಗಲಿಲ್ಲ ಅಥವಾ ಇವರ ಕಾವ್ಯದ ಬಗ್ಗೆ ಯಾರಿಂದ ಕ್ರೋಧವೂ ವ್ಯಕ್ತವಾಗಲಿಲ್ಲ. ಇದರಿಂದ ಆದ ಲಾಭ ಆದದ್ದಿದ್ದರೆ ಕನ್ನಡ ಕಾವ್ಯಕ್ಕೇ ಎನ್ನುವುದು ಸಂತೋಷದ ಸಂಗತಿ. ಯಾಕೆಂದರೆ 'ಹಕ್ಕಿಗಳು' ಎನ್ನುವ ಈ ಕವಿತೆಯನ್ನೇ ಉದಾಹರಣೆಯಾಗಿಟ್ಟುಕೊಂಡು ಇದರ ವಿಮರ್ಶೆ ಮಾಡಿದರೆ ಈ ಕವಿತೆಯ ಸತ್ವ ಮತ್ತು ಸಾರ್ವಕಾಲಿಕತೆ ಎಂಥದ್ದು ಎಂಬಷ್ಟು ಬೆರಗು ಹುಟ್ಟಿಸುವ ರೀತಿಯಲ್ಲಿ ಅದು ಅನಾವರಣಗೊಳ್ಳುತ್ತದೆ.

'ಕಾರ್ತೀಕದ ಮೋಡ' ಸಂಗ್ರಹದ ಈ ಕವಿತೆಯು ಪ್ರಾರಂಭವಾಗುವುದು "ಹಕ್ಕಿಗಳು ಬೆಳಗಿನಲ್ಲಿಯೇ ಹಾಡುತ್ತವೆಂದೇನಲ್ಲ" ಎಂದು ಮತ್ತು ಮುಕ್ತಾಯವಾಗುವದು - "ನಮ್ಮ ಎದೆಗೂಡಿನಲ್ಲಿ ಹಕ್ಕಿ ಮಾಡಿದ ಮರಿಯನ್ನು ಜೋಪಾನವಾಗಿ ಹಾರಿಬಿಡು" ಎಂದು ಕರೆಕೊಡುವಲ್ಲಿ ಮತ್ತು ಹಾಡೇ ಬೆಳಕಾಗುವುದು ಎಂಬ ಅದ್ಭುತ ಕನಸು ಮತ್ತು ಕಲ್ಪನೆಯಲ್ಲಿ, ಕವಿತೆಯ ಮೊದಲ ಮತ್ತು ಕೊನೆಯ ಸಾಲಿನ ನಡುವಿನ ಕಾವ್ಯಶರೀರದಲ್ಲಿ - ಹಕ್ಕಿಗಳ ಜೀವನ ವ್ಯಾಪಾರವನ್ನು ನಮ್ಮ ನಡುವಿನ ಜೀವನ ವ್ಯಾಪಾರದೊಂದಿಗೆ ಸೇರಿಸುತ್ತ ನಾವು ಅವುಗಳಿಂದ ಪಡೆಯಬಹುದಾದ ಭಾವನಾತ್ಮಕ ಸಂತೋಷವನ್ನು ತುಂಬಾ ನವಿರಾಗಿ, ಹಕ್ಕಿ ಹಾರಿಬಂದು ನಮ್ಮ ಪಕ್ಕದಲ್ಲಿ ಕುಳಿತು ಚಿಲಿಪಿಲಿಗುಡುವಷ್ಟು ಸಹಜವಾಗಿ, ಕವಿ ಇಲ್ಲಿ ವಿವರಿಸುತ್ತಾರೆ.

'ಬೆಳಕಾಗುವುದು' ಎನ್ನುವುದು -ಒಂದರ್ಥದಲ್ಲಿ ಹಕ್ಕಿಗಳಿಗೆ ಮಾತ್ರವಲ್ಲ - ನಮಗೆಲ್ಲರಿಗೂ, ಈ ಲೋಕದ ಜೀವನೋತ್ಸಾಹಕ್ಕೆ ಕಾರಣವಾಗುವ ಒಂದು "ದಾಹ" ಎನ್ನುವದು ನಮಗೆ ಗೊತ್ತು. ಹಕ್ಕಿಗಳಿಗೆ ಹಾಡು ಬೇರೆಯಲ್ಲ, ಬೆಳಕು ಬೇರೆಯಲ್ಲ ಎನ್ನುತ್ತಾರೆ ಕವಿ. ಹಾಡು ಎನ್ನುವುದು ಕತ್ತಲೆಯ ಕರಗಿಸುತ್ತ ಬೆಳಕು ಚಿಮ್ಮಿಸುವ ಕಲೆ ಎನ್ನುವುದು ಹಕ್ಕಿಗಳಿಗೆ ಮಾತ್ರವಲ್ಲ ನಮಗೂ ಅನ್ವಯಿಸುವ ಮಾತು. ಮಾತ್ರವಲ್ಲ ಈ ಮಾತು ಮಂತ್ರವೂ ಹೌದು. ಬದುಕಿಗೆ ಬಂದೆರಗುವ ಕತ್ತಲೆಯನ್ನು ಪರಿಹರಿಸುವ ಶಕ್ತಿ ಇರುವುದು - ಹಾಡಿಗೆ ಮಾತ್ರ ಎನ್ನುವ ಆಶಯವು ಇಲ್ಲಿದ್ದು ಅದು ಏಕಕಾಲಕ್ಕೆ ನಾವೂ ಹಕ್ಕಿಗಳ ಹಾಗೆ ಹಾಡಿ ಕತ್ತಲೆಯ ಕರಗಿಸಿ ಬೆಳಕನ್ನು ಚಿಮ್ಮಿಸೋಣವೆಂದು ಅವರು (ಕಣವಿ) ಕರೆ ಕೊಡುತ್ತಾರೆ. ಇಷ್ಟಕ್ಕೇ ಅವರು ಸುಮ್ಮನಿರುವುದಿಲ್ಲ. ಬೆಳಕೂ ಬಿಸಿಲಾಗಿ ನಮ್ಮ ನೆತ್ತಿ ಉರಿಸಿ, ನಿಂತನೆಲವನ್ನೂ ಸುಡಬಹುದು, ಎಂಬುದನ್ನು ಹೇಳದೇ (ಹಾಗೆ ಹೇಳಿದರೆ ಅದು ಕಾವ್ಯವಾಗುವುದಿಲ್ಲ!) ದಾಹವೂ ಬೆಳಕೂ ಅತಿಯಾದರೆ ನಾವು ಅದನ್ನು ಸಹಿಸಿಕೊಳ್ಳುವುದು ಕಷ್ಟ ಎಂಬುದು ನಮ್ಮ ಒಳಗಿನ ಮೌನದ ಅನುಭವ ಎಂಬುದನ್ನು ಮೌನವಾಗಿ ಹೇಳಿ, ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಹಕ್ಕಿಗಳು ಮನೆಯ ಸುತ್ತ ಇರುವ ಗಿಡಗಂಟಿ ಬೇಲಿಯಲಿ ಕುಳಿತು ಕತ್ತು ಕೊಂಕಿಸಿ ಸಿಳ್ಳು ಹಾಕಿ 'ಬಿಸಿಲಳಿಯಿತೇಳಿ ಅಗೋ ತಂಗಾಳಿ,' ಎಂದು ನಮ್ಮನ್ನು ಬಡಿದೆಬ್ಬಿಸುತ್ತವೆ ಎಂದು ಹೇಳುತ್ತಾರೆ. ಇಷ್ಟೇ ಅಲ್ಲ, ಈ ಹೊತ್ತಿಗೆ ಅವು ನಮ್ಮ-ನಿಮ್ಮ- ಹಾಗೆ ನಾವು ಅದು ಇದು ಮಾತನಾಡುತ್ತಾ ಇಡೀ ದಿನದ ಅನುಭವದ ಹಿನ್ನೆಲೆಯಲ್ಲಿ ಜಗಳವಾಡುವ ಹಾಗೆ ಆಡಿ, ಎತ್ತಲೋ ಹಾರಿ ಹೋಗುತ್ತವೆ ಎಂಬುದನ್ನು ಸೂಚಿಸುತ್ತಾರೆ. ಆದರೆ ನಮಗೂ ಹಕ್ಕಿಗಳಿಗೂ ಇರುವ ಸೂಕ್ಷ್ಮವನ್ನು ಕವಿ ಇಲ್ಲಿ ಹೇಳದೆ ಇರಲು ಮರೆಯುವುದಿಲ್ಲ. ಕರುಳ

ಸಂಬಂಧ ಹಕ್ಕಿಪಕ್ಕಿಗಳಿಗಿಂತ ಹೆಚ್ಚು ನಮ್ಮಲ್ಲಿ ಇರಬೇಕಾಗಿತ್ತು. ಆದರೆ ಇಲ್ಲ; ಆದರೆ ಹಕ್ಕಿಗಳು ಜಗಳವಾಡಿ ಹೋಗುವಾಗಲೂ (ಹಾರುವವೆತ್ತೋ ಕೂಡಿ ಕರುಳು ಎಂಬ ಪದಪುಂಜಗಳು ಇಲ್ಲಿ ಅದ್ಭುತವಾಗಿ ಪರಿಣಾಮ ಬೀರುತ್ತವೆ.) ತಮ್ಮ ಕರುಳ ಸಂಬಂಧವನ್ನು ಕಡಿದೊಗೆಯದ ಹಾಗೆ ಹೋಗಿ ಮತ್ತೆ ಸಂಜೆಗಂತೂ ಸರಿಯೆ ಹಿಂಡು ಹಿಂಡಾಗಿ ಬಾನೆಲ್ಲ ಗುತ್ತಿಗೆ ಹಿಡಿದ ಹಾಗೆ ಮರಳುತ್ತವೆ ಎಂಬುದನ್ನು ಕವಿ ಬೊಟ್ಟುಮಾಡಿ ಹೇಳುತ್ತಾರೆ. (ನಾವು ಮನುಷ್ಯರು ಹೀಗೆ ಹಕ್ಕಿಗಳ ಹಾಗೆ - ಒಂದಾಗಿ ಕರುಳ ಸಂಬಂಧವನ್ನು ಇಟ್ಟುಕೊಂಡು ಬಾಳಬೇಕು ಎಂಬ ಆಶಯ ಈ ಸಾಲುಗಳಲ್ಲಿ ಮೌನವಾಗಿ ಧ್ವನಿಸುತ್ತದೆ.)

ತೋರಿಕೆಗೆ ಈ ಕವನ - ಬೆಳಕು ಹರಿಯುವಾಗ ಹಾಡಿ ಹಾರಿ ಹೋಗುವ ಹಕ್ಕಿಗಳ ಜೀವನೋತ್ಸಾಹದಿಂದ ಪ್ರಾರಂಭವಾಗಿ ಮತ್ತೆ ಅವು ಸಂಜೆ ಹೊತ್ತು ನಮ್ಮ ಮನೆಯ ಬದಿಯ ಬೇಲಿಗುಂಟ ಬರುವುದನ್ನು ಹೇಳಿ, ಸಂಜೆ ಬಂದು ಗೂಡು ಸೇರಿ ಮರಿ ಮಾಡುತ್ತವೆ ಎಂಬುದನ್ನು ಸರಳವಾಗಿ ಹೇಳಿದ ಹಾಗೆ ತೋರಿದರೂ, ಈ ಸರಳವಾದ ಶಬ್ದಗಳಲ್ಲಿ ಅದ್ಭುತವಾದ ಕಾವ್ಯದ ಮಾಂತ್ರಿಕ ಶಕ್ತಿ ಇದೆ. ಸರಳವಾದ ಕನ್ನಡ ಪದಗಳು ಎಂತಹ ವಿಶಾಲವಾದ ಅರ್ಥವನ್ನೂ ಒಳನೋಟವನ್ನು ನೀಡಬಹುದು ಎಂಬುದಕ್ಕೆ ಒಂದು ಅಪರೂಪದ ಉದಾಹರಣೆ ಇಲ್ಲಿ ಸಿಗುತ್ತದೆ. ಹಾಗೆ ನೋಡಿದರೆ ಕಣವಿಯವರು (ಜಿ.ಎಸ್.ಎಸ್. ಕೂಡ ಹಾಗೆಯೇ) ಎಲ್ಲೂ ಕುವೆಂಪುರವರ ಹಾಗೆ ಸಂಸ್ಕೃತ ಶಬ್ದಗಳನ್ನು (ಗಮನಿಸಿ : "ಶ್ರಾವಣ ಸಂಧ್ಯಾಸಮಯ ಸಮೀರನು ಅಮಂದ ಗಮನದಿ ಬರುತಿಹನು" ಎಂಬ ಕುವೆಂಪು ಅವರ ಸಂಸ್ಕೃತಮಯ ಸಾಲುಗಳನ್ನು ಅಥವಾ ಅಡಿಗರ ಹಾಗೆ ತುಂಬ ಕ್ಲಿಷ್ಟ ಮತ್ತು ಕೆಲವು ಸಲ ಅನೂಹ್ಯವಾದ ಸಂಕೇತ ಇಲ್ಲವೇ ಪ್ರತಿಮೆಗಳನ್ನು (ಗಮನಿಸಿ -'ಭೂಮಿ ಗೀತ'ದ ಬಹು ಮುಖ್ಯವಾದ ಸಾಲುಗಳನ್ನು) ಬಳಸದೇ - ಸರಳವಾದ ಪದಗಳಲ್ಲೇ ಸರಳ ಎನ್ನಬಹುದಾದ ಅನುಭವದಲ್ಲಿ ಇನ್ನೊಂದು ಆಶಯ ಅಥವಾ ಹೊಳಹಿಗೆ ಇಲ್ಲವೇ ಅನುಭವಕ್ಕೆ ಹಾತೊರೆಯುವ ಅನುಭವವನ್ನು (ಇದನ್ನು ಆಧುನಿಕ ಅನುಭಾವ ಎನ್ನಬಹುದೇನೋ) ನಮ್ಮ ಕಣ್ಣಳತೆಗೆ ತಂದು ನಿಲ್ಲಿಸುತ್ತಾರೆ. ಇದು ಏಕಕಾಲಕ್ಕೆ ಸಾರೂಪ್ಯವನ್ನೂ ತಾನು ಸಾಮಾನ್ಯನಲ್ಲ ಎಂದು ಘೋಷಿಸಿಕೊಳ್ಳುವ ಮಂದಿಯನ್ನೂ ತಟ್ಟುತ್ತದೆ ಎಂಬ ಅನುಭವ ನನ್ನದು. ಹಾಗಾಗಿ ಇಂಥ ಕವಿತೆಗಳು ಹಿಂದೆ ಇಂದು ಮತ್ತು ನಾಳೆ ಕೂಡಾ ಕವಿತೆಗಳಾಗಿಯೇ ಉಳಿದು - ನಮ್ಮ ಸುತ್ತಮುತ್ತಲಿನ ಹಕ್ಕಿಗಳ ಹಾಗೆ ಚಿಲಿಪಿಲಿ ಗುಟ್ಟುತ್ತಾ ಕಿವಿಗೊಡುವ ಮನಸ್ಸಿದ್ದರೆ ಮುದ ನೀಡುತ್ತ ಮತ್ತೆ ಮರಿಮಾಡುತ್ತ ನಮ್ಮ ಕೈಯಿಂದ ಅವುಗಳ ಮರಿಗಳನ್ನು ಜೋಪಾನವಾಗಿ ಹಾರಿಬಿಡಲು ಹಾತೊರೆಯುತ್ತವೆ ಎಂದು ನನಗನ್ನಿಸುವುದರಿಂದ, ಕಣವಿಯವರ ಹಾಗೆ ಅವರ ಕವಿತೆಗಳೂ ಮುಖ್ಯವಾಗುತ್ತವೆ.

ನಾ. ಮೊಗಸಾಲೆ.

# ೬೦. ಬೇಂದ್ರೆ - ಪ್ರತಿಮೆ

೧

ಅಂತೂ ಇಂತೂ ನಿಲ್ಲಿಸಿಬಿಟ್ಟರು ಬಟ್ಟಬಯಲಿನಾಗ
ನೆನಪು ಹಾರದ್ಹಾಂಗ ಬೇಂದ್ರೆ - ಹಕ್ಕಿ ಮೂರು ವರುಷದಾಗ,
ಇದರ ಧ್ವನಿಗೆ ಬೇರೆಲ್ಲಿದೆ ಹೋಲಿಕೆ ? ಇಂದಿಗು ಹೊಳೆದಿಲ್ಲ
ಅಂತೆ ಏನೋ ಈ ಮೂರ್ತಿಯು ಕೂಡ ಆ ಮುಖ ಹೋತಿಲ್ಲ.

ಗದ್ದಿಗೆಗಲ್ಲಿನ ಉದ್ದಕು ಹೆಸರಿವೆ : ಐವತ್ತೇಳು ಮಂದಿ !
ನಗರಸಭೆಯು ನಗದವರನು ನಗಿಸುವ ಸೊಗಸಿಗೆ ಏನಂದಿ ?
ತೊಂಬತ್ತನೆ ಈ ಜನ್ಮದಿನಕೆ ಅದು ಮೂವತ್ಮೂರು ಕಡಿಮೆ -
ಎಲ್ಲ ಸಂಖ್ಯೆಗಳ ಶಂಕೆ ನಿವಾರಿಸಿ ನಿಂತ ಕವಿಯ ಹಿರಿಮೆ.

೨

ಐದು ದಾರಿಗಳು ಕೂಡಿದ ವರ್ತುಳದಂಚಿನಲ್ಲಿ ನಿಂತು
ಒಂದು ಕಣ್ಣು ತುಸು ಸಣ್ಣದು ಮಾಡಿ ನೋಟ ತೂರಿ ಬಂತು :
ಓಡುವ ವಾಹನ, ಅಡ್ಡಾಡುವ ಜನ, ಪೋಲೀಸನ ಕೈ, ಸೀಟಿ -
ಅಂತರಿಕ್ಷವನು ಭೇದಿಸಿ ಹೋಯಿತು ಸೌರವ್ಯೂಹ ದಾಟಿ.

ಇದೇ ಬಯಲು, ಆ ಅದೇ ಬಾನು, ನಡುವೆ ನೂರು ತಂತಿ
ಗಾಳಿಯಲ್ಲಿ ಜುಮ್ಮೆನ್ನುತಿರಲು ನೀ ಸುಮ್ಮನೇಕೆ ಕುಂತಿ ?
ಏಳು, ಕೈಯ ಕುಣಿಸುತ್ತ ಹಾಡು ಉನ್ಮತ್ತ ಧಾಟಿ ಹಿಡಿದು
ಜಗದ ಮೂಲ ಚೈತನ್ಯ ಸೆಲೆಗೆ ತುಟಿಹಚ್ಚಿ ಹೀರಿ ಕುಡಿದು.

ಈ ನೆಲದ ಮಣ್ಣು ಅದಕೊಂದು ಕಣ್ಣು, ಆ ತೊಟ್ಟು ಬಿಟ್ಟ ಹಣ್ಣು,
ಅದರ ರಸದಿ ಸಮರಸವು; ಜೀವದಾಟಕ್ಕೆ ಗಂಡು - ಹೆಣ್ಣು ;
ಕಬ್ಬು ಗಾಣದಲಿ ಹಿಂಡಿ ಹಾಲು ಕೊಪ್ಪರಿಗೆ ಕಾಸಿ ಬೆಲ್ಲ -
ಹೂವಿನೆದೆಯ ರಸ ಜೇನುತುಪ್ಪ ಹೇಗಾಯ್ತು ? ಅವನೆ ಬಲ್ಲ.

ಸಂಚಲೋಹದೀ ಮೂರ್ತಿ ಪಂಚಭೂತಗಳ ಹುದುಕುವಂತೆ
ಈ ಪ್ರಪಂಚದಾಳದಲಿ ಹೊಳೆದು ಹಾಡಿದವು ಎಲ್ಲ ಚಿಂತೆ.
ಸಿದ್ಧನಂತೆ ಎಲ್ಲದಕು ಮದ್ದು ಕೊಡಬಲ್ಲ ಮರುಳಸಿದ್ಧ
ಮರಣವನ್ನು ಮುದ್ದಿಸುತ ಮರಳಿ ಅರಳಿದನು ಭಾವಶುದ್ಧ.

ನವೋದಯದ ಸಂದರ್ಭದಲ್ಲಿ 'ವ್ಯಕ್ತಿಚಿತ್ರ" ಕಾವ್ಯದ ಒಂದು ಪ್ರಕಾರವಾಗಿ ಸಾಕಷ್ಟು ಪ್ರಮಾಣದಲ್ಲಿ ರಚನೆಗೊಂಡು ಅದಕ್ಕೊಂದು ಪರಂಪರೆಯನ್ನೇ ನಿರ್ಮಿಸಿತು. ಭಿನ್ನ ಕ್ಷೇತ್ರಗಳ ವ್ಯಕ್ತಿಗಳ ಕುರಿತು ಅವರ ಬದುಕಿನ ಯಾವುದೋ ಸಂದರ್ಭವನ್ನು ನೆಪ ಮಾಡಿಕೊಂಡು ಅವರ ವ್ಯಕ್ತಿತ್ವವನ್ನು ಶಬ್ದಗಳಲ್ಲಿ ಚಿತ್ರವಾಗಿ ಮೂಡಿಸುವ ಈ ಪ್ರಕಾರ ಇಂದಿಗೂ ಪ್ರಚಲಿತವಿದೆ. ಚೆನ್ನವೀರ ಕಣವಿಯವರು ಈ ಪ್ರಕಾರಕ್ಕೆ ವಿಪುಲವಾದ ಕೊಡುಗೆ ನೀಡಿದ್ದು ಅವರ ವ್ಯಕ್ತಿಚಿತ್ರಗಳು ಸಾಸ್ಕೃತಿಕ ಅಧ್ಯಯನಕ್ಕೆ ಬಹು ಮುಖ್ಯ ಆಕರಗಳಾಗುವಷ್ಟು ಮಹತ್ವ ಪಡೆದಿವೆ. ವ್ಯಕ್ತಿಚಿತ್ರದ ಅನೇಕ ಮಾದರಿಗಳನ್ನು ಅವರು ಪ್ರಯೋಗಿಸಿದ್ದು 'ಬೇಂದ್ರೆ ಪ್ರತಿಮೆ' (ಕಾರ್ತಿಕದ ಮೋಡ' ಸಂಗ್ರಹ) ಆ ಬಗೆಯ ರಚನೆಗಳಲ್ಲಿ ವಿಶಿಷ್ಟವೆನಿಸುವಂತಹದು. ಬೇಂದ್ರೆಯವರ ನಿಕಟ ಒಡನಾಟದಲ್ಲಿ ಹಾಗೂ ನೇರ ಪ್ರಭಾವದಲ್ಲಿ ಬೆಳೆದಿರುವ ಕಣವಿಯವರು ಅವರನ್ನು ಬಹು ಎತ್ತರದ ಸ್ಥಾನದಲ್ಲಿರಿಸಿ ಗೌರವಿಸುತ್ತ ಬಂದಿರುವ ಅವರು 'ಎಪ್ಪತ್ತರ ಬೇಂದ್ರೆ' ಸಾನೆಟ್ಟಿನಲ್ಲಿ ಬೇಂದ್ರೆಯವರ ಅಂತರಂಗ-ಬಹಿರಂಗಗಳ ಗುಣ ಸ್ವಭಾವಗಳನ್ನು ಚಿತ್ತವತ್ತಾಗಿ ಮೂಡಿಸಿದ್ದಾರೆ. 'ಬೇಂದ್ರೆ -ಪ್ರತಿಮೆ' ಕವಿತೆ ಬೇಂದ್ರೆಯವರು ತೀರಿಹೋದ ಮೇಲೆ ಬರೆಯಲ್ಪಟ್ಟಿದ್ದು ಆ ಪ್ರತಿಮೆಯನ್ನು ನಿಲ್ಲಿಸಲು ಹೆಣಗಾಡಬೇಕಾಗಿ ಬಂದ ಸ್ಥಿತಿ ಹಾಗೂ ಮೂರು ವರ್ಷಗಳ ನಂತರ ಮಹಾನಗರ ಪಾಲಿಕೆ ಕಾಟಾಚಾರಕ್ಕೆಂಬಂತೆ ಅದನ್ನು ನಿಲ್ಲಿಸಲಾದ ಪ್ರಸಂಗದ ಹಿಂದಿನ ವಿಷಾದಪೂರ್ಣ ವಿಡಂಬನೆ ಇಲ್ಲಿ ಮೂಡಿದೆ.

ಅಂತೂ ಇಂತೂ ನಿಲ್ಲಿಸಿಬಿಟ್ಟರು ಬಟ್ಟ ಬಯಲಿನಾಗ
ನೆನಪು ಹಾರದ್ಹಾಂಗ ಬೇಂದ್ರೆ - ಹಕ್ಕಿ ಮೂರು ವರುಷದಾಗ
ಇದರ ಧ್ವನಿಗೆ ಬೇರಲ್ಲಿದೆ ಹೋಲಿಕೆ ? ಇಂದಿಗೂ ಹೊಳೆದಿಲ್ಲ
ಅಂತೆ ಏನೊ ಈ ಮೂರ್ತಿಯು ಕೂಡ ಆ ಮುಖ ಹೋತಿಲ್ಲ.

ಧಾರವಾಡದ ತಾಯಿ, ಸಾಧನಕೇರಿ ಮೊದಲಾದ ಸ್ಥಳೀಯ ವ್ಯಾಮೋಹಕ್ಕೆ ಒಳಗಾಗಿ ತನ್ನ ವಿಶ್ವರೂಪವನ್ನು ರೂಪಿಸಿಕೊಂಡ ಬೇಂದ್ರೆ ಈ ಶತಮಾನದಲ್ಲಿ ವಿಶ್ವಾದ್ಯಂತ ಬರೆಯುತ್ತಿರುವ ಕವಿಗಳಲ್ಲಿ ಅಗ್ರಪಂಕ್ತಿಗೆ ಸೇರಬಲ್ಲ ವರಕವಿ. ಕನ್ನಡ ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಶ್ರೀಮಂತಿಕೆಯನ್ನು ಸಾರ್ವಕಾಲಿಕವಾಗಿ ಬೆಳಗುವಂತೆ ತಮ್ಮ ರಚನೆಗಳಲ್ಲಿ ಕನ್ನಡಿಸಿದ ಬೇಂದ್ರೆಯವರ ಪ್ರತಿಮೆಯೊಂದನ್ನು ಅವರ ಕರ್ಮಭೂಮಿಯಾಗಿದ್ದ ಧಾರವಾಡದಲ್ಲಿ ನಿಲ್ಲಿಸಬೇಕಾಗಿ ಬಂದಾಗ ಸಾರ್ವಜನಿಕರು ಹಾಗೂ ಸರ್ಕಾರ ತೋರಿದ ಹೃದಯ ದಾರಿದ್ರ್ಯ ಕಣವಿಯಂತಹ ಗಂಭೀರ, ಸಜ್ಜನ ಕವಿಯನ್ನು ಕೆರಳಿಸಿದ್ದು, ಅಂಥವರೂ ವಿಡಂಬನೆಯ ಮೂಲಕ ಆ ನೋವನ್ನು ಹೇಳಿಕೊಳ್ಳಬೇಕಾಗಿ ಬಂದದ್ದು ಇಡೀ ಸಂದರ್ಭಕ್ಕೆ ಮತ್ತಷ್ಟು ತೀವ್ರತೆಯನ್ನು ತಂದಿದೆ. 'ಅಂತೂ ಇಂತೂ ನಿಲ್ಲಿಸಿಬಿಟ್ಟರು' ಎನ್ನುವಲ್ಲಿಯೇ ಈ ಅನಾದರ ಹಾಗೂ ಅದಕ್ಕಾಗಿ ಕವಿಗೆ ಉಂಟಾಗಿರುವ ನೋವು ಎರಡೂ ಪ್ರಕಟಗೊಂಡಿದ್ದು ಓದುಗರಲ್ಲಿ ತಳಮಳವನ್ನೂ ಮೂಡಿಸುವಲ್ಲಿ ಈ ಸಾಲುಗಳು ಯಶಸ್ವಿಯಾಗಿವೆ. ಅಲ್ಲದೆ 'ಬಟ್ಟಬಯಲಿನಾಗ' ಎನ್ನುವ ಮುಂದಿನ ನುಡಿಗಟ್ಟು ಗೌರವಯುತ ರಕ್ಷಣೆ ನೀಡಬೇಕಾದ ಸಾಂಸ್ಕೃತಿಕ ಸಂಗತಿಗಳನ್ನು ಅನಾಥ ಸ್ಥಿತಿಗೆ ತಳ್ಳುವುದರ ಭಾವವನ್ನು ಸಂಕೇತಿಸುತ್ತದೆ. ' ಇದರ ಧ್ವನಿಗೆ ಬೇರೆಲ್ಲಿದೆ ಹೋಲಿಕೆ ?' ಎಂಬಲ್ಲಿ ಕಣವಿಯವರು ಬೇಂದ್ರೆಯರ ಅನನ್ಯತೆಯನ್ನು ಗುರುತಿಸುತ್ತ ಆ ವಿಶಿಷ್ಟ ಚಹರೆಗಳು ಈ ಮೂರ್ತಿಯಲ್ಲಿ ಮೂಡಲು ಸಾಧ್ಯವಾಗದೆ ಇದು ಕೇವಲ ಬೇಂದ್ರೆಯವರ ಅಣಕು ಮುಖದಂತೆ ಕಾಣುತ್ತಿದೆ ಎಂದಿರುವುದು ಈ ವೈರುಧ್ಯವನ್ನು ಇನ್ನಷ್ಟು ಹೆಚ್ಚಿಸಿದೆ.

ಈ ಮೂರ್ತಿಯನ್ನು ನಿಲ್ಲಿಸುವುದರ ಹಿಂದೆ ಬೇಂದ್ರೆಯವರ ವ್ಯಕ್ತಿತ್ವ, ಸಾಧನೆ, ಸಿದ್ಧಿ, ಕೊಡುಗೆಗಳನ್ನು ಸಾರ್ವಜನಿಕರಿಗೆ ತಿಳಿಯಪಡಿಸಬೇಕೆಂಬ ಭಾವನೆಗಿಂತ ಬೇಂದ್ರೆಯವರ ಹೆಸರಿನಲ್ಲಿ ತಾವು ತಮ್ಮ ಹೆಸರುಗಳನ್ನು ದಾಖಲಿಸಿಕೊಳ್ಳುವ ಚಪಲ ಅಡಗಿರುವುದನ್ನು ಕಣವಿಯವರು ಯಥಾರ್ಥವಾಗಿ ಗುರುತಿಸಿದ್ದಾರೆ. 'ಗದ್ದಿಗೆಗಲ್ಲಿನ ಉದ್ದಕು ಹೆಸರಿವೆ: ಐವತ್ತೇಳು ಮಂದಿ' ಎನ್ನುವಲ್ಲಿ ಈ ವಿಪರ್ಯಾಸದ ಅತಿರೇಕವನ್ನು ಕಾಣಬಹುದು. ನಗದವರನ್ನು ನಗಿಸುವ ನಗರಸಭೆಯ ಈ ಕೃತ್ಯದಿಂದ ಬೇಂದ್ರೆಯವರ ಹಿರಿಮೆಗೆ ಧಕ್ಕೆಯಾಗದೆನ್ನುವ ಭರವಸೆ ಕಣವಿಯವರದು, ಈ ಹಿರಿಮೆಯ ಹಿಂದಿನ ಬೇಂದ್ರೆ ವ್ಯಕ್ತಿತ್ವದ ಚೈತನ್ಯವನ್ನು ಕವಿತೆಯ ಎರಡನೆ ಭಾಗದಲ್ಲಿ ಅನಾವರಣಗೊಳಿಸುವ ಕವಿ 'ಮರಣವನ್ನು ಮುದ್ದಿಸುತ ಮರಳಿ ಅರಳಿದನು ಭಾವಶುದ್ಧ' ಎಂದು ಸಾರಿ ಸಾವನ್ನೇ ಗೆದ್ದು ನಿಂತ ಬೇಂದ್ರೆಗೆ ಇಂಥ ಪ್ರತಿಮೆಗಳ ಹಂಗಿಲ್ಲ ಎಂಬ ಆತ್ಯಂತಿಕ ನಿಲುವಿಗೆ ತಲುಪುತ್ತಾರೆ.

'ಐದು ದಾರಿಗಳು ಕೂಡಿದ ವರ್ತುಳದಂಚಿನಲ್ಲಿ', 'ಓಡುವ ವಾಹನ', ಅಡ್ಡಾಡುವ ಜನ, ಪೋಲೀಸನ ಕೈ, ಸೀಟಿ' ಈ ಎಲ್ಲ ಗದ್ದಲದ ನಡುವೆ, 'ಒಂದು ಕಣ್ಣು ತುಸು ಸಣ್ಣದು ಮಾಡಿ ನೋಟ ತೂರಿ' 'ಮೇಲಕ್ಕೆ ನೆಗೆದ ಬೇಂದ್ರೆಯವರ ದೃಷ್ಟಿ', 'ಅಂತರಿಕ್ಷವನು ಭೇದಿಸಿ ಹೋಯಿತು ಸೌರವ್ಯೂಹ ದಾಟಿ" ಎನ್ನುವುದು 'ತುಸುವು ಕೇಳಲು ಕೂಡ ಎಲ್ಲ ಮರೆತಿರಬೇಕು' ಎಂಬುದನ್ನು 'ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚದ' ಗುಣವನ್ನು ಬೇಂದ್ರೆಯವರ ವ್ಯಕ್ತಿತ್ವದ

ಚಹರೆಗಳ ಮೂಲಕವೇ ವ್ಯಕ್ತಪಡಿಸಿರುವುದು ಕವಿತೆಯ ಆಳ ವಿಸ್ತಾರಗಳನ್ನು ಸಾರ್ಥಕವಾಗಿ ಹಿಗ್ಗಿಸಿವೆ. ಅಲ್ಲದೆ ಆ ಪ್ರತಿಮೆಗಿಂತ ಜನರ ನೆನಪಿನಲ್ಲಿ ಅಚ್ಚಳಿಯದೆ ಮೂಡಿ ನಿಂತ ಬೇಂದ್ರೆಯವರ ಗಾರುಡಿಗ ವ್ಯಕ್ತಿತ್ವದ ಚಹರೆಗಳು ಕಣವಿಯವರಿಗೆ ಹೆಚ್ಚು ಜೀವಂತವಾಗಿ ತೋರುತ್ತವೆ. ಹೀಗಾಗಿ 'ಏಳು, ಕೈಯ ಕುಣಿಸುತ್ತ ಹಾಡು ಉನ್ನತ್ತ ಧಾಟಿ ಹಿಡಿದು', 'ಇದೇ ಬಯಲು, ಆ ಅದೇ ಬಾನು, ನಡುವೆ ನೂರು ತಂತಿ', 'ಗಾಳಿಯಲ್ಲಿ ಜುಮ್ಮೆನ್ನುತ್ತಿರಲು ನೀ ಸುಮ್ಮನೇಕೆ ಕುಂತಿ ?' ಎಂದು ಆ ನಿರ್ಜೀವ ಮೂರ್ತಿಯೊಳಗೆ ಬೇಂದ್ರೆಯವರ ಚೈತನ್ಯದ ಆವಾಹನೆ ಮಾಡುತ್ತಾರೆ.

ಬಯಲನ್ನು ವ್ಯಾಪಿಸಿ ನಿಂತ ಬೇಂದ್ರೆ ಪ್ರತಿಭೆ ಮೂಲತಃ ನೆಲದಲ್ಲಿ ಬೇರುಳ್ಳದ್ದು. 'ಈ ನೆಲದ ಮಣ್ಣು ಅದಕೊಂದು ಕಣ್ಣು' ಮೂಡಿಸುವ ಬೇಂದ್ರೆಯವರ ದೇಶೀಯ ನೆಲೆಗಳ, ಜಾನಪದ ಸತ್ವಗಳ ಆಂತರ್ಯವನ್ನು ಅದರೆಲ್ಲ ಸೂಕ್ಷ್ಮಗಳೊಂದಿಗೆ ಒಳಗೊಳ್ಳುವ ಈ ಕವಿತೆ' ಹೂವಿನೆದೆಯ ರಸ ಜೇನುತುಪ್ಪ ಹೇಗಾಯ್ತು? ಅವನೆ ಬಲ್ಲ ' ಎಂದು ಹೇಳುವಲ್ಲಿ ಸಮರ್ಥವಾಗಿ ಧ್ವನಿಸಿದೆ. 'ಸಿದ್ಧನಂತೆ ಎಲ್ಲದಕು ಮದ್ದು ಕೊಡಬಲ್ಲ ಮರುಳಸಿದ್ಧ' ಎಂಬಲ್ಲಿ ಈ ಮಾತಿಗೆ ಇನ್ನಷ್ಟು ಒತ್ತೂ ಬಿದ್ದಿದೆ.

'ಬೇಂದ್ರೆ ಪ್ರತಿಮೆ'ಯನ್ನು ನೆಪವಾಗಿಟ್ಟುಕೊಂಡು ಸಾಮಾಜಿಕ ಟೊಳ್ಳುತನಗಳನ್ನು ವಿಡಂಬಿಸುತ್ತಲೇ ಬೇಂದ್ರೆ ವ್ಯಕ್ತಿತ್ವದ ಒಳ ಹೊರಗನ್ನು ಕಟೆದು ನಿಲ್ಲಿಸುವಲ್ಲಿ ಈ ಕವಿತೆ ಸಫಲಗೊಂಡಿದೆ.

ಜಿನದತ್ತ ದೇಸಾಯಿ

# ೬೧. ನಿತ್ಯ ಪಯಣ

೧

ಅವರೊಬ್ಬೊಬ್ಬರು ಹೋದರು ಹಾಗೇ, ಬದುಕಿನ
ಬದಿಬದಿಗೆ. ಯಾವುದೊ ಗಿಡಬಳ್ಳಿಯ ನೆಟ್ಟರು
ಹೂತಿಟ್ಟರು ಸುಖ-ದುಃಖವನೊಳಗೊಳಗೇ ಮನ-
ದಾಳದ ಮುತ್ತು: ಹೊಳೆಯದೆ ಒಳಗೇ ಇಟ್ಟವರು.

ಸುತ್ತಲು ಗುಡ್ಡಗಳೇರಿಳಿದು, ಒಜ್ಜೆಯ ಹೊತ್ತು
ಕಲ್ಲಿಗೆ ಮುಳ್ಳಿಗೆ ತಾಗಿ, ಹಳ್ಳಿಗೆ ಸಾಗಿದರು.
ಸೋರುವ ಮಣ್ಣಿನ ಮನೆ ಮೆತ್ತಿ, ಹೊತ್ತಿಸಿ ಚಿಮಣಿ
ರೊಟ್ಟಿಗೆ ಹಂಚಿಟ್ಟರು, ಕೂಗಿತು ಹಿಟ್ಟಿನ ಗಿರಣಿ.

ಹಗಲು: ಎತ್ತಿಗೆ ಹೆಗಲು, ಹೊಲದುದ್ದಕು ನೇಗಿಲು
ಪಾಟಿ-ಪುಸ್ತಕ-ಶಾಲೆ, ಮಗ್ಗಿ ವಾಚನಮಾಲೆ
ಹಬ್ಬ-ಹುಣ್ಣಿಮೆ ವೆಚ್ಚ, ಸುಗ್ಗಿ, ಹಿಗ್ಗಿನ ಗುಚ್ಛ
ದೊಡ್ದಾಟ: ಕತ್ತಿ ಕಿರೀಟ: 'ಹೇ ದೇವಾ' ಮದ್ದಳೆ.

ಈ ನೆನಪಿನ ಗಡಿದಾಟಿ, ಕವಲೊಡೆದವು ದಾರಿ
ಚಕ್ಕಡಿ ಇಳಿಯುತ್ತ ರಭಸದ ರೈಲನ್ನೇರಿ.

೨

ನಿಲ್ದಾಣಗಳೂ ಬೇರೆ, ಗುರುತಿಸಿ ಇಳಿದವರು
ದಾರಿಗೆ ಹತ್ತಿ, ಅಲ್ಲಲ್ಲಿಗೆ ಬಾಳಿನ ಬೇರು
ಮೆಲ್ಲಗೆ ನೆಲಕಿಳಿದವು ಹೀರುತ ಹೊಸ ನೀರು.
ಸ್ನೇಹದ ಕುಡಿ ಚಾಚುತ ಕಂಗೊಳಿಸಿತು ಹಸಿರು.

ಆನೆಗೆ ಆನೆಯ ಭಾರ, ಇರುವೆಗು ಇರುವುದು
ಸಂಸಾರ, ಬೇಸಿಗೆಯಲಿ ಕೂಡಿಸಿ ಕಾಳು-ಕಡಿ
ಮಳೆಗಾಲಕೆ ಈಡು. ತುಂಬಿದ ಕೆರೆ ದಂಡೆಗೆ
ಕೊಂಬೆಗೆ ಪಕ್ಷಿಯ ಗೂಡು; ತಕ್ಕಡಿ ಸಮ ಪರಡಿ.

ಸ್ವಭಾವದ ಸಂತುಷ್ಟಿಗೆ ಸಂಕಷ್ಟದ ಕಾವು
ಇಷ್ಟಾನಿಷ್ಟವ ಕರಗಿಸಿ ಸೃಷ್ಟಿಗು ತುಸು ನೋವು.
ತೂಗಾಟ, ತೇಕಾಟವೋ, ನೀಗದ ಜಂಜಾಟ.
ಬಾಗಿದ ಗೊನೆ ಮಾಗಿಸಿದೆ ಬೇಲಿಯ ಒಳನೋಟ.

ಒಂದೆಡೆ ನೆಲಸಿದ್ದರು ನಿತ್ಯವು ಜೀವಕೆ ಪಯಣ
ಇದ್ದುದನಿಲ್ಲೇ ಒಗೆವುದು; ತೀರದು ಎಲ್ಲ ಋಣ.

ಬದುಕನ್ನು ಅದರೆಲ್ಲ ಸಮಗ್ರತೆಯೊಳಗೆ ತೆರೆದಿಡುವ ಕವನ ನಿತ್ಯ ಪಯಣ-೧ ಮತ್ತು ನಿತ್ಯ ಪಯಣ-೨ ('ಕಾರ್ತಿಕದ ಮೋಡ' ಸಂಗ್ರಹದಿಂದ) ವ್ಯಕ್ತಿ ಮತ್ತು ಆತನ ಬದುಕಿನ ಸಂಬಂಧಗಳ ವಸ್ತುವಿನ ದೃಷ್ಟಿಯಿಂದ 'ನಿತ್ಯ ಪಯಣ ೧ ಮತ್ತು ೨ ಮಹತ್ವದ ಕವನಗಳು. ಜೀವನದ ಮಿತಿಯನ್ನು ಕುರಿತಂಥ ಅತಿ ಗಾಢವಾದ ಚಿಂತನೆ ಈ ಕವನಗಳಲ್ಲಿವೆ. ಬದುಕಿನ ಪಯಣದ ತಾತ್ವಿಕತೆಯಲ್ಲಿನ ಅತಿರೇಕಗಳು, ವ್ಯಂಗ್ಯಗಳು ಮಾಯವಾಗಿ ಸಂಸ್ಕಾರದ ಆವರಣದಲ್ಲಿಯೇ ವ್ಯಕ್ತಿ ಮಾಗುವ ಕ್ರಮವನ್ನು ಕುರಿತು ಇಲ್ಲಿ ಚಿಂತಿಸಲಾಗಿದೆ. ಮನಸ್ಸಿನ ತೀವ್ರ ಅನುಭೂತಿಗಳನ್ನು ಮತ್ತು ಚಿಂತನಪರತೆಯನ್ನು ಒಂದೇ ಪಾತಳಿಯಲ್ಲಿ ಸ್ವೀಕರಿಸಿದಾಗ ಉದಾತ್ತಗೊಂಡ ಭಾವನಾ ಕ್ರಿಯೆ ಕಾವ್ಯದ ಒಳಗೆ ಕಾಣಿಸಿಕೊಳ್ಳುತ್ತದೆ. ಕವಿಯ ದಟ್ಟವಾದ ಲೌಕಿಕ ಅನುಭವ ಕಾವ್ಯ ಪರಿಕರಗಳ ಒಳಗೆ ಹಲವು ಬಗೆಯ ಧ್ವನಿ ಸಾಮರ್ಥ್ಯವನ್ನು, ಅರ್ಥಛಾಯೆಯನ್ನು ಬಿಟ್ಟುಕೊಡುತ್ತದೆ. 'ನಿತ್ಯ ಪಯಣ ೧' ರ ಆರಂಭವೇ ಇಂಥ ರೂಪಕ ಚೌಕಟ್ಟನ್ನು ವಿಶಿಷ್ಟ ರೀತಿಯಲ್ಲಿ ಧ್ವನಿಸುತ್ತದೆ.

ಅವರೊಬ್ಬೊಬ್ಬರು ಹೋದರು ಹಾಗೇ ಬದುಕಿನ
ಬದಿ ಬದಿಗೆ. ಯಾವುದೊ ಗಿಡ ಬಳ್ಳಿಯ ನೆಟ್ಟರು
ಹೂತಿಟ್ಟರು ಸುಖ-ದುಃಖವನೊಳಗೊಳಗೇ, ಮನ-
ದಾಳದ ಮುತ್ತು ಹೊಳೆಯದೆ ಒಳಗೇ ಇಟ್ಟವರು

ವ್ಯಕ್ತಿಗಳ ಬದುಕು ಸುಖ ದುಃಖಗಳ ಸಂಗಮ ತತ್ವದಿಂದ ಬೆರೆತಿರುವಂಥದ್ದು. ಹೀಗಾಗಿ ಲೌಕಿಕ ವಿದ್ಯಮಾನಗಳೆಂಬುದು 'ಮನದಾಳದ ಮುತ್ತು' ಹಾಗೆ ಹೊಳೆದು ಹೊಳೆಯದಂತೆ, ಕಂಡೂ ಕಾಣದಂತೆ ರೂಪಿತಗೊಂಡದ್ದು. ಬದುಕಿನ ಸುಖ ದುಃಖಗಳು 'ಗುಡ್ಡಗಳೇರಿಳಿದು ಒಜ್ಜೆಯ ಹೊತ್ತು

ಕಲ್ಲಿಗೆ ಮುಳ್ಳಿಗೆ ತಾಗಿ'ದಂತೆ ಅನ್ನಿಸುವುದಾದರೂ ಬದುಕಿನ ಸಂಕೀರ್ಣತೆಯ ಅರಿವು 'ಸೋರುವ ಮಣ್ಣಿನ ಮನೆ ಮೆತ್ತಿ, ಹೊತ್ತಿಸಿ ಚಿಮಣಿ ರೊಟ್ಟಿಗೆ ಹಂಚಿಟ್ಟರು, ಕೂಗಿತು ಹಿಟ್ಟಿನ ಗಿರಣಿ' ಎಂಬ ಸಾಲುಗಳಲ್ಲಿ ಸೃಜನಾತ್ಮಕ ಸ್ಪಷ್ಟತೆ ಪಡೆಯುತ್ತದೆ. ಒಂದರ್ಥದಲ್ಲಿ ಕವಿತೆಯ ಕೇಂದ್ರ ಅನುಭವ 'ಕೂಗಿತು ಹಿಟ್ಟಿನ ಗಿರಣಿ' ತತ್ವದ ಸುತ್ತಸುತ್ತಲೇ ಸುತ್ತುತ್ತದೆ, ವ್ಯಕ್ತ ಹಸಿವಿಗಾಗಿ, ಹೊಟ್ಟೆಗಾಗಿ ಬದುಕಬೇಕಾದ ಅನಿವಾರ್ಯತೆಯ ಒಳಗೆ ಜೀವವಿದೆ ಎಂಬುದನ್ನು 'ಕೂಗಿತು ಹಿಟ್ಟಿನ ಗಿರಣಿ' ಎಂಬ ರೂಪಕವು ಅನಿರೀಕ್ಷಿತವಾದ ಅಥೆಂಟಿಕ್ ಧ್ವನಿಯಿಂದ ಸ್ಪಷ್ಟಪಡಿಸುತ್ತದೆ.

ಹಿಟ್ಟಿನ ಗಿರಣಿ ಕೂಗುವುದರಿಂದಲೇ

**ಹಗಲು ಎತ್ತಿಗೆ ಹೆಗಲು, ಹೊಲದುದ್ದಕು ನೇಗಿಲು**
**ಪಾಟಿ-ಪುಸ್ತಕ-ಶಾಲೆ, ಮಗ್ಗಿ ವಾಚನಮಾಲೆ**
**ಹಬ್ಬ-ಹುಣ್ಣಿಮೆ ವೆಚ್ಚ, ಸುಗ್ಗಿ ಹಿಗ್ಗಿನ ಗುಚ್ಛ**
**ದೊಡ್ಡಾಟ: ಕತ್ತಿ, ಕಿರೀಟ; ಹೇ ದೇವಾ ಮದ್ದಳೆ.**

ಲೌಕಿಕ ವಿದ್ಯಮಾನಗಳನ್ನು ಅತಿ ಮೊನಚಾಗಿ ತೆರೆದಿಡುವ ಬಗೆ ಇದು. ಅಭಿವ್ಯಕ್ತಿ ತಂತ್ರದ ಶಕ್ತಿ ಅನುಭವ ಗ್ರಹಿಕೆಯ ಮೇಲೂ ನಿಯಂತ್ರಕ ಪರಿಣಾಮವನ್ನು ಸಾಧಿಸಿದ ಕಾರಣದಿಂದಾಗಿ, ಬದುಕಿನ ನಿತ್ಯ ಜಂಜಾಟ ಸಂತೋಷಗಳೆರಡೂ ಸಾಮರಸ್ಯದ ಕಡೆಗೆ ತಿರುಗುತ್ತದೆ. ಕಣವಿಯವರಲ್ಲಿ 'ಹಲವು' ಎನ್ನುವುದು ಒಂದು ಸಾಂಸ್ಕೃತಿಕ ಮಿಡಿತ. ಹೀಗಾಗಿಯೇ ಈ ವಸ್ತುವನ್ನು ನಿರ್ವಹಿಸುವಾಗ ಪ್ರಧಾನವಾದ ಪ್ರತಿಮೆ, ರೂಪಕಗಳು ಪ್ರಕಟವಾದರೂ ಕಾವ್ಯದ ಮಟ್ಟಿಗೆ ಅವು ಸಂಪೂರ್ಣವಾಗಿ ಸಾಂಸ್ಕೃತಿಕ ಜಾಗೃತ ಸ್ಥಿತಿಯಲ್ಲಿಯೇ ಬಿಂಬಿತಗೊಳ್ಳುತ್ತವೆ. ಆದ್ದರಿಂದಲೇ 'ಹಬ್ಬ-ಹುಣ್ಣಿಮೆ ವೆಚ್ಚ, ಸುಗ್ಗಿ ಹಿಗ್ಗಿನ ಗುಚ್ಛ, ದೊಡ್ಡಾಟ: ಕತ್ತಿ, ಕಿರೀಟ; ಹೇ ದೇವಾ ಮದ್ದಳೆ' ಎಂಬುದು ಬದುಕಿನ ಏರಿಳಿತವನ್ನು, ಸೋಲು- ಗೆಲುವುಗಳನ್ನು ಅಭಿವ್ಯಕ್ತಿ ತಂತ್ರದ ನೆಲೆಯಲ್ಲಿ ಹಲವು ಬಗೆಯ ಅರ್ಥವನ್ನು ಬಿಟ್ಟುಕೊಡುವ ಪ್ರತಿಮೆಗಳ ಹಿನ್ನೆಲೆಯಲ್ಲಿ ಅರ್ಥೈಸಬೇಕಾಗುತ್ತದೆ.

**ಈ ನೆನಪಿನ ಗಡಿದಾಟಿ ಕವಲೊಡೆದವು ದಾರಿ,**
**ಚಕ್ಕಡಿ ಇಳಿಯುತ್ತ ರಭಸದ ರೈಲನ್ನೇರಿ**

ಎಂಬ ಸಾಲುಗಳು ಕೂಡ ಬದುಕಿನ ಪಯಣದ ವೇಗವನ್ನು ಕ್ಷಣಿಕತೆಯನ್ನು ಸಮರ್ಥವಾಗಿ ನಿರೂಪಿಸುತ್ತವೆ. ಮಾತ್ರವಲ್ಲದೆ ಅದು ಬಿಟ್ಟುಕೊಡುವ 'ಬದುಕಿನ ವೇಗ'ದ ಅನುಭವ ತುಂಬು ಸಾಂದ್ರತೆಯನ್ನು, ತನ್ಮಯತೆಯನ್ನು ಸಾಧಿಸಿದೆ. 'ರಭಸದ ರೈಲನ್ನೇರಿ ಚಕ್ಕಡಿಗಳನ್ನು ಇಳಿಯುತ್ತ' ಸಾಗುವ ಜೀವನವನ್ನು ಕವಿಪ್ರಜ್ಞೆ ಹಳಿತಪ್ಪದೆ ತೆರೆದಿಟ್ಟಿದೆ.

'ನಿತ್ಯ ಪಯಣ' : ೨ ಕೂಡ ಬದುಕಿನಲ್ಲಿ ವ್ಯಕ್ತಿ ಸಂಬಂಧಗಳ ಇರುವಿಕೆ, ಪ್ರಭಾವ ಹಾಗೂ ವಾಚ್ಯ-ಸೂಚ್ಯಗಳೆರಡನ್ನೂ ಯಶಸ್ವಿಯಾಗಿ ನಿರೂಪಿಸುವ ಕವನ.

**ನಿಲ್ದಾಣಗಳೂ ಬೇರೆ - ಗುರುತಿಸಿ ಇಳಿದವರು**
**ದಾರಿಗೆ ಹತ್ತಿ, ಅಲ್ಲಲ್ಲಿಗೆ ಬಾಳಿನ ಭೇರು**

**ಮೆಲ್ಲಗೆ ನೆಲಕಿಳಿದವು ಹೀರುತ ಹೊಸ ನೀರು**
**ಸ್ನೇಹದ ಕುಡಿ ಚಾಚುತ ಕಂಗೊಳಿಸಿತು ಹಸಿರು**

ಈ ಸಾಲುಗಳು ಸಾಮಾಜಿಕ ಸಂಕೋಚಗಳನ್ನು ಮೀರದ ವ್ಯಕ್ತಿ ಸಂಬಂಧಗಳು. ವಿಭಿನ್ನ ದಾರಿಗಳಲ್ಲಿ, ನಿಲ್ದಾಣಗಳಲ್ಲಿ ಪರಿಚಯವಾದರೂ ಬದುಕಿನ ಭಾಗವಾಗಿಬಿಡುವ ಬಗೆಯನ್ನು ನಿರೂಪಿಸುತ್ತವೆ. ಇಲ್ಲಿ ವ್ಯಕ್ತಿ ಸಂಬಂಧದ ಮಿತಿಯ ಕಡೆಗೆ ಕವಿಗೆ ಗಮನವಿರುವುದರಿಂದಲೇ 'ಆನೆಗೆ ಆನೆಯ ಭಾರ, ಇರುವೆಗೆ ಇರುವುದು ಸಂಸಾರ' ಎಂದು ಅವರವರಿಗೆ ಅವರವರ ಸಂಸಾರ, ಜೀವನ ದೊಡ್ಡದು ಎಂಬ ನೈತಿಕ ಎಚ್ಚರವಿದೆ. ಇಲ್ಲಿ ಮುಖ್ಯವಾಗಿ ಗಮನಸೆಳೆಯುವ ಅಂಶವೆಂದರೆ ಕವನದ ಮುಂದಿನ ನಿರಂತರತೆ. ಇದು ಗಂಡು ಹೆಣ್ಣು ಮತ್ತು ಜೀವನಕ್ರಮಗಳ ನಡುವಿನ ಸಂಬಂಧದ ಬಗೆಗೆ ಕವಿಯ ದೃಷ್ಟಿಕೋನವಾಗಿ, ವ್ಯಕ್ತಿ ಸಂಬಂಧದ ನೈಜ ಸ್ಥಿತಿಯ ನಿರೂಪಣೆಯಾಗಿ ಕಾಣಿಸಿಬಿಡುತ್ತದೆ.

**ಸ್ವಭಾವದ ಸಂತುಷ್ಟಿಗೆ ಸಂಕಷ್ಟದ ಕಾವು**
**ಇಷ್ಟಾನಿಷ್ಟವ ಕರಗಿಸಿ ಸೃಷ್ಟಿಗು ತುಸುನೋವು**
**ತೂಗಾಟ, ತೇಕಾಟವೊ, ನೀಗದ ಜಂಜಾಟ**
**ಬಾಗಿದ ಗೊನೆ ಮಾಗಿಸಿದೆ ಬೇಲಿಯ ಒಳನೋಟ**

ಅತ್ಯಂತ ಆಪ್ತವಾದ ರೀತಿಯಲ್ಲಿ ವ್ಯಕ್ತಿಗಳನ್ನು ಗ್ರಹಿಸಲು ಸಾಧ್ಯವಾಗುವುದು ಪ್ರೀತಿಯ ಮೂಲಕವಾಗಿಯೇ. ಹೀಗಾಗಿಯೇ ಕಣವಿಯವರಿಗೆ ವ್ಯಕ್ತಿ ವ್ಯಕ್ತಿಗಳ ನಡುವೆ ಸ್ನೇಹ, ಪ್ರೀತಿಯೆಂಬುದು ಅತ್ಯಂತ ಪವಿತ್ರವಾದ ಮಾಧ್ಯಮ. 'ಗುರಿ' ಎಂಬ ಸಾನೆಟ್ ಒಂದರಲ್ಲಿ 'ಮರ್ತ್ಯಕ್ಕೆ ಬೇಕು ಕಾತರದ ಪ್ರೀತಿಯ ಸ್ಪರ್ಶ' ಎಂದು ಉತ್ಕಟತೆಯಿಂದ ಹೇಳಿಕೊಳ್ಳುತ್ತಾರೆ. ಹುಟ್ಟು ಸಾವಿನ ನಡುವಿನ ಜೀವನ ಒಂದೆಡೆ ನೆಲೆಸಿದಂತೆ ಕಂಡರೂ ನಿತ್ಯವೂ ಅದಕ್ಕೆ ಪಯಣ ಎಂದು ಹೇಳುತ್ತಾ, 'ಇದ್ದುದನಿಲ್ಲೇ ಒಗೆವುದು, ತೀರದು ಎಲ್ಲ ಋಣ'ವೆಂದು ಮಾರ್ಮಿಕವಾಗಿ ಕವನವನ್ನು ಕೊನೆಗೊಳಿಸುತ್ತಾರೆ.

ಕಣವಿಯವರು ತಮ್ಮ ವಿಶಿಷ್ಟ ಕಾವ್ಯ ಪ್ರಮೇಯವನ್ನು ನಿರ್ಮಿಸಿಕೊಂಡ ಪ್ರಕ್ರಿಯೆಗೆ ಒಂದು ಮೆಟಫಿಸಿಕಲ್ ಆಯಾಮ ಪ್ರಾಪ್ತವಾಗುವುದೇ ಇಲ್ಲಿ. ' ಇದ್ದುದನಿಲ್ಲೇ ಒಗೆವುದು, ತೀರದು ಎಲ್ಲ ಋಣ' ಎಂಬುದು ಬದುಕಿನ ವಾಸ್ತವವನ್ನು ಈ ಮೂಲಕ ನಿರರ್ಥಕತೆ, ಸಾರ್ಥಕತೆಗಳೆರಡನ್ನೂ ಬಿಂಬಿಸುವ ಶಕ್ತಿಯುತ ಆಶಯದ ಸಾಲುಗಳಾಗುತ್ತವೆ. ಅನುಭವ, ಸೂಕ್ಷ್ಮಗ್ರಾಹಿತ್ವ, ಆಂತರಂಗಿಕ ಸಂವೇದನೆ ಮತ್ತು ಮಾನಸಿಕ ವಾಸ್ತವಗಳೊಡನೆ ಕಾವ್ಯ ಸಂಬಂಧ ಸ್ಥಾಪಿತವಾಗುವ ಬಗೆ ಅತ್ಯಂತ ಆತ್ಮೀಯವೂ, ಆಕರ್ಷಕವೂ ಆಗುತ್ತದೆ. ಒಟ್ಟಾರೆಯಾಗಿ 'ನಿತ್ಯಪಯಣ'ದ ಎರಡು ಸುನೀತಗಳು ಬದುಕಿನ ಸಂಬಂಧದ ನಿಗೂಢತೆಯನ್ನು, ಉತ್ಕಟತೆಯನ್ನು ಅದರೆಲ್ಲ ಬಣ್ಣ - ನಾದಗಳೊಂದಿಗೆ ತೆರೆದಿಟ್ಟ ಕವನಗಳಾಗಿವೆ.

**ಕವಿತಾ ರೈ. ಬಿ. ಆರ್.**

# ೬೨. ಜೇನಿಯಾ

ಎಣಿಸಿ, ಬಿಡಿಬಿಡಿಸಿ ಹೇಳಬಹುದಾದಷ್ಟು-
ರೆಕ್ಕೆಯಂತೆ
ಜೋಡು ಜೋಡೆಲೆ ಬಿಟ್ಟು,
ಕವಲು ನಾಲ್ಕಾರು ಒಡೆದು, ಮೇಲೆದ್ದು
ನೆಟ್ಟಗೆ ದೇಟು
ದೇಟಿನ ತುದಿಗೆ ಹೂಬಿಟ್ಟ ದಿಟ್ಟತನ.
ದಟ್ಟ ಪಕಳೆಗಳು ಸುತ್ತು-
ನಟ್ಟ ನಡುವೆ
ಬೀಜಕಣಿಯಾದ ಗುಂಡು -ಕೇಸರ-ಬಂಡು.
ಹಣತೆ ಹಚ್ಚಿಟ್ಟಂತೆ ಸಂತುಷ್ಟಿ.

ಗಾಳಿ ಬೀಸಿದರೆ
ತುಸುವೂ ಗಾಸಿಯಾಗದೆ,
ಬಾಗಿ, ಬಳುಕಿ
ಬಾಡಿ ಉದುರಿ ಹೋಗದೆ-
ಆಡಾಡುತ್ತ ಪಾತರಗಿತ್ತಿ
ಬಂದು ಕುಳಿತಾಗ
ನೋಡಿ
ತಲೆಯಾಡಿಸುವದು.

ಬೇಕಿಲ್ಲ ದಿನವೂ ನೀರಿನಾರೈಕೆ,
ವಾಸನೆಯ ಸೋಕಿಲ್ಲ,

**ಗಟ್ಟಿ ಬಣ್ಣದ ನಿಂತ ನಿಲವಿನಲೆ**
**ತಟ್ಟನೆ ಕಣ್ಣು ಸೆಳೆಯುವುದು.**
**ಕವಿಸಮಯದ**
**ಕುಸುಮ ಕೋಮಲತನಕೆ**
**ಧಕ್ಕೆ :**
**ಏನು ಹೇಳುತ್ತೀರಿ ನೀವಿದಕ್ಕೆ ?**

ಚೆನ್ನವೀರ ಕಣವಿಯವರ ಕಾವ್ಯದ ಬಹುದೊಡ್ಡ ಲಕ್ಷಣವೆಂದರೆ ಅದರ ಚಲನಶೀಲತೆ, ಒಂದು ಕವಿತೆಯಂತೆ ಇನ್ನೊಂದಿಲ್ಲ. ಇವಿಷ್ಟೇ ಕಣವಿಯವರ ಕಾವ್ಯ ಲಕ್ಷಣಗಳು ಎಂದು ಯಾರೂ ಹೇಳಲಾರರು. ಇದು ನಿರಂತರ ಬೆಳವಣಿಗೆಯ ಸಹಜ ಗತಿಯ ಕಾವ್ಯ. ವಿನಯ ತುಂಬಿದ ಕಲೆಗಾರಿಕೆಯಿಂದ ಪರಂಪರೆ ಜೊತೆಗೆ ಅನುಸಂಧಾನಕ್ಕೂ, ಸಂಘರ್ಷಕ್ಕೆ ಇಳಿಯದೆ ವಿಭಿನ್ನತೆ ಸಾಧಿಸಿದ ಕಾವ್ಯ ಅವರದು. ಅವರ ವಿಶಿಷ್ಟ ಕವಿತೆಗಳಲ್ಲೊಂದಾದ 'ಜೇನಿಯಾ'ವನ್ನು ಈ ಹಿನ್ನೆಲೆಯಲ್ಲೇ ನೋಡಬೇಕು.

ಮೇಲ್ನೋಟಕ್ಕೆ ಇದೊಂದು ವರ್ಣನಾತ್ಮಕ ಕಾವ್ಯ. ಕವಿತೆಯ ಮುಕ್ಕಾಲು ಭಾಗ ಜೇನಿಯಾ ಎಂಬ ಹೂವಿನ ಗಿಡದ ವರ್ಣನೆ ಇದೆ. ಜೋಡು ಜೋಡೆಲೆ ಬಿಟ್ಟು ಎಣಿಸಿ ಹೇಳಬಹುದಾದಷ್ಟು ಕವಲೊಡೆದು ತುದಿಗೆ ಹೂ ಬಿಟ್ಟು ನಿಂತ ಸಸ್ಯ. ಗಾಳಿ ಬೀಸಿದರೆ ಗಾಸಿಯಾಗದೆ ಬಾಗಿ ಬಳುಕುವ ಚೆಲುವೆ, ಪಾತರಗಿತ್ತಿ ಬಂದು ಕುಳಿತರೆ ತಲೆಯಾಡಿಸುವ ವಯ್ಯಾರಿ, ನೀರಿನಾರೈಕೆ ಬೇಕಿಲ್ಲದ ಈ ಗಿಡದ ವೈಶಿಷ್ಟ್ಯವನ್ನು ಹೇಳುತ್ತಾ

**ಕವಿಸಮಯದ**
**ಕುಸುಮ ಕೋಮಲತನಕೆ**
**ಧಕ್ಕೆ :**
**ಏನು ಹೇಳುತ್ತೀರಿ ನೀವಿದಕ್ಕೆ ?**

ಎನ್ನುತ್ತಾರೆ ಕವಿ. ಈ ಅಂತ್ಯದಿಂದಲೇ ಸರಳವಾಗಿ ಸಾಗಿ ಬಂದ ಕವಿತೆ ಸಂಕೀರ್ಣತೆ ಪಡೆಯುತ್ತದೆ. 'ಹೂವು' ಎಂದರೆ ಹೀಗೆ ಎಂದು ಕಾವ್ಯಗಳಲ್ಲಿ ವರ್ಣಿತವಾಗಿರುವುದಕ್ಕಿಂತ ಜೇನಿಯಾ ಭಿನ್ನವಾಗಿದೆ. ಈ ಭಿನ್ನತೆ ವೈಶಿಷ್ಟ್ಯವೋ ಅಥವಾ ಅಪವಾದವೊ ಎಂಬ ಪ್ರಶ್ನೆಯನ್ನು ಕವಿ ಎತ್ತುತ್ತಾರೆ. ತಾತ್ವಿಕ ನೆಲೆಯಲ್ಲಿ ನೋಡಿದರೆ ಅದು ಪರಂಪರೆ ಮತ್ತು ಪ್ರತಿಭೆಗೆ ಸಂಬಂಧಿಸಿದ ಪ್ರಶ್ನೆ. ಪ್ರತಿಭೆ ಪರಂಪರೆಯ ಮುಂದುವರಿಕೆ ಹೌದು. ಆದರೆ ಅಷ್ಟೆ ಅಲ್ಲ. ಅಷ್ಟೇ ಆಗಿಬಿಟ್ಟರೆ ಅನನ್ಯತೆ ಎಲ್ಲಿಂದ ಬರುತ್ತದೆ? ಹಾಗೆ ಅನನ್ಯತೆ ಪಡೆದರೆ ಪರಂಪರೆಯಿಂದ ಭಿನ್ನವಾಗುವುದಿಲ್ಲವೇ? ಈ ಪ್ರಶ್ನೆಯನ್ನು ಕವಿತೆಗೆ ತರೋಣ. ಜೇನಿಯಾ ಬಾಗಿ ಬಳುಕುವ ಗಿಡ ಹೌದು, ಆದರೆ

ಅದರಲ್ಲಿ ಹೂವಿಗೆ ಅಗತ್ಯವಾದ ನೀರಿನ ದೈನಂದಿನ ಅವಲಂಬನೆ ಇಲ್ಲ, ವಾಸನೆಯ ಸೋಂಕಿಲ್ಲ. ಹೀಗೆಂದು ಗಿಡದ ಚೆಲುವಿಗೆ ಧಕ್ಕೆ ಇಲ್ಲ. ಅದು ಗಟ್ಟಿ ಬಣ್ಣದ ನಿಲುವಿನಲ್ಲೇ ತಟ್ಟನೆ ಕಣ್ಣು, ಸೆಳೆಯುವಂತಿದೆ. ಈ ಅಂಶದ ನೆಲೆಯಲ್ಲಿ ಕವಿತೆಯನ್ನು ಪರಿಶೀಲಿಸಿದರೆ, ದಿಟ್ಟತನದ ಗುಣಕ್ಕೆ ಆರಂಭದಿಂದಲೇ ಮನಸೋತಿದ್ದಾರೆ.

**ದೇಟಿನ ತುದಿಗೆ ಹೂಬಿಟ್ಟ ದಿಟ್ಟತನ**

ಎಂದು ಆರಂಭದಲ್ಲೇ ವರ್ಣಿಸಿದ್ದರೆ, ಅದರ ಜೀವದ್ರವ್ಯ ಹಣತೆ ಹಚ್ಚಿಟ್ಟಂತೆ ಸಂತುಷ್ಟಿಯಿಂದ ಕೂಡಿದೆ. ಅದರ ಒನಪು ಒಯ್ಯಾರಕ್ಕಂತು ಕವಿ ಹೆಚ್ಚು ಆಕರ್ಷಿತರಾಗಿದ್ದಾರೆ. ಹೀಗಿದ್ದೂ ಕುಸುಮ ಕೋಮಲತನಕ್ಕೆ ಧಕ್ಕೆ ಎಂದು ಏಕೆ ಹೇಳುತ್ತಾರೆ ? ಈ ಪ್ರಶ್ನೆಯಲ್ಲೇ ಉತ್ತರವೂ ಅಡಗಿದೆ. ಜೀನಿಯಾ ವರ್ಣನಾತ್ಮಕ ಕಾವ್ಯವಾಗದೆ ಒಂದು ತಾತ್ವಿಕತೆಗೆ ರೂಪಕವಾಗಿದೆ. ಆ ತಾತ್ವಿಕತೆ ಯಾವುದು ಎಂದು ಗಮನಿಸಿದಾಗ ಸ್ತ್ರೀವಾದಿ ನೆಲೆ ಸ್ಪಷ್ಟವಾಗಿ ಗೋಚರಿಸುತ್ತದೆ. ಜೀನಿಯಾ ಆಧುನಿಕ ಸ್ತ್ರೀವಾದಿ ಕಲ್ಪನೆಗೆ ಒಂದು ಅತ್ಯಂತ ವೈಭವಶಾಲಿ ನಿದರ್ಶನವಾಗಿದೆ.

ಆಧುನಿಕ ಮಹಿಳೆ ಕೇವಲ ಕುಟುಂಬದ ಪೋಷಕಿಯಾಗಿ ಉಳಿಯದೆ ಅದನ್ನು ಮೀರಿದ ಸ್ವತಂತ್ರ ಅಸ್ತಿತ್ವವನ್ನು ಗಳಿಸಿಕೊಂಡಿದ್ದಾಳೆ. ಇಂತಹ ಸಾಧ್ಯತೆಯನ್ನು ಫ್ರೆಂಚ್ ಚಿಂತಕಿಯರು 'ಎಸನ್ಷಿಯಲಿಸಂ' ಎಂದು ಕರೆದಿದ್ದಾರೆ. ಇದರ ಅಭಿವ್ಯಕ್ತಿ ಮಾರ್ಗ ಪರಂಪರೆಯಿಂದ ಬಂದ ತರ್ಕ ಕೇಂದ್ರೀಕೃತ ಚಿಂತನೆಗಳನ್ನು ನಿರಾಕರಿಸುತ್ತದೆ. ಸ್ವಂತಿಕೆ ಬರಿಸಲು ಪ್ರಯತ್ನಿಸಿದೆ. ಹೆಲನ್ ಸಿಕ್ಸಿ, ಲ್ಯಾಪ್, ಇರಿಗಿರಿ ಮುಂತಾದ ಲೇಖಕಿಯರು ಇಂತಹ ಹೊಸ ಅಭಿವ್ಯಕ್ತಿಯನ್ನು ಸಾಧಿಸಿದ್ದಾರೆ. ಜೀನಿಯಾ ಇಂತಹ ಹೊಸ ಅಭಿವ್ಯಕ್ತಿಗೆ ಅತ್ಯುತ್ತಮ ರೂಪಕವಾಗಿದೆ. ಈ ನೆಲೆಯಲ್ಲಿ ಕವಿತೆಯನ್ನು ಗಮನಿಸೋಣ, ಆಧುನಿಕ ಮಹಿಳೆಯ ಸರಳತೆಯನ್ನು ಮತ್ತು ದಿಟ್ಟತನವನ್ನು ಆರಂಭದ ಪಂಕ್ತಿ ಹೇಳುತ್ತದೆ. ಅವಳ ಸೃಷ್ಟಿ ಶಕ್ತಿಯ ಬಗ್ಗೆ ಎರಡನೇ ಪಂಕ್ತಿ ಹೇಳುತ್ತದೆ. ಈ ಪಂಕ್ತಿಯಲ್ಲಿ ಸೃಷ್ಟಿಕ್ರಿಯೆ ಅವಳ ಶೋಷಣೆಗೆ ದಾರಿಯಾಗದೆ ಶಕ್ತಿಯಾಗಿ ಬದಲಾಗಿರುವುದನ್ನು ಸೂಕ್ಷ್ಮವಾಗಿ ಗುರುತಿಸುತ್ತದೆ.

ಕವಿತೆಯ ಮುಂದಿನ ಭಾಗ ಪ್ರಬಲ ಚಿಂತನೆಯನ್ನು ಬಿಂಬಿಸುತ್ತದೆ. ಗಾಳಿ ಬೀಸಿದರೆ ಈಗ ತುಸುವೂ ಗಾಸಿಯಾಗದ ಗಟ್ಟಿತನ ಹೆಣ್ಣಿಗೆ ಬಂದಿದೆ. ಹಿಂದೆಲ್ಲ ಗಾಳಿಯಿಂದ ಅಸ್ತಿತ್ವವನ್ನೇ ಕಳೆದುತೊಳ್ಳುತ್ತಿದ್ದವರು ಈಗ ಗಾಳಿಗೆ ಎದುರಾಗುವ ಶಕ್ತಿ ಗಳಿಸಿದ್ದಾರೆ. ವಾಸ್ತವವಾಗಿ ತರ್ಕ ಮೀರುವ ಶಕ್ತಿ ಇದೇ. 'ಬಾಡಿ ಉದುರಿಹೋಗದೆ' ನಿಲ್ಲುವ ಶಕ್ತಿ ಎಂದು ಕವಿ ಇದನ್ನು ಗುರುತಿಸಿದ್ದರೆ ಆಡಾಡುತ್ತ ಪಾತರಗಿತ್ತಿ ಬಂದು ಕುಳಿತಾಗ ತನ್ನನ್ನು ಸುಮ್ಮನೆ ಒಪ್ಪಿಸಿಕೊಳ್ಳುವುದಿಲ್ಲ. ನೋಡಿ ಮೇಲೆ ತಲೆಯಾಡಿಸುವುದು. ಇಲ್ಲಿ ತಲೆಯಾಡಿಸುವುದು ಎಂಬುದಕ್ಕೆ ಒಪ್ಪಿಗೆ ಸೂಚಿಸುವುದು, ನಿರಾಕರಿಸುವುದು ಎರಡೂ ಅರ್ಥಗಳಿವೆ. ಈ ಎರಡೂ ಕೂಡ ಆಧುನಿಕ ಸ್ತ್ರೀವಾದದ ಪ್ರಬಲವಾದ ನೆಲೆ ಎಂಬುದನ್ನು ನಾವು ಇಲ್ಲಿ ಗುರುತಿಸಬಹುದು.

ಈಗಾಗಲೇ ಚರ್ಚಿಸಿದಂತೆ ಕವಿತೆಯ ಕೊನೆಯ ಪಂಕ್ತಿಯನ್ನು ಹೊಸ ನೆಲೆಯಲ್ಲಿ ಅರ್ಥಪೂರ್ಣವಾಗಿ ನೋಡಬಹುದು. ಆಧುನಿಕ ಹೆಣ್ಣಿಗೆ ಪುರುಷನ ಆರೈಕೆ ಬೇಕಿಲ್ಲ. ಅವನನ್ನು ಓಲೈಸುವ ಅನಿವಾರ್ಯತೆಯೇ ಇಲ್ಲ. ಆ ದಿಟ್ಟತನ ತಟ್ಟನೆ ಸೆಳೆಯುವಂತಿದೆ. ಕವಿ ಹೇಳುತ್ತಾರೆ ಹೆಣ್ಣೆಂದರೆ ಭೋಗದ ವಸ್ತು ಎಂದಷ್ಟೇ ಗುರುತಿಸಿದ್ದ ಪರಂಪರೆಗೆ ಸವಾಲಾಗಿ ಆಧುನಿಕ ಹೆಣ್ಣು ಬೆಳೆದು ನಿಂತಿದ್ದಾಳೆ. ಇದು ಕುಸುಮ ಕೋಮಲತನಕ್ಕೆ ಧಕ್ಕೆ ಅಲ್ಲವೆ ಎಂದು ವ್ಯಂಗ್ಯವಾಗಿ ಕೇಳುವ ಮೂಲಕ ಕವಿ ಇದನ್ನು ಸಂಪೂರ್ಣ ತಾತ್ವಿಕವಾಗಿ ಸಮರ್ಥಿಸಿದ್ದಾರೆ.

'ಜೀನಿಯಾ' ಸಂಗ್ರಹದ (೧೯೮೯) ಈ ಕವಿತೆ ರಚನೆಯಾದ ಸಂದರ್ಭ ತೊಂಬತ್ತರ ದಶಕದ ಕೊನೆಯ ಭಾಗ. ಈ ಕಾವ್ಯ ಘಟ್ಟವನ್ನು ಗಮನಿಸಿದರೆ, ಗಮನಾರ್ಹ ಸಂಖ್ಯೆಯಲ್ಲಿ ಕವಯಿತ್ರಿಯರು ಕಾಣಿಸಿಕೊಂಡಿದ್ದರು. ಒಟ್ಟಾಗಿ ಇಪ್ಪೊಂದು ಜನ ಬರೆಯಲು ಆರಂಭಿಸಿದಾಗ ಹೊಸತನದ ಎಳೆ ಕಂಡು ಬಂದಿತ್ತು. ಆದರೆ ಅವರ ಬರಹಗಳನ್ನು ನೋಡುವಾಗ ಒಂದು ತಾತ್ವಿಕ ಬಿಕ್ಕಟ್ಟು ಎದ್ದು ಕಾಣುತ್ತಿತ್ತು. ಅದು ಸಾಹಿತ್ಯದ ರೂಪಗಳು ಸಾಮಾಜಿಕ ರೂಪ ನಡವಳಿಕೆಗಳನ್ನು (Social practices) ಪ್ರತಿನಿಧಿಸುವಾಗ ಪಡೆಯಲಾರದ ತಾತ್ವಿಕತೆ ಕುರಿತ ಪ್ರಶ್ನೆ. ಸಾಮಾನ್ಯವಾಗಿ ಈ ಪ್ರಶ್ನೆಯನ್ನು ಕೆಲವರು ಭಾವುಕ ನೆಲೆಯಲ್ಲಿ ಗುರುತಿಸಿಕೊಂಡರೆ, ಇನ್ನು ಕೆಲವರು ಅಮೂರ್ತ ತಾತ್ವಿಕತೆಯತ್ತ ಹೋದರು. ಇದರಿಂದ ಮಹಿಳಾ ಸಾಹಿತ್ಯ ಸಾಹಿತ್ಯಕ ಸ್ವಹಿತಗಳಲ್ಲೇ ಭಿನ್ನತೆ ಸಾಧಿಸುವಲ್ಲಿ ಯಶಸ್ವಿಯಾಯಿತೇ ವಿನಃ ಸಾಂಸ್ಕೃತಿಕ ನೆಲೆಯತ್ತ ಚಲಿಸಲು ವಿಫಲವಾಯಿತು. ವ್ಯವಸ್ಥಿತ ನಂಬಿಕೆಗಳೇ ಹಲವೆಡೆ ವಿಭಿನ್ನ ರೂಪದಲ್ಲಿ ಬಂದಂತೆ ಭಾಸವಾಗುತ್ತದೆ. ಹೀಗಾಗಿ ಮಹಿಳಾ ಸಾಹಿತ್ಯ ಒಟ್ಟಾಗಿ ಕನ್ನಡ ಸಾಹಿತ್ಯದಲ್ಲಿ ಎಬ್ಬಿಸಬೇಕಾದ ಬಿರುಗಾಳಿಯನ್ನು ಎಬ್ಬಿಸಲಿಲ್ಲ. ಇದಕ್ಕೆ ಕಾರಣವಾದ ತಾತ್ವಿಕ ಬಿಕ್ಕಟ್ಟೇ ಜೀನಿಯಾದ ವಸ್ತುವಾಗಿದೆ. ಈ ಹಿನ್ನೆಲೆಯಲ್ಲಿ ಈ ಕವಿತೆಗೆ ಸಾಂಸ್ಕೃತಿಕವಾಗಿಯೇ ಮುಖ್ಯ ಸ್ಥಾನವಿದೆ.

ನವ್ಯ ಸಾಹಿತ್ಯದ ಪ್ರತಿಮಾ ಮಾರ್ಗಕ್ಕೆ ಈ ಕವಿತೆಯಲ್ಲಿ ಕಣವಿ ಬಳಸಿರುವ ರೂಪಕಕ್ಕೆ ಇರುವ ವ್ಯತ್ಯಾಸವನ್ನು ನಾವು ಗುರುತಿಸಬಹುದು. ಕಣವಿಯವರಿಗೆ ರೂಪಕ ಸ್ಥಾಯಿ ಅಲ್ಲ. ಅದೊಂದು ಅನ್ವೇಷಣಾ ಮಾರ್ಗ. ಇದು ಅವರ 'ಮಣ್ಣಿನ ಮೆರವಣಿಗೆ' ಕವಿತೆಯಲ್ಲಿ ಬಹು ಸ್ಪಷ್ಟವಾಗಿ ಬಂದಿದೆ. ಕಣವಿ ಈ ಕವಿತೆಯಲ್ಲೇ ಬಾಹ್ಯ ವಿವರಣೆಗಳ ಮೂಲಕ ಅಂತರಂಗಕ್ಕಿಳಿವ ತಂತ್ರ ಬಳಸಿದ್ದಾರೆ. ಈ ಅಂಶವೇ ನವ್ಯ ಕಾವ್ಯಕ್ಕಿಂತ ಭಿನ್ನವಾದದ್ದು. ಅವರ ಕಾವ್ಯ ಧರ್ಮದಲ್ಲೇ ಪ್ರಕೃತಿ ಮೂಲಕ ಬದುಕನ್ನು ನೋಡುವ ಪ್ರಯತ್ನವಿದೆ. ಇದಕ್ಕೆ 'ಮನುಷ್ಯ-ಪ್ರಕೃತಿ' ಎಂಬ ಕವಿತೆಯನ್ನು ನಿದರ್ಶನವಾಗಿ ನೋಡಬಹುದು. ಪ್ರಕೃತಿಯ ಚಿತ್ರಣ ಕಣವಿಯವರ ಕವಿತೆಗಳಿಗೆ ಒಂದು ಕ್ರಿಯಾಪ್ರಪಂಚವನ್ನು ಕಟ್ಟಿಕೊಡುತ್ತದೆ. ಅವರು ನೀಡುವ ಪ್ರಕೃತಿ ವರ್ಣನೆಗಳೆಲ್ಲ ಮೂಲತಃ ಮಾನವನ ಬದುಕನ್ನೇ ಕುರಿತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಜೀನಿಯಾ ಕವಿತೆ ಕಣವಿಯವರ ಕಾವ್ಯಧರ್ಮಕ್ಕೆ ನಿದರ್ಶನವಾಗಿವೆ. ಲೇಖನದ ಆರಂಭದಲ್ಲಿ ಹೇಳಿರುವ ಕಣವಿಯವರ ಕಾವ್ಯದ ಚಲನಶೀಲತೆ ಕುರಿತು ಗಮನಿಸಿದರೆ ಮೊದಲ ಸಂಕಲನ 'ಕಾವ್ಯಾಕ್ಷಿ'ಯಲ್ಲಿನ 'ಕಾಡು ಮಲ್ಲಿಗೆ',

'ಚಂದ್ರೋದಯ', 'ಕೋಗಿಲೆ' ಮುಂತಾದ ಕವಿತೆಗಳಲ್ಲಿನ ತಾತ್ವಿಕತೆ ಹಂತ ಹಂತವಾಗಿ ಬೆಳೆಯುತ್ತಾ ಬಂದಿದೆ. 'ಮಣ್ಣಿನ ಮೆರವಣಿಗೆ' ಸಂಕಲನದಲ್ಲಿ ಅದಕ್ಕೆ ಕ್ರಿಯಾಶೀಲ ರೂಪ ಬಂದಿದೆ. 'ಜೀವಧ್ವನಿ'ಯ ವೇಳೆಗೆ ಚಿಂತನಶೀಲತೆ ಮೇಳೈಸಿದೆ. ಈ ಎರಡರ ಸಂಲಗ್ನತ್ವ ಜೀನಿಯಾ ಸಂಕಲನದಲ್ಲಿ ಕಾಣುತ್ತದೆ. ಈ ಸಂಕಲನದಲ್ಲಿನ 'ಈ ವರ್ಷ ಕಂಡ ಮಳೆಗಾಲ' ಈ ಪರಂಪರೆಯ ಶ್ರೇಷ್ಠ ಕವಿತೆ. ಹೀಗೇ ಗಮನಿಸಿದರೆ 'ಶಿಶಿರದಲ್ಲಿ ಬಂದ ಸ್ನೇಹಿತ' ಸಂಕಲನದ 'ಮತ್ತೆ ನೀಲಿಯ ಹೂವು' ಜೀನಿಯಾ ದ ತಾತ್ವಿಕ ವಿಸ್ತರಣೆಯಾಗಿದೆ. ಆ ಕವಿತೆ ಭಾವಾನುವಾದವಾದರೂ ಕಣವಿ ಕಾವ್ಯದಲ್ಲಿ ಹರಿಯುತ್ತ ಬಂದಿರುವ ತಾತ್ವಿಕತೆಯ ಗಟ್ಟಿ ನೆಲೆಯಾಗಿದೆ.

ಬೇಲಿಯಾಚೆಗೆ ನೀಲಿಗಣ್ಣು ಪಿಳುಕಿಸಿ, ಬಳುಕಿ
ಬಾಡಿದರು, ಇರುಳು ಬರುವುದು ತೆರೆದು ಬಾನಬುರುಕಿ

ಎಂಬ ಆಶಾವಾದದಲ್ಲಿ ಮನುಕುಲವನ್ನು ನೋಡುವ ಕವಿ ಚಿಂತನೆಗೆ ನಿದರ್ಶನವಾಗಿದೆ. ಒಟ್ಟಾಗಿ ಕಣವಿ ಕಾವ್ಯದ ಕುರಿತ ಚರ್ಚೆಗಳಲ್ಲಿ ಜೀನಿಯಾ ಅಷ್ಟೇ ಏಕೆ, ಆ ಸಂಕಲನದ ಕವಿತೆಗಳು ಅಷ್ಟಾಗಿ ಕಂಡು ಬರುವುದಿಲ್ಲ. ಇದಕ್ಕೆ ಕಾರಣಗಳು ಏನೇ ಇರಲಿ ಅಂತಹ ಚರ್ಚೆಗೆ ಇದು ಸಕಾಲವಾಗಿದೆ.

ಎನ್.ಎಸ್. ಶ್ರೀಧರಮೂರ್ತಿ.

# ೬೩. ಮನುಷ್ಯ - ಪ್ರಕೃತಿ

ತಿರಸ್ಕೃತ ಕಸ ಕಡ್ಡಿ, ಎಲೆ ಕಳಿತು ಗೊಬ್ಬರವಾಗಿ
ಮೆಲ್ಲಗೆ ಬೀಜ ಮೊಳೆತು, ಪುರಸ್ಕರಿಸಿ ಹಳತು-ಹೊಸತು
ಸಸಿ ಮೇಲೆದ್ದು, ಕಣ್ ಸೆಳೆದು ಬೆಳೆದು ಗಾಳಿಗಲ್ಲಾಡುತ್ತಲೇ
ನೆಟ್ಟಗೆ ಗಟ್ಟಿತನ ಪಡೆದು, ದಿಕ್ಕುದಿಕ್ಕಿಗೆ ಸ್ವತಂತ್ರ
ಟೊಂಗೆಗಳ ಚಾಚಿ ವಿವಿಧ ಭಂಗಿಯಲಿ-
ಗಾಳಿವೇಗಕ್ಕೆ ತಕ್ಕ ನಾಟ್ಯ, ಬಿಟ್ಟುಕೊಡದಂತೆ ತನ್ನ
ದಾರ್ಷ್ಟ್ಯ, ಸೂರ್ಯ ಮೇಲೇರಿ ಕೆಳಗಿಳಿದಂತೆ ನೆರಳು
ಚಿತ್ರ ವಿಚಿತ್ರ ಬಿಡಿಸಿ, ಮೋಡ ಅಡ್ಡೈಸಿದರು ಮೂಡು
ಕೆಡದಂತೆ ಮೂಡಿಸುವ ಕಲೆ.

ನೂರುಬಗೆ ಹಕ್ಕಿ ಅತಿಥಿಗಳಂತೆ, ಇಲ್ಲ ಬಂಧು ಬಳಗವೇ
ಎಂಬಂತೆ ನಿಶ್ಚಿಂತ ಕುಳಿತು, ದೂರದೂರದ ಅರಣ್ಯದ ಸುದ್ದಿ
ಚಿಲಿಪಿಲಿಸಿ, ಒಂದಿಷ್ಟು ಕೊರಳು ಸರಿಪಡಿಸಿ, ಹಾದಿ
ಚುಂಚು ತಿಕ್ಕಿ, ಗರಿ ಹಿಗ್ಗಲಿಸಿ ಕೊಡವಿ, ಹಿಕ್ಕೆ ಹಾಕಿ
ಮತ್ತಾವ ನೆನಪೊ, ಸಿಕ್ಕತ್ತ ಹಾರಿ ಮರೆಯಾಗುವವು
ಆಳದ ಬೇರಿನಿಂದ ನಿರಾಳ ಟೊಂಗೆ -ಟಿಸಿಲಿನವರೆಗು
ಮರಮರದ ಮರ್ಮರ, ವಿಚಿತ್ರ ನೋವು-ನಲಿವು.

ಸ್ವಲ್ಪ ಕಾಲೆತ್ತಿರಿಸಿದರೆ ಕನಸುಗಳು ಕೈಗೆಟಕಿ
ಬಿಡುವಂತೆ ಹೂ ಬಿಟ್ಟು, ಎಲೆಯ ಮರೆಯಲ್ಲಿ ಕೆಲವು,
ಹೊರಗೂ ಹಲವು ಹಣ್ಣು ಕಾಯ್‌ಗೊಂಚಲು
ತೂಗಿ, ಮೈಚಳಿ ಬಿಟ್ಟು ಋತುಮಾನಕ್ಕೆ ತಕ್ಕಂತೆ-

ಶಬ್ದ ಕೋಶಗಳಲ್ಲಿ ಸಿಗದ ಬಣ್ಣಗಳ ಎಲೆ ಎಲೆಯಲ್ಲಿ
ಹಿಡಿದು ಬಯಲಿಗುಡುಗೊರೆಯಾಗಿ ಮುಗಿಲೆಡೆಗೆ ದೃಷ್ಟಿ.
ಮಳೆಯಲ್ಲಿ ತಟಸ್ಥ, ಅಂತರ್ಮುಖಿಯಾಗಿ ನೆನೆದು
ನಿಂತ ಮೇಲೂ ಎಲೆದುಟಿಯಲ್ಲಿ ತಟಪಟ ಮಂತ್ರ.

ಎಲೆಯುದುರುವಾಗ ನಿರ್ಭಾವದಲಿ ನಿಂತ, ಗಾಳಿಯಲ್ಲಿ
ಗಿರಿಗಿರಿ ತಿರುಗಿ, ನೆಲವಪ್ಪುವುದ ನೋಡುವ ಸಂತ.
ಇಡಿಯ ಮರವೀಗ ಎಲೆಯ ಮರ್ಮರವಿರದ ಮೂಲಾಕೃತಿ,
ಬರುವ ಸಂವತ್ಸರಕ್ಕೆ ಬರೆದ ಭರವಸೆಯ ನಕ್ಷೆ.
ಕಾಯುತ್ತದೆ ವಸಂತಕ್ಕೆ ನೆನಪು-ಹಸಿಯುಳಿಸಿಕೊಂಡು
ಅನುಭವಿಸುತ್ತ ಈ ಬಗೆಯ ಬರಡು ಶಿಕ್ಷೆ.

ಕಾಯಲಾರದೆ ಮನುಷ್ಯ ಕೊಡಲಿಯೆತ್ತುತ್ತಾನೆ:
ಮಾಯಲಾರದ ಗಾಯ ಭವಿಷ್ಯಕ್ಕೆ, ಭೂತಕ್ಕೆ ಬಲಿ?
ಒಂದೊಂದು ಏಟಿಗೂ ಒಂದೆಡೆಗೆ ಭೂಕಂಪ
ಮತ್ತೊಂದೆಡೆಗೆ ಚಂಡಮಾರುತ, ನೂರು ಅಪಘಾತ,
ಕಡಿದ ಟೊಂಗೆಯ ಬದಿಗೆ ಚಿಗುರು ಪಿಳಿಪಿಳಿ ಕಣ್ಣು;
ಅನುಮಾನಿಸುವ ಮೊಗ್ಗೆ; ಈ ಮನುಷ್ಯನ ಬಗ್ಗೆ
ಎಲ್ಲೆಡೆ ಸಂಶಯವೆ. ಇದರ ತಣ್ಣೆಳಲಲ್ಲಿ ಕುಳಿತು
ನಲ್ಲೆಯ ಗಲ್ಲ ಮುಟ್ಟಿ, ಮಗುವ ಮುದ್ದಿಸಿದವನು
ಹೂ ಹಣ್ಣು ಕಾಯಿಗಳ ಪಡೆದು ಗುಡಿಗೆ ಹೋದವನು
ಯಾರು? ಹೌದು, ಇವನೆ, ಈ ಮನುಷ್ಯನೆ.

ಚೆನ್ನವೀರ ಕಣವಿಯವರ ಒಂದು ಮಹತ್ವದ ಕವಿತೆ 'ಜೀನಿಯಾ' ಸಂಗ್ರಹದ ಮನುಷ್ಯ-ಪ್ರಕೃತಿ', ಕವಿತೆಯ ಶೀರ್ಷಿಕೆಯೇ ಅರ್ಥಪೂರ್ಣ. ಇದು ಮನುಷ್ಯನ ಪ್ರಕೃತಿಯ ಕಥನವೋ, ಪ್ರಕೃತಿ ಮತ್ತು ಮನುಷ್ಯನ ಸಂಬಂಧದ ಕಥನವೋ ಅಥವಾ ಪ್ರಕೃತಿಯ ಕುರಿತಾಗಿ ಮನುಷ್ಯನ ಚಿಂತನವೋ? ಈ ಮೇಲಿನ ಯಾವುದೇ ವಿಚಾರಕ್ರಮಗಳು ಮನುಷ್ಯ ಮತ್ತು ಪ್ರಕೃತಿಯು ಭಿನ್ನವಾಗಿರುವ ಎರಡು ಸಂಗತಿಗಳೆಂದು ಸೂಚಿಸುತ್ತಿದೆಯಲ್ಲವೇ ? ಅಂದರೆ ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಛಿದ್ರತೆಯನ್ನು ಕವಿತೆ ವಸ್ತುವಾಗಿಸಿಕೊಂಡಿದೆಯೇ?

ಈ ಕವಿತೆಯಲ್ಲಿ ಐದು ಘಟಕಗಳಿವೆ. ಮೊದಲ ಘಟಕದಲ್ಲಿ ಬರುವ ಪದಗಳ ಆಯ್ಕೆಯಲ್ಲಿ ಮತ್ತು ಪ್ರಯೋಗದಲ್ಲಿ ಕವಿಯ ಕೌಶಲ ಎದ್ದು ಕಾಣುತ್ತದೆ. ಇಲ್ಲಿ 'ಮೊಳೆಯುವ, ಮೇಲೇಳುವ,

ಬೆಳೆಯುವ, ನರ್ತಿಸುವ, ಚಿತ್ರಬಿಡಿಸುವ' ಕ್ರಿಯೆಗಳು ನಿಸರ್ಗದ ವಸ್ತುವಿವರಣೆಗಳಷ್ಟೇ ಅಲ್ಲ, ಸೃಜನಶೀಲ ಮನಸ್ಸಿನ ಮನುಷ್ಯನ ಬದುಕೂ ಆಗಿದೆ.

ಕವಿತೆಯ ಎರಡನೆಯ ಭಾಗದಲ್ಲಿ ನಿಸರ್ಗದ ವಿವರಗಳೆಲ್ಲ ಗೃಹಸ್ಥನೊಬ್ಬನ ಚಿತ್ರದಂತೆ ರೂಪುಗೊಳ್ಳುತ್ತದೆ. ಆದರೆ ಗೃಹಸ್ಥನೇ ಆಗಿ ರೂಪುಗೊಳ್ಳುವುದಿಲ್ಲ. ಅಂದರೆ ಕವಿತೆಯ ಈ ಭಾಗದಲ್ಲಿ ಬಳಸುವ 'ಅತಿಥಿಗಳಂತೆ' ಮತ್ತು 'ಬಳಗವೇ ಎಂಬಂತೆ' ಎಂಬ ಶಬ್ದಗಳು ನಿಸರ್ಗವನ್ನು ವರ್ಣಿಸಲು ಮನುಷ್ಯ ಬದುಕಿನ ಕ್ರಮಗಳನ್ನು ಕವಿ ಆಯ್ಕೆ ಮಾಡಿಕೊಂಡಿರುವುದನ್ನು ಹೇಳುತ್ತವೆ.

ವಿಮರ್ಶಕ ಡಿ.ಆರ್. ನಾಗರಾಜರು ಕಣವಿಯವರ ಕಾವ್ಯ ಮಾರ್ಗವನ್ನು ಭಾವಗೀತಾತ್ಮಕ ವಾಸ್ತವತೆ ಎಂದು ಹೆಸರಿಸುತ್ತಾರೆ. ಜೊತೆಗೆ ಕಣವಿಯವರ ಸಂವೇದನೆಗಳು ಪ್ರಕೃತಿಯೊಳಗೆ ಭಾಷಾಂತರವಾಗುವುದನ್ನು ಸರಿಯಾಗಿಯೇ ಗುರುತಿಸುತ್ತಾರೆ. (-ಶಕ್ತಿ ಶಾರದೆಯ ಮೇಳ - ಡಿ. ಆರ್. ನಾಗರಾಜ್ ಪು. ೨೪೧)

ಅಂತೆಯೇ - ನೂರು ಬಗೆ ಹಕ್ಕಿ ಅತಿಥಿಗಳಂತೆ, ಇಲ್ಲ ಬಂಧು ಬಳಗವೇ
ಎಂಬಂತೆ ನಿಶ್ಚಿಂತ ಕುಳಿತು, ದೂರ ದೂರದ ಅರಣ್ಯದ ಸುದ್ದಿ
ಚಿಲಿಪಿಲಿಸಿ, ಒಂದಿಷ್ಟು ಕೊರಳು ಸರಿಪಡಿಸಿ, ಹಾಡಿ
ಚುಂಚುತಿಕ್ಕಿ ಗರಿಹಿಗ್ಗಲಿಸಿ ಕೊಡವಿ, ಹಿಕ್ಕೆ ಹಾಕಿ-
ಮತ್ತಾವ ನೆನಪೊ, ಸಿಕ್ಕತ್ತ ಹಾರಿ ಮರೆಯಾಗುವವು.
ಆಳದ ಬೇರಿನಿಂದ ನಿರಾಳ ಟೊಂಗೆ ಟಿಸಿಲಿನವರೆಗು
ಮರಮರ ಮರ್ಮರ, ವಿಚಿತ್ರ ನೋವು ನಲಿವು-

ಎಂಬ ಈ ಸಾಲುಗಳಲ್ಲಿ ಮರಗಳ -ಹಕ್ಕಿಗಳ ನಿಗೂಢ ಸಂಬಂಧದ ಅಭಿವ್ಯಕ್ತಿ ಇದೆ. ಈ ಸಂಬಂಧವು ದಟ್ಟ ವಿವರಗಳ ಜೋಡಣೆಯಲ್ಲಿ ಕವಿಯ ಸಂವೇದನೆಗಳು ನಿಸರ್ಗದೊಳಗೆ ಭಾಷಾಂತರಗೊಂಡಿವೆ. ಈ ವರ್ಣನೆಯ ವೈಶಿಷ್ಟ್ಯದಲ್ಲಿ ಮನುಷ್ಯನೂ ಒಂದಾಗಿದ್ದಾನೆ. ವಿಚಿತ್ರ ನೋವು ನಲಿವುಗಳು ಮರದ ಮರ್ಮರಗಳಲ್ಲಿ ಅಭಿವ್ಯಕ್ತಿಗೊಂಡು ಗಟ್ಟಿ ಸಂಬಧದ ಅಭೀಪ್ಸೆಯನ್ನು ನಿಸರ್ಗವು ವ್ಯಕ್ತಪಡಿಸಿದೆ.

ಕವಿತೆಯ ಮುಂದಿನ ಭಾಗದಲ್ಲಿ ಗೃಹಸ್ಥನೊಬ್ಬ ತಟಸ್ಥನಾಗಿ ಅಂತರ್ಮುಖಿಯಾಗಿ ಮುಗಿಲೆಡೆಗೆ ದೃಷ್ಟಿ ನೆಟ್ಟು ನಿಂತ ಸಂತರಂತೆ ಮರದ ಚಿತ್ರವಿದೆ. ಇಂಥ ಘಳಿಗೆಯಲ್ಲಿ ಕವಿಗೆ ನಿಸರ್ಗ ಹೀಗೆ ಕಾಣುತ್ತದೆ.

ಎಲೆಯುದುರುವಾಗ ನಿರ್ಭಾವದಲಿ ನಿಂತ, ಗಾಳಿಯಲಿ
ಗಿರಗಿರಿ ತಿರುಗಿ, ನೆಲವನಪ್ಪುವುದ ನೋಡುವ ಸಂತ.

ಇಡಿಯ ಮರವೀಗ ಎಲೆಯ ಮರ್ಮರವಿರದ ಮೂಲಾಕೃತಿ. ಇದು ಸಂತನೊಬ್ಬನ ಪ್ರಕೃತಿಯ ಚಿತ್ರದಂತೆಯೇ, ಚಳಿಗಾಲದ ನಿಸರ್ಗದ ಚಿತ್ರವೂ ಹೌದು. ಕವಿತೆಯು ಮತ್ತೆ ಮತ್ತೆ ಮನುಷ್ಯ ಮತ್ತು ನಿಸರ್ಗದ ಅವಿನಾಭಾವದ ಸಂಬಂಧವನ್ನು ಬೇರೆ ಬೇರೆ ವಸ್ತು ವಿವರಗಳ ಮೂಲಕ ಹೇಳುತ್ತದೆ. ಬರುವ ವಸಂತ ಋತುವಿಗೆ ಕಾಯುತ್ತಾ ನಿಲ್ಲುವ ಮರಕ್ಕೆ (ಪ್ರಕೃತಿಗೆ) 'ಕಾಯುವಿಕೆ' ಶಿಕ್ಷೆಯಾದರೂ ಜೊತೆಗೇ ಅದಮ್ಯ ಆಶಾವಾದವೂ ಇದೆ. ಕನಸು, ಭರವಸೆಗಳೆಲ್ಲ ಕವಿತೆಯೊಳಗೆ ಹೆಪ್ಪುಗಟ್ಟುತ್ತವೆ.

ನವೋದಯ ಕಾಲದ ಆದರ್ಶ, ಆಶಾವಾದಗಳು ಕವಿತೆಯ ಈ ಸಾಲುಗಳಲ್ಲಿ ಸ್ಪಷ್ಟವಾಗುತ್ತವೆ. 'ಬರುವ ಸಂವತ್ಸರಕೆ ಭರವಸೆಯ ನಕ್ಷೆಯಾಗಿ' ನಿಂತ ಬರಡು ಮರ ಅನೇಕ ವಿಚಾರಗಳನ್ನೂ ಭಾವನೆಗಳನ್ನೂ ರವಾನಿಸುತ್ತದೆ. ಇಲ್ಲಿ ಪ್ರಕೃತಿಯ ಸಂಗತಿಗಳು ಭಾವಗೀತಾತ್ಮಕವಾಗಿ ಭಾಷಾಂತರಗೊಂಡು ಪ್ರಕೃತಿಯೇ ಆದ ಮನುಷ್ಯ ಕಾಣೆಸಿಕೊಂಡಿದ್ದಾನೆ.

ಕವಿತೆ ಮುಂದಿನ ಭಾಗದಲ್ಲಿ ಬೇರೆಯ ತಿರುವನ್ನು ಪಡೆಯುತ್ತದೆ. ಕವಿತೆಯ ಮುಖ್ಯ ಘಟ್ಟ ಇದೆನ್ನಬಹುದು. ಇಲ್ಲಿ ಕಣವಿಯವರು ಜೀವಕೇಂದ್ರಿತ ಪ್ರಕೃತಿಯ ವಿವರಗಳನ್ನು ಭಗ್ನಗೊಳಿಸುವ ಮನುಷ್ಯನ ಪ್ರಕೃತಿಯನ್ನು ನೇರವಾಗಿ ಹೇಳಿಬಿಡುತ್ತಾರೆ. ಇಲ್ಲಿ ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಛಿದ್ರವಾಗಿರುವುದನ್ನು ಗುರುತಿಸಬಹುದು. ಕಾಯುತ್ತಿರುವ ಮರಕ್ಕೆ

**ಕಾಯಲಾರದ ಮನುಷ್ಯ ಹೊಡಲಿಯೆತ್ತುತ್ತಾನೆ.**
**ಮಾಯಲಾರದ ಗಾಯ ಭವಿಷ್ಯಕ್ಕೆ; ಭೂತಕ್ಕೆ ಬಲಿ ?**
**ಒಂದೊಂದು ಏಟಿಗೂ ಒಂದೆಡೆಗೆ ಭೂಕಂಪ**
**ಮತ್ತೊಂದೆಡೆ ಚಂಡಮಾರುತ, ನೂರು ಅಪಘಾತ**

ಇಡೀ ಜಗತ್ತಿನ ಅವ್ಯಕ್ತ ನಿಗೂಢ ಸರಪಳಿಯನ್ನು ತಮ್ಮ ದಿಮಾಕಿನಿಂದ ಕತ್ತರಿಸಿದ ಮನುಷ್ಯ ಇಲ್ಲಿದ್ದಾನೆ. ಈ ಆಧುನಿಕ ಮನುಷ್ಯನ ಅಹಂಕಾರವನ್ನು 'ಕಡಿದ ಟೊಂಗೆಯ ಬದಿಗೆ ಚಿಗುರು ಪಿಳಿಪಿಳಿ ಕಣ್ಣು' ಬಿಡುತ್ತಾ ಗಮನಿಸುತ್ತಿದೆ.

**ಅನುಮಾನಿಸುವ ಮೊಗ್ಗೆ; ಈ ಮನುಷ್ಯನ ಬಗ್ಗೆ**
**ಎಲ್ಲೆಡೆಗು ಸಂಶಯವೆ.**

-ಕವಿತೆಯ ಈ ಸಾಲುಗಳಲ್ಲಿ ಮನುಷ್ಯ ತಾನು ನಿಸರ್ಗದಿಂದ ಬೇರೆಯಾಗಿದ್ದಾನೆ. ಹೌದು, ಬೇರೆಯೇ ಇದ್ದಾನೆ ಎಂಬ ಭಾವ ಬೆಳೆಯುತ್ತಾ ಹೋಗುತ್ತದೆ. ಈ ಧ್ವನಿ ಕಣವಿಯವರ ಇತರ ಪ್ರಕೃತಿ ಗೀತೆಗಳಲ್ಲಿ ಅನಾವರಣಗೊಳ್ಳುತ್ತದೆ. ಇದೇ ಸಂಕಲನದ (ಜೀನಿಯಾ) 'ಹೂವು ಹೊರಳುವವು' ಎಂಬ ಕವಿತೆಯಲ್ಲಿ ಕಣವಿಯವರು ನಿಸರ್ಗದ ಎದುರು ಮನುಷ್ಯನ ಮಿತಿಯನ್ನು ಗುರುತಿಸುವುದು ಹೀಗೆ :

**ಹೂವು ಹೊರಳುವವು ಸೂರ್ಯನ ಕಡೆಗೆ**
**ನಮ್ಮ ದಾರಿ ಬರಿ ಚಂದ್ರನವರೆಗೆ**

ಇಲ್ಲಿ ಕವಿಗೆ ಪ್ರಕೃತಿ ಮತ್ತು ಮನುಷ್ಯ ಸಂಬಂಧದ ಬಗೆಗೆ ಸ್ಪಷ್ಟ ಕಲ್ಪನೆಯಿದೆ.

ಈ ಸಂದರ್ಭದಲ್ಲಿ ವರಕವಿ ಬೇಂದ್ರೆಯವರ 'ಯುಗಾದಿ' ಪದ್ಯದ ಧ್ವನಿಯೂ ಕೇಳಿಬರುತ್ತದೆ. ಇಲ್ಲಿ ಬೇಂದ್ರೆಯವರು

'ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ' ಎನ್ನುತ್ತಾ ಎಲ್ಲೆಡೆಗೆ ಹೊಸತನವನ್ನು ಕಂಡು ಹರ್ಷಿಸುತ್ತಾ ಒಂದಾಗುತ್ತಾ 'ನಮ್ಮನಷ್ಟೆ ಮರೆತಿದೆ' ಎನ್ನುತ್ತಾರೆ.

ಇಲ್ಲಿ ಇಡೀ ಪರಿಸರವೇ ಒಂದಾಗಿರುವಾಗ, ಒಂದಾಗದ ಮನುಷ್ಯನ ಪ್ರಕೃತಿಯ ಸ್ಪಷ್ಟ ಚಿತ್ರವಿದೆ.

ಕಣವಿಯವರು ಕವಿತೆಯ ಕೊನೆಯಲ್ಲಿ ಹೀಗೆನ್ನುತ್ತಾರೆ:

**ಇದರ ತಣ್ಣೆಳಲಲ್ಲಿ ಕುಳಿತು**
**ನಲ್ಲೆಯ ಗಲ್ಲ ಮುಟ್ಟಿ ಮಗುವ ಮುದ್ದಿಸಿದವನು**
**ಹೂ ಹಣ್ಣು ಕಾಯಿಗಳ ಪಡೆದು ಗುಡಿಗೆ ಹೋದವನು**
**ಯಾರು? ಹೌದು, ಇವನೆ, ಈ ಮನುಷ್ಯನೇ -**

ಪ್ರಸ್ತುತ ಕವಿತೆಯ ಈ ಮುಕ್ತಾಯ ಮನುಷ್ಯನ ಆಳದಲ್ಲಿರುವ ಸ್ವಾರ್ಥವನ್ನು ನಮ್ಮೆದುರು ಇಡುತ್ತದೆ. ಕವಿ ಯಾವ ಪ್ರಶ್ನೆಯನ್ನೂ ಹಾಕದೇ, ಯಾವ ಉತ್ತರವನ್ನೂ ನಿರೀಕ್ಷಿಸದೆ ಪೂರ್ಣ ವಿರಾಮ ಇಟ್ಟುಬಿಡುತ್ತಾರೆ. ಜೀವಕೇಂದ್ರಿತ ಪ್ರಕೃತಿಯ ಕಥನವು ಮನುಷ್ಯ ಪ್ರಕೃತಿಯ ಸ್ವಭಾವವನ್ನು ಚಿತ್ರಿಸುವುದರೊಂದಿಗೆ ಮುಕ್ತಾಯವಾಗುತ್ತದೆ.

ಕಣವಿಯವರ ಪ್ರಕೃತಿ ಗೀತೆಯೊಳಗೆ ನಿಸರ್ಗದ ಸಣ್ಣಪುಟ್ಟ ವಿವರಗಳೂ ಭಾವಗೀತಾತ್ಮಕವಾಗಿ ಅಭಿವ್ಯಕ್ತಗೊಂಡು ವಾಸ್ತವಿಕ ಪ್ರಜ್ಞೆಯಾಗಿ ರೂಪುಗೊಳ್ಳುವುದನ್ನು ಈಗಾಗಲೇ ಕನ್ನಡ ವಿಮರ್ಶೆ ಗುರುತಿಸಿದೆ. ಆ ನಿಲುವಿಗೆ ಸ್ಪಷ್ಟ ಉದಾಹರಣೆ 'ಮನುಷ್ಯ-ಪ್ರಕೃತಿ'ಯಾಗಿದೆ.

**ಕೆ.ಆರ್. ಸಿದಗಂಗಮ್ಮ.**

# ೬೪. ಹೂವು ಹೊರಳುವವು ಸೂರ್ಯನ ಕಡೆಗೆ

ಹೂವು ಹೊರಳುವವು ಸೂರ್ಯ ಕಡೆಗೆ
ನಮ್ಮದಾರಿ ಬರಿ ಚಂದ್ರನವರೆಗೆ, -
ಇರುಳಿನ ಒಡಲಿಗೆ, ದೂರದ ಕಡಲಿಗೆ
ಮುಳುಗಿದಂತೆ, ದಿನ ಬೆಳಗಿದಂತೆ
ಹೊರ ಬರುವನು ಕೂಸಿನ ಹಾಗೆ.

ಜಗದ ಮೂಸೆಯಲಿ ಕರಗಿಸಿ ಬಿಡುವನು
ಎಲ್ಲ ಬಗೆಯ ಸರಕು :
ಅದಕೆ ಅದರ ಗುಣದೋಷಗಳಂಟಿಸಿ-
ಬಿಡಿಸಿಬಿಟ್ಟ ತೊಡಕು.

ಗಿಡದಿಂದುದುರುವ ಎಲೆಗಳಿಗೂ ಮುದ-
ಚಿಗುರುವಾಗಲೂ ಒಂದೆ ಹದ.
ನೆಲದ ಒಡಲಿನೊಳಗೇನು ನಡೆವುದೋ
ಎಲ್ಲಿ ಕುಳಿತಿಹನೊ ಕಲಾವಿದ.

ಬಿಸಿಲ ಧಗೆಯ ಬಸಿರಿಂದಲೆ ಸುಳಿವುದು
ಮೆಲು ತಂಗಾಳಿಯು ಬಳಿಗೆ.
ಸಹಿಸಿಕೊಂಡ ಸಂಕಟವನು ಸೋಸಲು
ಬಂದೆ ಬರುವದಾ ಗಳಿಗೆ.

ಸಹಜ ನಡೆದರೂ ಭೂಮಿಯ ಲಯದಲಿ
ಪದಗಳನಿರಿಸಿದ ಹಾಗೆ.
ವಿಶ್ವದ ರಚನೆಯ ಹೊಳಹಿನಲ್ಲಿ
ಕಂಗೊಳಿಸಿತು ಕವಿತೆಯು ಹೀಗೆ.

ಚೆನ್ನವೀರ ಕಣವಿಯವರ ಎಲ್ಲ ಕವನಸಂಗ್ರಹಗಳಲ್ಲಿಯೂ ನಿಸರ್ಗ ಕುರಿತ ಕವಿತೆಗಳು ಇದ್ದೇ ಇವೆ. ನವೋದಯ ಕಾವ್ಯಮನೋಧರ್ಮದಿಂದ ಕಾವ್ಯರಚನೆಗೆ ಆರಂಭಿಸಿದ ಅವರಲ್ಲಿ ಇದು ಬಹಳ ಸಹಜವಾದದ್ದೇ. ಮುಂದೆ ಪ್ರಚಲಿತವಾದ ನವ್ಯ ಕಾವ್ಯಮಾರ್ಗದಿಂದಲೂ ಅವರು ಹಲವು ಅಪೇಕ್ಷಿತ ಅಂಶಗಳನ್ನು ತಮ್ಮ ಅಭಿವ್ಯಕ್ತಿ ರೀತಿಯಲ್ಲಿ ಅಳವಡಿಸಿಕೊಂಡು ತಮ್ಮ ಕಾಲದ ಸಮರ್ಥ ಕವಿಗಳಲ್ಲಿ ಒಬ್ಬರೆನಿಸಿಕೊಂಡರು. ಕಣವಿ ಕಾವ್ಯದ ಎಲ್ಲ ಪ್ರವಾಹಗಳಲ್ಲಿಯೂ ಮಿಂದು ಎದ್ದವರು, ಯಾವುದರಲ್ಲಿಯೂ ಮುಳುಗಿ ಹೋದವರಲ್ಲ. ಪ್ರತಿಯೊಬ್ಬ ಕವಿಯೂ ಮಾಡಬೇಕಾದದ್ದು ಇದನ್ನೇ. ಒಂದೇ ಕಾವ್ಯ ರೀತಿಗೆ ಹಠದಿಂದ ಅಂಟಿಕೊಳ್ಳುವುದನ್ನು ನಿಷ್ಠೆಯೆಂದು ಕರೆದು ಪ್ರಶಂಸೆ ಮಾಡುವುದಾಗಲೀ ಭಿನ್ನ ಕಾವ್ಯಗಳ ಉತ್ತಮ ಅಂಶಗಳನ್ನು ಹಾಳತವಾಗಿ ಮೈಗೂಡಿಸಿಕೊಂಡು ಸ್ವತಂತ್ರವಾದ ವಿಶಿಷ್ಟ ಕಾವ್ಯವ್ಯಕ್ತಿತ್ವ ರೂಢಿಸಿಕೊಳ್ಳುವುದನ್ನು ಮಾರ್ಗಸಂಕರವೆಂದು ಅಲ್ಲಗಳೆಯುವುದಾಗಲೀ ಸಲ್ಲದ ಮಾತಾಗುತ್ತದೆ. ದುರದೃಷ್ಟವಶಾತ್ ನಮ್ಮ ಹಲವು ವಿಮರ್ಶಕರಲ್ಲಿ ಇಂಥ ಬೆಳವಣಿಗೆಯನ್ನು ಉದಾಸೀನವಾಗಿ ಕಂಡು ಅದನ್ನು ಅಲ್ಲಗಳೆಯುವ ಮಾದರಿ ಎನಿಸಿಕೊಂಡಿದ್ದ ಇಂಗ್ಲಿಷ್ ಸಾಹಿತ್ಯದಲ್ಲೇ ಹೀಗಾಗದಿರುವುದನ್ನು ಗಮನಿಸಬೇಕು. ಯೇಟ್ಸ್ ಕವಿ ತನ್ನ ಮೊದಲ ಕೆಲವು ಕಾವ್ಯಸಂಕಲನಗಳನ್ನು ರೋಮ್ಯಾಂಟಿಕ್ ಕಾವ್ಯಮಾರ್ಗದಲ್ಲೇ ಬರೆದವನು. ಅಷ್ಟೇ ಅಲ್ಲ The last great romantic poet ಎಂದು ಕರೆಸಿಕೊಂಡವನು. ಆದರೆ ತನ್ನ ಕಾಲದಲ್ಲಿ ಹೊಸದಾಗಿ ಕಾಣಿಸಿಕೊಂಡ ನವ್ಯಮಾರ್ಗಕ್ಕೆ ಹೊರಳಿ ಅದರ ಪೂರ್ಣ ಪ್ರವಾಹಕ್ಕೆ ಮೈಯೊಡ್ಡಿ ಪರಿವರ್ತನಗೊಂಡವನು. ಇದನ್ನು ಅಲ್ಲಿಯ ನವ್ಯ ವಿಮರ್ಶಕರು ಯೋಗ್ಯ ಬೆಳವಣಿಗೆಯೆಂದು ಪ್ರಶಂಸಿಸಿದ್ದಾರೆ. ಹಾಗೆ ನೋಡಿದರೆ ಅವನ ಕಾವ್ಯದ ಉತ್ತರ ಭಾಗವನ್ನು ನವ್ಯ ಕಾವ್ಯದ ಪ್ರವರ್ತಕನಾದ ಎಲಿಯಟ್‌ನ ಕಾವ್ಯಕ್ಕಿಂತಲೂ ಹೆಚ್ಚಿನದೆಂದು ಬೆಲೆಗಟ್ಟಿದವರೂ ಅಲ್ಲಿದ್ದಾರೆ. ಆದರೆ ಈ ಹೋಲಿಕೆಯನ್ನು ದೂರಕ್ಕೆ ಎಳೆಯಬೇಕಾಗಿಲ್ಲ. ಯೇಟ್ಸ್ ರೂಪಿಸಿಕೊಂಡ ಹೊಸ ಕಾವ್ಯಾಭಿವ್ಯಕ್ತಿ ಹೆಚ್ಚು ಸಂಕೀರ್ಣವೂ ಹೆಚ್ಚು ಪ್ರತಿಮಾತ್ಮಕವೂ ಆದ ಕಾರಣದಿಂದ ಹೆಚ್ಚು ಎತ್ತರದ ನೆಲೆಯದು ಆದುದೆನ್ನುವುದು ಸ್ಪಷ್ಟ. ಆದರೆ ಅವನೂ ಮುಂಚಿನ ಕಾವ್ಯಮಾರ್ಗದಿಂದ ಹೊಸ ಕಾವ್ಯಮಾರ್ಗಕ್ಕೆ ದಾಟಿ ಬೆಳೆದವನೆಂದು ಹೇಳುವುದಷ್ಟೇ ಈ ಮಾತಿನ ಉದ್ದೇಶ.

ಆರಂಭದ ಕೆಲ ಕಾಲಾನಂತರ ಕಣವಿಯವರ ಕಾವ್ಯದ ಮೇಲೆ ನವ್ಯಕಾವ್ಯದ ಪ್ರಭಾವವಾದದ್ದು ಕಾಣುತ್ತದೆ. ಅವರ ಪ್ರಕೃತಿ ಕವಿತೆಗಳೂ ಇದಕ್ಕೆ ಹೊರತಲ್ಲ. ಮೊದಲಲ್ಲಿ ಸರಳ ರೂಪವಾಗಿದ್ದ ಅವರ ನಿಸರ್ಗ ಕವಿತೆಗಳು ನಂತರ ಹೆಚ್ಚು ಸಂಕೀರ್ಣವೂ ಚಿತ್ರಾತ್ಮಕವೂ ಆಗುವುದು. ಪ್ರಕೃತಿ

ಸಂಬಂಧವಾದ ವಸ್ತುಗಳ ನಿರ್ವಹಣ ರೀತಿಯೇ ಕೊಂಚ ಬದಲಾಯಿಸಿತು. ನಿಸರ್ಗ ಸೌಂದರ್ಯದ ತನಿವರ್ಣನೆಯ ಜೊತೆಗೆ ಚಿಂತನಾಂಶವೂ ಮೇಳವಿಸಿಕೊಂಡಿತು. ಮಾನವಾನುಭವಗಳೂ ಕೂಡಿಕೊಂಡವು. ಇವುಗಳಿಗೆ ಮೈಗೊಡಲು ವಿಶಿಷ್ಟ ಚಿತ್ರಗಳೂ ಧ್ವನಿಪೂರ್ಣ ಪ್ರತಿಮೆಗಳೂ ಸೃಷ್ಟಿಯಾದವು. 'ಶ್ರಾವಣದ ಲಾವಣ್ಯ', 'ಮೇಘೋಪಾಸನೆ', 'ಈ ವರ್ಷ ಕಂಡ ಮಳೆಗಾಲ', 'ಸೂರ್ಯನಿದ್ದಾನೆ ಬೆನ್ನ ಹಿಂದೆ', 'ಪುಟ್ಟ ಹಕ್ಕಿಯ ಪಾಡು', 'ಫಾಲ್ಗುಣ', 'ಹಳದಿ ಹೂ-ಚೆಂಡು' ಮುಂತಾದ ಕವಿತೆಗಳನ್ನೆಲ್ಲ ಒಟ್ಟಿಗೆ ಇಟ್ಟು ನೋಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. 'ಮಣ್ಣಿನ ಮೆರವಣಿಗೆ' ಕವಿತೆಯಲ್ಲಿ ಬರುವ ಈ ಚಿತ್ರ ಇದಕ್ಕೊಂದು ನಿದರ್ಶನ:

**ಸಂಜೆ ಮುಂಜಾವುಗಳ ಸೂರ್ಯಬಿಂಬದ ಸುತ್ತು**
**ಸದ್ದುಗದ್ದಲವಿಲ್ಲದೆದ್ದು ಬಾನಂಗಳಕೆ**
**ಬರುವ ಚಂದ್ರನ ಹೆಗಲ ಮೇಲೆ ಹೊತ್ತು**
**ಬಾನ ಕಣದಲಿ ಕೋಟಿ ಚಿಕ್ಕೆ ಹಂತಿಯ ಕಟ್ಟಿ**
**ದಿವದ ಬದುಕನು ಒಕ್ಕಿ ರಾಶಿಮಾಡಿ**
**ಬೆಳಕು ಚಕ್ರಾರಾರ ತಿರುಗುತ್ತಿದೆ.**

ನಿಸರ್ಗದ ಕ್ರಿಯೆಗಳನ್ನು ಹಿಂದೆ ಮಿತನೆಲೆಯಲ್ಲಿ ಸರಳವಾಗಿ ಕಟ್ಟಿಕೊಡುತ್ತಿದ್ದ ಕವಿ ಇಲ್ಲಿ ಹೇಗೆ ಭೂಮಿ ಆಕಾಶಗಳೆರಡನ್ನೂ ಬಳಸಿ ಅದನ್ನು ವಿಶಾಲ ಭಿತ್ತಿಯಲ್ಲಿ ಪ್ರತಿಮಾತ್ಮಕವಾಗಿ ಹಿಡಿಯ ಬಲ್ಲವರಾಗಿದ್ದಾರೆ ಎನ್ನುವುದಕ್ಕೆ ಈ ಚಿತ್ರ ಸಮರ್ಥ ಸಾಕ್ಷಿಯಾಗಿದೆ.

'ಹೂವು ಹೊರಳುವವು' ('ಜೀನಿಯಾ' ಸಂಗ್ರಹ) ಎಂಬ ಕವಿತೆ ಕಣವಿಯವರ ಜನಪ್ರಿಯ ಗೀತೆಗಳಲ್ಲಿ ಒಂದು. ತೋರಿಕೆಗೆ ಸರಳವಾಗಿ ಕಾಣುವ ಈ ರಚನೆ ಗಹನವಾದ ಅರ್ಥವನ್ನು ಒಳಗೊಂಡ ಒಂದು ಸಮರ್ಥ ಕವಿತೆಯೂ ಆಗಿದೆ. ಸೂರ್ಯನ ಕ್ರಿಯೆಗಳ ವಿಶೇಷತೆಯನ್ನು ಪ್ರಶಂಸಿಸುತ್ತ ಬೆಳೆಯುವ ಈ ಕವಿತೆ ಕಡೆಯಲ್ಲಿ ಕಾವ್ಯಸೃಷ್ಟಿಯ ಪರಿಯನ್ನೂ ಸೂಚಿಸಿ ಮುಗಿಯುತ್ತದೆ.

ಮೊದಲು ಕವನದ ಸ್ಥೂಲ ಅರ್ಥವನ್ನು ಗಮನಿಸೋಣ, ಕವಿತೆಯ ಮೊದಲ ಮೂರು ಚರಣಗಳು ಸೂರ್ಯನ ಸೃಷ್ಟಿಕಾರಕ ಕ್ರಿಯೆಯನ್ನು ಬಣ್ಣಿಸುವಂಥವು. ರಾತ್ರಿಯ ಒಡಲಿನಲ್ಲಿ, ದೂರದ ಕಡಲಿನಲ್ಲಿ ಮುಳುಗುವ ಸೂರ್ಯ, ಬೆಟ್ಟ, ನದಿ, ಕಾಡು, ಬಯಲು ಹೀಗೆ ಭೂಮಿಯ ಮೇಲಿನ ಎಲ್ಲ ವಸ್ತುಗಳ ಆಕಾರವನ್ನೂ ಜಗತ್ತಿನ ಕತ್ತಲ ಮೂಸೆಯಲ್ಲಿ ಕರಗಿಸಿಬಿಡುತ್ತಾನೆ. ಮತ್ತೆ ಬೆಳಗಿನಲ್ಲಿ ಹೊಸದಾಗಿ ಹುಟ್ಟುಪಡೆದಂತೆ ಕಾಣಿಸಿಕೊಳ್ಳುತ್ತಾನೆ. ರಾತ್ರಿ ತಾನು ಕರಗಿಸಿದ ಪದಾರ್ಥಗಳಿಗೆ ಮತ್ತೆ ರೂಪದಾನ ಮಾಡುತ್ತಾನೆ.

ಗಿಡಮರಗಳಿಂದ ಎಲೆ ಉದುರುತ್ತವೆ. ಹಾಗೇ ಹೊಸ ಎಲೆ ಚಿಗುರುತ್ತವೆ. ಬಿಸಿಲ ಧಗೆ ಜಗತ್ತನ್ನು ಬಾಧಿಸುತ್ತದೆ. ಹಾಗೆಯೇ ಅದನ್ನು ತಣಿಸುವ ತಂಗಾಳಿಯು ಬೀಸುತ್ತದೆ. ಎಲ್ಲ

ಕ್ರಿಯೆಗಳಿಗೂ ಪ್ರೇರಣೆ ಸೂರ್ಯನ ಶಾಕ ಹೀರುವ ನೆಲದ ಒಡಲಿನಿಂದಲೇ ಬರುತ್ತದೆ. ಹೀಗೆ ಜಗತ್ತನ್ನು ಹೊಸದಾಗಿಸಿ ಕೊಡುವ ಕಲಾವಿದ ಯಾರು ಎಂದು ಬೆರಗಾಗುವಂತಾಗುತ್ತದೆ.

ನಮ್ಮ ಚಲನೆ ನಮ್ಮ ಇಚ್ಛೆಯಂತೆ ಇದೆ ಎಂದು ನಮ್ಮ ಭಾವನೆ. ಆದರೆ ಭೂಮಿಯ ಮೇಲೆ ನಡೆಯುತ್ತಿರುವ ನಾವು (ಬಯಸಿರುವ ದಿಕ್ಕಿನಲ್ಲಿ ಅಲ್ಲ) ಭೂಮಿ ತಿರುಗುತ್ತಿರುವ ದಿಕ್ಕಿನಲ್ಲಿಯೇ ಹೋಗುತ್ತಿದ್ದೇವೆ. ನಮ್ಮ ಚಲನೆ ಭೂಮಿಯ ಚಲನೆಯಿಂದ (ನಮಗೆ ತಿಳಿಯದಂತೆಯೇ ) ನಿಯಂತ್ರಿತವಾಗಿದೆ. ಕವಿತೆ ಕೂಡ ಹೀಗೆಯೇ. ನಮಗೆ ಮೀರಿದ ವಿಶ್ವದ ರಚನೆಗೆ ಹೊಂದಿ ಅದರ ಸ್ವರೂಪ ನಿಯಂತ್ರಿತವಾಗಿದೆ.

ಇದು ಒಟ್ಟು ಕವಿತೆಯ ಸ್ಥೂಲ ಅರ್ಥ. ಆದರೆ ಕವಿತೆ ಈ ಅರ್ಥದ ಆಚೆಗೂ ಕೆಲಸ ಮಾಡುತ್ತಿದೆ. ಕವಿ ತನ್ನ ವಾಸ್ತವಾನುಭವವನ್ನು ಮಾತಿಗೆ ಸುರಿಯುವ ಕ್ರಿಯೆಯಲ್ಲೇ ಈ ಹೊಸ ಅರ್ಥದ ಹುಟ್ಟು ಇದೆ.

ಪ್ರಸಿದ್ಧ ವಿಮರ್ಶಕ ಕೀರ್ತಿನಾಥ ಕುರ್ತಕೋಟಿಯವರು ಕಣವಿಯವರ ಕಾವ್ಯ ಕುರಿತು ಬರೆಯುತ್ತ "ಶಾಬ್ದಿಕ ಅನುಭವವನ್ನು ವಾಸ್ತವಿಕ ಅನುಭವದಿಂದ ಪ್ರತ್ಯೇಕಗೊಳಿಸುವ ಸಾಮರ್ಥ್ಯ ಕಣವಿಯವರ ಕಾವ್ಯಕ್ಕಿದೆಯೇ ಎಂಬ ಪ್ರಶ್ನೆಯೇಳುತ್ತದೆ" ಎಂದಿದ್ದಾರೆ. ಕವಿ ತಾನು ಪಡೆದ ವಾಸ್ತವಾನುಭವವನ್ನು ಕವಿತೆಯ ಮೂಲಕ ಕೊಡುವಾಗ ಅದನ್ನು ಲೋಕೋತ್ತರವಾಗಿಸಿಕೊಡುವ ಕಲೆಯ ಬಗ್ಗೆ ಕೀರ್ತಿನಾಥರು ಹೇಳುತ್ತಿದ್ದಾರೆ. ಕಣವಿಯವರ ಬಗ್ಗೆ ಅವರ ಮಾತನ್ನು ಒಪ್ಪುವುದು ಬಿಗಿಯಾಗುತ್ತದೆ. ಏಕೆಂದರೆ ಆ ಕಲೆ ಕಣವಿಯವರಲ್ಲಿ ಧಾರಾಳವಾಗಿದೆ. ಮೇಲೆ ತೀರ ಸರಳವಾಗಿ ಕಾಣುವ ಈ ಸಾಲುಗಳನ್ನು ನೋಡಿ.

**ಹೂವು ಹೊರಳುವುವು ಸೂರ್ಯನ ಕಡೆಗೆ**
**ನಮ್ಮ ದಾರಿ ಬರಿ ಚಂದ್ರನವರೆಗೆ**
**................................**
**ಸಹಜ ನಡೆದರೂ ಭೂಮಿಯ ಲಯದಲಿ**
**ಪದಗಳನಿರಿಸಿದ ಹಾಗೆ**
**ವಿಶ್ವದ ರಚನೆಯ ಹೊಳಹಿನಲ್ಲಿ**
**ಕಂಗೊಳಿಸಿತು ಕವಿತೆಯು ಹೀಗೆ.**

ಮೊದಲ ಸಾಲುಗಳಲ್ಲಿಯೇ ವಾಸ್ತವಾನುಭವವನ್ನು ಹೊಸದರ್ಶನಕ್ಕೆ ಹೊರಳಿಸುವ ಹೊಂಚು ಇದೆ. ಮನುಷ್ಯ ಎರವಲು ಬೆಳಕಿನ ಚಂದ್ರನ ಬೆನ್ನು ಹತ್ತಿದ್ದರೆ ನಿಸರ್ಗ ಸ್ವಯಂಪ್ರಭನಾದ ಸೂರ್ಯನ ಕಾಂತಿಗೆ ಮುಖ ಮಾಡಿಕೊಂಡಿದೆ. ಎರವಲು ಬೆಳಕು ಏನನ್ನೂ ಬೆಳೆಸಲೊಲ್ಲದ್ದು. ಅದು ಬೆಳಕಿನ ಒಂದು ತೋರಿಕೆ, ಕೇವಲ ಮಾಯೆ. ಸೂರ್ಯನ ತೇಜಸ್ಸು ಮಾತ್ರ ಮುಟ್ಟಿದ್ದನ್ನು ಬೆಳೆಸುವಂಥದ್ದು, ತೋರಿಕೆಯಲ್ಲ, ಸತ್ಯ. ನಾವು ಜಡವೆಂದು ಭಾವಿಸಿರುವ ನಿಸರ್ಗ ಸತ್ಯದ ಕಡೆಗೆ

ಹೊರಳಿದ್ದರೆ ಬುದ್ಧಿವಂತನೆನಿಸಿಕೊಂಡ ಮನುಷ್ಯ ಮಾಯೆಯ ಬೆನ್ನು ಹತ್ತಿದ್ದಾನೆ. ಇಷ್ಟೆಲ್ಲ ಅರ್ಥವನ್ನು ಈ ಸಾಲುಗಳು ಧ್ವನಿಸಿಬಿಡುತ್ತವೆ. ಕಡೆಯ ನಾಲ್ಕು ಸಾಲೂ ಇಷ್ಟೇ ವಿಶಿಷ್ಟವಾದವು. ತಾನು ಬಯಸಿದ ದಿಕ್ಕಿನಲ್ಲೇ ಹೋಗುತ್ತಿದ್ದರೂ ಮನುಷ್ಯ ಭೂಮಿಯ ಮೇಲೆ ಇರುವುದರಿಂದ ತನ್ನ ಅರಿವೇ ಇಲ್ಲದೆ ಭೂಮಿ ಸಾಗುವ ದಿಕ್ಕಿನಲ್ಲೇ ಇದ್ದಾನೆ. ಅವನ ಚಲನೆ ಬೇರೊಂದರಿಂದ ನಿಯಂತ್ರಿತವಾಗಿದೆ. ಕವಿತೆಯೂ ಹಾಗೇ. ವಿಶ್ವದ ರಚನೆಗೆ ಹೊಂದಿಕೊಂಡೇ ಸಾರ್ಥಕವಾಗಿದೆ. ಮನುಷ್ಯ-ನಿಸರ್ಗ ಎರಡರ ನಡೆಯನ್ನು ಹೀಗೆ ಭಿನ್ನವಾಗಿ ಅಭಿನ್ನವಾಗಿ ಆದರೆ ಅನನ್ಯವಾಗಿ ವ್ಯಾಖ್ಯಾನಿಸುವ ಸಾಲುಗಳನ್ನು ನಾನು ಹೆಚ್ಚು ನೋಡಿಲ್ಲ. ತೋರಿಕೆಗೆ ಸರಳವಾಗಿ ಕವಿತೆ ಒಂದು ಅಧ್ಯಾತ್ಮಿಕ ಹೊಳಹಿನಲ್ಲಿ ಕಣ್ಣು ಬಿಚ್ಚಿದೆ. ಶಾಬ್ದಿಕ ಅನುಭವದ ವಾಸ್ತವಿಕ ಅನುಭವದಿಂದ ಪ್ರತ್ಯೇಕ ಗೊಂಡಿದೆ ಅಲ್ಲದೆ ಕಾವ್ಯದ ಕೆಲಸ ಏನೆನ್ನುವುದು ಕವಿಗೂ ಗೊತ್ತಿದೆ.

**ನೆಲದ ಒಡಲಿನೊಳ-**
**ಗೇನು ನಡೆವುದೊ**
**ಎಲ್ಲಿ ಕುಳಿತಿಹನೊ ಕಲಾವಿದ**

ಎನ್ನುತ್ತದೆ ಕವಿತೆ. ಬಿತ್ತವನ್ನು ಪಡೆದುಕೊಂಡ ಮಣ್ಣಿನ ಕತ್ತಲಗರ್ಭ ಸುಂದರವಾದ ಹೂವನ್ನು ಹೊರಹಾಕಿ ಬಿಡುತ್ತದೆಯಷ್ಟೆ. ಈ ಪವಾಡ ಮಾಡುವ ಕಲಾವಿದ ಅದೆಲ್ಲಿದ್ದಾನೊ ಎಂದು ಕವಿತೆ ಬೆರಗಾಗಿ ಕೇಳುತ್ತದೆ. ಕಲೆಯೆನ್ನುವುದು ಪರಿವರ್ತನ ಕಾರಕವಾದ ಪವಾಡ ಕ್ರಿಯೆ ಎನ್ನುವುದು ಕವಿಗೆ ಚೆನ್ನಾಗಿ ಗೊತ್ತಿದೆ. ಕವಿತೆ ಅದನ್ನು ಮಾಡಿ ತೋರಿಸಿಯೂ ಇದೆ. "ಕಣವಿಯವರ ಕಾವ್ಯದಲ್ಲಿ ಲೋಕೋತ್ತರ ಸ್ಫುರಿತಗಳಿವೆ" ಎಂಬ ಪುತಿನ ಅವರ ಮಾತಿಗೆ ಇದು ನಿದರ್ಶನವೆಂಬಂತಿದೆ.

**ಎನ್. ಎಸ್. ಲಕ್ಷ್ಮೀನಾರಾಯಣ ಭಟ್**

# ೬೫. ಸ್ವಾತಂತ್ರ್ಯ :೪೦

೧

ಕಾಲೇಜು ಹುಡುಗ ನಾನಂದು, ಅನುಭವಿಸಿದ್ದೆ:
ಮಧ್ಯರಾತ್ರಿಗೆ ಮಿಂಚುಹೊಡೆದದ್ದು ಮೈತುಂಬ-
ಬಾನಿಗೇರಿದ ಮೂರು ಬಣ್ಣ ಬಾವುಟದಿಂದ
ಕನಸು-ಹೂಮಳೆ ಸುರಿದು ಒಂದು ಕ್ಷಣ ಮಿನುಗಿದ್ದೆ.
ಸಂಘರ್ಷ-ಶತಮಾನ: ಹಿಂಸೆಗೆದೆಗೊಟ್ಟಿರುವ
ತ್ಯಾಗದಾವಿರ್ಭಾವ;ತೇಲಿಬಂದಿತು ಹಂಸ,
ಬೆನ್ನು ಬಿದ್ದ ಕಪೋತ ಪಕ್ಷಿಗಿದೆ ತೊಡೆ-ಮಾಂಸ.
ಬಾಳು ಹೋಳಾದಂತೆ ನುಂಗಿದ ನಂಜು -ನೋವ.
ಅರುವತ್ತು: ನನಗಂಥ ಅರಳು-ಮರಳೇನಿಲ್ಲ;
ನಾಲ್ವತ್ತು ವರುಷ ಬದುಕಿಸಿದ ಬಿಡುಗಡೆ -ಬಾಳು
ದೇಶಕ್ಕೆ ಇತಿಹಾಸ ಹಾಸಿಬೀಸಿದ ನೆರಳು-
ಎಡವಿ ಮುಗ್ಗರಿಸಿದರು ಕಣ್ಣು ಮಂಜಾಗಿಲ್ಲ.
ಶ್ವಾಸಕೋಶಕ್ಕಿಲ್ಲ ಧಕ್ಕೆ-ಸ್ಪರ್ಧೆಗಿಳಿಯದೆ
ಓಡಬಹುದಲ್ಲ ಹಾಗೇ, ತನ್ನ ಗುರಿ ಮರೆಯದೆ ?

೨

ವಿರೋಧಾಭಾಸವೆ ಇದರ ಪ್ರಕೃತಿಗುಣವೇನೊ
ಇದ್ದು ಬಿದ್ದದ್ದೆಲ್ಲ ಕೊಚ್ಚಿ ಹೋಗುವ ಹಾಗೆ
ಅತಿವೃಷ್ಟಿ, ಇಡಿವರುಷ ಒಂದು ಹನಿಯೂ ಬರದೆ
ನೆಲಬಿರಿದು ಬಾಯ್ ಬಿಡುವ ಪರಿ. ಮುಂದೆ ಗತಿಯೇನೊ-
ಎಲ್ಲದಕು ಬರಗಾಲ, ಕಾಯಬೇಕೆಂತು ಸಮ-
ತೋಲ?ಅಣೆಕಟ್ಟಿನಲು ಸೋರಿಹೋಗುವುದು ಹಣ

ಸೇತುವೆಯು ನಡುಗುವದು, ಜೇನುಹುಟ್ಟೋ? -ಮೇಣ.
(ಉತ್ಸವ ಮೂರ್ತಿ ಬಂಗಾರ ರಥದಲ್ಲಿ ಕ್ಷೇಮ)
ಬಲೆಗೆ ಬೀಳಲು ಮೀನು; ತಿಮಿಂಗಿಲಕೊ ಸಾಗರ
ತಾನೇ ತಾನು, ಗಂಗೆಗೂ ಸ್ವಚ್ಛತಾಕ್ರಮ,
ನಮ್ಮೊಡಲಿಗಂತು ಅಂತರಗಂಗೆಯದೆ ವಿಕ್ರಮ.
ಬಿತ್ತಿದ್ದೇನೊ ಧರ್ಮ, ಬೆಳೆಯಿತೆಲ್ಲಿಂದ ಕ್ರೂರ
ಕರ್ಮ ? ದುರ್ಧರ್ಷ ಭಯ, ಅತಿರೇಕಗಳ ನಡುವೆ
ಮುಗ್ಧ ಸಂಧಿಗ್ಧ ಜೀವಗಳನೆಲ್ಲಿ ಬಚ್ಚಿಡುವೆ ?

೩
ಭಾಷಣದ ಕ್ರಿಯಾ ವಿಧಿ ಮುಗಿಸಿ, ಮೊಣಕಾಲೂರಿ
ಭರ್‍ರೆಂದು ಎಂಭತ್ತೇಳರುತ್ಸವದ ಕಾರು
ಸುರಕ್ಷಿತ ದಾಟಿ, ಬಿಟ್ಟು ಸಮಾಧಾನದುಸಿರು -
ಕಟ್ಟಿರುವ ಭದ್ರಕಾವಲು; ಅದಕೆ ಆಭಾರಿ;
ಮಾತು ಮಾತಿನ ಹೊರೆಗೆ ಕುಸಿದಿರುವ ಸಾಮಾನ್ಯ :
ತಲೆ ಎತ್ತಿದರೆ: ಹಾರಾಡಿ ಬಣ್ಣದ ಬಲೂನು
ಈ ಮಣ್ಣ ದಿಣ್ಣೆಗಳಾಚೆ ಧವಳಗಿರಿ ಸಾನು.
ಬೆಳಗಿನಲಿ ಹೊಂಗನಸು ನೆನಸಿಕೊಂಡರೆ ಧನ್ಯ.
ಹೇಗಾದರು ಹುಡುಕಿ ರಂಗದ ಮೇಲೆ ತನ್ನಿ :
ತೆರೆಗುಂಟ ತೇಲಿಬಂದಿಹ ಕೊರಡುಗಳ ದೂಡಿ,
ಎದುರೀಜಿ, ಬರಡು ಬಾಳಿಗೆ ಭವಿತವ್ಯ ಮೂಡಿ-
ಸುವ ಧೀರ ಚೇತನರ, ದೂರಾವಾಗಲಿ ಸನ್ನಿ,
ಹೋರಾಟಕಣಗೊಳಿಪ ಸತ್ಪ್ರೋನ್ನತಿಯ ಕಾಲ
ಮತ್ತೆ ಬಂದಿದೆ; ಓದು ಮೂಲ ಗಾಂಧೀ ಪಾಠ.

ಅರುವತ್ತರ ಹೊಸ್ತಿಲಲ್ಲಿರುವ ಕವಿ, ನಲವತ್ತು ತುಂಬಿದ ದೇಶದ ಸ್ವಾತಂತ್ರ್ಯ ದಿನವನ್ನು ನಿರೀಕ್ಷಿಸುತ್ತ, ತನ್ನ ಒಳ-ಹೊರಗನ್ನೂ ನಿರುಕಿಸುತ್ತ ಹೊರಡಿಸುವ ದನಿಯಲ್ಲಿ ವಿಷಾದ, ನಿಟ್ಟುಸಿರುಗಳ ಜತೆಗೇ ವ್ಯಂಗ್ಯ ಚಿಂತನೆ ವ್ಯಕ್ತವಾಗುತ್ತಿದೆ. ಉತ್ಸವದ ಸಂಭ್ರಮ ಒಳಗಿದ್ದರೂ ಹೊರಗಿನ ವಾಸ್ತವ, ಕವಿಯ ಭಾವನಾ ಪ್ರವಾಹವನ್ನು ವಿಚಾರವಂತಿಕೆ ನಿಯಂತ್ರಿಸಿದೆ. (ಜೀನಿಯಾ' ಸಂಗ್ರಹ)

ದೇಶಕ್ಕೆ ಸಿಕ್ಕ ಸ್ವಾತಂತ್ರ್ಯದ ಆ ದಿನವನ್ನು ಯುವಕನಾಗಿ ಕಂಡ ಕವಿಗೆ, ಈಗದು ನೆನಪು. 'ಕನಸು-ಹೂಮಳೆ' ಸುರಿದಿದ್ದು ತನ್ನೊಬ್ಬನ ಮೇಲೆ ಅಲ್ಲ, ಜನ ಸಮೂಹದ ಮೇಲೆಯೇ ಅದು

ಉದುರಿದ್ದು. ಸ್ವಾತಂತ್ರ್ಯದ ಬಗ್ಗೆ ಸಮೂಹ ಕಂಡದ್ದು ಕನಸು-ನನಸು ಎರಡೂ ಆಗಿದ್ದುದರಿಂದ ಕವಿ, ಸಮೂಹ ಧ್ವನಿಯೇ ತಾನಾಗಿ ಇವತ್ತಿನ ಸಂದರ್ಭವನ್ನು ಚಿಂತನೆಗೆ ಗುರಿಪಡಿಸುತ್ತಾನೆ. ನಲವತ್ತು ವರುಷ ಬದುಕಿಸಿದ ಬಿಡುಗಡೆ-ಬಾಳು

**ದೇಶಕ್ಕೆ ಇತಿಹಾಸ ಹಾಸಿ ಬೀಸಿದ ನೆರಳು**
**ಎಡವಿ ಮುಗ್ಗರಿಸಿದರೂ ಕಣ್ಣು ಮಂಜಾಗಿಲ್ಲ**

ಸಮೂಹ ಪ್ರಜ್ಞೆಯ ಅಭಿವ್ಯಕ್ತಿ, ವ್ಯಕ್ತಿಯ ಮೂಲಕವೇ ಆಗ ಬೇಕಾಗಿರುವದರಿಂದ, ತಾರುಣ್ಯದ (ಕಾಲೇಜು ಹುಡುಗನ) ನೆನಪಿನ ಆ ಪುಳಕಿತ ಅನುಭವ, ಆನುಷಂಗಿಕವಾಗಿ ಒಡಮೂಡಿದೆ. 'ನಾನು' ಅಂದಿರುವ ಕಡೆಗಳಲ್ಲಿ 'ನಾವು' ಧ್ವನಿತವಾಗಿರುವುದು ಅಭಿವ್ಯಕ್ತಿ ಕ್ರಮದ ಸಹಜ ಸಾಧನೆಯೇ ಆಗಿದೆ.

ಮೊದಲ ಭಾಗದ ಚೌಪದಿ ಮತ್ತು ಒಂದು ದ್ವಿಪದಿಯ ಈ ಪದ್ಯಶಿಲ್ಪ, ವಿಚಾರದ ಅಚ್ಚುಕಟ್ಟನ್ನು ಸುಸಂಗತವಾಗಿ ಸಾಧಿಸಿದೆ. ಸ್ವಾತಂತ್ರ್ಯದ ಹೆಬ್ಬಯಕೆ-ಕನಸು. ನಲವತ್ತು ವರ್ಷದ ಹಿಂದೆ ನನಸಾದುದರ ಇಂದಿನ ಪುಳಕ, ಜತೆಗೆ ಅಂದೇ ದೇಶ ಇಬ್ಭಾಗವಾದುದರ ನೋವು, ಇವೆರಡರ ನಡುವೆ ಘಟಿಸಿದ ಹೋರಾಟಗಾರರ ತ್ಯಾಗ-ವೈರಾಗ್ಯದ ಉದಾತ್ತತೆಯ ಹೆಮ್ಮೆ - ಈ ಭಾವಗಳು ಮೂರು ಚೌಪದಿಗಳಲ್ಲಿ ಕ್ರಮಬದ್ಧವಾಗಿ ಚಿತ್ರಿತಗೊಂಡಿವೆ. ಇಬ್ಭಾಗಗೊಂಡ ದೇಶದ ದೇಹದ ಸ್ಥಿತಿಯನ್ನು ದ್ವಿಪದಿಯಲ್ಲಿ ಹಿಡಿದಿಟ್ಟ ರೀತಿಯೂ ಪರಿಣಾಮಕಾರಿಯಾಗಿದೆ.

**ಶ್ವಾಸಕೋಶಕ್ಕಿಲ್ಲ ಧಕ್ಕೆ - ಸ್ಪರ್ಧೆಗಿಳಿಯದೆ**
**ಓಡಬಹುದಲ್ಲ ಹಾಗೇ, ತನ್ನ ಗುರಿ ಮರೆಯದೆ ?**

ವಿಶಾಲ ಭಾರತ ಭೂಖಂಡದ ಭಾರತ-ಪಾಕಿಸ್ತಾನ-ಬಾಂಗ್ಲಾದೇಶಗಳ ದೇಹ ಒಂದೇ, ಅಂತೆಯೇ ಈ ಶ್ವಾಸಕೋಶಕ್ಕೆ ಧಕ್ಕೆ ಆಗಿಲ್ಲವೆಂಬ ಭಾವೈಕ್ಯದ ಕಲ್ಪನೆ, ಕವಿಗಿರುವ ಸ್ವಾತಂತ್ರ್ಯ ಇತಿಹಾಸದ ಹಿರಿಮೆಯ ನೆನಪೇ ಆಗಿದೆ. ಮೂರೂ ದೇಶಗಳ ಜನನಾಯಕರು ವಸಾಹತುಶಾಹಿಯ ವಿರುದ್ಧ ಮಾಡಿದ್ದ 'ಸಂಘರ್ಷ-ಶತಮಾನ' ಹಾಗೂ 'ಹಿಂಸೆಗೆದೆಗೊಟ್ಟಿದ್ದ ತ್ಯಾಗದಾವಿರ್ಭಾವ' ಕೇವಲ ಲೌಕಿಕವಾದದ್ದಲ್ಲ. 'ತೇಲಿಬಂದಿತು ಹಂಸ' ಎಂಬ ಅಪರೂಪದ ಪ್ರತಿಮೆ ಸ್ವಾತಂತ್ರ್ಯ ಹೋರಾಟದಲ್ಲಿದ್ದ ಅಲೌಕಿಕತೆಗೆ ಕವಿ ನಿರ್ಮಿಸಿದ ಸಾಕ್ಷೀ ಚಿತ್ರವಾಗಿದೆ. ದೇಶ ಒಡೆದರೂ ಹಿಂಸೆಯನ್ನು ಮುಂದಿಟ್ಟು, ಜನಗಳನ್ನು ಒಡೆದು ಆಳಬಾರದು, ಎಂಬ ಸ್ವಾತಂತ್ರ್ಯ ಧರ್ಮದ ಪ್ರಜ್ಞೆ ಕವಿಯಲ್ಲಿ ಜಾಗರವಾಗಿದೆ. ಗುರಿಯನ್ನು ಅಂದರೆ ಇನ್ನಿತರ ಸ್ವಾತಂತ್ರ್ಯಗಳಿಗಾಗಿ - ಮುನ್ನೋಟ ಸಾಧಿಸುವುದು - ಮುಟ್ಟಲು, ಪರಸ್ಪರರ ನಡುವೆ ರಾಜಕೀಯ ಪೈಪೋಟಿ ನಡೆಯದೇ ದೇಶಗಳ ಉಸಿರಾದ ಜನರ ದೇಹ-ಭಾವಗಳಿಗೆ ಧಕ್ಕೆ ಉಂಟಾಗದಂತೆ ನಡೆಯಬಹುದಲ್ಲವೆ ಎಂಬ ಆಶಾವಾದ ಪದ್ಯಕ್ಕೊಂದು ಇತ್ಯಾತ್ಮಕ ಕೊನೆಯಂತಿದೆ. ಆ ದಿನ 'ಮಧ್ಯರಾತ್ರಿ ಹೊಡೆದ ಮಿಂಚು -ಕನಸು', 'ಸುರಿದ ಹೂ ಮಳೆ'ಗಳಲ್ಲಿ ಒಂದು ಕ್ಷಣ ಮಿನುಗಿದ್ದ ಕವಿಯ ಭಾವಚೇತನ, ಭಾವುಕತೆಯಲ್ಲಿಯೇ

ಮುಳುಗಿ ಉಳಿಯದೆ, ಸ್ವಾತಂತ್ರ್ಯದ ಪ್ರಕ್ರಿಯೆಗಳನ್ನು, ಇತಿಹಾಸ-ಭವಿಷ್ಯಗಳೆರಡರಿಂದಲೂ ನೋಡುವ ರೀತಿಯಿಂದಾಗಿ - ಈ ಸುನೀತ ಜಿಜ್ಞಾಸೆಯ ಹಂತಕ್ಕೇರಿ ನಿಲ್ಲುತ್ತದೆ. ಇದು ಉತ್ಕರ್ಷದ ಜೀವನ ದೃಷ್ಟಿಯ ಫಲ. ಕಣವಿಯವರ ಸಹಜ ಸಮಾಧಾನ ಚಿತ್ತದ ನಿರುದ್ವಿಗ್ನ ಧಾಟಿಯು ಜಿಜ್ಞಾಸೆಯನ್ನು ನಿಚ್ಚಳಗೊಳಿಸುವುದಕ್ಕೆ ಸಹಕಾರಿಯಾಗಿದ್ದು, ನಲವತ್ತನೆಯ ವರ್ಷದ ಸ್ವತಂತ್ರ - ಪ್ರಬುದ್ಧ ಕಾಣ್ಕೆಯಾಗಿ ರೂಪುಗೊಂಡು ನಮ್ಮೆದುರು ನಿಲ್ಲುತ್ತದೆ.

ಎರಡನೆಯ ಸಾನೆಟ್ಟು ದಿನದ ಸಂದರ್ಭ, ಸನ್ನಿವೇಶವನ್ನು ಬದಿಗಿಟ್ಟು, ನೆನಪನ್ನು ಮೀರಿ, ಸ್ವತಂತ್ರ ದೇಶದ ಪ್ರಸ್ತುತ ಗತಿ-ಸ್ಥಿತಿಯ ವಿವೇಚನೆಯ ಕಡೆಗೆ ಮುಂದುವರಿದಿದೆ. ಸ್ವಾತಂತ್ರ್ಯದ ಮೌಲ್ಯಗಳಿಗೆ ಒದಗಿದ ಅನ್ಯಾಯ, ಆಘಾತ, ಅಪಚಾರಗಳ ಬಗ್ಗೆ ಕಳವಳ, ರಾಜಕೀಯಾರ್ಥಿಕ ಭ್ರಷ್ಟತೆ, ಉಪಟಳಗಳ ಬಗ್ಗೆ ಭಯ-ಆತಂಕ; ವಿತ್ತ ಜೀವಿತ, ಪರಿಸರದ ಸುರಕ್ಷಿತತೆಯ ಬಗ್ಗೆ ಅನುಮಾನಗಳು ಈ ಪದ್ಯವನ್ನು ಆವರಿಸಿವೆ. ಜಿಜ್ಞಾಸೆಯು ಇಲ್ಲಿ ಚಿಂತನೆಯ ಮಗ್ಗುಲಿಗೆ ಹೊರಳಿದೆ.

> ಬಿತ್ತಿದ್ದೇನೋ ಧರ್ಮ, ಬೆಳೆಯಿತಲ್ಲಿಂದ ಕ್ರೂರ
> ಕರ್ಮ?

ಎಂದು ಕೇಳುವಲ್ಲಿ ಸ್ವಾತಂತ್ರ್ಯ ಧರ್ಮದ ಗುಣ ಲಕ್ಷಣಗಳಾದ ಅಹಿಂಸೆ, ಸತ್ಯಾಗ್ರಹಗಳು ಇಂದು ಕಾಣೆಯಾಗಿವೆ. ಆದರ್ಶಗಳು ಲುಪ್ತವಾಗಿ, ಹಿಂಸೆ, ದುರಾಗ್ರಹಗಳು ರಾಜಕೀಯವನ್ನು ಆವರಿಸಿರುವ ಬಗ್ಗೆ ಕವಿಗೆ ಭಯವಾಗಿದೆ. 'ಎಲ್ಲಿ ನಿರ್ಭಯತೆ -ನೆಮ್ಮದಿ ನೆಲೆಸಿರುವುದೋ ಅಲ್ಲಿ ನನ್ನ ಸ್ವತಂತ್ರ ದೇಶವಿದೆ' ಎಂದು ರವೀಂದ್ರನಾಥ ಠಾಕೂರರು ಉದ್ಗರಿಸಿದ್ದರು. ಇವತ್ತು ಅದಿಲ್ಲವಲ್ಲ ಎನ್ನುವ ಆತಂಕ ಕಣವಿಯವರನ್ನು ಇಲ್ಲಿ ಚಿಂತೆಗೀಡು ಮಾಡಿದೆ. ಕುಶಲಕರ್ಮಕ್ಕೆ ತೊಡಗಿ ಬೆಳೆಯ ಬೇಕಾದ ದೇಶ, ಕ್ರೂರಕರ್ಮಕ್ಕೆ ಈಡಾಗಿ ಕುಗ್ಗಿರುವುದನ್ನು ಕವಿ ಒಪ್ಪಿಕೊಳ್ಳುವ ಮನಸ್ಥಿತಿಯಲ್ಲಿಲ್ಲ.

'ವಿರೋಧಾಭಾಸವೇ ಇದರ ಪ್ರಕೃತಿಗುಣವೇನೋ' ಎಂದು ಆರಂಭವಾಗುವ ಸುನೀತ, ದೇಶದ ಪ್ರಾಕೃತಿಕ ಸ್ಥಿತಿ- ಗತಿಯಲ್ಲಿಯ ಏರು-ಪೇರುಗಳನ್ನು ಮೊದಲನೆಯ ಚೌಪದದಲ್ಲಿ ಗಮನಿಸುತ್ತದೆ. ಅತಿವೃಷ್ಟಿ (ಆರ್ಥಿಕ ಅಭಿವೃದ್ಧಿ) ಯಿಂದ ಇದ್ದು ಬಿದ್ದುದೆಲ್ಲ ಕೊಚ್ಚಿಹೋದ ದುಃಸ್ಥಿತಿಯ ಮಗ್ಗುಲಿಗೇ 'ನೀರಿರದೆ ನೆಲ ಬಾಯ್‌ಬಿಡುವ' (ಬಡತನದ ದಾರುಣತೆ) ಪರಿ ಕಾಣುತ್ತಿರುವುದರಿಂದ ಸ್ವಾತಂತ್ರ್ಯಕ್ಕೆ ಗತಿಯೇ (ಚಲನೆ-ಮುನ್ನಡೆ) ಇಲ್ಲವಲ್ಲ ಎನ್ನುವ ಕಳವಳ ಇಲ್ಲಿ ಅನುರಣನಗೊಂಡಿದೆ.

'ಎಲ್ಲದಕು ಬರಗಾಲ'ವಿರುವುದರಿಂದ 'ಸಮತೋಲ' (ಸಮಾಜವಾದೀ ಸ್ಥಿತಿ-ಗತಿ)ಕಾಯಬೇಕೆಂತು ?' ಎಂದು ಕೇಳುವಲ್ಲಿ ಕವಿಗೆ ಕೋಪ-ತಾಪಗಳಿಲ್ಲ. ನೀರಾವರಿಗೆ ಕಟ್ಟಿದ ಆಣೆಕಟ್ಟಿನ ನೀರು 'ಸೋರಿ ಹೋಗುವ'ಅಸಂಗತತೆಯನ್ನು ನಿಷ್ಠುರ ವಾಸ್ತವಕ್ಕೆ ತಂದು ತೋರಿಸುತ್ತಾರೆ. ಅಭಿವೃದ್ಧಿಯ ವಾಸ್ತವ ಸಂಕೇತಗಳದ ಅಣೆಕಟ್ಟು ಮತ್ತು ಸೇತುವೆಗಳ ನಿರ್ಮಾಣಕ್ಕೆ ಖರ್ಚಾದ ಹಣ (ಬಂಡವಾಳ)ವೆಲ್ಲಾ ಸೋರಿ ಹೋದುದರಿಂದ ಆರ್ಥಿಕತೆ ನಡುಗಿ ಹೋಗಿದೆ. (೧೯೬೭

ಡಿಸೆಂಬರದಲ್ಲಿ ಇಡೀ ದಕ್ಷಿಣ ಭಾರತದ ಗಟ್ಟಿ ಭೂ ವಿಸ್ತಾರ, ನಾಗರಿಕ ಇತಿಹಾಸದಲ್ಲೇ ಮೊದಲ ಸಲ ನಡುಗಿದ ನಡುಗಿಸಿದ ಅನುಭವ ಕವಿಗೆ ಬೋಧೆಯಾದ ಒಂದು ಸಕಾಲಿಕ ಸಂಕೇತ.) ಸರಕಾರದ ಖಜಾನೆ- 'ಜೇನು ಹುಟ್ಟು'. ಆದರದು ದುರ್ವ್ಯಯಕ್ಕೆ ಈಡಾಗಿ, ತೆರಿಗೆ ತೆತ್ತ ಜನಸಾಮಾನ್ಯರಿಗೆ ಕೊಡುತ್ತಿರುವುದು 'ಮೇಣ' ಮಾತ್ರ! ವಾಸ್ತವದ ಆರ್ಥಿಕತೆ ದುರ್ಭರವಾಗಿ, ದೇಶ ಬಡತನದಲ್ಲಿ ಕಂಗಾಲಾಗಿದ್ದರೂ 'ಉತ್ಸವ ಮೂರ್ತಿಗಳಾಗಿ ಜನ ಚುನಾಯಿತ ಪ್ರತಿನಿಧಿಗಳು -ಮಂತ್ರಿ ಮಾನ್ಯರು 'ಬಂಗಾರರಥದಲ್ಲಿ ಕ್ಷೇಮ' ವಾಗಿರುವುದನ್ನು ಕವಿ ಕಂಡಾಗ, ಕಟುತ್ವ, ವಿಡಂಬನೆಯ ದಾಟಿ ತಲುಪುತ್ತಾರೆ.) ಕಟು ಅಣಕದ ಈ ಮಾತು ಕಂಸದಲ್ಲಿ ಕಾಣಿಸುವುದರ ಔಚಿತ್ಯೇನೋ ತಿಳಿಯುವುದಿಲ್ಲ).

ಮೂರನೆಯ ಚೌಪದ, ನೀರಿಗೆ ಸಂಬಂಧಿಸಿದ ಎರಡು ಚಿತ್ರಗಳನ್ನು ಮೂಡಿಸುತ್ತದೆ. ಒಂದನೆಯದು, ಸಮುದ್ರದ ನೀರಿನಲ್ಲಿಯ ಮೀನು ಮತ್ತು ತಿಮಿಂಗಲುಗಳ ನಡುವಿನ ವ್ಯತ್ಯಾಸ (ಭೇದ) ಬಿಂಬಿಸುವ ಮಾರ್ಮಿಕ ಚಿತ್ರ. ಭ್ರಷ್ಟಾಚಾರದ ತನಿಖೆ ಬೀಸಿದ ಬಲೆಯಲ್ಲಿ ಸಿಕ್ಕುವ ಮೀನು -ಬಡಪಾಯಿ ಜನ. ತಿಮಿಂಗಲ ರೂಪದ ಅಧಿಕಾರಿ-ರಾಜಕಾರಣಿ, ಅನಾಯಾಸ ಪಾರಾಗುವುದಕ್ಕೆ ವಿಶಾಲ ಸಮುದ್ರವೇ ಇಲ್ಲಿದೆ. ಸ್ವತಂತ್ರ ದೇಶಕ್ಕೆ ಅಂಟಿಕೊಂಡ ಭ್ರಷ್ಟಾಚಾರದ ಕಳಂಕ, ಸಾಮಾನ್ಯರ ಹಕ್ಕು ಅವಕಾಶಗಳಿಗೆ ಮಾರಕವಾದುದರ ಮಾರ್ಮಿಕ ಚಿತ್ರ ಇದು. ಭಾರತದ ಜೀವನದಿಗಳಲ್ಲಿ ಪವಿತ್ರವೂ ನಿರ್ಮಲವೂ ಆಗಿರುವ ಗಂಗೆ ಮಲಿನಗೊಂಡಿರುವುದು, ಒಂದು ವಾಸ್ತವಿಕ ಸಂಗತಿ. ಇದು ರಾಜಕಾರಣಿಗಳ ನಾನಾ ನಮೂನೆಯ ಭ್ರಷ್ಟಾಚಾರಕ್ಕೆ ವಿಡಂಬನಾತ್ಮಕ ನಿದರ್ಶನ. ಗಂಗೆಯನ್ನು ನಿರ್ಮಲೀಕರಣಗೊಳಿಸುವ ಕ್ರಮವಂತು ವಿಪರ್ಯಾಸದ ದ್ಯೋತಕ. ಇದಕ್ಕೆ ಸಮಾನವಾಗಿ ಜನಸಾಮಾನ್ಯರ 'ಒಡಲಿಗಂತೂ ಅಂತರಗಂಗೆಯದೇ ವಿಕ್ರಮ" ಎನಿಸುವ ಸ್ಥಿತಿ. ಇದೇನು ಸಮಾಧಾನವೇ, ಸಾಂತ್ವನವೇ? ಕವಿಯ ದಿಗ್ಭ್ರಮೆ ಕೊನೆಗೆ, ದ್ವಿಪದಿಯಲ್ಲಿ ವ್ಯಕ್ತವಾಗಿದೆ. ಅಸಹಾಯಕ ದನಿ ಇಲ್ಲಿ ಪಿಸುಗುಟ್ಟಿದೆ. ವಿವಂಚನೆಗೆ ಈಡಾದ ಕವಿಮನ, ವಿಪರ್ಯಾಸಗಳ ವಿವೇಚನೆಗೆ ಸೀಮಿತವಾಗಿರುವುದರಿಂದ ಈ ಸುನೀತ ಅಪೂರ್ಣವಾಗಿದೆ. ಅಂತೆಯೇ ಮೂರನೆಯ ಭಾಗಕ್ಕೆ ಅದು ವಿಸ್ತರಣಗೊಳ್ಳಲಿದೆ.

೩

ಮೂರನೆಯ ಸುನೀತ, ದೇಶದ ಪ್ರಜಾತಂತ್ರವು, ಸ್ವಾತಂತ್ರ್ಯಾನಂತರದಲ್ಲಿ ಕಂಡ ಮತ್ತೊಂದು ಬಗೆಯ ವಿಪರ್ಯಾಸದ ಚಿತ್ರದೊಂದಿಗೆ ಆರಂಭವಾಗಿದೆ.

'ಭಾಷಣದ ಕ್ರಿಯಾವಿಧಿ ಮುಗಿಸಿ' (ritual) ಎಂಬತ್ತೇಳರ ಉತ್ಸವದ ಕಾರು 'ಭದ್ರಕಾವಲಿನಲ್ಲಿ ಭರ್ರೆಂದು' ದಾಟಿ ಬಿಡುತ್ತದೆ. ದೇಶ ಕಾಯುವ ಧುರೀಣರಿಗೆ ಇಲ್ಲಿ ಜನರಿಂದಲೇ ಭೀತಿ, ಬೆದರಿಕೆ! ಜನ ಮತ್ತು ನಾಯಕರಿಬ್ಬರೂ ಭಯ ಭೀತಿಗೊಳಗಾಗಿ ಸ್ವತಂತ್ರ ದೇಶವನ್ನು ಮುನ್ನಡೆಸುವ ವೈಖರಿ, ಸಖೇದಾಶ್ಚರ್ಯದ ಸಂಗತಿ. ನಾಶದ ಕ್ಷಣಗಳಿಕೆಯೊಂದಿಗೆ ದೇಶದ ಆಡಳಿತ ನಡೆಸುವ ಅನಿಶ್ಚಿತ ಆತಂಕದ ಮನಸ್ಥಿತಿ ಧುರೀಣರದು. ಇತ್ತ ಧುರೀಣರ ಭಾಷಣ (rhetorics)ದ

'ಹೊರೆ'ಯನ್ನು ಹೊರಲಾಗದೆ ಕುಸಿದಿರುವ ಸಾಮಾನ್ಯನ ನಿಶ್ಶಕ್ತ ಅವಸ್ಥೆ, ದೂರದ, ನಿಲುಕದ ಭರವಸೆಗಳತ್ತ ಕಣ್ಣಿಟ್ಟ ಅಸಾಹಯಕ ಸ್ಥಿತಿ ಅವನದು. ಸಾಮಾನ್ಯನಿಗೆ ಬೇಕಿರುವುದು, ರಾಜಕಾರಣಿಗಳ ಮರ್ಜಿಯಿಂದ ಬರುವ ಆಕಸ್ಮಿಕದ ಅವಕಾಶಗಳಲ್ಲ, ಅವನ ವಾಸ್ತವದ ಸಮಸ್ಯೆಗಳನ್ನು ನೀಗಿ, ಬರಡು ಬಾಳಿಗೆ ಭವಿತವ್ಯ ಒದಗಿಸುವ ಧೀರಚೇತನರ ಸಹಾಯ ಬೇಕು. ಸನ್ನಿ(ಜಡ್ಡು)ಗೊಳಗಾದ ಬರಡು ಸ್ಥಿತಿ ಮಾಯವಾಗಿ 'ಸತ್ಪೋನ್ನತಿ' ಗಳಿಸಲು ಹೋರಾಟಕ್ಕೆ ಅಣಿಯಾಗುವ ಸಂದರ್ಭ ಇದು. ಮರೆತುಹೋದ ಗಾಂಧಿ ಬೋಧನೆಯ ಸತ್ಯ,,ನ್ಯಾಯ, ಅಹಿಂಸೆ, ಸ್ವಾವಲಂಬನೆಗಳ ಪಾಠಗಳನ್ನೀಗ ಓದಬೇಕಾದ ಸಂದರ್ಭ ಇದು. ನಲವತ್ತನೆಯ ಸ್ವಾತಂತ್ರ್ಯದ ದಿನ, ವಾಸ್ತವದ ಉತ್ಸವವೆನ್ನಿಸುವುದು. ಒಳ-ಹೊರಗಿನ ಸತ್ವಗಳ ಬಹಿರಂಗ ಪ್ರದರ್ಶವಾದಾಗಲೇ. ಕವಿ ಅತ್ಯಂತ ನವಿರಾಗಿ ತೆಳುವಿಡಂಬನೆಯ ದಾಟಿಯೊಂದಿಗೆ, ಸಮಾಧಾನ -ಹಾರೈಕೆಯೊಂದಿಗೆ ರಚನೆ ಕೊನೆಗೊಳಿಸುತ್ತಾರೆ. ಜನಸಮೂಹದ ಆತ್ಮಶೋಧನೆಯಿದಾಗಿರುವುದಕ್ಕೆ ಕಾರಣ, ಕಣವಿಯವರಲ್ಲಿ ಜಾಗೃತವಿರುವ ಗಾಂಧೀ ಪ್ರಜ್ಞೆ, ಸ್ವಾತಂತ್ರ್ಯ ಚಳುವಳಿಯ ಸಂವೇದನೆ ಮತ್ತು ಜನಸತ್ತಾತ್ಮಕ ಅರಿವು - ಮೂರೂ ತಳಕು ಹಾಕಿಕೊಂಡು ಮೂರು ಹಂತಗಳಲ್ಲಿ ಕ್ರಮವಾಗಿ ಸಂಯೋಜನೆಗೊಂಡಿರುವ ರೀತಿ. ಕನಸು, ಪುಳಕ, ನನಸು, ಹಾರೈಕೆಗಳು ಮೂರೂ ಸುನೀತಗಳಲ್ಲಿ ಪಡೆಯುವ ನುಡಿಕಟ್ಟು, ಕಣವಿಯವರ ಕಾವ್ಯಾತ್ಮಕ ವಿಚಾರಸರಣಿಯನ್ನು ಅನುಸರಿಸುತ್ತದೆ. ಸುನೀತ ರಚನೆಯ ಗಟ್ಟಿಮುಟ್ಟಾದ ಶಿಲ್ಪ, ಕುಸುರಿಗೆಲಸದಂತಿರುವ ಶಬ್ದಾಲಂಕಾರದ ಅಂತ್ಯಪ್ರಾಸ-ಒಳಪ್ರಾಸಗಳ ಹೆಣಿಕೆ; ವ್ಯಂಜಕತೆಯೊಂದಿಗೆ ರಂಜಿಸುವ ಉಪಮೆ-ರೂಪಕಗಳ ಸಂಯೋಜನೆ ವಿಚಾರವನ್ನು ಕಲ್ಪನೆಯ ಸ್ಥಿತಿಗೆ ಒಯ್ದು, ಕವಿಯ ಆಶಯವನ್ನು ಸ್ಫುರಣಗೊಳಿಸುತ್ತವೆ.

ಶಾಮಸುಂದರ ಬಿದರಕುಂದಿ.

# ೬೬. ಕನ್ನಡ ಜ್ಯೋತಿಯ ದೀಪಗಳು

ನೃಪತುಂಗ ಪ್ರೇರಣೆಯೆ ಆದ್ಯ ಗ್ರಂಥದ ಸ್ಮರಣೆ,
ಕಾವೇರಿಯಿಂದ ಗೋದಾವರಿಯವರೆಗೆ;
ನಾಡು-ನುಡಿ-ಗುಡಿ ತೇರು ಕವಿರಾಜ ಮಾರ್ಗದಲಿ
ಚೆಲುವ ಸುಭಟರ್ಕಳಿಗೆ ಅಭಿಮಾನದೊಸಗೆ.

ಕಾವ್ಯ ಧರ್ಮಕೆ ತುಡಿದು, ಮಾರ್ಗ-ದೇಸಿಯ ಬೆಸೆದು
ವಾಗ್ವಿಭವದುನ್ನತಿ ರಸಧ್ವನಿಯ ಮಿಡಿದು,
'ಒಂದೆ ಮಾನವ ಜಾತಿ' ಸ್ತಂಭ ದೀಪಿಕೆಯಂತೆ
ಪ್ರಜ್ವಲಿಸೆ, ಕನ್ನಡಕ್ಕೊಡೆಯನದೆ ಪೆಂಪು.

ರನ್ನ, ಕೃತಿಯೂ ಘನ್ನ, ಅತ್ತಿಮಬ್ಬೆಯ ಚೆನ್ನ -
ವೀರ-ಕರುಣೆಯ ನಾಟ್ಯ ನಿರ್ಮಾಣ ತಾಣ;
ಗುಣಕೆ ಮಚ್ಚರವಿರದೆ, ಉತ್ಸಾಹ ಬಚ್ಚಿಡದೆ
ಸಾಹಸ ಮಹೋನ್ನತಿಯೆ ಪಂಚಪ್ರಾಣ.

ಅನುಭಾವದಾಳದಲಿ ಜ್ಞಾನಶಿಖರದ ಬಿಂಬ
ಮಾತು ಜ್ಯೋತಿರ್ಲಿಂಗ; ನಿಸ್ಸಂಗ ಸಂಗ;
ಮತ ಪಂಥ ಮೀರಿ ಗಗನಾಂತರದ ಪೀಠದಲಿ
ಶೂನ್ಯ ಗುರು ಅಲ್ಲಮನ ಗುಡುಗಿನ ತರಂಗ.

ಭಕ್ತಿಭಾಂಡಾರಿ, ನಿರ್ಭಯದ ನಿಷ್ಠುರ ಭೇರಿ
ವಿನಯ ಮಾರ್ದವ, ಸಮತೆ-ಸಂಗಮದ ವೀಣೆ

ಸಹಜ ನಿಜಗನ್ನಡದಿ ಅರಳಿ ವಚನೋದ್ಯಾನ
ಸಕಲಜೀವರ ಲೇಸು ಬಸವಣ್ಣನಾಣೆ.

ಅಳಿಬಳಗ, ಮಾಮರವೆ, ಕೋಕಿ, ಬೆಳುದಿಂಗಳೇ-
ಮಲ್ಲಿಕಾರ್ಜುನಗೊಲಿದ ಚೊಕ್ಕ ಮಾದೇವಿ;
ಮಧುರಭಕ್ತಿ - ವಿರಕ್ತಿ, ಭಾವಗೀತೆಯ ಚಿಲುಮೆ
ಸಾವಿಲ್ಲ, ಕೇಡಿಲ್ಲ ಸವಿಗನ್ನಡ ಧರಿತ್ರಿ.

ಸುರ ನರರ ತೊರೆದು, ಸರಳ ಸಾಮಾನ್ಯರಂಗಳಕೆ
ಉತ್ಸಾಹ, ಲಲಿತ, ಮಂದಾನಿಲದ ರಗಳೆ;
ಹೊಸದಿಕ್ಕಿನೆಡೆ ಕಾವ್ಯ ತುಂಗಭದ್ರೆಯ ಹೊನಲು,
ಶಿವಕವೀಂದ್ರಗೆ ಸಹಜ ಕ್ರಾಂತಿ ಕಹಳೆ.

ಧರ್ಮಬೋಧೆಯ ದಾಹ ಸೌಂದರ್ಯ ಪ್ರಜ್ಞೆಯಲಿ
ಕರಗಿ ಮಿರುಗಿದ ಯಶೋದುಂದುಭಿಯ ಚರಿತೆ ;
ಜೀವನದದಮ್ಯತೆಗೆ, ವಿಧಿವಿಲಾಸದ ಪರಿಗೆ
ಜನ್ನದೃಷ್ಟಿಗೆ ಸೃಷ್ಟಿ ನೆಲದಾಳದೊರತೆ.

ಬಂಧ ಸುಂದರ, ದೃಷ್ಟಿ ಭಾಗವತ ಜಟಿಲ ಜೀ-
ವನ, ಚಿತ್ಕಲಾಪದಿ ವೀರನಾರಾಯಣ;
ಕುಮಾರವ್ಯಾಸನ ದೇಸಿ ಎರಡೂ ದಡವ ಸೂಸಿ
ಜನಮನವ ನಿಚ್ಚ ಹಸುರಾಗಿಸಿದ ವರುಣ.

ಪಲ್ಲವಿಯು ಫುಲ್ಲೆನಿಸಿ ಹಾಡು-ಹೆಜ್ಜೆಯ - ಗೆಜ್ಜೆ
ಈಸಿ ಜೈಸುವ ಶ್ರದ್ಧೆ ; ಉಳಿದ ಹಂಗೇಕೆ?
ತಂಬೂರಿ ನಾದ, ಚಿನ್ಮಯ ಧ್ಯಾನ ತನ್ಮಯದಿ
ಮೂರುತಿ ನಿಲಿಸಿ ಪುರಂದರ ದಿವ್ಯ ಶ್ರುತಿಗೆ.

ನಿಜಗುಣ ನಿಜಾನಂದ ವೀಣೆ, ಕನ್ನಡ ಜಾಣೆ,
ಜ್ಞಾನಚಿಂತಾಮಣಿಯ ಲೋಕ ವಿಖ್ಯಾತೆ,

ಪರಮಾನುಭವದ ಪರಮಾರ್ಥ ಬೆಟ್ಟವೆ ಶಂಭು-
ಬೆಳಗಿತು ಪರಂಜ್ಯೋತಿ, ನಿತ್ಯ ನಿಶ್ಚಲತೆ.

ಧಾರಿಣಿಯು ಕುಲದೈವ, ಸ್ವಾತಂತ್ರ್ಯ ಬಿಡದಿರುವ
ಎಲ್ಲರನು ಹಿಡಿದು ಅಲ್ಲಾಡಿಸುವ ಧೈರ್ಯ,
ಮನೆಮನೆಗು ತ್ರಿಪದಿ ; ದೀಪಾವಳಿಯು, ಸಿಡಿಮದ್ದು,
ಸಾರ್ವಕಾಲಿಕ ಮೌಲ್ಯ, ಸರ್ವಜ್ಞ ಆರ್ಯ.

ತ್ಯಾಗ-ಭೋಗದ ಮಹಾ ಸಾಂಗತ್ಯದೆರಕದಲಿ
ರತ್ನಮೌಕ್ತಿಕದಚ್ಚು ಭರತೇಶ ಮೂರ್ತಿ,
ಆಧ್ಯಾತ್ಮ ರಸವಂತರಂಗ, ಬಹಿರಂಗದಲಿ
ಪೂರ್ಣಜೀವನದರ್ತಿ ರಸಚಕ್ರವರ್ತಿ.

ಚಿತ್ತ ಬತ್ತಿಯ ಹೊಸೆದು, ಜೀವದೆಣ್ಣೆಯನೆರೆದು
ಭಾವ ಪ್ರಕಾಶದಲಿ ಬದುಕಿಸುವ ಪ್ರೀತಿ;
ದೀಪಕ್ಕೆ ದೀಪ ಹೊತ್ತಿಸಿ ಕಾವ್ಯ ರೂಪಕದಿ
ಭವ್ಯಜೀವನದರ್ಶಿ ಕನ್ನಡ ಜ್ಯೋತಿ.

೧. 'ದೇವನೊಬ್ಬ ನಾಮ ಹಲವು' ಎಂಬಂತೆ ಕವಿ ಚೆನ್ನವೀರ ಕಣವಿಯವರು 'ಕನ್ನಡ ಜ್ಯೋತಿಯ ದೀಪಗಳು' ('ಜೀನಿಯಾ' ಸಂಗ್ರಹ) ಎಂಬ ಕವಿತೆಯ ೧೪ ಚತುಷ್ಪದಿಗಳಲ್ಲಿ ಕನ್ನಡದ ೧೩ ಕವಿಗಳ ಸಾಧನೆಯನ್ನು ತಲಾ ಒಂದೊಂದು ಪದ್ಯದಲ್ಲಿ ವರ್ಣಿಸಿದ್ದಾರೆ. ಹದಿನಾಲ್ಕನೆಯ ದೀಪ ಸ್ವಯಂ ಕಣವಿಯವರೇ ಆಗಿದ್ದಾರೆ.

೨. ನೃಪತುಂಗನಿಂದ ರತ್ನಾಕರವರ್ಣಿಯವರೆಗೆ ಸ್ಥೂಲವಾಗಿ ಇತಿಹಾಸದ ಕಾಲಾನುಕ್ರಮದಲ್ಲಿ ೧೩ ಕವಿಗಳ ವಿಶೇಷತೆಗಳನ್ನು ವಿವರಿಸಿದ್ದಾರೆ. ನೃಪತುಂಗ, ಪಂಪ, ರನ್ನ, ಅಲ್ಲಮ, ಬಸವಣ್ಣ, ಮಹಾದೇವಿ, ಹರಿಹರ, ಜನ್ನ, ಕುಮಾರವ್ಯಾಸ, ಪುರಂದರ, ನಿಜಗುಣ, ಸರ್ವಜ್ಞ, ರತ್ನಾಕರವರ್ಣಿ ಇವರೇ ಆ ೧೩ ಕವಿಗಳಾಗಿದ್ದಾರೆ. ಇವರಲ್ಲಿ ಪಂಪ, ಹರಿಹರ ಮತ್ತು ರತ್ನಾಕರವರ್ಣಿ ಈ ಮೂವರನ್ನು ನೇರವಾಗಿ ಹೆಸರಿಸದೆ ಬೇರೆ ರೀತಿಯಲ್ಲಿ ಸೂಚಿಸಿದ್ದಾರೆ. ಅವರವರ ಕವಿತ್ವಶಕ್ತಿ ಆ ಸೂಚನೆಯಲ್ಲಿ ಧ್ವನಿತವಾಗಿದೆ.

೩. ಸ್ತಂಭ ದೀಪಿಕೆ, ಪ್ರಜ್ವಲಿಸು, ಜ್ಯೋತಿರ್ಲಿಂಗ, ಬೆಳದಿಂಗಳ ಬೆಳಕು, ಪಂರಜ್ಯೋತಿ, ದೀಪಾವಳಿ, ಸಿಡಿಮದ್ದು, ದೀಪ, ಪ್ರಕಾಶ, ಹೊತ್ತಿಸು- ಇವು ಈ ಕವನದಲ್ಲಿ ಕಂಡುಬರುವ Light effect ಆಗಿವೆ.

೪. ಗುಡುಗು, ಭೇರಿ, ವೀಣೆ, ಕಹಳೆ, ದುಂದುಭಿ, ಗೆಜ್ಜೆ ತಂಬೂರಿ, ಸಿಡಿಮದ್ದು - ಇವು ಈ ಕವಿತೆಯಲ್ಲಿ ಕೇಳಿ ಬರುವ Sound-effect ಆಗಿವೆ. ಇವುಗಳಲ್ಲಿ 'ಗುಡುಗು' ನೈಸರ್ಗಿಕವಾಗಿದ್ದರೆ ಉಳಿದವು ಮಾನವ ನಿರ್ಮಿತವಾಗಿವೆ.

೫. ಟಿ.ಎಸ್.ಎಲಿಯಟ್ ಡಾಂಟೆಯಲ್ಲಿ ಕಂಡುಕೊಂಡ Visual imagination (ಚಾಕ್ಷುಷ ಪ್ರತಿಭೆ) ಮತ್ತು ಮಿಲ್ಟನ್‌ನಲ್ಲಿ ಕೇಳಿಸಿಕೊಂಡ Auditory Imagination (ಶ್ರಾವಕ ಪ್ರತಿಭೆ) ಎರಡೂ ಸಮಾನ ರೂಪದಲ್ಲಿ ಧ್ವನಿತವಾಗಿವೆ.

೬. ಸರ್ವಜ್ಞನಲ್ಲಿ ಕಂಡುಬರುವ "ಸಿಡಿಮದ್ದು" ಏಕಕಾಲಕ್ಕೆ ಚಾಕ್ಷುಷವೂ ಶ್ರಾವಕವೂ ಆದ ಪ್ರತಿಮೆಯಾಗಿದೆ. 'ಮದ್ದು' ಶಬ್ದದ ಪುನರಾವರ್ತನೆಯಲ್ಲಿ ಸ್ಫೋಟಕ ವಸ್ತು ಮತ್ತು ಔಷಧ ಎಂಬ ಎರಡೂ ಅರ್ಥಗಳು ಸೂಚಿತವಾಗಿವೆ.

೭. ನದಿ-ನೀರಿನ ಸಂಕೇತಗಳಾಗಿ ಕಾವೇರಿ, ಗೋದಾವರಿ, ತುಂಗಭದ್ರೆ, ಚಿಲುಮೆ, ಒರತೆ, ವರುಣ ಪದಗಳು ಕೆಲಸ ಮಾಡುತ್ತವೆ.

೮. ಮತ-ಪಂಥಗಳನ್ನು ಮೀರಿ ಬ್ರಾಹ್ಮಣ, ಜೈನ, ವೀರಶೈವ ಕವಿದರ್ಶನಗಳನ್ನು ಸಾರರೂಪದಲ್ಲಿ ಗ್ರಹಿಸಲಾಗಿದೆ.

೯. ಕನ್ನಡದ ಸಾಹಿತ್ಯ ಪ್ರಕಾರಗಳಲ್ಲಿ ವಚನ, ಭಾವಗೀತೆ, ರಗಳೆ, ತ್ರಿಪದಿ, ಸಾಂಗತ್ಯಗಳನ್ನು ಪ್ರಾತಿನಿಧಿಕವಾಗಿ ಹೆಸರಿಸಲಾಗಿದೆ.

೧೦. ದೀಪ ಶಬ್ದಕ್ಕೆ 'ದ್ವೀಪ' ಎಂಬ ಅರ್ಥವನ್ನೂ ಕನ್ನಡ-ಕನ್ನಡ ನಿಘಂಟುವಿನಲ್ಲಿ ಕೊಡಲಾಗಿದೆ. ಕವಿತೆಯಲ್ಲಿರುವ ಎಲ್ಲ ದೀಪಗಳು ನಡುಗಡ್ಡೆಗಳಲ್ಲಿ ಇದ್ದರೂ ಅವು ಬಿರುಗಾಳಿಗೆ ಸಿಕ್ಕ ಹಡಗುಗಳಿಗೆ ಮಾರ್ಗದರ್ಶಕವಾಗಿವೆ. ಶೇಕ್ಸ್‌ಪಿಯರ್ ತನ್ನ ಸುನೀತವೊಂದರಲ್ಲಿ "it is an ever- fixed mark/ That looks on tempests and is never shaken" ಮಾದರಿಯವಾಗಿವೆ.

೧೧. ಅಲ್ಲಮನ 'ಮಾತು ಜ್ಯೋತಿರ್ಲಿಂಗ'ವಾಗಿದೆ. ಮಾತಿನ ಜ್ಯೋತಿರ್ಲಿಂಗವು ಅರ್ಥವಾಗದವರಿಗೆ ಭಾರತದಲ್ಲಿ ದ್ವಾದಶ ಜ್ಯೋತಿರ್ಲಿಂಗಗಳಿವೆ. ಬಸವಣ್ಣನ ಇಷ್ಟಲಿಂಗದ ಉಲ್ಲೇಖವಿಲ್ಲ. 'ದೀಪಲಿಂಗ' ಎಂಬ ಪದ ರೂಢಿಯಲ್ಲಿರುವಂತೆ ಕಂಡುಬರುವುದಿಲ್ಲ. ನಿಜಗುಣರ 'ಪರಂಜ್ಯೋತಿ' ನಿರ್ಮಲವೂ ನಿತ್ಯತೃಪ್ತವೂ ಪ್ರಶಾಂತವೂ ಆಗಿದೆ. ಪಂಪನ 'ಸ್ತಂಭದೀಪಿಕೆ'ಉಳಿದ ದೀಪಗಳಿಗಿಂತ ಉಜ್ವಲವಾಗಿ ಪ್ರಕಾಶಿಸುತ್ತದೆ. ಜ್ಯೋತಿಗೆ ಹೋಲಿಸಿದರೆ ದೀಪದಲ್ಲಿ ಶಾಖವು ಕಡಿಮೆ. ಸುಡುವ ಶಕ್ತಿಯೂ ಕಡಿಮೆ ನಾವಾಗಿ ಹತ್ತಿರ ಹೋಗಿ ಸುಡಬೇಕು ಅಥವಾ ಸುಟ್ಟುಕೊಳ್ಳಬೇಕು ಅಷ್ಟೆ.

೧೨. ಅಲಂಕಾರ ವಿಶೇಷ: ಅರ್ಥಾಲಂಕಾರಗಳಲ್ಲಿ ಕವಿಯೇ ಕೊನೆಯ ಪದ್ಯದಲ್ಲಿ ಸೂಚಿಸಿರುವಂತೆ ರೂಪಕಾಲಂಕಾರದ ಬಳಕೆ ಕವಿತೆಯಲ್ಲಿ ರಾರಾಜಿಸುತ್ತಿದೆ. ಉಪಮಾಲಂಕಾರದ ಒಂದು

ಉದಾಹರಣೆಯೂ ಇಲ್ಲ. ಶಬ್ದಾಲಂಕಾರಗಳಲ್ಲಿ ಕವಿ ಹೆಚ್ಚಿನ ಪದ್ಯಗಳಲ್ಲಿ ೨ ಮತ್ತು ೪ನೇ ಸಾಲುಗಳಲ್ಲಿ ಅಂತ್ಯ ಪ್ರಾಸಗಳನ್ನು ಬಳಸಿದ್ದಾರೆ. ಅನುಪ್ರಾಸಗಳು ಹೇರಳವಾಗಿವೆ.

೧೩. ವ್ಯಾಕರಣ ವಿಶೇಷ: ಈ ಕವಿತೆಯ ೫೬ ಸಾಲುಗಳಲ್ಲಿ ೨೦೦ಕ್ಕಿಂತ ಹೆಚ್ಚು ಶಬ್ದಗಳಿದ್ದರೂ ಪೂರ್ಣ ಕ್ರಿಯಾಪದ ಇರುವುದು ಒಂದೇ ಒಂದು, ಅದೂ ಅಚ್ಚಗನ್ನಡದ ಶಬ್ದ - 'ಬೆಳಗಿತು' ಇದು ಕವಿ ಲೆಕ್ಕಾಚಾರ ಮಾಡದೇ ತಾನಾಗಿ ಸಂಭವಿಸಿದ ಅದ್ಭುತ ಸಾಧನೆ ಎಂದು ನನ್ನ ಅನಿಸಿಕೆ, ಸಂಸ್ಕೃತ - ಕನ್ನಡಗಳ ಸಮರಸದ ಪಾಕ ಕವಿತೆಯ ತೂಕವನ್ನು ಹೆಚ್ಚಿಸಿದೆ. ಬಸವಣ್ಣನ ನಿಜಗನ್ನಡವಾಗಲೀ, ಅಕ್ಕಮಹಾದೇವಿಯ ಸವಿಗನ್ನಡವಾಗಲೀ ಸಂಸ್ಕೃತ ವಿರೋಧಿಯಲ್ಲ ಎಂದು ಸಾಬೀತಾಗುತ್ತದೆ. ಇಡೀ ಕವಿತೆಯಲ್ಲಿ ಒಂದೇ ಒಂದು ಇಂಗ್ಲಿಷ ಶಬ್ದವೂ ಇಲ್ಲ ಎಂಬುದು ಗಮನಾರ್ಹವಾಗಿದೆ.

೧೪. ಹದಿಮೂರು ಜನ ಕವಿಗಳ ವೈಶಿಷ್ಟ್ಯಗಳನ್ನು ತಲಾ ನಾಲ್ಕು ಸಾಲುಗಳಲ್ಲಿ ಸಂಗ್ರಹಿಸಿ, ಛಂದೋಬದ್ಧವಾಗಿ ಚಿತ್ರಿಸಿರುವ ಕವಿಯ ಶಿಸ್ತು ಮತ್ತು ಸಂಯಮ ಪ್ರಶಂಸನೀಯವಾಗಿದೆ. 'ವಿಶ್ವಭಾರತಿಗೆ ಕನ್ನಡದಾರತಿ' ಎತ್ತಿದ ಕವಿ ಇಲ್ಲಿ ಬತ್ತಿ -ಎಣ್ಣೆ-ಪ್ರಕಾಶಗಳ ರೂಪಕದಲ್ಲಿ 'ಮೊಳಗಲಿ ಕನ್ನಡ ಜಯಭೇರಿ' (ನಿರ್ಭಯದ ನಿಷ್ಠುರ ಭೇರಿ) ಎಂಬುದನ್ನು ಮತ್ತೆ ಸಾರಿದ್ದಾರೆ.

ಹೆಚ್. ಆರ್. ಅಮರನಾಥ

# ೬೭. ಕೀಟಕ

ಕೀಟಗಳೆಂದರೆ ಎಲ್ಲಿಲ್ಲದ ಕುತೂಹಲ ನನಗೆ;
ಅವುಗಳ ಬಗೆಬಗೆಯ ಮಾಟ, ಆಟ, ಬೇಟ ಕೂಡ.
ಅಡ್ಡಾದಿಡ್ಡಿ ಕಡ್ಡಿಯಂತಹ ಕಾಲು, ವಿಚಿತ್ರ ನಡಿಗೆ ನೋಡ.
ಒಡೆದು ಕಾಣುವ ಶರೀರದ ಖಂಡ-ತುಂಡದ ತುದಿಗೆ
ಮೂಸಿ, ಮೆಲ್ಲನಲುಗುವ ಮೀಸೆ, ಅವಲೋಕಿಸುವ
ಗುಂಡು ಗಾಜಿನಂತಹ ಕಣ್ಣು, ವಿವಿಧ ಮೈಬಣ್ಣಗಳು.

ಉಳ್ಳಿಪರೆಯಂಥ ರೆಕ್ಕೆಗಳಲ್ಲಿ ಒಳ್ಳೊಳ್ಳೆ ನಕ್ಷೆ
'ಜಿರ್‌ಜಿರ್' ಜಿಗಿದು ಹಾರುತ್ತ ನಮ್ಮ ಸುತ್ತಮುತ್ತ
ತಮ್ಮ ಮಿತಿಯಲ್ಲೆ ನಡೆಸಿರುತ್ತವೆ ಸೃಷ್ಟಿ ಸಮೀಕ್ಷೆ.
ಮಾನವನೊಂದಿಗೇ ಹುಟ್ಟಿ ಬೆನ್ನಟ್ಟಿ ಬಂದಿರಬಹುದು;
ತಮ್ಮ ಲೀಲೆಗೆ, ಹಾರುವ ಕಲೆಗೆ, ಒಂದಿಷ್ಟು ಕೀಟಲೆಗೆ
ಪರಸ್ಪರ ದಾಳಿ-ಧೂಳಿ, ಆಮೇಲೆ ತಂತಮ್ಮ ನೆಲೆಗೆ.

ಬೇರು ಕಡಿದು, ಕಾಂಡ ಕೊರೆದು, ಎಲೆತಿಂದು, ಕಾಳು ಜೊಳ್ಳಾಗಿಸಿ-
ಕಚ್ಚಿ, ಚುಚ್ಚಿ ರಕ್ತದ ರುಚಿ ನೋಡಿ ಹಾಡಿಕೊಂಡಿವೆ ಕೆಲವು.
ಹೊಲಸಿನಲಿ ಹುಲುಸಾಗಿ ಸಿಕ್ಕತ್ತ ಹಾರುವ ನೊಣ -
ಜಾಡಿಸುವದೆ ನಮಗೆ ಉದ್ಯೋಗ - ಹರಡುತ್ತ ರೋಗ.

ವೈವಿಧ್ಯದಲ್ಲಿ ಮಾನವನಿಗಿಂತ ಮಿಗಿಲು ಕೀಟ ಪ್ರಪಂಚ:
ದಿಗಿಲು ಹುಟ್ಟಿಸಬಹುದು ಅಗಾಧ ಸಂತಾನ ಶಕ್ತಿ.
ಬೆರಳು ಕಚ್ಚುವ ಹಾಗೆ ಬೆಳವಣಿಗೆ. ಇಲ್ಲವೆಂದಲ್ಲ
ಹಿತಶತ್ರುಗಳು, ಅಥವಾ ನಿರುಪದ್ರವಿ ಕ್ಷುದ್ರ ಜೀವಿಗಳು,

ಬಣ್ಣ ಬಣ್ಣದ ಚಿಟ್ಟೆ, ಹೂವಿನ ತಟ್ಟೆ, ಗಾಳಿಯಲಿ ಹಾರಬಿಟ್ಟು
ಜೇನ್ನೊಣದ ಹಿಂಡು ಬಂಡುಂಡು ಕಟ್ಟಿದ ಹುಟ್ಟು,
ಎಟುಕದಂತಿದೆ ಇಂದಿಗೂ ಆ ಕಲೆಯ ಗುಟ್ಟು.
ಪಿಡುಗು ಕೀಟಗಳ ಹುಟ್ಟಡಗಿಸಲು ಹುಡುಕಿದೌಷಧ
ಕುಡಿದು ಬದುಕಿ ಬಲಗೊಂಡ ಮಾಯಕ.
ಹೊಸ ಬಗೆಯ ರಾಸಾಯನಿಕ, ಅವಕೆ ಕುಡಿದಂತೆ ಪಾನಕ.
ಉಳಿದೆಡೆಗಳಲ್ಲಿ ಪಸರಿಸಿಬಿಟ್ಟ ವಿಷಧಾರೆ,
ಸೋಲು -ಗೆಲುವಿನ ಮಾನವ ಪ್ರಯೋಗಶಾಲೆ.

ಶೋಧನೆ, ಶೋಧನೆ, ಇನ್ನೂ ಶೋಧನೆ-
ನಿಸರ್ಗದ ಮಡಿಲಿಗೇ ಹಿಂದಿರುಗಿದ್ದಾನೆ ಕೊನೆಗೆ,
ಪರಿಸರವ, ಜೀವಜಾಲವ ಏರುಪೇರಾಗಿಸದ ಕ್ರಮಕ್ಕೆ.

ವಂಶ ನಿರ್ವಂಶಗೊಳಿಸುವ ಸಾಹಸ ವ್ಯರ್ಥವೆನಿಸಿ
ಕೀಟಗಳಿಂದಲೇ ಕೀಟಗಳ ನಾಶ : ಜೈವಿಕ ನಿಯಂತ್ರಣಕ್ಕೆ.

ನಡೆದಿಲ್ಲವೇ ಮತ್ತೆ ಮನುಷ್ಯನಿಂದಲೇ ಮನುಷ್ಯನ ಕೊಲೆ ?
ಜೀವಕೆಲ್ಲಿದೆ ಬೆಲೆ ? ನನ್ನೆದುರು ಉರಿವ ಮೇಣಬತ್ತಿಗೆ
ರೆಕ್ಕೆಬಡಿದು ಸುಟ್ಟುಕೊಂಡಿದೆ ಪತಂಗ, ಸುತ್ತೆಲ್ಲ ಕತ್ತಲೆ.

ಮನುಷ್ಯ ಮತ್ತು ಅವನ ಸಹವರ್ತಿ ಜೀವಿಗಳ (ಸಸ್ಯಗಳೂ ಸೇರಿದಂತೆ) ಪೀಡಕವೆಂದೇ ಬಿಂಬಿಸಲ್ಪಟ್ಟ 'ಕೀಟಕ' ಕುರಿತಂತೆ ಕವಿತೆ (ಜೀನಿಯಾ' ಸಂಗ್ರಹ) ರಚಿಸುವಲ್ಲಿ ಕಣವಿಯವರ ಗ್ರಹಿಕೆಗೆ ಬಹು ಪ್ರಮಾಣದ ವೈಜ್ಞಾನಿಕ ನೆಲೆಗಟ್ಟಿರುವುದು ಕಂಡುಬರುತ್ತದೆ. ಪಾತರಗಿತ್ತಿ, ದೀಪದ ಹುಳು, ಬಸವನ ಹುಳು ಇಂಥ ಚಿಕ್ಕ ಚಿಕ್ಕ ಜೀವಿಗಳ ಮನೋಹರ ಅಂಶಗಳನ್ನು ಕವಿತೆಯನ್ನಾಗಿಸಿ ತಾವು ಖುಷಿಪಟ್ಟು-ಓದುಗರನ್ನೂ ರೋಮಾಂಚನಗೊಳಿಸಿದ ಕಾವ್ಯಪರಂಪರೆಯಲ್ಲಿ ನಾವು ನಡೆದು ಬಂದಿದ್ದೇವೆ. ಆದರೆ ಒಟ್ಟಾರೆ ಒಂದು ಜೀವ ಸಮೂಹವನ್ನೇ ಒಂದು ಕವನದಲ್ಲಿ ಹಿಡಿದಿಡುವ ಕಠಿಣ ಪ್ರಯತ್ನಕ್ಕೆ ಮುಖ್ಯ ಕಾರಣ ಕವಿಗೆ ಆ ಜೀವಸೃಷ್ಟಿಯ ಬಗೆಗಿರುವ ಅಪರಿಮಿತ ಕುತೂಹಲ ಮತ್ತು ಜಿಜ್ಞಾಸೆ.

ಕೀಟಗಳೆಂದರೆ ಎಲ್ಲಿಲ್ಲದ ಕುತೂಹಲ ನನಗೆ:
ಅವುಗಳ ಬಗೆಬಗೆಯ ಮಾಟ, ಆಟ, ಬೇಟ, ಕೂಡ,

ಕೀಟ ಪ್ರಪಂಚದ ವೈವಿಧ್ಯ ವಿಜ್ಞಾನಿಗಳನ್ನೂ ದಂಗುಬಡಿಸಿರುವ ವಿಚಾರ. ಇತರೆ ಯಾವುದೇ ತರ್ಕಕ್ಕೂ ನಿಲುಕದ ಸಂಗತಿಗಳನ್ನು ಕಾವ್ಯದ ಪರಿಭಾಷೆಯಲ್ಲಿ ಬಂಧಿಸಿರುವ ಇಲ್ಲವೆ ಮುಕ್ತಗೊಳಿಸುವ ಸಾಧ್ಯತೆಗಳೆರಡನ್ನೂ ಇಲ್ಲಿ ಚೆನ್ನಾಗಿಯೇ ಬಳಸಿಕೊಳ್ಳಲಾಗಿದೆ.

**ಅಡ್ಡಾದಿಡ್ಡಿ ಕಡ್ಡಿಯಂತಹ ಕಾಲು, ವಿಚಿತ್ರ ನಡಿಗೆ ನೋಡ,**
**ಒಡೆದು ಕಾಣುವ ಶರೀರದ ಖಂಡ-ತುಂಡದ ತುದಿಗೆ**
**ಮೂಸಿ, ಮೆಲ್ಲನಲುಗುವ ಮೀಸೆ, ಅವಲೋಕಿಸುವ**
**ಗುಂಡು ಗಾಜಿನಂತಹ ಕಣ್ಣು, ವಿವಿಧ ಮೈಬಣ್ಣಗಳು**

ಇಂಥ ಸಾಲುಗಳನ್ನು ಓದಿದಾಗ ಕೃಷಿ ಪದವಿ ಹಂತದಲ್ಲಿ ನಾವು ಕಲಿತ ಅನೇಕ ಸಂಗತಿಗಳು ಸ್ಮೃತಿಪಟಲದಲ್ಲಿ ಸುಳಿದುಹೋದರೆ, ಮುಂದಿನ ವಿವರಣೆಗಳು ಸದ್ಯಕ್ಕೆ ನಾನು ಕಾರ್ಯ ನಿರ್ವಹಿಸುತ್ತಿರುವ ಕೃಷಿ ಇಲಾಖೆಯ ತಂತ್ರಜ್ಞಾನದ ತಿಳುವಳಿಕೆಯನ್ನು ಪುನಶ್ಚೇತನಗೊಳಿಸುವಂತಿವೆ. ಕಡ್ಡಿಯಂತಹ ಕಾಲು, ವಿಚಿತ್ರ ನಡಿಗೆ, ಶರೀರದ ಖಂಡ (Segments) ಇಂದ್ರಿಯಾತ್ಮಕವಾಗಿ ವರ್ತಿಸುವ ಮೀಸೆಗಳು, ಗಾಜಿನಂತಹ ಕಣ್ಣು ಇತ್ಯಾದಿ, ಇತ್ಯಾದಿ. ಕೀಟಕ್ಕಿರುವ ಗುಂಡು ಗಾಜಿನಂತಹ ಸಂಯುಕ್ತ (Compound eye) ಇಂತಹ ಜೀವಿಗಳಿಂದ ಸಿಗುವ ಅದ್ಭುತ ಕೊಡುಗೆ. ಒಂದು ಸಂಯುಕ್ತ ಕಣ್ಣಿನಲ್ಲಿ ಅಸಂಖ್ಯ ಸಾಮಾನ್ಯ ಕಣ್ಣುಗಳು ಸಮ್ಮಿಳಿತಗೊಂಡಿದ್ದು, ಆ ಜೀವಿಯು ಏಕಕಾಲಕ್ಕೆ ೩೬೦ ಡಿಗ್ರಿ ಕೋನಗಳಲ್ಲಿ ನೋಡಲು ಸಾಧ್ಯವಂತೆ. ಹೀಗೆ ಕೀಟದ ಬಾಹ್ಯರೂಪವನ್ನು ವರ್ಣಿಸುವ ಕ್ರಮಾನುಗತಿಯಲ್ಲಿ 'ವಿವಿಧ ಮೈಬಣ್ಣಗಳು' ಎಂಬ ಅಂಶವನ್ನು ಕೊನೆಗೆ ಸೇರಿಸಿರುವದು ಬಣ್ಣ ಎಷ್ಟು ಅಮುಖ್ಯವೆನ್ನುವ ದೃಷ್ಟಿಯಿಂದ ಔಚಿತ್ಯಪೂರ್ಣವಾಗಿದೆ.

**ಉಳ್ಳಿಪರೆಯಂಥ ರೆಕ್ಕೆಗಳಲ್ಲಿ ಒಳ್ಳೊಳ್ಳೆ ನಕ್ಷೆ**
**'ಜಿರ್ ಜಿರ್' ಜಗಿದು ಹಾರುತ್ತ, ನಮ್ಮ ಸುತ್ತಮುತ್ತ**
**ತನ್ನ ಮಿತಿಯಲ್ಲಿ ನಡೆಸಿರುತ್ತವೆ ಸೃಷ್ಟಿ-ಸಮೀಕ್ಷೆ.**

ಬಾಹ್ಯ ರಚನೆಯನ್ನು ವರ್ಣಿಸುತ್ತ ಹೊರಟ ರೀತಿ ಕ್ರಮೇಣ ಕೀಟದ ಚಟುವಟಿಕೆಗಳತ್ತ ವಾಲುತ್ತದೆ. ವಿಕಾಸವಾದದ ಕಡೆಗೂ ಕವಿ ತನ್ನ ಗಮನಹರಿಸಿ 'ಮಾನವನೊಂದಿಗೇ ಹುಟ್ಟಿ ಬೆನ್ನಟ್ಟಿ ಬಂದಿರಬಹುದು' ಎನ್ನುವ ಸಾಲಿನೊಂದಿಗೆ ಮನುಷ್ಯ ಮತ್ತು ಕೀಟದ ನಡುವಿನ ಸಮಾಂತರತೆಯನ್ನು ಪ್ರಚುರಪಡಿಸುತ್ತಾನೆ. ಅವನೊಳಗಿರುವ ಕೀಟವನ್ನು ಗಮನಿಸಬೇಕು. ಕೀಟದ ವಿಶ್ವರೂಪದರ್ಶನಕ್ಕೆ ಸಾಮಾನ್ಯವಿವರಣೆಯಿಂದ ತೃಪ್ತಿಗೊಳ್ಳದ ಕವಿ ಮನಸ್ಸು, ಅದು ಮಾಡಬಹುದಾದ ಮತ್ತು ಈಗಾಗಲೇ ಮಾಡಿರುವ ಚರಿತ್ರಾರ್ಹ ಹಾನಿಯ ಹಲವು ಮುಖಗಳನ್ನು ಪರಿಚಯಿಸುತ್ತದೆ. ಹಾಗೆಂದ ಮಾತ್ರಕ್ಕೆ ಪ್ರಕೃತಿಯಲ್ಲಿ ಯಾವುದೂ ಅಪಾತ್ರವಲ್ಲ.

**ವೈವಿಧ್ಯದಲ್ಲಿ ಮಾನವನಿಗಿಂತ ಮಿಗಿಲು ಕೀಟ ಪ್ರಪಂಚ;**
**ದಿಗಿಲು ಹುಟ್ಟಿಸಬಹುದು ಅಗಾಧ ಸಂತಾನಶಕ್ತಿ**

**ಬೆರಳು ಕಚ್ಚುವ ಹಾಗೆ ಬೆಳವಣಗೆ, ಇಲ್ಲವೆಂದಲ್ಲ**
**ಹಿತಶತ್ರುಗಳು, ಅಥವಾ ನಿರುಪದ್ರವಿ ಕ್ಷುದ್ರ ಜೀವಿಗಳು.**

ಇಲ್ಲೆಲ್ಲ ಕಾಣುವದು ಒಬ್ಬ ವಿಜ್ಞಾನದ ವಿದ್ಯಾರ್ಥಿಯ ವೀಕ್ಷಣೆ, ಕೀಟಶಾಸ್ತ್ರಜ್ಞನ ಪರಿವೀಕ್ಷಣೆ. ಕೀಟ ಪ್ರಪಂಚದ ವೈವಿಧ್ಯಕ್ಕೆ ಮನಸ್ಸು ಬೆರಗುಗೊಂಡಿದೆ. ಮನುಷ್ಯ ಹಗೆ ಸಾಧಿಸಿ ಸೋಲಿಸಲು ಹೊರಡುವ ಅನೇಕ ಜೀವಿಗಳು ಅವನ ಅಹಂಗೆ ತಕ್ಕ ಶಾಸ್ತಿ ಮಾಡಲು ನಡೆಸುವ ನಿರಂತರ ಯತ್ನಗಳಲ್ಲಿ ಅವು ಸಾಧಿಸಿರುವ ಸಂತಾನಶಕ್ತಿ (fecundity)ಯೂ ಒಂದು.

**ಪಿಡುಗು ಕೀಟಗಳ ಹುಟ್ಟಡಗಿಸಲು ಹುಡುಕಿದೌಷಧ**
**ಕುಡಿದು ಬದುಕಿ ಬಲಗೊಂಡ ಮಾಯಕ.**

ಆರ್ಥಿಕ ನಷ್ಟವಾಗದಂತೆ ಬೆಳೆಯ ಪೀಡೆಯನ್ನು 'ನಿರ್ವಹಣೆ' ಮಾತ್ರ ಮಾಡಬೇಕಾದ ಮಾನವ, ಅದರ ಹುಟ್ಟಡಗಿಸಲು ಹೋಗಿ ಮಾಡಿಕೊಂಡ ಪ್ರಮಾದ ಮೇಲಿನೆರಡು ಸಾಲಿನಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ.

**ಹೊಸಬಗೆಯ ರಾಸಾಯನಿಕ, ಅವಕೆ ಕುಡಿದಂತೆ ಪಾನಕ**
**ಉಳಿದೆಡೆಗಳಲ್ಲಿ ಪಸರಿಸಿಬಿಟ್ಟ ವಿಷಧಾರೆ,**
**ಸೋಲು-ಗೆಲುವಿನ ಮಾನವ ಪ್ರಯೋಗಶಾಲೆ.**

ಹೊಸ ವಿಷ, ಕೀಟದ ನಿರೋಧ ಶಕ್ತಿ, ಇಂದು ಸಮಾಜದಲ್ಲಿ ಕಂಡುಬರುವ ರಾಗದ್ವೇಷಗಳ ಮೇಲಾಟದ ಮಾದರಿ. ದಾರಿತಪ್ಪಿದ ಜನರ ಸುಧಾರಣೆಗೆ ರಚನಾತ್ಮಕ ಮಾರ್ಗ ತೋರದೆ, ಸೇಡಿನ ಕ್ರಮಕ್ಕೆ ಮುಂದಾದರೆ ಉಂಟಾಗಬಹುದಾದ ಅವಘಡಗಳ ಪ್ರತೀಕವಾಗಿಯೂ ಈ ಕಾವ್ಯ ಸಂದರ್ಭವನ್ನು ಪರಿಗಣಿಸಬಹುದು. ಜಾಗತೀಕರಣದ ದುಷ್ಪರಿಣಾಮವನ್ನು ಅಲಕ್ಷಿಸುವಂತಿಲ್ಲ.

**ವಂಶ ನಿರ್ವಂಶಗೊಳಿಸುವ ಸಾಹಸ ವ್ಯರ್ಥವೆನಿಸಿ**
**ಕೀಟಗಳಿಂದಲೇ ಕೀಟಗಳ ನಾಶ; ಜೈವಿಕ ನಿಯಂತ್ರಣಕ್ಕೆ**

ಈ ಕ್ಷಣದ ಬೆಳವಣಿಗೆಗೆ ಪ್ರತಿಸ್ಪಂದಿಸುವ ಮತ್ತು ಆ ಮಾಹಿತಿಯನ್ನು ಸ್ವೀಕರಿಸುವ ಮನಸ್ಸಿನ ಜಾಗ್ರತ ಸ್ಥಿತಿಗೆ ಇವೆರಡು ಸಾಲುಗಳು ನಿದರ್ಶನ. ಜೈವಿಕ ನಿಯಂತ್ರಣ ಕ್ರಮವೂ ಮನುಷ್ಯನ ಅತಿಕ್ರಮಣವೇ.

**ನಡೆದಿಲ್ಲವೇ ಮತ್ತೆ ಮನುಷ್ಯನಿಂದಲೇ ಮನುಷ್ಯನ ಕೊಲೆ ?**
**ಜೀವಕೆಲ್ಲಿದೆ ಬೆಲೆ ? ನನ್ನೆದುರು ಉರಿವ ಮೇಣಬತ್ತಿಗೆ**
**ರೆಕ್ಕೆ ಬಡಿದು ಸುಟ್ಟುಕೊಂಡಿದೆ ಪತಂಗ: ಸುತ್ತೆಲ್ಲ ಕತ್ತಲೆ.**

ಕೀಟ ಪ್ರಪಂಚದ ದರ್ಶನದಲ್ಲಿ, ಮನುಷ್ಯನೊಂದಿಗೆ ಅದು ನಡೆಸಿರುವ ಮುಖಾಮುಖಿ ಪರಿಚಯದೊಂದಿಗೆ ಅಂತಿಮವಾಗಿ ಮನುಷ್ಯರಲ್ಲಿಯೇ ನಡೆಯುತ್ತಿರುವ ಶೋಷಣೆಯ ಪರಾಕಾಷ್ಠೆಯನ್ನು ಕಾಣಿಸುವ ಹಂತಕ್ಕೆ ಕವಿತೆ ಸಾಗುತ್ತದೆ. ಮೇಣದ ಬತ್ತಿಯ ಜ್ವಾಲೆಗೆ ಸುತ್ತಿ ಬೀಳುವ ಪತಂಗ, ಕಣ್ಣುಕೋರೈಸುವ ವೈಭೋಗದ ಆಕರ್ಷಣೆಗೆ ಬಿದ್ದು ನಾಶವಾಗುವ ಮನುಷ್ಯನನ್ನೇ ಪ್ರತಿನಿಧಿಸುತ್ತದೆ. ನಂತರ ಉಳಿಯುವುದು ಅಜ್ಞಾನದ ಅಂಧಕಾರ- 'ಸುತ್ತೆಲ್ಲ ಕತ್ತಲೆ'.

ಕೊನೆಯ ಮೂರು ಸಾಲುಗಳಲ್ಲಿನ ಅಂತ್ಯಪ್ರಾಸ, ಅನುಪ್ರಾಸ, ಸ್ವರಪ್ರಾಸಗಳ ಸಮರ್ಥ ಬಳಕೆ, ಅಳವಡಿಸಿಕೊಂಡಿರುವ ತಾತ್ವಿಕಾರ್ಥ, ಪ್ರತಿಪಾದಿಸುವ ವಾಸ್ತವ ಕವನದ ಒಟ್ಟು ಯಶಸ್ಸಿನ ಪ್ರಮಾಣವನ್ನು ಹೆಚ್ಚಿಸಿವೆಯೆಂದು ಹೇಳಬಹುದು.

ಚನ್ನಪ್ಪ ಅಂಗಡಿ ಬಮ್ಮನಹಳ್ಳಿ

# ೬೮. ಸೂರ್ಯನಿದ್ದಾನೆ ಬೆನ್ನ ಹಿಂದೆ

ಸೂರ್ಯನಿದ್ದಾನೆ ಬೆನ್ನ ಹಿಂದೆ -
ಅಂತೆಯೇ ದುಡುದುಡು ಹೆಜ್ಜೆಯಿಟ್ಟು ಮುಂದೆ ಸಾಗುತ್ತೀರಿ
ನಿಮ್ಮ ನೆರಳನ್ನೇ ತುಳಿಯುತ್ತ.
ನೆತ್ತಿಯ ಮೇಲೆ ಬಂದಾಗ ಸ್ವಲ್ಪ ಸುಸ್ತಾಗಿ
ತಲೆಯ ಮೇಲೆ ಕೈಹೊತ್ತು ಕೂಡುತ್ತೀರಿ-
ನೆರಳು ಹುಡುಕುತ್ತ.

ನಿಮ್ಮ ಕಣ್ಣೆದುರಿಗೇ ಇಳಿಯುತ್ತ ಬರುತ್ತಾನೆ.
ನೆರಳು ಹಿಂದೆ ಸರಿದು,. ದಾರಿ ಮಾಡಿಕೊಡುತ್ತದೆ.
ಹೊರಳಿ ಹೊರಳಿ ನೋಡುತ್ತ ಮತ್ತೆ ಹೊರಡುತ್ತೀರಿ.

ಮೋಡದ ಮರೆಗಿದ್ದರೂ ಕೆಳಗೆ ತಗ್ಗು ದಿನ್ನೆಗಳಲ್ಲಿ
ಹೊಲಗದ್ದೆಗಳಲ್ಲಿ ಹಸುರು ಬೆಳಕಾಗಿ ಹರಡಿಕೊಳ್ಳುತ್ತಾನೆ.
ತುಂಬಿನಿಂತ ಕೆರೆಗಳಲ್ಲಿ, ತುಳುಕಿ ಹರಿವ ಹೊಳೆಗಳಲ್ಲಿ
ಪ್ರೀತಿಯ ಪ್ರತಿಬಿಂಬಕ್ಕೆ ಚುಂಬಿಸುತ್ತಾನೆ.
ಮುಳುಗುವ ಮುನ್ನ ಮುಗಿಲಿನ ತುಂಬ
ಕೆಂಪು ಹೂವಿನ ಕುಡಿಕೆಗಳನ್ನು ಹಾರಿಸಿ
ಸುರುಸುರು ಬತ್ತಿ ಹಚ್ಚಿ
ಸದ್ದಿಲ್ಲದೆ ಸರಿದು ಹೋಗುತ್ತಾನೆ.
ನಿಮ್ಮ ನೆರಳನ್ನೂ ಜೊತೆಗೆ ಒಯ್ದುಬಿಡುತ್ತಾನೆ.

ಇದ್ದವರು ವಿದ್ಯುದ್ದೀಪ ಹಚ್ಚಿ ಗ್ಯಾಸಿನ ಮೇಲೆ ಕುಕ್ಕರ್ ಇಟ್ಟು
ಟಿ.ವಿ. ಮುಂದೆ ಠೀವಿಯಿಂದ ಕುಳಿತುಕೊಳ್ಳುತ್ತಾರೆ.

ಇಲ್ಲದವರು ಬುಡ್ಡಿಗೆ ಕಡ್ಡೀ ಕೊರೆದು, ಒಲೆಗೆ ಉರಿ ಹಚ್ಚಿ
ಗೋಡೆಯ ಮೇಲೆ ನೆರಳು ನೋಡುತ್ತಾರೆ.
ಮತ್ತೆ ಬರುತ್ತಾನೆಂಬ ಭರವಸೆಯಲ್ಲಿ
ನಿದ್ದೆಯೊಡನೆ ಮುದ್ದಾಡುತ್ತ ಬಾರದಿದ್ದರೆ
ಒದ್ದಾಡುತ್ತ ಗುರ್ಖಾನ ಬಡಿಗೆಯ ಸಪ್ಪಳಕ್ಕೆ
ಧೈರ್ಯಗೊಂಡು ಮಗ್ಗುಲಿಗೆ ಹೊರಳುತ್ತಾರೆ.

ಇರುಳಿನ ಚಳಿಯಲ್ಲಿ ಸೂರ್ಯನ ನೆನಪು
ಎಷ್ಟೊಂದು ಸುಖ ಕೊಡುತ್ತದಲ್ಲವೇ ?
ಸಂದಿಗೊಂದಿಗಳಲ್ಲಿ ಬೆಳಕು ತೂರಿ ಶಾಖ (ಕ್) ಕೊಟ್ಟು
ಹುಟ್ಟು-ಸಾವು ಕೆಂಪಾಗುತ್ತವೆ.
ನೆಲದ ಹಸಿರನ್ನು ಕಂಡು ಹಿಗ್ಗಿ, ಆಕಾಶದ ನೀಲಿ
ಕಡಲಿಗೆ ಕನ್ನಡಿ ಹಿಡಿದಾಗ, ಅದರ ಒಡಲಿನಲ್ಲಿ
ಸೂರ್ಯ ವಿಶ್ರಾಂತಿ ಪಡೆಯುತ್ತಾನೆ.

ನೆಲದಂತೆಯೇ ಮುಗಿಲು ಕೂಡ ಬೆಂಬೆಳಕಿನ ಕವಿ ಚೆನ್ನವೀರ ಕಣವಿಯವರಿಗೆ ಗೂಢ, ಗುಮ್ಮ, ಹಾಗೂ ಕುತೂಹಲಕಾರಿ, ಅವರ ನೆಲ ಮುಗಿಲಿನ ಕಾವ್ಯ ಸಂವಾದ ನಿಸರ್ಗದ ಧ್ವನಿಯಂತೆಯೇ ಕೇಳುತ್ತದೆ. ಪ್ರಕೃತಿ ಭಾಷೆಯ ಅವರ ಕವಿತಾ ವಿಲಾಸದಲ್ಲಿ ಬೆಳಕು ಹಲವು ತೆರನಾಗಿ ಹರಡಿದೆ. ಅದಕ್ಕೆ ತಕ್ಕಂತೆ ನೆರಳು ವ್ಯಾಪಿಸಿದೆ. 'ಜಗದ ಜನದ ಮನದ ದೈವ ತೆರೆದಂತೆ' (ನವೋದಯ) 'ಇರುಳಿನ ಕಬ್ಬಿಣ ಪಂಜರ ಮುರಿದು ಹಾರಿದ ಸ್ವರ್ಣಾರುಣ ಪಕ್ಷಿಯಂತೆ' (ಸ್ವರ್ಣಪಕ್ಷಿ) 'ಜಗದ ಧೂಳು ತೊಡೆದು ಧಾರೆ ಎರೆಯುತ್ತ ಬಂದ ನವ ನೀರದನ ಹಾಗೆ' (ಋತು ಸಂಸಾರ) ಬೆಳಕು ಅವರಿಗೆ ಕಂಡಿದೆ. 'ಯುಗ ಯುಗಾಂತ್ಯದವರೆಗೆ ಜಗವ ಬೆಳಗಿಸಬಲ್ಲ ಎಲೆ ಚಿರಂತನ ಬೆಳಕೆ ನೀನೆ ಬೇಕು' (ಬೆಂಬೆಳಕು) ಎಂದು ಹಂಬಲಿಸಿದ್ದಾರೆ. ಬಂದ ಬೆಳಕು ಜಗವನ್ನೇ ತುಂಬಿದರೂ ಮಾನವನ ಎದೆಯ ಆಳ ಅಗಲಗಳನ್ನು ತುಂಬಲಾಗುತ್ತಿಲ್ಲ. ಅದೆಷ್ಟು ಕತ್ತಲೆ ಇದರೊಳಗೆ ತುಂಬಿರಬಹುದು ಎಂಬ ಅತೃಪ್ತಭಾವ 'ಚಿರಂತನ ದಾಹ' ಕವನದಲ್ಲಿ ಅಭಿವ್ಯಕ್ತವಾಗಿದೆ. 'ಹೂವು ಹೊರಳುವವು ಸೂರ್ಯನಕಡೆಗೆ, ನಮ್ಮ ದಾರಿ ಬರಿ ಚಂದ್ರನವರೆಗೆ' ಎಂದು ಹೇಳುವಲ್ಲಿ ಮನುಷ್ಯ ಮಿತಿಯನ್ನು ವಿಶಿಷ್ಟವಾಗಿ ಗುರುತಿಸಿದ್ದಾರೆ. ಬೇರೆ ಬೇರೆ ಸಂದರ್ಭಗಳಲ್ಲಿ ಕತ್ತಲು ಬೆಳಕಿನ ದ್ವಂದ್ವಗಳನ್ನು ತೆರತೆರನಾಗಿ ದಾಟಿದ ಕವಿ, ಬೆಳಕಿನ ಜೊತೆಗೆ ನೆರಳನ್ನೂ ಕೇಂದ್ರವಾಗಿಸಿಕೊಂಡು ನೋಡಿರುವ ಕವಿತೆ 'ಸೂರ್ಯನಿದ್ದಾನೆ ಬೆನ್ನ ಹಿಂದೆ'. ಈ ಶೀರ್ಷಿಕೆ ಸೂರ್ಯನನ್ನು ನಿರ್ದೇಶಿಸಿದರೂ ಪರೋಕ್ಷವಾಗಿ ನೆರಳೂ ಇದೆ ಅವನ ಜೊತೆಗೆ ಎಂಬುದೇ ಆಗಿದೆ. ಈ ನೆರಳು ಬೆಳಕಿನಾಟದ ತಥ್ಯವೊಂದು ಕಣವಿಯವರೇ ಅನುವಾದಿಸಿರುವ ರವೀಂದ್ರನಾಥ ಠಾಕೂರರ 'ಬೆಳಕು; ನೆರಳು' ಕವನದಲ್ಲಿ ವ್ಯಕ್ತವಾಗಿದೆ.

ನಿನ್ನ ದೀಪವ ಬಾನಿನಲ್ಲಿ ನೀ ಹಿಡಿದಾಗ
ಬೆಳಕು ಬೀಳುವುದೆನ್ನ ಮೊಗದ ಮೇಲೆ
ಅದರ ನೆರಳಾಡುವುದು ನಿನ್ನ ಮೇಲೆ,

ನಿನ್ನ ಹೃದಯದಿ ನಾನು ಪ್ರೇಮ ದೀಪವ ಹಿಡಿಯೆ
ಅದರ ಬೆಳಕಾಗುವುದು ನಿನ್ನ ಮೇಲೆ
ನಾನು ನಿಂದೆನು ಹಿಂದೆ ನೆರಳಿನಲ್ಲೆ.

'ಸೂರ್ಯನಿದ್ದಾನೆ ಬೆನ್ನ ಹಿಂದೆ' ('ಜೀನಿಯಾ' ಸಂಗ್ರಹ) ಕವನದಲ್ಲಿ ಈ ಪ್ರೇಮಮುಚ್ಚಾಲೆಯನ್ನೂ ಮೀರಿದ ಅರ್ಥವ್ಯಾಪ್ತಿ ಕಣವಿಯವರಿಗೆ ಸಿದ್ಧಿಸಿದೆ.

ಚಲನೆ ಈ ಕವಿತೆಯ ಮುಖ್ಯ ಗುಣ. ಸೂರ್ಯ ತನ್ನ ಚಲನೆಯಲ್ಲಿದ್ದಾನೆ. ಅದಕ್ಕೆ ತಕ್ಕಂತೆ ನೆರಳಿನ ಹರಿದಾಟವಿದೆ. ಈ ಬೆಳಕು-ನೆರಳಿನ ಜೊತೆಗೆ ಸಾಗುವ ಸಮುದಾಯವೊಂದಿದೆ. ಆ ಸಮುದಾಯದ ಬದುಕು ಕೆಲವರಿಗೆ ಸರಾಗ ನಡೆಯಾದರೆ ಮತ್ತೆ ಕೆಲವರಿಗೆ ದೂಡಬೇಕಾದ ಅನಿವಾರ್ಯವಾಗಿದೆ. ಬದುಕಿನ ಚಲನೆಯ ವಿಸ್ಮಯದ ಜೊತೆಗೆ ಇದನ್ನು ವಿವರಿಸುವ ಕವಿಯ ನಡಿಗೆಯಿದೆ. ಇದರೊಟ್ಟಿಗೆ ತನ್ನ ಅರ್ಥಾಂತರ ಸಾತತ್ಯದ ಜೊತೆಗೆ ಕವಿತೆ ಸಾಗುತ್ತದೆ. ಹೀಗೆ ಚಲನೆಯ ಮೂಲಕವೇ ಅನಾವರಣಗೊಳ್ಳುವ ಕವನದ ನಿಲುಗಡೆಯಾದರೂ ಎಂತಹುದು? ಸೂರ್ಯನೇ ವಿಶ್ರಾಂತಿ ಪಡೆಯುವ ಕವಿ ಸಮಯದ ಮೂಲಕ.

ನೆಲದ ಹಸಿರನ್ನು ಕಂಡು ಹಿಗ್ಗಿ, ಆಕಾಶದ ನೀಲಿ
ಕಡಲಿಗೆ ಕನ್ನಡಿ ಹಿಡಿದಾಗ, ಅದರ ಒಡಲಿನಲ್ಲಿ
ಸೂರ್ಯ ವಿಶ್ರಾಂತಿ ಪಡೆಯುತ್ತಾನೆ.

ಇದು ಭಾಸಗೊಳ್ಳುವ ಸತ್ಯ. ಬೆಳಕಾಗಲಿ ನೆರಳಾಗಲಿ ಚಲನೆಯಿಂದ ವಿಮುಖಗೊಳ್ಳುವುದು ಕಡಲಿನಲ್ಲಿ ಸೂರ್ಯ ವಿಶ್ರಾಂತಿ ಪಡೆಯುವಷ್ಟೇ ಭಾವಸತ್ಯ . ಹುಟ್ಟಾಗಲಿ ಸಾವಾಗಲಿ ಜೀವ ಚಕ್ರದ ಚಲನೆಯ ಮುಖಗಳು ಎಂದು ಪೃಥಕ್ಕರಿಸುತ್ತಲೇ ನಿಂತಂತೆ ಭಾಸವಾಗುವ ಕವಿತೆಯೂ ವಾಸ್ತವದಲ್ಲಿ ನಿಲ್ಲುವುದಿಲ್ಲ. ಅದು ಮುಂದುವರಿಯುತ್ತಲೇ ಇರುತ್ತದೆ. ಈ ಗಮನದ ಗಮನಿಸುವಿಕೆಯೇ ಕವಿಯ ಆಶಯವಿರಬಹುದು.

ಬೆಳಕಿಗೆ ಅನುಗುಣವಾಗಿ ನೆರಳು ಮೂಡುವುದು ಒಂದು ನಿಸರ್ಗ ಸತ್ಯ. ಅಂತೆಯೇ ಅದರ ಚಲನೆಗೆ ತಕ್ಕಂತೆ ನೆರಳಿನ ಗಾತ್ರ ಆಕಾರ ಹಾಗೂ ದಿಕ್ಕುಗಳು ಬದಲಾಗುವುದು ಕೂಡ. ಆದರೆ ಬೆಳಕು ತನ್ನಲ್ಲಿ ನೆರಳನ್ನು ಸೃಜಿಸುವುದು ಮತ್ತು ಅದಿಲ್ಲದೆ ತಾನು ಅಪೂರ್ಣವಾಗುವುದು ಒಂದು ತಾತ್ವಿಕ ವಿಪರ್ಯಾಸವಾಗಿ ಕಾಣುತ್ತದೆ. ಈ ಬಗ್ಗೆ ಲಕ್ಷ್ಯ ಸೆಳೆಯುವ ಕವಿತೆಗೆ ಅದನ್ನು ಪ್ರಶ್ನಿಸುವುದು ಬೇಕಿಲ್ಲ. ಬದಲಾಗಿ ಅದನ್ನು ವಿಪರ್ಯಾಸದ ವಾಸ್ತವ ನೆಲೆಯಲ್ಲಿ ಗ್ರಹಿಸುತ್ತಲೇ ಮುನ್ನಡೆಯುತ್ತದೆ. ಬೆನ್ನ ಹಿಂದೆ ಸೂರ್ಯನಿರುವಾಗ ತಮ್ಮ ನೆರಳನ್ನೇ ತುಳಿಯುತ್ತ ಹೋಗುವವರಿಗೆ

ಸೂರ್ಯ ತಲೆಯ ಮೇಲೆ ಬಂದಾಗ ನೆರಳೇ ಕಾಣುವುದಿಲ್ಲ. ಅವನು ಕಂತತೊಡಗಿದಂತೆ ಹಿಂದೆ ಸರಿಯುವ ನೆರಳು ಮತ್ತೆ ಕುತೂಹಲ ಮೂಡಿಸುತ್ತದೆ. ಮೋಡದ ಮರೆಯಲ್ಲಿದ್ದಾಗಲೂ ಸಹ ಬದಲಾದ ಬೆಳಕಿನಲ್ಲಿ ಸೂರ್ಯನಿರುತ್ತಾನೆ. ಕ್ರಮೇಣ ಸರಿದು ಹೋಗುವಲ್ಲಿಗೆ ಕವನದ ಮೊದಲ ಭಾಗ ಮುಗಿಯುತ್ತದೆ.

ಕತ್ತಲಾದ ನಂತರ ಇದ್ದವರ ಮನೆಯ ಬೆಳಕಿಗು ಇಲ್ಲದವರ ಮನೆಯ ಬೆಳಕಿಗೂ ಇರುವ ಅಂತರದತ್ತ ಕವಿಯ ಲಕ್ಷ್ಯ ಹೋಗುತ್ತದೆ. ರಾತ್ರಿ ದೀಪ, ಬುಡ್ಡಿ, ಒಲೆಯ ಉರಿಗಳಿಂದ ಮೂಡುವ ನೆರಳೂ ಇಲ್ಲಿ ನಾಳೆ ಬರುವ ಸೂರ್ಯನನ್ನು ನೆನಪಿಸುತ್ತದೆ. ಇರುಳಿನ ಚಳಿಯಲ್ಲೂ ಸೂರ್ಯ ಬೆಚ್ಚಗಿನ ನೆನಪು ಮಾಡಿಕೊಳ್ಳುತ್ತಲೇ ಸಂದಿಗೊಂದಿಗಳಲ್ಲಿ ಬೆಳಕು ತೂರಿ ಶಾಖ(ಕ್) ಕೊಟ್ಟು ಹುಟ್ಟು ಸಾವು ಕೆಂಪಾಗುತ್ತವೆ ಎಂದು ದಿಢೀರನೆ ಅರ್ಥದ ಹೊರಳುವಿಕೆಯಲ್ಲಿ ಕವಿ ಮಗ್ನರಾಗುತ್ತಾರೆ. ಸೂರ್ಯ ಮೂಡುವಾಗಲೂ, ಮುಳುಗುವಾಗಲೂ ಆಗಸ ಕೆಂಪು ಛಾಯೆಗಳೇ. ಇಲ್ಲಿಗೆ ಕವನ ಮುಗಿಯಬಹುದಿತ್ತೇನೋ. ಆದರೆ ಅದು ಮುಂದುವರಿದು ಕಡಲ ಒಡಲಿನಲ್ಲಿ ಸೂರ್ಯ ವಿಶ್ರಾಂತಿ ಪಡೆಯುವವರೆಗೂ ಸಾಗಿ ನಿಲ್ಲುತ್ತದೆ. ಹಾಗಿದ್ದರೆ ಕವಿ ಹೇಳಿದ್ದೇನು ? ದಿನದ ವಿದ್ಯಮಾನದಲ್ಲಿ ಜೀವಮಾನದ ಸತ್ಯವನ್ನು ಹುಡುಕುವುದು. ಈ ಪ್ರಯತ್ನದಲ್ಲಿ ತಾತ್ವಿಕ ಎಳೆಗಳ ಹೆಣೆಯುವಿಕೆಯಿಂದಾಗಿ ಕವಿತೆಗೆ ಯಶ ಪ್ರಾಪ್ತವಾಗಿದೆ. ನಿಜಕ್ಕೂ ಅದರ ಯಶವಿರುವುದು ಆಯಾಚಿತವಾಗಿ ಅದು ಸೆಳೆಯುವ ಕುತೂಹಲಗಳಲ್ಲಿ:

-ಬೆಳಕು ಕೊಡುವವನೇ ನೆರಳು ತರುವುದಾದರೂ ಯಾಕೆ ಮತ್ತು ಅದನ್ನು ಒಯ್ಯುವದಾದರೂ ಯಾಕೆ?

-ಮುಂದಿನ ನೆರಳು ಮತ್ತು ಹಿಂದಿನ ನೆರಳುಗಳು ಹೇಳುವುದೇನು?
-ಜೀವ ಗಮ್ಯದಲ್ಲಿ ನಿಲುಗಡೆ ಎಂಬುದಿದೆಯೆ?

ಇಂತಹ ಪ್ರಶ್ನೆಗಳ ಎತ್ತುವಿಕೆ ಕವಿತೆಯಲ್ಲಿ ಕೇವಲ ಸೂಚಿತವಾಗಿದೆಯೇ ಅಥವಾ ಅದಕ್ಕೊಂದು ದೃಢ ವೇದಿಕೆಯಿದೆಯೇ ಎಂದು ನೋಡಿದಾಗ ನಿರಾಸೆಯೂ ಆಗುತ್ತದೆ. ಮೊದಲ ಭಾಗದಲ್ಲಿ ನೆರಳಿನ ಹರಿದಾಟದ ದ್ವಂದ್ವಗಳು ಮೂಡುತ್ತವೆಯಾದರೂ ಅಂತಿಮವಾಗಿ ಇದರ ನಿರ್ವಹಣೆ ಕವಿತೆಯ ಪ್ರಧಾನ ಲಕ್ಷ್ಯದಿಂದ ದೂರವಾಗುತ್ತದೆ.

**ಬುಡ್ಡಿಗೆ ಕಡ್ಡಿ ಕೊರೆದು ಒಲೆಗೆ ಉರಿಹಚ್ಚಿ**
**ಗೋಡೆಯ ಮೇಲೆ ನೆರಳು ನೋಡುತ್ತಾರೆ**
**ಮತ್ತೆ ಬರುತ್ತಾನೆಂಬ ಭರವಸೆಯಲ್ಲಿ**

ಎಂದು ಮುಂದೆ ಪ್ರಸ್ತಾವಗೊಂಡರೂ ಗೋಡೆಯ ನೆರಳು ಸೂರ್ಯನನ್ನು ನೆನಪಿಸಲು ಬೇಕಾದ ತರ್ಕಕ್ಕೆ ಸೂಕ್ತ ಸಮರ್ಥನೆ ದೊರೆಯುವುದಿಲ್ಲ. ಈ ನೆರಳಿನ ಕಾಲ ಸತ್ಯದ ಕುರಿತ ಸೂಕ್ಷ್ಮ ಜಿಜ್ಞಾಸೆ ಹಿಂದೆ ನಡೆದಿದ್ದಲ್ಲಿ ಮಾತ್ರವೇ ಈ ಸಾಲುಗಳಿಗೆ ಮಹತ್ವ ಬರುತ್ತಿತ್ತು. ಅರ್ಥ, ಭಾವಗಳ ವೇಗಕ್ಕಿಂತಲೂ ಕವಿಯ ವೇಗ ಕವಿತೆಯಲ್ಲಿ ಜಾಸ್ತಿಯಾಗುವುದರಿಂದ ರಂಗೋಲಿ ಬಟ್ಟು ಮಾತ್ರ

ಇಟ್ಟು ಅದನ್ನು ಸೇರಿಸುವ ಕ್ರಿಯೆ ನಡೆಯದ ಅನುಭವವಾಗುತ್ತದೆ. ಕವಿಯೇ ರಂಗೋಲಿ ಬಿಡಿಸಬೇಕಿಲ್ಲ. ಆದರೆ ಓದುಗ ಬಿಡಿಸಲಾದರೂ ಸ್ವಲ್ಪ ಅಗಲದ ಕ್ಯಾನ್ವಾಸ್ ಇರಬಹುದಿತ್ತು.

ಸೂರ್ಯ ಬಂದು ಹೋಗುವ ಮೇಲುಸ್ತರದ ಆದರೆ ಮೋಹಕವಾದ ವರ್ಣನೆಯಲ್ಲಿಯೇ ಕಣವಿಯವರ ಕವಿತ್ವ ಅರಳಿರುವುದರಿಂದ ಕವಿತೆ ಅರ್ಥಪೂರ್ಣವಾಗಿ ಕಾಣುತ್ತದೆ ನೋಡಿ:

**ತುಂಬಿ ನಿಂತ ಕೆರೆಗಳಲ್ಲಿ ತುಳುಕಿ ಹರಿವ ಹೊಳೆಗಳಲ್ಲಿ**
**ಪ್ರೀತಿಯ ಪ್ರತಿಬಿಂಬಕ್ಕೆ ಚುಂಬಿಸುತ್ತಾನೆ.**

ಹಾಗೆಯೇ ಮುಳುಗುವ ಮೊದಲು ಆಗಸದ ಕೆಂಪುಬಣ್ಣ ಮತ್ತು ಪುಟ್ಟ ಪುಟ್ಟ ಮೋಡದ ತುಣುಕುಗಳು ಕವಿಗೆ ವ್ಯಕ್ತಗೊಳ್ಳುವುದು ಹೀಗೆ;

**ಮುಳುಗುವ ಮುನ್ನ ಮುಗಿಲಿನ ತುಂಬ**
**ಕೆಂಪು ಹೂವಿನ ಕುಂಡಗಳನ್ನು ಹಾರಿಸಿ**
**ಸುರು ಸುರು ಬತ್ತಿ ಹಚ್ಚಿ**
**ಸದ್ದಿಲ್ಲದೇ ಸರಿದು ಹೋಗುತ್ತಾನೆ.**

ಇಂಥ ಚಂದ ರೂಪಕಗಳ ಕವಿತೆಯ ಪ್ರಾರಂಭದಲ್ಲಿ ನೆರಳಿನ ಹುಡುಕಾಟವಿದೆ. ನಂತರ ಅದು ಬೆಳಕಿನ ಹುಡುಕಾಟವಾಗುತ್ತದೆ. ನಂತರ ಈ ಹುಡುಕಾಟಗಳು ನಿಂತು ಹುಟ್ಟು ಸಾವಿನ ಸೂಚನೆ (ಅನ್ವೇಷಣೆಯಲ್ಲ) ಹಾಗೂ ಸೂರ್ಯ ವಿಶ್ರಾಂತಿಯ ಅನಿರೀಕ್ಷಿತ ತಿರುವಿನಲ್ಲಿ ಕವಿತೆ ನಿಲ್ಲುತ್ತದೆ. ಸಾಮಾನ್ಯ ಪ್ರತಿಭೆಯ ಯಾರಾದರೂ ಕವಿತೆಯನ್ನು ಹೀಗೆ ಕರೆದೊಯ್ದು ನಿಲ್ಲಿಸುತ್ತಿದ್ದರಾ? ಅದೇನೇ ಇರಲಿ, ಇಲ್ಲಿ ಎಲ್ಲಿಯಾದರೂ ಕವಿ ಸ್ವಲ್ಪ ನಿಂತು ಸಾಗಬಹುದಿತ್ತಲ್ಲವೇ ? ಆದರೂ ಕವಿತೆ ಮೊದಲ ಓದಿಗೇ ಗೆಲ್ಲುತ್ತದೆ. ಏಕೆಂದರೆ ಕಣವಿಯಿದ್ದಾರೆ ಅದರ ಬೆನ್ನ ಹಿಂದೆ! ಆದ್ದರಿಂದ ವಾಸ್ತವದಲ್ಲಿ ಕವಿತೆಗಿಂತಲೂ ಪ್ರತಿಭೆ ಇಲ್ಲಿ ದೊಡ್ಡದಾಗಿದೆ.

ಇನ್ನೂ ಒಂದು ಪ್ರಶ್ನೆ ಕೊನೆಗೆ ಉಳಿಯುತ್ತದೆ. ಅದು ಕವಿತೆಯ ಮೊದಲ ಸಾಲಿನಲ್ಲಿಯೇ ಇದೆ. ಸೂರ್ಯ ಬೆನ್ನ ಹಿಂದೆ ಇರುವುದೇ ಯಾಕೆ ಮೊದಲಾಯಿತು ? ಹುಟ್ಟುವ ಸೂರ್ಯನ ಮುಂದೆ ನಿಂತೂ ಇವೇ ಸಂಗತಿಗಳನ್ನು ಹುಡುಕಬಹುದಿತ್ತಲ್ಲ? ಅದು ಇನ್ನೂ ಸಹಜವಾಗಿರುತ್ತಿತ್ತೇನೋ. ದಿನದ ಪ್ರಾರಂಭದಲ್ಲೇ ಸೂರ್ಯನಿಗೆ ಬೆನ್ನು ಹಾಕಿ ಸ್ವಲ್ಪ ಅಸಹಜ ಎಂಬಂತೆ ಶುರುವಾಗುವಲ್ಲಿ ಇನ್ನೊಂದು ಸತ್ಯದ ಕಡೆಗೆ ಕವಿ ಬೆರಳು ತೋರುತ್ತಿದ್ದಾರೆ. ಜೀವಿತದ ಪ್ರತಿ ಪಯಣವೂ ಕೊನೆಗೆ ಪಶ್ಚಿಮದ ಕಡೆಗಲ್ಲವೇ? ಮಧ್ಯೆ ಅಲ್ಲಿ ಇಲ್ಲಿ ಎತ್ತೆತ್ತ ತಿರುಗಿದರೂ ಜೀವಯಾನದ ದಿಕ್ಕನ್ನು ಕವಿತೆಯ ಯಾನವಾಗಿಸಿ ಅದನ್ನು ಕವಿ ಅರ್ಥಪೂರ್ಣಗೊಳಿಸಿದ್ದಾರೆ. ಏನೆಲ್ಲ ಚಲನೆಗಳನ್ನು ಕಾಣುವ ಕವಿತೆ ಮನಸ್ಸಿನಲ್ಲಿ ಮಾತ್ರ ನಿಲ್ಲುತ್ತದೆ. ಕವಿಯ ಉದ್ದೇಶವೂ ಅದೇ ತಾನೇ?

ಜಿ.ಕೆ. ರವೀಂದ್ರಕುಮಾರ

# ೬೯. ಶ್ರಾವಣದ ಒಂದು ಸಂಜೆ

ಬಾನೆಲ್ಲ ಮೋಡದ ಮುಸುಕು, ಮಬ್ಬು ಗತ್ತಲು ಕೋಣೆ
ಸಣ್ಣಗೆ ಹಿಡಿದು ಬಿಟ್ಟ ತಂತು ತುಂತುರು ಮಳೆ.
ದುರಸ್ತಿ ಕಾಣದ ರಸ್ತೆ- ಗುಂಡಿಗಳ ತುಂಬ ರಾಡಿ ನೀರು.
ಗಾಳಿ ಬೀಸಿ, ಮೋಡ ಚದುರಿದರೆ ಒಂದಿಷ್ಟು ಹೂ ಬಿಸಿಲು.
ಕೋಣೆಯ ಮೂಲೆಗಳಲ್ಲಿ, ನನ್ನೆದುರಿನಲ್ಲೆ
ರಾರಾಜಿಸುತ್ತಿರುವ ಜೇಡಬಲೆ.
ಕಸಗೂಡಿಸುವಾಗ ಕಾಣಿಸದಿರುವ ಪುರಾತನ ಕಲೆ.

ಗಾಳಿಗೆ ಚೌರಿ ಬೀಸಿ ಬೀಸಿ ಸೋತ ತೆಂಗಿನ ಗರಿ,
ವರುವರುಷ ಮೇಲಕ್ಕೇರುತ್ತಲೇ ಇದೆ ತೇರಿನ ಮರ
(ಅಕಸ್ಮಾತ್ ಬಿದ್ದು ಬಿಟ್ಟರೆ)
ತುತ್ತತುದಿಯಲ್ಲಿ ಹಾಯಾಗಿ ಕುಳಿತ ಬಣ್ಣದ ಹಕ್ಕಿ
ಬಯಲಲ್ಲಿ ಶ್ರಾವಣದ ಹುಲ್ಲು ಮೇಯುವ ಎಮ್ಮೆಗಳ ಹಿಂಡು.
(ಮನೆಯಲ್ಲಿ ಗೌಳಿಯ ಹಾಲು ನೀರೆ )
ಮುಂದಿನೆರಡೂ ಕಾಲು ಮೇಲೆತ್ತಿ ಬೇಲಿಗೆ -ಗಪಗಪ ತಿನ್ನುವಾಡು,
ಎದ್ದು ಓಡಿಸಿದಾಗ ಕದ್ದು ನೋಡುತ್ತಾನೆ ಕಾಯುವ ಹುಡುಗ.
ಅರ್ಧತೊಯ್ದಿರುವ ಅಂಗಿ, ಚೊಣ್ಣ, ಆವನಿಗಿಂತಲೂ ಉದ್ದ ಬಡಿಗೆ.
ಹೂವಿನ ಗೆಜ್ಜೆ ಕಟ್ಟಿ ನಿಂತ ಗಿಡ್ಡ ಗೌರಿ ಹೂ-ಗಿಡ ಸಾಲು.
ಹಿಡಿಹಿಡಿ ಉದುರಿ ಬಿದ್ದಿವೆ ಮೃದುವಾದ ಪಕಳೆ - ಮಣ್ಣುಪಾಲು.
ರಾತ್ರಿಯಲ್ಲರಳಿ ಮುಂಜಾನೆ ಮುದುಡಿದ ಬ್ರಹ್ಮಕಮಲ
ಮುಳ್ಳು-ಕಳ್ಳಿ-ಕುಂಡಗಳಲ್ಲಿ ತುಂಬಿದ ಕಮಂಡಲ.
ದಾಳಿಂಬೆ ಗಿಡದಲ್ಲಿ ನಿತ್ಯ ಇಣಚಿಗಳ ಕಾಟ,

ಅರ್ಧಮರ್ಧ ತಿಂದು ಟೊಕಳೆ ಉಳಿಸಿದ ಹಣ್ಣು-ಕಾಯಿ.
ಹೊರಗೆ ಹೊರಟಾಕ್ಷಣವೆ
ಹೇಳಿ ಕಳಿಸಿದ ಹಾಗೆ ಹನಿದು ಜಿನುಗುಡುವ ಮಳೆ,
ಹೇಗೋ ಬಸ್ಸು ಹಿಡಿದು ಪೇಟೆಯವರೆಗೆ ಹೋದಾಗ-
ನನ್ನ ಹಾಗೇ ಎಲ್ಲರೂ ಗಡಿಬಿಡಿಯಲ್ಲಿ ತಿರುಗಿ ಮರಳುವವರೆ,
ಆದರೆ,
ಅಲ್ಲೊಂದು ಕಡೆ ತಟಸ್ಥವಾಗಿದ್ದಾರೆ ಸಾಲಾಗಿ ಹೆಣ್ಣು ಗಂಡು,
ಮಕ್ಕಳು-ಮರಿ,
ಚಿಮಣಿ ಎಣ್ಣೆಗೆ ಕಾದು ರಸ್ತೆಯುದ್ದಕೂ.
ದೂರದರ್ಶನದಲ್ಲಿ ಓಡುತ್ತಾರೆ ಅವರು ಪಂಜು ಹಿಡಿದು
ಇವರು ಸೋತು ನಿಂತಿದ್ದಾರೆ ಕೈಯಲ್ಲಿ ಖಾಲಿ ಡಬ್ಬಿ ಹಿಡಿದು,
'ಮೇರಾ ಭಾರತ ಮಹಾನ್'
ಬೀದಿ ದೀಪಗಳಲ್ಲಿ ಕೆಲವಾದರೂ ಹತ್ತಿಕೊಂಡಿವೆ.
ನಡುಕ ಹುಟ್ಟಿಸುವ ಚಳಿಗಾಳಿ, ಮತ್ತೆ ಇರುಳೆಲ್ಲ ಜಿಟಿ ಜಿಟಿ ಮಳೆ.

"... ನಡುಕ ಹುಟ್ಟಿಸುವ ಚಳಿಗಾಳಿ"

ಈ ಕೊನೆಯ ಸಾಲನ್ನು ಬಿಟ್ಟರೆ ಮತ್ತೆಲ್ಲ ಕಡೆ ಕವಿ ಶ್ರಾವಣದ ಕುರಿತಾಗಿ ಹೇಳುವುದು ಬಲು ಸುಪ್ತವಾಗಿ. ಆದರೆ ಕವಿತೆಯ ಶೀರ್ಷಿಕೆ, ಕೊನೆಯ ಸಾಲು ಮತ್ತು "ಬಯಲಲ್ಲಿ ಶ್ರಾವಣದ ಹುಲ್ಲು ಮೇಯುವ ಎಮ್ಮೆಗಳ ಹಿಂಡು" ಎಂಬ ಹಿನ್ನೆಲೆಯಲ್ಲಿ ಕವಿತೆಯನ್ನು ಓದಿಕೊಳ್ಳುತ್ತಾ ಹೋದಹಾಗೆ ಕವಿತೆ ಹೊಸ ಹೊಸ ರೀತಿಯಲ್ಲಿ ಅರ್ಥವಾಗಲು ತೊಡಗುತ್ತದೆ. ('ಜೀನಿಯಾ' ಸಂಗ್ರಹ)

"ಬಾನೆಲ್ಲ ಮೋಡದ ಮುಸುಕು, ಮಬ್ಬುಗತ್ತಲು ಕೋಣೆ" ಎನ್ನುವ ಕವಿತೆಯ ಮೊದಲ ಸಾಲುಗಳೇ ಕವಿ ಶ್ರಾವಣದ ಸಂಭ್ರಮವನ್ನು ವರ್ಣಿಸಲು ಹೊರಟಿಲ್ಲ, ಶ್ರಾವಣ ಸೌಂದರ್ಯವೇ ಕವಿಯ ಉದ್ದೇಶವಲ್ಲ; ಬದಲು ಶ್ರಾವಣದ ಸಂಭ್ರಮ -ಸಂತೋಷ-ಸೌಂದರ್ಯಗಳ ಒಳಗಿನ ಸೂಕ್ಷ್ಮ ಸಂಚಲನಗಳನ್ನು ದಿಟ್ಟಿಸುತ್ತಿದ್ದಾರೆ ಎಂಬುದನ್ನು ಹೇಳುತ್ತದೆ. 'ದುರಸ್ತಿ ಕಾಣದ ರಸ್ತೆ-ಗುಂಡಿಗಳ ತುಂಬ ರಾಡಿ ನೀರು' 'ಗಾಳಿ ಬೀಸಿ ಮೋಡ ಚದುರಿದರೆ ಒಂದಿಷ್ಟು ಹೂ ಬಿಸಿಲು' ಈ ಸಾಲುಗಳಲ್ಲಿ ಮೊದಲನೇ ಸಾಲನ್ನು ಎರಡನೇ ಸಾಲು ವಿವರಿಸುತ್ತದೆ ಅಥವಾ ಎರಡನೇ ಸಾಲಿಗೆ ಮೊದಲನೇ ಸಾಲು ತಾತ್ವಿಕವಾಗಿ ಆಯಾಮವನ್ನು ಕೊಡುತ್ತದೆ. "ಹಲವಾರು ಕಷ್ಟಗಳ ನಡುವೆ ಅಲ್ಪ ಸ್ವಲ್ಪ ಸುಖವೂ ಇರುತ್ತದೆ." ಎಂಬುದನ್ನು ಕವಿ ಕಾವ್ಯ ಸೌಂದರ್ಯದ ಆಶ್ರಯದಲ್ಲಿ ಹೀಗೆ ಹೇಳಿದ್ದಾರೆ. ಆದರೆ ಸಾಮಾನ್ಯ ತಿಳುವಳಿಕೆಗೆ ಕಾವ್ಯದ ಜೀವಂತಿಕೆಯನ್ನು ತುಂಬುವ ಮುಖಾಂತರ

ಅರ್ಥ ವಿಸ್ತಾರಗೊಳಿಸಿದ್ದಾರೆ. ಇಲ್ಲಿ ದುರಸ್ತಿ ಕಾಣದ ಗುಂಡಿಗಳುಳ್ಳ ರಸ್ತೆ ಯಾವುದು ? ಅದು ಬಾಳ ಬಟ್ಟೆಯೂ ಆಗಬಹುದು. ನಮ್ಮ ಜೀವನ ಸನ್ನಿವೇಶಗಳೂ ಇರಬಹುದು. ರಾಷ್ಟ್ರ ಜೀವನದ ಸ್ಥಿತಿಗತಿಗಳೂ ಆಗಬಹುದು. ನಮ್ಮ ಮನಸು-ಯೋಚನಾಪ್ರಕ್ರಿಯೆ ಯಾವುದೂ ಆಗಬಹುದು. ರಾಡಿ ನೀರು ಯಾವುದು ? ನಮ್ಮನ್ನು ಕಾಡುವ ಶತೃವೂ ಆಗಿರಬಹುದು. ನಮಗೆ ನಾವೇ ಶತ್ರುಗಳಾಗಿ ಪರಿಣಮಿಸುವ ವೈರುಧ್ಯಮಯ ಸನ್ನಿವೇಶಗಳೂ ಇರಬಹುದು. ಈ ನಡುವೆ ಬೀಸುವ ಗಾಳಿ ಯಾವುದು ? "ಬೆಳಕು" ನಿಜ. ಆದರೆ ಆ ಬೆಳಕು ಯಾವುದು ? ಅವನು ಸೂರ್ಯನಿರಬಹುದು ಎಂಬುದನ್ನು 'ಗಾಳಿ ಬೀಸಿ ಮೋಡ ಚದುರಿದರೆ' ಎಂಬ ಮಾತು ನೇರವಾಗಿ ಹೇಳಿಬಿಡುತ್ತದೆ. ಆದರೆ ಅದು ಅಷ್ಟೇ ಅಲ್ಲ, ಇತ್ಯಾತ್ಮಕವಾಗಿ ಮೂಡಿ ಬರುವ ಯಾವ ವಿಚಾರವಾದರೂ ಗಾಳಿ-ಬೆಳಕು ಆಗಬಹುದು ಎಂಬುದನ್ನು ಇದರ ಹಿಂದಿನ ಸಾಲಿನ ಓದು ಹೊಳೆಯಿಸುತ್ತದೆ.

**ಕೋಣೆಯ ಮೂಲೆಗಳಲ್ಲಿ, ನನ್ನೆದುರಿನಲ್ಲೇ**
**ರಾರಾಜಿಸುತ್ತಿರುವ ಜೇಡರ ಬಲೆ**
**ಕಸ ಗುಡಿಸುವಾಗ ಕಾಣಿಸದಿರುವ ಪುರಾತನ ಕಲೆ**

ಎನ್ನುವ ಸಾಲುಗಳು ಕವಿ ಈ ತನಕ ಹೊಳೆಯಿಸಿದ ಅರ್ಥಗಳಿಗೆ ಚರಿತ್ರೆಯ ಹೊಸ ಅರ್ಥ ವಿನ್ಯಾಸಗಳನ್ನು ಸೃಷ್ಟಿಸುತ್ತವೆ. ಪುರಾತನ ಕಾಲದ ಕಲೆ ಕವಿಗೆ ಬರೇ ಸೌಂದರ್ಯವಲ್ಲ. ಜೇಡರ ಬಲೆಯಾಗಿಯೂ ಸಮಕಾಲೀನ ಬದುಕನ್ನು ಕಾಡುವ ಸತ್ಯಗಳಾಗುತ್ತವೆ. ಹಾಗೆಂದು ಅದು ಕೇವಲ ಜೇಡರ ಬಲೆಯೂ ಅಲ್ಲ. ರಾರಾಜಿಸುತ್ತಿರುವ, ಸಾಮಾನ್ಯವಾಗಿ ನಾವು ಕಂಡುಕೊಳ್ಳದೆ ಇರುವ ಕಲೆಯೂ ಹೌದು. ಹೀಗೆ ಇಲ್ಲಿ ವೈರುಧ್ಯಗಳ ಮುಖಾಮುಖಿ ನಡೆದಿದೆ. 'ರಾರಾಜಿಸುವಿಕೆ' ವ್ಯಂಗ್ಯೋಕ್ತಿಯಾಗಿ ತೆಗೆದುಕೊಂಡಾಗ ಕವಿತೆ ಪ್ರಸ್ತಾಪಿಸುವ ಈ ತನಕದ ವಿಚಾರಗಳಿಗೆ ವಿಶೇಷಾರ್ಥಗಳು ಪ್ರಾಪ್ತವಾಗುತ್ತವೆ.

ಮೊದಲ ಹಂತದಲ್ಲಿ ಕಾಣಿಸುವ ಗಾಳಿ ಎರಡನೆಯ ಹಂತದಲ್ಲಿ ಬೇರೆಯದೆ ತಿರುವನ್ನು ಪಡೆದುಕೊಳ್ಳುತ್ತದೆ. ಮೊದಲ ಹಂತದಲ್ಲಿ ಇತ್ಯಾತ್ಮಕ ಆಯಾಮವನ್ನು ಪಡೆದಿರುವ ಗಾಳಿ ಎರಡನೆಯ ಹಂತದಲ್ಲಿ ಅದರ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ.

**ಗಾಳಿಗೆ ಚೌರಿ ಬೀಸಿ ಬೀಸಿ ಸೋತ ತೆಂಗಿನ ಗರಿ**
**ವರುವರುಷ ಮೇಲಕ್ಕೇರುತ್ತಲೇ ಇದೆ ತೇರಿನ ಮರ**

ಈ ಸಾಲುಗಳನ್ನು ನೋಡಿದರೆ ಒಂದು ಸಂದರ್ಭಕ್ಕೆ ಹಿತಾನುಭವವನ್ನುಂಟುಮಾಡಬಲ್ಲ ಗಾಳಿ ಇನ್ನೊಂದು ಸಂದರ್ಭದಲ್ಲಿ ಸೋಲುಣಿಸಲೂ ಬಹುದಲ್ಲ ಎನ್ನುವ ಕವಿಯ ಗುಮಾನಿ ವೇದ್ಯವಾಗುತ್ತದೆ. ಆಗ ಗಟ್ಟಿಯಾಗಿ ಸೆಟೆದು ನಿಲ್ಲುವ ತೆಂಗಿನ ಮರವೇ ನಾಯಕನಾಗಿಬಿಡುತ್ತದೆ. ಈ ತೆಂಗಿನ ಮರ ಯಾವುದು ? ಮನುಷ್ಯನ ಧೀಶಕ್ತಿ ಇರಬಹುದು. ಮನುಷ್ಯನಿಗೆ ಬಗ್ಗಿಸಲು

ಸಾಧ್ಯವಿಲ್ಲದ ಸೃಷ್ಟಿಯ ಶಕ್ತಿ ಇರಬಹುದು. ಆ ಶಕ್ತಿಯ ತುತ್ತ ತುದಿಯಲ್ಲಿ 'ಹಾಯಾಗಿ ಕುಳಿತ ಬಣ್ಣದ ಹಕ್ಕಿ' ಅನಾಕರ್ಷಕವಾಗಿರುವುದರ ಆಶ್ರಯದಲ್ಲೆ ಆಕರ್ಷಣೆಗಳು ಬಾಳುತ್ತವೆ ಎಂಬ ಸೂಚನೆ ಇದೆ. ಆದರೆ ಅಂತಹ ಆಶ್ರಯವೇ ಬಿದ್ದುಬಿಟ್ಟರೆ ಆಕರ್ಷಣೆ ಗತಿಯೇನು ಎಂಬ ಆತಂಕವೂ ಕವಿಗೆ ಇದೆ. ಈ ಸ್ಥಿತಿಗೆ ಮುಖಾಮುಖಿಯಾಗಿರುವ ಇನ್ನೊಂದು ಸ್ಥಿತಿಯಿದೆ. 'ಬಯಲಿನಲ್ಲಿ ಶ್ರಾವಣದ ಹುಲ್ಲು ಮೇಯುವ ಎಮ್ಮೆಗಳ ಹಿಂಡು, 'ಕದ್ದು ನೋಡುವ ಹುಡುಗನ ಅರ್ಧ ತೊಯ್ದಿರುವ ಅಂಗಿ ಚೊಣ್ಣ'ಗಳು ಒಂದು ನಡೆಗೆ ಪ್ರತಿಯಾಗಿ ಅಥವಾ ಅದರ ಜೊತೆಜೊತೆಗೆ ತಾವು ತಮ್ಮದೇ ಪಾಡಿಗೆ; ಯಾವುದರ ಗೊಡವೆಯೂ ಇಲ್ಲದೆ ನಡೆಯುತ್ತಿರುತ್ತದೆ. 'ಬೇಲಿಗೆ - ಗಪಗಪ ತಿನ್ನುವಾಡು' 'ಎದ್ದು ಓಡಿಸಿದಾಗ ಕದ್ದು ನೋಡುತ್ತಾನೆ ಹುಡುಗ' 'ರಾತ್ರಿಯಲ್ಲರಳಿ ಮುಂಜಾನೆ ಮುದುಡಿದ ಬ್ರಹ್ಮಕಮಲ'ಗಳು ಕ್ರಿಯಾಶೀಲ ಪ್ರಕ್ರಿಯೆಗಳಿಗೆ ಸಾಕ್ಷಿಗಳಾಗುತ್ತವೆ.

ಎರಡು ಹಂತದಲ್ಲಿ ಕವಿ ವಿಸ್ತರಿಸುತ್ತಾ ಹೋಗುವ ಜಗತ್ತು ಮೂರನೇ ಹಂತದಲ್ಲಿ ಕವಿಯ ಪುಟ್ಟ ಜಗತ್ತಿನೊಳಗೆ ಸಂಶ್ಲೇಷಿತವಾಗುತ್ತದೆ.

**ಹೊರಗೆ ಹೊರಟಾಕ್ಷಣವೆ**
**ಹೇಳಿ ಕಳಿಸಿದ ಹಾಗೆ ಹನಿದು ಜಿನುಗುಡುವ ಮಳೆ**
**ಹೇಗೋ ಬಸ್ಸು ಹಿಡಿದು ಪೇಟೆಯವರೆಗೆ ಹೋದಾಗ -**

ಕಾಣಿಸುವ ಮಾಮೂಲಿ ದೃಶ್ಯಗಳು, ಅದೇ ಗಡಿಬಿಡಿ. ಚಿಮಣಿ ಎಣ್ಣೆಗಾಗಿ ಕಾದು ನಿಂತ ಗಂಡು ಹೆಣ್ಣುಗಳ ಸಾಲು, ಈ ಮಾಮೂಲಿ ದೃಶ್ಯಗಳಿಗೆ ಎದುರಾಗಿ ಮತ್ತೊಂದು ದೃಶ್ಯವಿದೆ.

**ದೂರದರ್ಶನದಲ್ಲಿ ಓಡುತ್ತಾರೆ ಅವರು ಪಂಜು ಹಿಡಿದು**
**ಇವರು ಸೋತು ನಿಂತಿದ್ದಾರೆ ಕೈಯಲ್ಲಿ ಖಾಲಿ ಡಬ್ಬಿ ಹಿಡಿದು.**

ಈ ಸಾಲುಗಳಲ್ಲಿ ನಡೆಯುವ ಮುಖಾಮುಖಿಯು ಇಡೀ ಕವಿತೆಯಲ್ಲಿ ನಡೆಯುವ ಮುಖಾಮುಖಿಯೂ ಹೌದು. ದೂರದರ್ಶನದಲ್ಲಿ ಪಂಜು ಹಿಡಿದು ಓಡುತ್ತಿರುವ ಸ್ಥಿತಿ ಇದ್ದರೂ ಬೀದಿಗಳಲ್ಲಿ ಖಾಲಿ ಡಬ್ಬ ಹಿಡಿದು ನಿಂತವರಿಗೆ 'ಬೆಳಕು' ಇಲ್ಲವಲ್ಲ ಎಂಬ ಕೊರಗು ಕವಿಗಿದೆ. ಆ ಕೊರಗು ವೇದನೆಗಳಿಗೆ ಕವಿಯೇ ತಂದುಕೊಳ್ಳುವ ಸಮಾಧಾನ.

**ಬೀದಿ ದೀಪಗಳಲ್ಲಿ ಕೆಲವಾದರೂ ಹತ್ತಿಕೊಂಡಿವೆ**

ಶ್ರಾವಣದ ಸಾಮಾನ್ಯ ಕಲ್ಪನೆಗೆ ಕವಿ ಡಾ|| ಚೆನ್ನವೀರ ಕಣವಿ ಅವರು ಹೊಸ ಆಯಾಮವನ್ನು ಕೊಟ್ಟಿದ್ದಾರೆ. ಒಂದು ಸಂಗತಿಯನ್ನು ಬಹು ಆಯಾಮಗಳಲ್ಲಿ ಅರ್ಥಮಾಡಿಕೊಳ್ಳಲು ಈ ಕವಿತೆ ಪ್ರೇರಣೆ ಒದಗಿಸುತ್ತದೆ.

**ಅರವಿಂದ ಚೊಕ್ಕಾಡಿ.**

೨

ಕಣವಿಯವರು ಕಂಡ ಆ 'ಶ್ರಾವಣದ ಒಂದು ಸಂಜೆ" ಇದಿರಾಗುವದೇ ಹೀಗೆ :
ಇಂಗ್ಲೀಷ್ ಕವಿ ವಾಲ್ಟರ್ ಡಿ ಲಾ ಮೇರ್ ಹೇಳುವಂತೆ

"Softly along the road of evening
In a twilight dim with rose
wrinkled with age and drenched with dew"
ಮನೋಭಾವದೊಂದಿಗೆ,

ಕವಿತೆಯನ್ನು ಓದು ಓದುತ್ತಿದ್ದಂತೆಯೇ, ನನಗೆ ಎರಡು ಇಂಗ್ಲಿಷ್ ಕವಿತೆಗಳು ನೆನಪಾಗುತ್ತವೆ. ಮೊದಲನೆಯದು ಅಮೇರಿಕೆಯ ಕವಿ ಆರ್ಥರ್ ಫ್ರೀಡ್ ಬರೆದಂತಹ "Singing in the rain" ಎಂಬ ಕವಿತೆ. ಎರಡನೆಯದು ಇಂಗ್ಲಿಷ್ ಕವಿ ಎಡಿಥ್ ಸಿಟ್‌ವೆಲ್ ರಚಿಸಿದ "Still falls the rain" ಎಂಬ ಕವಿತೆ. ನನಗೆ ನೆನಪಾದ ಎರಡೂ ಕವಿತೆಗಳು ಮಳೆಗೆ ಸಂಬಂಧಿಸಿದಂತಹ ರಚನೆಗಳೇ ಆಗಿದ್ದರೂ, ಕಣವಿ ಅವರ ಶ್ರೀಮಂತ ಸೃಜನಶೀಲತೆ ಹೇಗೆ ಆ ಇಬ್ಬರು ಉಲ್ಲೇಖಿತರ ಕವಿತೆಗಳಿಗಿಂತ ಭಿನ್ನವಾಗಿ ನಿಂತು ಅವರಿಬ್ಬರ ರಚನೆಗಳಿಗಿಂತ ಒಂದು ಹೆಚ್ಚುಗಾರಿಕೆಯನ್ನು ಸಾಧಿಸಿದೆ ಎಂಬುದನ್ನು ಅರಿಯುವುದೇ ಈ ಪುಟ್ಟ ಬರಹದ ಉದ್ದೇಶ.

ನಾನು ಈ ಮುಂಚೆ ಹೇಳಿದಂತಹ ವಾಲ್ಟರ್ ಡಿ.ಲಾ. ಮೇರ್ ಶಬ್ದಗಳಲ್ಲಿಯೇ ವಿವರಿಸುವುದಾದರೆ ಕಣವಿ ಅವರ ಕವಿತೆಯಲ್ಲಿ ಲಾ ಮೇರ್‌ನ 'Softness'ನ ಮನೋಭಾವವಿದೆ. 'Twilight'ನ ಹಿತಮಿತವಿದೆ. 'rose'ನ ಬಣ್ಣಗಾರಿಕೆ ಇದೆ. 'dew'ಆರ್ದ್ರ ಸ್ಪರ್ಶವಿದೆ. ಎಲ್ಲಕ್ಕೂ ಮುಖ್ಯವಾಗಿ 'wrinkled with age' ಅನ್ನುವಲ್ಲಿಯ (ನಮ್ಮ ಅರ್ಥಕ್ಕೆ ಒಗ್ಗಿಸಿಕೊಳ್ಳಬಹುದಾದಂತಹ) 'ದೃಷ್ಟಿ'ಯ ಮಾಗೂ ಇದೆ. (ಈ 'ಮಾಗ'ನ್ನು ಹೆಚ್ಚು ಸ್ಪಷ್ಟ ಮಾಡಿಕೊಳ್ಳಲು ಅಮೇರಿಕೆಯ ಕವಿ ಎಡ್ನಾ ವಿನ್‌ಸೆಂಟ್ ಮಿಲೆಯ ಎರಡು ಸಾಲುಗಳನ್ನು ಅವಶ್ಯವಾಗಿ ನೋಡಬೇಕು. ಆ ಕುರಿತು ನಾನು ಲೇಖನದ ಕೊನೆಯಲ್ಲಿ ಪ್ರಸ್ತಾಪಿಸುತ್ತೇನೆ.)

ಶ್ರಾವಣದ ಸಂಜೆಯನ್ನು ಕವಿ ಅನುಭವಿಸುವುದು ಮತ್ತು ಅರಿಯುವುದು ಮೂರು ವಿಭಿನ್ನ ಹಂತಗಳ ಹಿನ್ನೆಲೆಗಳಲ್ಲಿ. ಮೊದಲ ಹಂತದಲ್ಲಿ ಆತ ಕೋಣೆಯೊಂದರಲ್ಲಿದ್ದಾನೆ. (ಮಬ್ಬುಗತ್ತಲು ಕೋಣೆ) ಇಲ್ಲಿಂದ ಆತ ಕಾಣುವುದು ಹೊರಗಿನ ಮೋಡದ ಮುಸುಕಿನ ಮಗ್ರ, ರಾಡಿ ನೀರಿನ ವ್ಯಗ್ರ, ಒಳಗಿನ ಜೇಡ ಬಲೆಯ ದಾರಿದ್ರ್ಯ. ಉದ್ದಕ್ಕೂ 'ಹಿಡಿದು ಬಿಟ್ಟ' ಮಳೆ; ಆಗೀಗ 'ಮೋಡ ಚದುರಿದರೆ, ಒಂದಿಷ್ಟು ಹೂ ಬಿಸಿಲು' (ಮಳೆಯ ಹಿನ್ನೆಲೆಯನ್ನು ಭಿತ್ತಿ ಮಾಡಿಟ್ಟುಕೊಂಡೂ) ಏನನ್ನೋ 'ಹೊಳೆ'ಯಿಸಬಹುದಾದ ಆಶೆಯ ಸಂಕೇತವಾಗುವ ಬಿಸಿಲು.

ಎರಡನೆಯ ಹಂತದಲ್ಲಿ ಕವಿ ಕೋಣೆಯ ಹೊರಗೆ ಬಂದಿದ್ದಾನೆ. ಹೊರಗ ಹಣಿಕಿಕ್ಕಿದರೆ ಅಷ್ಟಷ್ಟೆ ಅಷ್ಟಷ್ಟೆ ದೃಷ್ಟಿ ಗಮ್ಯವಾಗುವ ಹೊರಜಗತ್ತಿನ ಸರಕುಗಳು.

ಅಂದಹಾಗೆ; ಆ 'ಬೀಸಿ ಬೀಸಿ ಸೋತ' ತೆಂಗಿನ ಗರಿಗಳು, ತುತ್ತ ತುದಿಯಲ್ಲಿ ಕೂತ ಹಕ್ಕಿ, ನೆಮ್ಮದಿ ಮಲಗಿದ ಹುಲ್ಲು ದಪ್ಪ ಚಲನೆಯ ಎಮ್ಮೆ ಹಿಂಡು, ಮಧ್ಯೆ ಥಕ್ಕನೆ ಪ್ರತ್ಯಕ್ಷವಾಗುವ 'ಗಪ ಗಪ ತಿನ್ನುವ ಆಡು ಮುಂದಿನೆರಡೂ ಕಾಲು ಮೇಲೆತ್ತಿ ಬೇಲಿಗೆ'

ಎತಂಹ ಅದ್ಭುತ, ಜೀವಂತ ಚಿತ್ರ! ಕದ್ದು ನೋಡುವ ಕಾಯುವ ಹುಡುಗನ ಉದ್ವದ ಬಡಿಗೆಗಿಂತಲೂ ಎತ್ತರದ್ದು ಈ ಚಿತ್ರದ ಜೀವಂತಿಕೆ, ಹಾಗೆಯೇ ಮಣ್ಣುಪಾಲಾದ ಮೃದು ಪಕಳೆ, ಮುದುಡಿದ ಬ್ರಹ್ಮಕಮಲಗಳಿಗಿಂತ ಬದುಕಿನ ಸಾರ ನಿರ್ಗಮನದ ವಿಷಾದವನ್ನು ಅರ್ಥಪೂರ್ಣ ಸಂಕೇತಿಸುವ ಹಣ್ಣು-ಕಾಯಿಗಳ' ಟೊಕಳೆಗಳು. ಇದ್ದಂತೆಯೇ ಇದ್ದರೂ ಎಲ್ಲವೂ ಹೊರಹೊರಗೆ, ಏನಿದೆ ಅದರಲ್ಲಿ ಆ ಟೊಕಳೆಯೊಳಗೆ.

ಮೂರನೆಯ ಹಂತದಲ್ಲಿ ಕವಿ, ಮನೆಯಿಂದ ಹೊರಗೆ ಪೇಟೆಗೆ ಹೋಗುವ ಚಟುವಟಿಕೆಯಲ್ಲಿದ್ದಾನೆ. ಎಂದರೆ ಕ್ರಮೇಣವಾಗಿ ಜನರ ಮಧ್ಯದಲ್ಲಿದ್ದಾನೆ. ನೇರವಾಗಿ ಬದುಕಿನ ನಡುವೆಯೇ ಇದ್ದಾನೆ. ಇದು ಸ್ವಾಭಾವಿಕ ಏಕೆಂದರೆ ಇಲ್ಲಿಯೇ ಅಲ್ಲವೇ ಅಂತಿಮವಾಗಿ ಬದುಕಿನ ಜಂಜಡಗಳ ಒಳಗುಟ್ಟಿನ ಕೇಂದ್ರ ಕಾಣುವುದು? ಇಲ್ಲಿ ಸಾಲಾಗಿ ನಿಂತ 'ಹೆಣ್ಣು ಗಂಡು' 'ಮಕ್ಕಳು ಮರಿ', 'ಚಿಮಣಿ ಎಣ್ಣೆ' 'ದೂರದರ್ಶನ', 'ಖಾಲೀ ಡಬ್ಬಗಳು' ಮಧ್ಯದಲ್ಲಿಯೇ ಅಲ್ಲವೇ 'ಮೇರಾ ಮಹಾನ್ ಭಾರತ'ದ ದರ್ಶನವಾಗುವದು !? ಅಮೇರಿಕದ ಕವಿ ರಾಬರ್ಟ ಫ್ರಾಸ್ಟ್‌ನಂತಹ ಕವಿಗಳ ಮಾತುಗಳು ಸತ್ಯವೆನ್ನುವುದು ಇಂಥಲ್ಲಿಯೇ.

We dance round in a ring and suppose, But the secret sits in the middle and known.'

ಎಂದರೆ ಮೊದಲ ಹಂತದಲ್ಲಿ, ಕೂತಲ್ಲಿಯೇ ಕೂತು ಹಣಿಕಿಕ್ಕುವುದು, ಎರಡನೆಯ ಹಂತದಲ್ಲಿ ಕೂತಲ್ಲಿಂದ ಎದ್ದು ಬಂದು ಹೊರಗೆ ನೋಡುವುದು ಮತ್ತು ಮೂರನೆಯ ಹಂತದಲ್ಲಿ ಬರಿದೇ ನೋಡುವುದನ್ನು ಬಿಟ್ಟು ಚಲನೆಯಲ್ಲಿ ತೊಡಗುವುದು ಮತ್ತು ತೊಡಗಿನಲ್ಲಿಯೇ ಒಳಗೊಳ್ಳುವುದು ('ನನ್ನ ಹಾಗೇ ಎಲ್ಲರೂ ಗಡಿಬಿಡಿಯಲ್ಲಿ ತಿರುಗಿ ಮರುಳುವವವರೆ') ಎಂಬ ಮೂರೂ ಹಂತಗಳಲ್ಲಿ ಕಾಣುವ ಬೆಳವಣಿಗೆ'ಮುಖೇನ' ಕವಿ ಕಾಣುವ ಕಾಣ್ಕೆಯನ್ನು ಈ ಕೆಳಗಿನಂತೆ ವಿವರಿಸಬಹುದು. ಅಥವಾ ಹೀಗೂ ಹೇಳಬಹುದು.

ಈ ಇಡಿಯ ಕವಿತೆ, 'ಮೇರಾ ಭಾರತ ಮಹಾನ್' ಎಂಬಲ್ಲಿಯೇ ನಿಂತುಬಿಟ್ಟಿದ್ದರೆ, ಈ ಕವಿತೆಗೆ ಒಂದು ವಿಶೇಷ ಅರ್ಥವಂತಿಕೆ ಬರುತ್ತಲೇ ಇರಲಿಲ್ಲ. ಕವಿತೆ ತನ್ನ ವಿಶೇಷ ಹೊಳಪನ್ನು ಪಡೆದುಕೊಳ್ಳುವುದು : ನಡುಕ ಹುಟ್ಟಿಸುವ ಚಳಿಗಾಳಿ ಮತ್ತು 'ಇರುಳೆಲ್ಲ ಜಿಟಿಜಿಟಿ ಮಳೆ'ಯ ನಡುವೆಯೂ, ಬೀದಿ ದೀಪಗಳಲ್ಲಿ ಕೆಲವಾದರೂ ಹತ್ತಿಕೊಂಡಿವೆ ಎಂದು ಹೇಳುವಲ್ಲಿ, ಇಲ್ಲಿಯೇ ನಾವು ಲೇಖನದ ಆರಂಭದಲ್ಲಿ ಹೇಳಿದಂತಹ ಅಮೇರಿಕನ್ ಕವಿ ಎಡ್ನಾ ವಿನ್‌ಸೆಂಟ್ ಮಿಲೆಯ ಸಾಲುಗಳನ್ನು ನೆನಪಿಸಿಕೊಳ್ಳಬೇಕು. ಆತ ತನ್ನ ಕವಿತೆಯ ಮುಖ್ಯ ಆಶಯವಾಗಿ ಹೇಳುತ್ತಾನೆ.

**We shall die in darkness**
**And be burried in the rain**

'ಮೇರಾ ಭಾರತ ಮಹಾನ್' ಎಂಬಲ್ಲಿಯೇ ಕಣವಿಯವರ ಕವಿತೆಯೂ ನಿಂತುಬಿಟ್ಟಿದ್ದರೆ ಈ ಕವಿತೆ ತನ್ನದೇ ವ್ಯಂಗ್ಯಕ್ಕೆ ತಾನೇ ಬಲಿಯಾಗಿ ಬಿಡಬಹುದಿತ್ತು. ಮತ್ತು ಎಡ್ವಾನ ಕವಿತೆಯಂತಹ ಆಶಯದಲ್ಲಿಯೇ ಕೊನೆ ಕಂಡು ಬಿಡಬಹುದಿತ್ತು. ಆದರೆ ಕಣವಿ ಅಂತಹ ಕವಿಗಳು ಅಷ್ಟಕ್ಕೆ ನಿಲ್ಲುವುದಿಲ್ಲ ಎಂಬುದೇ ಅವರ ಹೆಚ್ಚುಗಾರಿಕೆಯಾಗಿ ಬಿಡುತ್ತದೆ. ದೀಪಗಳ ಪ್ರಸ್ತಾಪದಿಂದಾಗಿಯೇ ಈ ಕವಿತೆ ವೆಲ್ಸ್‌ನ ಕವಿ ಡಿಲಾನ್ ಥಾಮಸ್ ಹೇಳುವ ಕವಿ ಆಶಾಭಾವದ ಪಕ್ಕದಲ್ಲಿ ನಿಂತು ಬಿಡುತ್ತದೆ. ಡಿಲಾನ್ ಥಾಮಸ್ ಹೇಳುತ್ತಾನೆ.

**'Light, breaks where no sun shines,**
**where no sea runs, the waters of the heart**
**Push in their tides**

ಕಣವಿ ಹೇಳುತ್ತಾರೆ:

**'ಬೀದಿ ದೀಪಗಳಲ್ಲಿ ಕೆಲವಾದರೂ ಹತ್ತಿಕೊಂಡಿವೆ'**

ಕಣವಿ ಅವರ ಯಾವುದೇ ಒಂದು ಉತ್ತಮ ಕವಿತೆ ಇದಕ್ಕೂ ಭಿನ್ನವಾದ ಆಶಾಭಾವವನ್ನೇನು ಕಂಡೀತು ?

**ದೇಶಪಾಂಡೆ ಸುಬ್ಬರಾಯ**

# ೭೦. ಶಿಶಿರದಲ್ಲಿ ಬಂದ ಸ್ನೇಹಿತ

ಚಳಿಗಾಲದಲ್ಲಿ ಒಬ್ಬನೇ ಬೆಚ್ಚಗೆ ಹೊದ್ದು ಕುಳಿತಾಗ
ಮುಪ್ಪು ಮಾತಾಡಿಸಿತು, ತೀರ ಹತ್ತಿರಕೆ ಬಂದು :
"ಏನಪಾ, ಎಲ್ಲ ಸೌಖ್ಯವೆ ? ಇತ್ತೀಚೆ ಮತ್ತೆ ಬರವಣಿಗೆ ?
ಷಷ್ಟ್ಯಬ್ದಿಗೂ ನಾನು ಬಂದಿದ್ದೆನಲ್ಲ, ನೆನಪಿರಬಹುದು.

ವಿಶ್ರಾಂತ ಜೀವನದಲ್ಲು ಬಿಡುವಿಲ್ಲವೆಂದರೆ ಹೇಗೆ ?
ಮಾತಾಡು, ಭಾಷಣ ಬಿಟ್ಟು ಬೇರೆ ವಿಷಯ:
ಮಕ್ಕಳೆಲ್ಲರು ದೂರ, ಮನೆಯಲ್ಲಿ ಇಬ್ಬರೇ ರಾಜರಾಣಿಯರು
ತಮಾಷೆಗೆಂದೆ ಮಾರಾಯ, ಕುಡಿದಿಲ್ಲವೆ ನಾನೂ ಕಷಾಯ ?

ವಸಂತದ ಚಿಗುರು, ಮೊಗ್ಗುಗಳ ಹಿಗ್ಗು ಯಾರಿಗೆ ಬೇಡ ?
ಅಂಬೆಗಾಲು, ಅಚ್ಚರಿಗಣ್ಣು, ತೊದಲು ಮಾತು:
ನೋಡ ನೋಡುವಷ್ಟರಲ್ಲಿ ಕರಗಿ ಹೋಗಿತ್ತು ಪೆಪ್ಪರಮಿಂಟು -
ಬಿದ್ದ ಹಲ್ಲಿನ ಜಾಗದಲ್ಲಿ ನಾಲಗೆಯ ನಂಟು.

ವೈಶಾಖಕ್ಕೆ ಯೌವನದ ಸೊಕ್ಕು, ಬಿಸಿಲೂ ಪ್ರಖರ
ಮುಂಗಾರಿನೊಡಲ ಮಿಂಚು, ಮಳೆಯ ರಭಸ;
ಬೇಗೆಯಿಲ್ಲದ ಬಿಸಿಲ ಹದ ಈಗ, ಉದ್ವೇಗವಿಲ್ಲದ ನಡಿಗೆ
ಮುಗಿದ ಸುಗ್ಗಿಯ ಕೊಡುಗೆ; ನಕ್ಷತ್ರಗಳ ಮಂದಹಾಸ.

ಹಂಪುಗಾಲಕ್ಕೆ ಹಣ್ಣಿಗೆ ಬೇರೆ ಬಣ್ಣ, ರುಚಿಯೂ ಅಷ್ಟೆ
ಮಾಗಿದನುಭವದ ಕಳೆ ಮುಖದ ಮೇಲೆ,

ಬದುಕಿನಿತಿಮಿತಿಯನರಿತ ಸಂತೃಪ್ತಿ, ನಿಶ್ಚಿಂತ ನಿಲುವು
ಹೊಸ ಚೆಲುವಿನಾವಿಷ್ಕಾರ, ಸುಕುಮಾರಲೀಲೆ.

ಹಿರಿಯನೆಂದೆನಿಸಿಕೊಳ್ಳುವದು ನಿನ್ನಂಥವನಿಗೆ ಸ್ವಲ್ಪ ಕಿರಿಕಿರಿಯೆ
ಅದಕಾಗಿ ಸಲಿಗೆ ಮೊಮ್ಮಕ್ಕಳಿಗೆ ಅಜ್ಜನೊಡನೆ,
ಶಿಶಿರದ ಬಸಿರಲ್ಲೆ ಚೈತ್ರ ಕಣ್ ತೆರೆವ ಜೀವದ ಕುಸುರು
ಒಣಗಿರುವ ಕೊಂಬೆದುದಿಯಲ್ಲಿ ಹಕ್ಕಿಯಾಲಾಪನೆ

ಸಂಜೆಗಂಪಿನ ಮುಂದೆ ಬದುಕಿನ ಗುಟ್ಟು ಬಿಚ್ಚಿಡುವಂತೆ
ಬೆಟ್ಟ, ಸ್ತಬ್ಧ ಗಿಡಮರ, ನಿಶ್ಯಬ್ದ ಹಕ್ಕಿ - ಸಾಲು;
ಕಾಡಿನಂಚಿಗೆ ಕಣ್ಣುಮುಚ್ಚಾಲೆ ಮಿಂಚು-ಹುಳ
ಹುಬ್ಬುಗೈಹಚ್ಚಿ ನೋಡುವ ಚಂದ್ರ, ಹಿಡಿದು ಲಾಂದ್ರ.

ಬೆಳಗಿನ ವಿಹಾರದಲಿ ಮೈಕೊರೆವ ಚಳಿ, ಮೂಡ ಗಾಳಿಯು ಮೊರೆತ
ನಗುನಗುತ ಹಣ್ಣೆಲೆಗಳುದುರಿ ಚದುರುವಾಟ;
ಜೀವನ ಲಯದ ಸ್ವೀಕಾರದಲ್ಲಿದೆ ಸೊಗಸು; ಇದೆಲ್ಲಿಯ ತರಲೆ
ಎನಬೇಡ, ನಾನಿನ್ನು ಬರಲೆ? ಗೊತ್ತಿಲ್ಲ ನಾ ಸ್ವಲ್ಪ ಒರಟ".

ಚಹವ ಗುಟುಕರಿಸುತ್ತ ಮೇಲೆದ್ದ ಬಾಲ್ಯದ ಗೆಳೆಯ
ನಕ್ಕು, ಕೈಕುಲುಕಿ ದಟ್ಟಮಂಜಿನಲಿ ಕರಗಿಹೋದ.

ಶ್ರೀ ಕಣವಿಯವರ ಕಾವ್ಯದಲ್ಲಿ ಮತ್ತೆ ಮತ್ತೆ ಲಗ್ಗೆ ಹಾಕುವ ಸ್ನೇಹಿತರೆಂದರೆ -ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತೀಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ- ಅಷ್ಟೇ ಏಕೆ ಅವರ ಒಂದು ಸಂಕಲನದ ಹೆಸರೇ 'ಕಾರ್ತೀಕದ ಮೋಡ' (೧೯೮೬). ಇಂಥ ಸ್ನೇಹಿತರೊಡನೆ ಸಂವಾದ ನಡೆಸುವುದು ಎಂದರೆ ಅದು ಒಂದು ರೀತಿಯಲ್ಲಿ ಕಣವಿಯವರ ಕಾವ್ಯದೊಂದಿಗೆ ಮುಖಾಮುಖಿಗಿಳಿದಂತೆ. ಈ ಋತುಗಳು ಇವರ ಕಾವ್ಯದಲ್ಲಿ ಬಗೆಬಗೆಯಾಗಿ ವೈಶಿಷ್ಟ್ಯಪೂರ್ಣವಾಗಿ ರೂಪಕಗಳಾಗಿ, ಸಂಕೇತಗಳಾಗಿ ಬಳಕೆಯಾಗಿ ಹಲವು ಅರ್ಥಗಳನ್ನು ಕಾವ್ಯದೊಳಗಣ ನಿರ್ದಿಷ್ಟ ಸನ್ನಿವೇಶ, ಪ್ರಸಂಗಗಳಿಗೆ ತಕ್ಕಂತೆ ಧ್ವನಿಸಾಧ್ಯತೆಯನ್ನು ಹೊರಹೊಮ್ಮಿಸುವ ಅಪಾರ ಸಾಧ್ಯತೆಗಳನ್ನು ಒಳಗೊಂಡಿವೆ.

ಈ ಲೇಖನದಲ್ಲಿ ನಾನು ಕಣವಿಯವರನ್ನು 'ಶಿಶಿರದಲ್ಲಿ ಬಂದ ಸ್ನೇಹಿತ' ಎಂಬ ವಿಶಿಷ್ಟ ಪದ್ಯದ ಮೂಲಕ, ಅವರು ಬದುಕನ್ನು ನೋಡುವ, ಸ್ವೀಕರಿಸುವ ಕ್ರಮಗಳನ್ನು ಚರ್ಚಿಸಲು -

ಒಂದು ಪ್ರಮೇಯವನ್ನು ರೂಪಿಸಿಕೊಳ್ಳಲು ಸಾಧ್ಯವೆ ಎಂಬ ಪ್ರಾಯೋಗಿಕ ಯತ್ನಕ್ಕೆ ಪ್ರಯತ್ನಿಸಲಿರುವೆ.

ಕನ್ನಡದಲ್ಲಿ - ಬಹಳ ರೂಕ್ಷವಾಗಿ ಹೇಳುವುದಾದರೆ ಎರಡು ಬಗೆಯ ಕವಿಗಳಿದ್ದಾರೆ. ಒಬ್ಬರು ಕ್ಯಾಮರಾದ ಬಗೆಯಲ್ಲಿ ಜಗತ್ತನ್ನು ಹಿಡಿದು ಆ ಮೂಲಕ ಜಗತ್ತನ್ನು ಒಂದು ಆಳವಾದ, ತೀವ್ರವಾದ ನಿಕಷಕ್ಕೆ ಒಡ್ಡುತ್ತ ತಮ್ಮ ಇಡೀ ಆಯುಷ್ಯದುದ್ದ - ದಣಿವಾಗುವ ಹಾಗೆ ಅದರೊಡನೆ ಗುದಮುರಿಗೆ ಆಡುವ ಕವಿಗಳು. ಇವರು ತೀವ್ರವಾದಿ ಮನೋಭಾವದವರು. ಇನ್ನೊಂದು ಬಗೆ ಮಾದರಿಯ ಕವಿಗಳೆಂದರೆ - ಜಗತ್ತನ್ನು ನಿರುದ್ವಿಗ್ನವಾಗಿ, ತಮಗೆ ಕಂಡಷ್ಟನ್ನು ಪ್ರತಿಫಲಿಸುವ ಶುಭ್ರಗನ್ನಡಿಯ ಸ್ವಭಾವದವರು, ತಾವು ಕಾಣುವ ಜಗತ್ತನ್ನು ವಿನೀತರಾಗಿ, ತಾವು ಆದಷ್ಟೂ ನೇಪಥ್ಯದಲ್ಲಿರುತ್ತ, ಇರುವ ಜಗತ್ತನ್ನು, ಬದುಕನ್ನು ಹೀಗಿದೆ ನೋಡಿ -ನಮ್ಮ ಚೌಕಟ್ಟು, ನಮ್ಮ ಆಕಾರ, ನಮ್ಮ ಚಹರೆಗೆ ಒಲಿದದ್ದು ಇದು ಎಂದು ಲೋಕಕ್ಕೆ ಒಪ್ಪಿಸುವ ಕವಿಗಳವರು. ಕಂಡದ್ದನ್ನು ಅತಿಗಳೆದು ಅರ್ಥ ಹುಡುಕುವ ಹುಚ್ಚು ಇವರಲ್ಲಿ ಅತಿ ಕಡಿಮೆ. 'ಅತಿ' ಎಂಬುದು ಅಪಾಯದ ಹಾದಿ ಎಂಬುದನ್ನು ಇವರು ಬಲ್ಲರು.

ಆಧುನಿಕ ಕನ್ನಡ ಕಾವ್ಯದಲ್ಲಿ ಈ ಬಗೆಯ ನಿರುದ್ವಿಗ್ನ ಶಾಂತ, ಸಮಚಿತ್ತ, ಪ್ರಸನ್ನ, ಸಮದರ್ಶನ, ಶ್ರೇಷ್ಠ ಕನ್ನಡಿಯ ಮಾದರಿಯ ಕವಿಗಳೆಂದರೆ ಶ್ರೀ ಕಣವಿಯವರು. ಕನ್ನಡಿ ಎಂಬ ರೂಪಕವನ್ನು ನಾನು ಇಲ್ಲಿ ಇತ್ಯಾತ್ಮಕವಾಗಿಯೇ ಬಳಸಿದ್ದೇನೆ. ಅದೊಂದು ಜಡ ಎನ್ನುವುದಕ್ಕಿಂತ, ನಿಷ್ಕಲ್ಮಷ, ನಿಷ್ಕಳಂಕ, ನಿರವಯ, ನಿರಭ್ರ ಶುಭ್ರತೆಯ ಸಂಕೇತವಾಗಿ ಅದನ್ನು ನಾನು ಬಳಸಿದ್ದೇನೆ. ಈ ರೀತಿಯ ಮನೋಭಾವ ಅವರಲ್ಲಿ ಇರುವುದರಿಂದಲೇ ಅವರೊಬ್ಬ ಆಧುನಿಕ ಕನ್ನಡ ಕಾವ್ಯದ great craftsman ಆಗಿದ್ದಾರೆ. ಭಾಷೆಯ ದೃಷ್ಟಿಯಲ್ಲಿ ಅವರೊಬ್ಬ ಶ್ರೇಷ್ಠ ವಿಶ್ವಕರ್ಮ. ಲಯ-ಪ್ರಾಸ-ಛಂದಗಳು ಅವರ ಕಾವ್ಯದಲ್ಲಿ ಎಲ್ಲಿಯೂ ಕೊಂಚ ಅತ್ತಿತ್ತ ವಾಲಿ ಪದ್ಯದ ಚಂದ ಕೆಡಿಸುವುದಿಲ್ಲ.

ಸರಿಸುಮಾರು ಅರ್ಧಶತಮಾನ ಕನ್ನಡ ಕಾವ್ಯದಲ್ಲಿ ಕೃಷಿಗೈದ ಕಣವಿಯವರ ಕಾವ್ಯ, ಆಧುನಿಕ ಕನ್ನಡ ಕಾವ್ಯದ ಏರು-ಇಳಿವು ಹಾಗೂ ಅದರ ವೈಲಕ್ಷ್ಯಣ್ಯಗಳನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡ ಕಾವ್ಯಗನ್ನಡಿಯೂ ಹೌದು. ಅವರ ಕಾವ್ಯ ಸಂವೇದನೆ ಕನ್ನಡಿಯ ಸ್ವರೂಪದ್ದೆಂದೇ ಆಯಾ ಕಾಲದ ತುಳಿತಗಳನ್ನು ಆಶಯ -ಅಭೀಪ್ಸೆಗಳನ್ನು, ಸಮಾಜದಲ್ಲಿ ಸಂಭವಿಸಿದ ಏರು-ಇಳುಕಲಗಳನ್ನು ತಲ್ಲಣಗಳನ್ನು ಆತಂಕಗಳನ್ನು ಅದು ತನ್ನಲ್ಲಿ ಹಿಡಿದಿಟ್ಟುಕೊಂಡು ಮರುರೂಪದ -ಪ್ರತಿಫಲನದ ಕೆಲಸವನ್ನು ಮಾಡುತ್ತ ಬಂದಿದೆ. ಯಾವುದಕ್ಕೋ ಒಂದಕ್ಕೆ ಅಂಟಿಕೊಂಡು ಸ್ಥಗಿತತೆಗೆ ಸಿಲುಕಿ-ಜಡವಾಗುವುದಕ್ಕಿಂತ ಕಾಲ ಪ್ರವಾಹದಲ್ಲಿ ಹರಿಯುತ್ತ ಜಂಗಮ ಗುಣವನ್ನು ಒಳಗೊಳ್ಳುವುದೇ ಬಹುಕಾಲ ಜೀವಂತವಾಗಿರಲು ಸಾಧ್ಯ ಎಂದು ಕಣವಿಯವರ ಕಾವ್ಯ ಒಪ್ಪಿಕೊಂಡಂತೆ ತೋರುತ್ತದೆ. ಹೀಗಾಗಿ ನನ್ನ ಓದಿನ ತಿಳಿವಳಿಕೆಯಲ್ಲಿ ಕಾವ್ಯದ ಎರಡು ಮುಖ್ಯ ವೈಶಿಷ್ಟ್ಯಗಳು - ಒಂದು ಅದರ ಜಂಗಮಗುಣ, ಮತ್ತೊಂದು ಪ್ರತಿಫಲನ ಸ್ವರೂಪದ ಕನ್ನಡಿಯ ಬಿಂಬಾತ್ಮಕ ಗುಣ. ಇದನ್ನೇ

ಅವರ 'ಭಾವಜೀವಿ' ಎಂಬ ಪದ್ಯವೊಂದರಲ್ಲಿ "ನಮ್ರತೆಯು ಜಿಜ್ಞಾಸೆ ನನಗೆ ಸುಖವಿತ್ತಿಹವು, ಜಂಬ ಬಡಿವಾರ ಕೈವಾರವಲ್ಲ" ಎಂದಿದ್ದಾರೆ. ನಮ್ರತೆ ಅನ್ನುವುದು ಕೂಡ ಅವರ ಕಾವ್ಯದ ಮತ್ತೊಂದು ಮುಖ್ಯ ಪ್ರಾಣಧಾತು.

'ಶಿಶಿರದಲ್ಲಿ ಬಂದ ಸ್ನೇಹಿತ' ಕವಿತೆ ('ಶಿಶಿರದಲ್ಲಿ ಬಂದ ಸ್ನೇಹಿತ' ಸಂಗ್ರಹ) ಬಹುಮುಖ್ಯವಾದ ಪ್ರಬುದ್ಧ ಚಿಂತನೆಯನ್ನು ತನ್ನೊಳಗೆ ಇರಿಸಿಕೊಂಡಿರುವ ಮಹತ್ವದ ಕವಿತೆ. 'ಶಿಶಿರ' ಕಣವಿಯವರು ಇಷ್ಟಪಡದ ಅವಧಿ ಅಥವಾ ಕಾಲ. ಹಾಗೆ ನೋಡಿದರೆ ಅವರ ಸೃಜನಶೀಲತೆ ನವಿಲಂತೆ ಅರಳುವುದು, ಗರಿಗೆದರುವುದು ಮಳೆಗಾಲದಲ್ಲಿಯೇ, "ಮಳೆಗಾಲವೈತರಲು ನನ್ನ ಕವಿತೆಯ ನವಿಲು, ನೂರು ಕಣ್ಣನು ತೆರೆದು ನರ್ತಿಸುವುದು" ಎಂದು ಅವರೇ ತಮ್ಮ - ಹಾಗೂ ಮಳೆಗಾಲದ ಸಂಬಂಧವನ್ನು ಕುರಿತು ಒಂದು ಕಡೆ ಮುಕ್ತವಾಗಿ ಹೇಳಿಕೊಂಡಿದ್ದಾರೆ. ಶಿಶಿರ ಮತ್ತು ವೃದ್ಧಾಪ್ಯ - ಕಾಲದ ಎರಡು ಕ್ರೂರ ಸ್ಥಿತಿಗಳು. ಬದುಕಿನ ಮರುಚಿಂತನೆಗಳು ನಡೆಯುವುದೇ ಮನುಷ್ಯ ಕೆಟ್ಟ ಕಾಲವನ್ನು ಎದುರಿಸಿದಾಗ, ಬದುಕು ಅರ್ಥವಾಗುವುದು ನಗುವಿನ ಅಲೆಯಲ್ಲಿ ತೇಲುವುದರಿಂದಲ್ಲ; ಕಂಬನಿಗಳ ಆಳದಲ್ಲಿ ಮುಳುಗೇಳುವುದರಿಂದ.

'ಶಿಶಿರದಲ್ಲಿ ಬಂದ ಸ್ನೇಹಿತ' ಪದ್ಯದಲ್ಲಿ ಎರಡು ಕಾಲಗಳ ಸಂಘರ್ಷವಿದೆ. ಶಿಶಿರದಲ್ಲಿ - ಶಿಶಿರದ ಪ್ರತಿರೂಪವಾಗಿ ಬರುವ ಮುಪ್ಪು ಕವಿಯೊಡನೆ ಸಂವಾದಕ್ಕಿಳಿಯುತ್ತದೆ. ಈ ಸಂವಾದದಲ್ಲಿ ವ್ಯಂಗ್ಯ ಮತ್ತು ವ್ಯಸನಗಳು ಎರಡೂ ಮೇಳೈಸಿವೆ. ಕಣವಿಯವರ ಕಾವ್ಯದಲ್ಲಿ 'ಕಾಲ' ಕುರಿತ ಚಿಂತನೆ ಹಲವು ಬಗೆಗಳಲ್ಲಿ ಶೋಧನೆಗೆ ಒಳಪಟ್ಟಿರುವುನದನ್ನು ಕನ್ನಡ ಕಾವ್ಯ ವಿಮರ್ಶೆ ಈಗಾಗಲೇ ಗುರುತಿಸಿದೆ, ಮತ್ತು ಸಾಕಷ್ಟು ಚರ್ಚಿಸಿದೆ. 'ಕಾಲಪುರುಷನಲ್ಲಿ ಕವಿಗಳ ಕೋರಿಕೆ', 'ಕಾಲ ನಿಲ್ಲುವುದಿಲ್ಲ' - ಇಂಥ ಹತ್ತಾರು ಕವಿತೆಗಳಲ್ಲಿ ಕಣವಿಯವರ ಕಾಲದ ಕಲ್ಪನೆಯು ಕಾವ್ಯವಾಗಿ ರೂಪುಗೊಂಡಿರುವುದನ್ನು ನೋಡಬಹುದು.

'ಶಿಶಿರದಲ್ಲಿ ಬಂದ ಸ್ನೇಹಿತ' ಪದ್ಯದಲ್ಲಿ ಎರಡು ಕಾಲಗಳು ಮುಖಾಮುಖಿಯಾಗಿವೆ. ಪ್ರಕೃತಿಯಲ್ಲಿ ಸಂಭವಿಸುವ 'ಚಕ್ರೀಯ ಕಾಲ' ಮನುಷ್ಯನ ಜೀವನದಲ್ಲಿ ಸಂಭವಿಸುವ - 'ರೇಖಾತ್ಮಕ ಕಾಲ' ಎರಡೂ ಈ ಕವಿತೆಯಲ್ಲಿ ಪರಸ್ಪರ ಎದುರಾಗುತ್ತವೆ.

**ಚಳಿಗಾಲದಲ್ಲಿ ಒಬ್ಬನೇ ಬೆಚ್ಚಗೆ ಹೊದ್ದು ಕುಳಿತಾಗ**
**ಮುಪ್ಪು ಮಾತಾಡಿಸಿತು, ತೀರ ಹತ್ತಿರಕೆ ಬಂದು :**
**"ಏನಪಾ ಎಲ್ಲಾ ಸೌಖ್ಯವೇ ? ಇತ್ತೀಚೆಗೆ ಮತ್ತೆ ಬರವಣಗೆ ?**
**ಷಷ್ಟ್ಯಬ್ದಿಗೂ ನಾನು ಬಂದಿದ್ದೆನಲ್ಲ. ನೆನಪಿರಬಹುದು.**

ಹೀಗೆ ಶುರುವಾಗುವ ಪದ್ಯದಲ್ಲಿ ಚಳಿಯ ಶಿಶಿರದಲ್ಲಿ ಬಂದ ಸ್ನೇಹಿತ ಮತ್ತಾರೂ ಅಲ್ಲ, ಅವರ ಮುಪ್ಪು'. ಮುಪ್ಪನ್ನು ಇಲ್ಲಿ ಕವಿ 'ಸ್ನೇಹಿತ' ಎಂದು ಕರೆಯುವುದರ ಮೂಲಕ ಅದನ್ನು ವಿನೀತವಾಗಿ ಒಪ್ಪಿಕೊಳ್ಳುವ ಬದುಕಿನ ಅನಿವಾರ್ಯ ವಿಧಿಯನ್ನು ಸ್ವಾಗತಿಸುವ ಒಲವು

ಪ್ರಕಟಿಸಿದ್ದಾರೆ. ಆದರೆ ಈ ಸ್ನೇಹಿತನ ದನಿಯಲ್ಲಿ - "ಏನಪಾ ಎಲ್ಲಾ ಸೌಖ್ಯವೇ?" ಎಂಬ ವ್ಯಂಗ್ಯ ಮತ್ತು ಅರವತ್ತು ವರ್ಷ ದಾಟಿದವ ನೀನು ಸೌಖ್ಯವಾಗಿರಲೂ - ಹಾಗೂ ಬರವಣಿಗೆಯನ್ನು ಮುಂದುವರೆಸಲು ಸಾಧ್ಯವಿಲ್ಲ ಎಂಬ ಅಣಕದ ದನಿ ಅಡಗಿದೆ.

ಮುಂದಿನ ಸಾಲುಗಳಲ್ಲಿ ತಮಾಷೆ ಮತ್ತೂ ತೀವ್ರಗೊಳ್ಳುತ್ತದೆ --

**ವಿಶ್ರಾಂತ ಜೀವನದಲ್ಲೂ ಬಿಡುವಿಲ್ಲವೆಂದರೆ ಹೇಗೆ ?**
**ಮಾತಾಡು, ಭಾಷಣ ಬಿಟ್ಟು ಬೇರೆ ವಿಷಯ.**
**ಮಕ್ಕಳೆಲ್ಲರೂ ದೂರ, ಮನೆಯಲ್ಲಿ ಇಬ್ಬರೇ ರಾಜರಾಣಿಯರು-**
**ತಮಾಷೆಗೆಂದೆ ಮಾರಾಯ-ಕುಡಿದಿಲ್ಲವೇ ನಾನೂ ಕಷಾಯ ?**

ಮುಪ್ಪು ಎನ್ನುವುದು ಎಲ್ಲಾ ಕ್ರಿಯಾತ್ಮಕತೆಗಳನ್ನು ಬದಿಗಿಟ್ಟು ವಿಶ್ರಾಂತಿ ತಕ್ಕೊಳ್ಳುವ ಕಾಲ- ಆದರೆ ನೀನು ಕಾಲದ ವಿರುದ್ಧ ಸಾಗುತ್ತಿದ್ದೀ ಎಂಬ ಎಚ್ಚರದ ದನಿಯೂ, ಹಾಗೆಯೇ ವೃದ್ಧಾಪ್ಯಕ್ಕೆ ಭಾಷಣ- ಒಂದು ಜಾಡ್ಯ ಎಂಬುದನ್ನು ಇಲ್ಲಿ ಕಾಲ ನೆನಪಿಸುತ್ತಿದೆ. ಹಿಂದೆ ಸರಿದುಹೋದ ಯೌವ್ವನದ ಸಂಭ್ರಮದ ದಿನಗಳನ್ನು ಅಣಕಿಸುವ ದನಿಯಲ್ಲಿ 'ಮನೆಯಲ್ಲಿ ಇಬ್ಬರೇ ರಾಜರಾಣಿಯರು' ಎಂದು ಗೇಲಿ ಮಾಡುತ್ತದೆ. ಕಾಲದ ಮುಖ್ಯ ಮೊನಚು ಮತ್ತು ಶೈಲಿ ಎಂದರೆ ಅದರ ಗೇಲಿಗುಣ. ಅದು ಎಲ್ಲವನ್ನೂ ನೋಡಿ ನಗುತ್ತದೆ.

ಇಲ್ಲಿಂದ ಮುಂದೆ ಪದ್ಯ ಪ್ರಕೃತಿಯಲ್ಲಿ ಸಂಭವಿಸುವ ಋತುವಿಕಾಸದ ಘಟ್ಟಗಳನ್ನು ಮನುಷ್ಯನ ಆಯುಷ್ಯದ ವಿವಿಧ ಸ್ತರಗಳೊಂದಿಗೆ ಸಮೀಕರಿಸುತ್ತ ಕಾಲ ಪ್ರವಾಹದ ಬದಲಾವಣೆಗಳನ್ನು, ಅದರ ಗುಣ ಲಕ್ಷಣ ಸ್ವಭಾವಗಳನ್ನು ನಿರ್ವಚಿಸುತ್ತ ಸಾಗುತ್ತದೆ.

**ವಸಂತದ ಚಿಗುರು, ಮೊಗ್ಗುಗಳ ಹಿಗ್ಗು ಯಾರಿಗೆ ಬೇಡ?**
**ಅಂಬೆಗಾಲು, ಅಚ್ಚರಿಗಣ್ಣು, ತೊದಲು ಮಾತು;**
**ನೋಡು ನೋಡುವಷ್ಟರಲ್ಲಿ ಕರಗಿ ಹೋಗಿತ್ತು ಪೆಪ್ಪರಮಿಂಟು**
**ಬಿದ್ದ ಹಲ್ಲಿನ ಜಾಗದಲ್ಲಿ ನಾಲಗೆಯ ನಂಟು.**

ವಸಂತಕಾಲವನ್ನು ಇಲ್ಲಿ ಬಾಲ್ಯಕ್ಕೆ ಸಮೀಕರಿಸಲಾಗಿದೆ. ಈ ಬಾಲ್ಯದ ಅವಧಿ ಎಷ್ಟು ಕ್ಷಿಪ್ರ ಮತ್ತು ತ್ವರಿತಗತಿಯದೆಂದರೆ ಅದು ಬಾಯಲ್ಲಿಟ್ಟ ಪೆಪ್ಪರಮಿಂಟಿನಂತೆ ಕರಕರಗಿ ಹೋಗಿಬಿಡುತ್ತದೆ. 'ಚಿಗುರು', 'ಮೊಗ್ಗು', 'ಅಚ್ಚರಿಗಣ್ಣು', 'ತೊದಲುಮಾತು', ಇತ್ಯಾದಿ ಶಬ್ದಗಳ ಬಳಕೆ ಬಾಲ್ಯಕಾಲದ ಶಸಕ್ತ ಚಿತ್ರಣಕ್ಕೆ ರೂಪಕವಾಗಿ, ಶಕ್ತಿಯುತವಾಗಿ ಬಳಕೆಯಾಗಿವೆ. ಆದರೆ ಕಳೆದುಹೋದ ಆ ಬಾಲ್ಯ ಇಡೀ ಬಾಳಿನುದ್ದ ಬಂದ ಹಳಹಳಿಕೆಯಾಗಿ, ಹಳವಂಡವಾಗಿ ವ್ಯಕ್ತಿಯ ಕಾಡುವುದನ್ನು "ಬಿದ್ದಹಲ್ಲಿನ ಜಾಗಕ್ಕೆ ಮತ್ತೆ ಮತ್ತೆ ನಾಲಗೆ" ಹೋಗುವ ಬಗೆಯ ಹಾಗೆ ಎಂಬುದನ್ನು ಇನ್ನಷ್ಟು ಸ್ಪಷ್ಟವಾಗಿ ತೆರೆದಿಡುತ್ತದೆ.

ಮುಂದಿನ ಸ್ಟ್ಯಾಂಜಾದಲ್ಲಿ ಈ ಪದ್ಯ ಯೌವ್ವನವನ್ನು ವೈಶಾಖ ಋತುವಿಗೆ ಸಂಕೇತಿಸುತ್ತದೆ.

**ವೈಶಾಖಕ್ಕೆ ಯಾವ್ವನದ ಸೊಕ್ಕು, ಬಿಸಿಲೂ ಪ್ರಖರ-**
**ಮುಂಗಾರಿನೊಡಲ ಮಿಂಚು, ಮಳೆಯ ರಭಸ ;**
**ಬೇಗೆಯಿಲ್ಲದ ಬಿಸಿಲ ಹದ ಈಗ, ಉದ್ವೇಗವಿಲ್ಲದ ನಡಿಗೆ**
**ಮುಗಿದ ಸುಗ್ಗಿಯ ಕೊಡುಗೆ; ನಕ್ಷತ್ರಗಳ ಮಂದಹಾಸ.**

ಯೌವ್ವನದ ಅವಸ್ಥೆಗಿರುವ ಎಲ್ಲಾ ಮುಖಗಳ ಅನಾವರಣ ಈ ಸಾಲುಗಳಲ್ಲಿ ಮೂಡಿದೆ. ಯೌವ್ವನಕ್ಕೆ ಸೊಕ್ಕು ಮತ್ತು ಉಕ್ಕು ಎರಡೂ ಇವೆ. ಮುಂಗಾರು, ಮಿಂಚು, ಮಳೆ, ರಭಸ, ಪ್ರಖರ ಬಿಸಿಲು - ಎಲ್ಲವೂ ಕ್ರಿಯಾತ್ಮಕತೆಯ ಸಂಕೇತ. ಉಕ್ಕು ಇಳಿದ ಮೇಲೆ ಬಿಸಿಲ ಹದ, ಉದ್ವೇಗವಿಲ್ಲದ ನಡಿಗೆ ಪ್ರಾಪ್ತವಾಗುತ್ತದೆ. ಅನಿಯಂತ್ರಿತತೆ ಒಂದು ನಿಯಂತ್ರಣಕ್ಕೆ ಸಿಕ್ಕುತ್ತದೆ. ಸೊಕ್ಕು -ಸಂತೃಪ್ತಿಯಲ್ಲಿ ಪರಿಸಮಾಪ್ತಿಯಾಗುತ್ತದೆ.

ಸಂತೃಪ್ತಿ ಹಾಗೆ ನೋಡಿದರೆ ಇಳಿಕೆಯ ಮೆಟ್ಟಿಲು. ಸಂತೃಪ್ತತೆ ಮುಟ್ಟಿದರೇನೇ ಅದು ಮುಪ್ಪು, ಅವಸಾನ, ಇಳಿಕೆಯ ಲಕ್ಷಣ. ಮಾಗುವುದು ಸಂತೃಪ್ತಿಯ ಲಕ್ಷಣ ಹೇಗೋ ಹಾಗೆ ಮಾಗುವಿಕೆ ಮುದುಡುವಿಕೆಯನ್ನು ತನ್ನೊಟ್ಟಿಗೆ ತರುತ್ತದೆ. ಇದನ್ನೇ ಮುಂದಿನ ಸಾಲುಗಳು -

**ಹಂಪುಗಾಲಕ್ಕೆ ಹಣ್ಣಿಗೆ ಬೇರೆ ಬಣ್ಣ, ರುಚಿಯೂ ಅಷ್ಟೆ**
**ಮಾಗಿದನುಭವದ ಕಳೆ ಮುಖದ ಮೇಲೆ:**
**ಬದುಕಿನಿತಿಮಿತಿಯನರಿತ ಸಂತೃಪ್ತಿ, ನಿಶ್ಚಿಂತ ನಿಲುವು**
**ಹೊಸ ಚೆಲುವಿನಾವಿಷ್ಕಾರ, ಸುಕುಮಾರಲೀಲೆ.**

ಮನುಷ್ಯನಿಗೂ- ಪ್ರಕೃತಿಗೂ ಈಗ ಮಾಗಿ ಪರಿಪಕ್ವವಾಗುವ ಕಾಲ. ಹಣ್ಣು ಮತ್ತು ವೃದ್ಧ ಮಾಗಿದನುಭವದ ಶ್ರೇಷ್ಠ ರೂಪಕಗಳು. ಬದಲಾಗುವ ಬಣ್ಣ, ರುಚಿ, ಕಳೆ - ಅವು ಮಾಗಿದುದರ ಸೂಚನೆಗಳು. ಹೀಗೆ ಮಾಡುವುದರಿಂದಲೇ ಸಂತೃಪ್ತಿ, ನಿಶ್ಚಿಂತ ನಿಲುವು, ಹೊಸ ಚೆಲುವಿನಾವಿಷ್ಕಾರ, ಸುಕುಮಾರ ಲೀಲೆ- ಸಾಧ್ಯವಾಗುವುದು. ವೃದ್ಧಾಪ್ಯ ಕೂಡ ಹೊಸ ಚೆಲುವನ್ನು ಸಾಕ್ಷಾತ್ಕರಿಸಿಕೊಳ್ಳಲು ಯೋಗ್ಯವಾದ ಹಂತ. ಬದುಕಿನ ಇತಿ -ಮಿತಿ ಅರ್ಥವಾಗುವುದು ಮಾತ್ರ ಈಗ ಸಾಧ್ಯ.

ಮನೋವಿಜ್ಞಾನದಲ್ಲಿ ಗಂಡು ವೃದ್ಧಾಪ್ಯವನ್ನು ತಲುಪಿದಾಗ- ಹೆಣ್ಣಿನಂತೆ ಸುಕುಮಾರನೂ, ಸುಂದರನೂ, ಮೃದುವೂ ಆಗುತ್ತಾನೆ; ಹೆಣ್ಣು ಗಂಡಿನಂತೆ ಧೀರಳೂ, ಕೊಂಚ ಕಟುವೂ ಆಗುತ್ತಾಳೆ ಎಂದು ವಿಶ್ಲೇಷಿಸಿದೆ. ಹೀಗಾಗಿ ಹೆಣ್ಣು ಮುದುಕಿಯಾದಾಗ ಆಕೆಗೆ ಗಡ್ಡ ಮೀಸೆಗಳು ಬೆಳೆಯುವುದು, ಅವಳ ದನಿಯಲ್ಲಿ ಗಡಸು ಕಾಣಿಸಿಕೊಳ್ಳುವುದು ಇದರ ಲಕ್ಷಣ ಎಂದಿದ್ದಾರೆ. ಅದೇನೇ ಇರಲಿ, ಮನುಷ್ಯ ಮುಪ್ಪನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಾನೆ. ಅದನ್ನು ಅವ ಬದುಕಿನ ಒಂದು ಸೋಲು

ಎಂದು ಪರಿಭಾವಿಸುತ್ತಾನೆ. ಆದರೆ ಈ ಪದ್ಯ ಮುಪ್ಪನ್ನು ಒಂದು ಇತ್ಯಾತ್ಮಕ ನೆಲೆಯಲ್ಲಿ ಎದುರುಗೊಂಡಿದೆ. ಮುಪ್ಪಿನ ಅವಸ್ಥೆಯಿಂದ ಬದುಕನ್ನು ಸಮಗ್ರವಾಗಿ ಪರಿಶೀಲಿಸ ಹೊರಟಿದೆ.

ಇದೇ ಪ್ರಶ್ನೆಯನ್ನು ಈ ಕವಿತೆಯ ಮುಂದಿನ ಸಾಲುಗಳು ಎತ್ತಿಕೊಳ್ಳುತ್ತವೆ. ಹಾಗೂ ಕಾಲ ಒಂದು ಚಕ್ರೀಯ ಗುಣವನ್ನು ಒಳಗೊಂಡದ್ದು, ಒಂದರ ಮುಕ್ತಾಯ ಮತ್ತೊಂದರ ಆರಂಭ. ಎರಡು ಕಾಲದ ಬಿಂದುಗಳು ಒಂದು ಕಡೆ ಸಂಗಮವಾಗುವ ಸಂಭ್ರಮವನ್ನು ಇಲ್ಲಿ ಹೇಳುವಂತಿವೆ.

**ಹಿರಿಯನೆಂದೆನಿಸಿಕೊಳ್ಳುವುದು ನಿನ್ನಂಥವಗೆ ಸ್ವಲ್ಪ ಕಿರಿಕಿರಿಯೆ**
**ಅದಕಾಗಿ ಸಲಿಗೆ ಮೊಮ್ಮಕ್ಕಳಿಗೆ ಅಜ್ಜನೊಡನೆ:**
**ಶಿಶಿರದ ಬಸಿರಿನಲ್ಲಿ ಚೈತ್ರ ಕಣ್ ತೆರೆವ ಜೀವದ ಕುಸುರು**
**ಒಣಗಿರುವ ಕೊಂಬೆದುದಿಯಲ್ಲಿ ಹಕ್ಕಿಯಾಲಾಪನೆ.**

ಎರಡು ವೈರುಧ್ಯಗಳ ಸಂಗಮದ ಅನಿವಾರ್ಯತೆಯನ್ನು ಮೇಲಿನ ಸಾಲುಗಳು ಉಲ್ಲೇಖಿಸುತ್ತವೆ. ಬದುಕಿನಲ್ಲಿ ನಾವು ಅಂದುಕೊಳ್ಳುವ ಅಸಂಗತ ನಿಲುವುಗಳು ಕಾಲನ ದೃಷ್ಟಿಯಲ್ಲಿ ಸಂಗತವೂ, ಸುಸೂತ್ರತೆಯನ್ನು ಒಳಗೊಂಡಿರುತ್ತವೆ. ದ್ವಂದ್ವಗಳು ಹಾಗೆ ನೋಡಿದರೆ ದ್ವಂದ್ವಗಳಾಗಿರುವುದಿಲ್ಲ. ಶಿಶಿರ ಬರೆದ ಚೈತ್ರ ಕಣ್ ತೆರೆಯಲಾರದು. ರಾತ್ರಿ ಇರದೆ ಹಗಲಿಗೆ ಬೆಲೆಯಿಲ್ಲ. ಬಾಲ್ಯ ಇರದೆ ಮುಪ್ಪು ಇಲ್ಲ. ಮೊಮ್ಮಕ್ಕಳ ಮತ್ತು ಅಜ್ಜನ ಸ್ವಭಾವಗಳಲ್ಲಿ ಏನೋ ಒಂದು ರೀತಿಯ ಸಮಾನಾಂತರ ಆಸಕ್ತಿಗಳಿವೆ. ಹೀಗಾಗಿ ಅವೆರಡೂ ಅನ್ಯೋನ್ಯವಾಗಿ ಇರಬಲ್ಲವು. ಮಗು ಕಾಲದ ಆರಂಭದ ಬಿಂದುವಾದರೆ ಅಜ್ಜ ಕಾಲದ ಕಡೆಯ ಬಿಂದು. ಆದರೆ ಅವೆರಡಕ್ಕೂ ಒಂದು ತಾಳ - ಮೇಳವಿದೆ. ಇದೇ ವೈಚಿತ್ರ್ಯ, ವಿಸ್ಮಯ, ಕಾಲದ ನಿಗೂಢತೆ.

'ಸಲಿಗೆ ಮೊಮ್ಮಕ್ಕಳಿಗೆ ಅಜ್ಜನೊಡನೆ' ಹಾಗೂ 'ಒಣಗಿರುವ ಕೊಂಬೆದುದಿಯಲ್ಲಿ ಹಕ್ಕಿಯಾಲಾಪನೆ' ಸಾಲುಗಳು ಹೊಂದಾಣಿಕೆ ಮತ್ತು ಆರೋಗ್ಯಕರ ಪರಿವರ್ತನೆಗಳನ್ನು ಹೇಳುತ್ತವೆ. ಇಡೀ ಪದ್ಯದಲ್ಲಿ ಕಾಲನ ವಿರುದ್ಧ ಸೆಡ್ಡು ಹೊಡೆದು ನಿಲ್ಲುವ ದಾರ್ಷ್ಟ್ಯಕ್ಕಿಂತ, ಕಾಲನ ಅನಿವಾರ್ಯ ಪರಿವರ್ತನೆಗಳನ್ನು ವಿನಮ್ರತೆಯಿಂದ ಒಪ್ಪಿಕೊಳ್ಳುವ ಕಡೆ ಹೆಚ್ಚು ಒಲವು ಬಿದ್ದಿದೆ.

ಬದುಕಿನ ಕಡೆಯ ಅವಸ್ಥೆಯಲ್ಲಿ ಅರಳು ಮತ್ತು ಮರಳು ಕೂಡಿಯೇ ಸಂಭವಿಸುವ ಸಾಧ್ಯತೆ ಇದೆ. ವೃದ್ಧಾಪ್ಯ ಹೇಗೆ ಶಾಂತತೆ, ಸಂಯಮತೆಗಳಿಗೆ ಹೆಸರಾಗಿದೆಯೋ ಹಾಗೆಯೇ ಚಂಚಲತೆಗೆ, ಚಪಲತೆಗೂ, ಅಸ್ಪಷ್ಟತೆಗೂ ಹೆಸರಾಗಿದೆ. ಮುಂದೆ ಬರುವ ಪದ್ಯದ ಸಾಲುಗಳು ಈ ಎರಡೂ ಮನೋಸ್ಥಿತಿಗಳನ್ನು ಬಹಳ ನಿರ್ದಿಷ್ಟವಾಗಿ ಹಿಡಿದಿಟ್ಟಿವೆ.

**ಸಂಜೆಗಂಪಿನ ಮುಂದೆ ಬದುಕಿನ ಗುಟ್ಟು ಬಚ್ಚಿಡುವಂತೆ**
**ಬೆಟ್ಟ, ಸ್ತಬ್ಧ ಗಿಡಮರ, ನಿಶ್ಶಬ್ದ ಹಕ್ಕಿ-ಸಾಲು :**
**ಕಾಡಿನಂಚಿಗೆ ಕಣ್ಣುಮುಚ್ಚಾಲೆ ಮಿಂಚು -ಹುಳ**
**ಹುಬ್ಬುಗೈ ಹಚ್ಚಿ ನೋಡುವ ಚಂದ್ರ-ಹಿಡಿದು ಲಾಂದ್ರ.**

ವೃದ್ಧಾಪ್ಯದಲ್ಲಿ ಕಾಲ ಸ್ಥಗಿತಗೊಳ್ಳುತ್ತದೆ. ಕಾಲ ಅನ್ನುವುದು ಬಾಲ್ಯದಲ್ಲಿ ಅಂಬೆಗಾಲಿಡುತ್ತದೆ:

ಯೌವ್ವನದಲ್ಲಿ ಜೊತೆ ಜೊತೆ ನಡೆಯುತ್ತದೆ. ಮುಪ್ಪಿನಲ್ಲಿ ಮುಂದೆ ಮುಂದೆ ನಡೆದು ಹೋಗಿಬಿಡುತ್ತದೆ. 'ಕಾಲಕಸ' ಎನ್ನುವುದು ಈ ಅರ್ಥದಲ್ಲಿಯೇ. ಈಗ ಸ್ತಬ್ಧತೆ - ಮೌನ, ಆವರಿಸಿಕೊಳ್ಳುತ್ತದೆ. ಚಂದ್ರನೂ ಲಾಂದ್ರ ಹಿಡಿದು ಹುಬ್ಬುಗ್ಗೆ ಹಚ್ಚಿ ನೋಡುವಂತಾಗಿದ್ದಾನೆ. 'ಮಿಂಚು- ಹುಳು' ಚಂಚಲ ಮನೋಸ್ಥಿತಿಗೆ ಸಂಕೇತವಾಗಿಯೂ ನೋಡಬಹುದು. 'ಕಾಡಿನಂಚು' - ಬದುಕಿನ ಕಡೆ ಅವಧಿ ಎಂದು ಕೂಡ ಅಂದುಕೊಳ್ಳಬಹುದು. ಇಡೀ ಪದ್ಯದ ತಾತ್ಪರ್ಯ ಮತ್ತು ತಾತ್ವೀಕರಣ ಹಾಗೂ ಕಾಲ ಕುರಿತಾಗಿ ಕವಿ ತಾಳುವ ನಿಲುವುಗಳು ಪದ್ಯದ ಕಡೆಯ ಈ ಸಾಲುಗಳಲ್ಲಿ ಸ್ಪಷ್ಟವಾಗಿ ಮೂಡಿಬಂದಿವೆ.

**ಬೆಳಗಿನ ವಿಹಾರದಲಿ ಮೈ ಕೊರೆವ ಚಳಿ, ಮೂಡಗಾಳಿಯ ಮೊರೆತ**
**ನಗುನಗುತ ಹಣ್ಣೆಲೆಗಳುದುರಿ ಚೆದುರುವಾಟ:**
**ಜೀವನ ಲಯದ ಸ್ವೀಕಾರದಲ್ಲಿದೆ ಸೊಗಸು: ಇದೆಲ್ಲಿಯ ತರಲೆ**
**ಎನಬೇಡ, ನಾನಿನ್ನು ಬರಲೆ ? ಗೊತ್ತಿಲ್ಲ ನಾ ಸ್ವಲ್ಪ ಒರಟ.**

ಜೀವನ ಅನ್ನುವುದು ಲಯದ ಒಂದು ಲೀಲೆ. ಲಯ ತಪ್ಪಿ ನಡೆಯುವುದು ದುರಂತಕ್ಕೆ ದಾರಿ ಮಾಡಿಕೊಟ್ಟಂತೆ. 'ಲಯದ ಸ್ವೀಕಾರದಲ್ಲಿದೆ ಸೊಗಸು', ಪ್ರಾಯಶಃ ಇದು ಕಣವಿಯವರು ಬದುಕು ಕುರಿತು ತಾಳಿರುವ ಒಂದು ದರ್ಶನ. ಲಯ ತಪ್ಪದೆ ನುಡಿವ -ನಡೆವ ಕೆಲಸವನ್ನೇ ಅವರು ತಪಸ್ಸಿನಂತೆ ಕೈಗೊಂಡಿದ್ದಾರೆಂದು ಅವರ ಇಡೀ ಕಾವ್ಯ ನಮಗೆ ಮನವರಿಕೆ ಮಾಡಿಕೊಡುವಂತಿದೆ.

'ಗೊತ್ತಿಲ್ಲ ಸ್ವಲ್ಪ ಒರಟ' - ಇದು ಕಾಲನ ಮಾತು. ಕಾಲ ನಿಷ್ಕರುಣಿ, ನಿರ್ದಯ ಹಾಗೆಯೇ ನಿಗೂಢ. ಕಾಲನಿಂದ ಯಾರೂ ಪಾಠ ಕಲಿತಿಲ್ಲ-ಎನ್ನುವುದೇ ಕಾಲ ಇದುವರೆಗೂ ನಮಗೆ ಕಲಿಸಿರುವ ಶ್ರೇಷ್ಠ ಪಾಠ.

**ಚಹವ ಗುಟುಕರಿಸುತ್ತ ಮೇಲೆದ್ದ ಬಾಲ್ಯದ ಗೆಳೆಯ**
**ನಕ್ಕು ಕೈಕುಲುಕಿ, ದಟ್ಟ ಮಂಜಿನಲಿ ಕರಗಿಹೋದ**

'ಶಿಶಿರದಲ್ಲಿ ಬಂದ ಸ್ನೇಹಿತ' - ಮುಪ್ಪು ಅಥವಾ ಕಾಲ, ಅವನು ಬಾಲ್ಯದ ಗೆಳೆಯ. ಆದರೆ ಈ ಗೆಳೆಯನ ಅರಿವು ಅಥವಾ ಅವನ ಇರವು-ನಮ್ಮಗಳ ಗಮನಕ್ಕೆ ಬರುವುದೇ ತಡವಾಗಿ, ಅದೂ ಶಿಶಿರದಂತಹ ಕ್ರೂರ ಮಾಸಗಳಲ್ಲಿ. ಕಷ್ಟದ ದಿನಗಳಲ್ಲಿಯೇ ಕಾಲನ ಹಿಂಸೆ ತೀವ್ರ. ಕಾಲನ ಸ್ಪಷ್ಟ ಅರಿವು ಬರುವುದೇ ವೃದ್ಧಾಪ್ಯದ ಸಂದರ್ಭದಲ್ಲಿ. 'ದಟ್ಟ ಮಂಜಿನಲ್ಲಿ ಕರಗಿ ಹೋದ' ಎನ್ನುವುದು ಕಾಲದ ನಿಗೂಢತೆಯನ್ನು ತೀವ್ರಗೊಳಿಸುವ ಹಾಗಿದೆ. ಕಾಲನ ಹಾದಿ ಹಾಗೆ ನೋಡಿದರೆ ದಟ್ಟ ಮಂಜಿನಲ್ಲಿ ಮುಳುಗಿ ಹೋದ, ಸ್ಪಷ್ಟ ಬೆಳಕಿಗು ಕಾಣದ ನಿಗೂಢದ ಹಾದಿ. ಕಾಲನ ಆಗಮನ-ನಿರ್ಗಮನಗಳೆಂಬವು ನಮ್ಮ ಕಣ್ಣಂಚಿನಲ್ಲಿ, ನಮ್ಮ ಕೈಗಡಿಯಾರಗಳಲ್ಲಿ ನಾವು

ನಿರ್ಮಿಸಿಕೊಂಡಿರುವ ಕೃತಕ ಚೌಕಟ್ಟುಗಳು, ಅದೊಂದು ಹಾದಿಯಲ್ಲದ ಅನಾದಿಯು ಚಲಿಸುವಂತೆ ತೋರಿಯೂ ಚಲಿಸದ ಅನಿಮಿಷ ಸ್ವಭಾವದ್ದು.

ಹೀಗಾಗಿ ಕಣವಿಯವರ ಈ ಪದ್ಯ ಕುತೂಹಲವನ್ನೇ ಹೆಚ್ಚಿಸುತ್ತದೆ. 'ಕಾಲ' ಕುರಿತ ಯಾವುದೇ ಕವನ ಓದುಗರನ್ನು ತಟ್ಟನೆ ಸೆಳೆಯುವ ಚುಂಬಕಗುಣಗಳನ್ನು ತಮ್ಮಲ್ಲಿ ಅಡಗಿಸಿಟ್ಟುಕೊಂಡಿರುತ್ತದೆ. ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಕೆ.ಎಸ್.ನ. ಅವರ 'ಗಡಿಯಾರದ ಅಂಗಡಿಯ ಮುಂದೆ', ಅಡಿಗರ 'ಭೂತ', ಶಿವಪ್ರಕಾಶರ 'ಗಾಣದ ಸುತ್ತುಗಳು' - ಇತ್ಯಾದಿಗಳು ಈ ಕಾರಣದಿಂದ ವಿಶೇಷ ಚರ್ಚೆಗೆ ನಮ್ಮನ್ನು ಆಹ್ವಾನಿಸುವಂತಿವೆ. 'ಶಿಶಿರದಲ್ಲಿ ಬಂದ ಸ್ನೇಹಿತ' ಕವನದಲ್ಲಿ ಕಣವಿಯವರು 'ಕಾಲ'ವನ್ನು ಎದುರಿಸಿರುವುದು ಬುದ್ಧಿಜೀವಿಯೋ, ತತ್ವಜ್ಞಾನಿಯೋ, ಪಂಡಿತನೋ ಆಗಿ ಅಲ್ಲ. 'ಕಾಲ' ತರ್ಕದ ಇಕ್ಕಳಗಳಿಗೆ ಸಿಗುವ ಮಾತು, ವಿಚಾರವಲ್ಲ. ಹೀಗಾಗಿ ಈ ಅಮೂರ್ತ ವಿಚಾರವನ್ನೆ ಅವರು ಮೂರ್ತ ಅನುಭವಗಳ ಮೂಲಕ, ದೃಶ್ಯಗಳ ಮೂಲಕ, ನಾವು ಕಲ್ಪಿಸಿಕೊಂಡ ಪ್ರಾಕೃತಿಕ ಸ್ಥಿತ್ಯಂತರ ವಿಕಾಸಗಳ ಮೂಲಕ ಕಾಲ ಕುರಿತು ಚಿಂತನೆ ನಡೆಸಿದ್ದಾರೆ. ಬುದ್ಧಿಗಿಂತ - ಈ ಪದ್ಯ ಭಾವಪ್ರಧಾನವಾಗಿದೆ. ಭಾವಪ್ರಧಾನ ಪದ್ಯಗಳಲ್ಲಿ ವಿಚಾರಗಳು ಹಿಂದೆ ಸರಿದು ಅವು ಅನುಭವದ ಆಶ್ರಯದ ಮೂಲಕ ದನಿಯನ್ನು ಬೆಳಗಲು ಯತ್ನಿಸುತ್ತವೆ.

ಕಣವಿಯವರು "ಕಾಲದಂಥ ಮೂಲಭೂತ ಅನುಭವಕ್ಕೆ ಎದುರಾಗುವಾಗ ಯಾವ ನಿಗೂಢ ಆಧ್ಯಾತ್ಮಿಕ ವ್ಯವಸ್ಥೆಯನ್ನು ಆಶ್ರಯಿಸದೆ, ವಿಸ್ತುನಿಷ್ಠ ಕಾಲಕ್ಕೆ ಪ್ರತಿಸ್ಪಂದಿಸುವಾಗ ಜೀವ ಚೈತನ್ಯವನ್ನು ಒರಸಿ ಹಾಕುವ ಭಯಕ್ಕೆ ಆಸ್ಪದ ಕೊಡದೆ ತಮ್ಮ ಮಾರ್ದವತೆ, ಲಾಲಿತ್ಯ, ಭಾವಗೀತಾತ್ಮಕತೆಯನ್ನು ಉಳಿಸಿಕೊಂಡದ್ದು ಕಣವಿಯವರ ಸೃಜನಶೀಲತೆ ಪಕ್ವಗೊಂಡಿರುವ ಕ್ರಮವನ್ನು ಸೂಚಿಸುತ್ತದೆ." (ಡಿ. ಆರ್. ನಾಗರಾಜ, ಚೆನ್ನವೀರ ಕಣವಿಯವರ ಕಾವ್ಯದಲ್ಲಿ ಕಾಲ, - 'ಶಕ್ತಿ ಶಾರದೆಯ ಮೇಳ') ಎಂಬ ಮಾತು ಕಣವಿಯವರು ಕಾಲವನ್ನು ಗ್ರಹಿಸುವ ಕ್ರಮವನ್ನು ಸರಿಯಾಗಿ ಗುರುತಿಸಿದೆ.

'ಕಾಲ'ವನ್ನು ಭಯದಿಂದ ನೋಡುವ 'ಕಾಲ'ವನ್ನು ತರ್ಕದಿಂದ ನೋಡುವ ಅಥವಾ ತತ್ವಜ್ಞಾನವೊಂದು ಕೊಡಮಾಡಿದ ಸಿದ್ಧಾಂತದ ಬೆಳಕಿನಿಂದ ನೋಡುವ ಪರಿಕ್ರಮಕ್ಕಿಂತ ಭಿನ್ನವಾಗಿ ಕಣವಿಯವರು 'ಕಾಲ'ವನ್ನು ನಮ್ಮೊಡನೆ ಆಡುವ, ತಮಾಷೆ ಮಾಡುವ, ನಮ್ಮ ದೈನಂದಿನ ಭಾಗವಾದ ದಿನಚರಿಗಳಲ್ಲಿ ಪ್ರಕಟಗೊಳ್ಳುವ ಚಟುವಟಿಕೆಗಳಂತೆ ನೋಡಿದ್ದಾರೆ. ಹೀಗಾಗಿ ಈ ಪದ್ಯ ಬಹು ಗಂಭೀರವಾದ ವಿಷಯವನ್ನು ಲಾಲಿತ್ಯಮಯವಾಗಿ ಹಿಡಿಯಲು ಪ್ರಯತ್ನಿಸಿದೆ.

ಪ್ರಹ್ಲಾದ ಅಗಸನಕಟ್ಟೆ

# ೭೧. ಒಂದು ಬೆಳಗು

ನಸುಕಿನಲ್ಲಿ ಎಲ್ಲರಿಗಿಂತ ಮೊದಲೇ
ಎಲ್ಲಿಂದಲೋ ಕೂಗಿದ್ದು ಕೋಗಿಲೆಯೇ -
ಎಂದು ಕಿವಿ ನಂಬದಾಯ್ತು.
ಮನೆಯ ಪಕ್ಕದಲಿ ಹಕ್ಕಿ ಚಿಲಿಪಿಲಿಗುಟ್ಟಿದಾಗ -
ನಾಭಿ ಮೂಲದಿಂದ ಕಹಳೆಯ ಪಾಂಗಿನಂತೆ ಹೊಮ್ಮಿದ 'ಕುಹೂ',
ಅದೇ ಅದೇ ಎಂದು ಖಾತ್ರಿಯಾಯ್ತು.

ಮಬ್ಬುಗತ್ತಲೆಯನ್ನು ಭೇದಿಸಿ ನಮಾಜಿನ ಆವಾಜು
ಆಕಾಶಕ್ಕೇರಿ ಇಳಿದಾಗ,
ದೂರದಿಂದ ಧಾವಿಸಿ ಬರುತ್ತಿದ್ದ ರೈಲಿನ ಸಿಳ್ಳು
ದಿಗಂತದ ನಸುಗೆಂಪನ್ನು ತಿದ್ದಿ ತೀಡಿ
ದೀರ್ಘ ರೇಖೆಯನ್ನೆಳೆದಾಗ,
ಸಂಧಿಕಾಲಕ್ಕೆ ಪ್ರಯಾಣ ಸಮೀಪಿಸಿತ್ತು.

ನಗರದ ಕೋಳಿಗಳಿಗೆ
ಬೇಸಾಗಿ, ಪಟಪಟ ರೆಕ್ಕೆ ಬಡಿದು
ಕೊರಳೆತ್ತಿ ಕೂಗುವಭ್ಯಾಸ ಮರೆತೇ ಹೋಗಿದೆ.
ಎಡಬಿಡದೆ ತತ್ತಿ ಇಡುವುದೊಂದೇ ಅವಕ್ಕೆ
ಮನುಷ್ಯ ವಹಿಸಿಕೊಟ್ಟಿರುವ ಕುಟುಂಬ ಯೋಜನೆ.
ಅದಕ್ಕಾಗಿ ಪಂಜರದಲ್ಲೆ, ಪೌಷ್ಟಿಕಾಹಾರ ಜೋಪಾಸನೆ.

ಕೋಗಿಲೆಯೊಂದು ಮಾತ್ರ ಇದುವರೆಗೆ
ಯಾರ ಕೈಗೂ ಸಿಗದೆ

ಸ್ವಚ್ಛಂದ ಹಾಡಿ ಬದುಕುತ್ತಿರುವುದೇ ಆಶ್ಚರ್ಯ.
ಕೋಗಿಲೆ -ನಮಾಜು-ರೈಲು
ಕಲೆ-ಧರ್ಮ-ವಿಜ್ಞಾನದ ಪೈಲು
ಪರಸ್ಪರ ಸಂಧಿಸಿ, ಸ್ಪಂದಿಸಿ ದಿನವೂ
ಹೀಗೆ ಬೆಳಗಾದರೆ?
ಎಂದು ಪ್ರಶ್ನೆಯ ಚೆತ್ತ ಹಿಡಿದು
ಬೆಳಗಿನ ವಿಹಾರಕ್ಕೆ ನಾನು ಹೊರಬಿದ್ದೆ.

ಕನ್ನಡದ ವಿನಯ ಕಣವಿಯವರಲ್ಲಿ ಒಂದು ಸಹಜ ಮನೋಭಾವವಾಗಿಯೂ ಕಾವ್ಯದ ಸ್ಥಾಯಿ ಭಾವವಾಗಿಯೂ ಒಡಮೂಡಿದೆ. ವಿನಯಶೀಲನಾದವನು ಸೂಕ್ಷ್ಮ ಚಿಂತಕನೂ ಆದಾಗ ವಿಶ್ವದ ಜೀವಮುಖಿ ಗುಣಗಳು ಅವನ ಕಾವ್ಯದ ಜೀವಾಳವೂ ಆಗಿಬಿಡಬಹುದು. ಕಾವ್ಯ ಕಣವಿಯವರಿಗೆ ಜೀವನ ಗ್ರಹಿಕೆಯ ಮತ್ತು ಸತ್ಯದರ್ಶನದ ನೇರ ಪಥ. ತನ್ನ ಕಾವ್ಯ ಶಕ್ತಿಯನ್ನು ಒಂದು ನಿರ್ದಿಷ್ಟ ಸಾಹಿತ್ಯ ಪಥದ ಚೌಕಟ್ಟಿನಲ್ಲಿ ಅವರು ಎರಕಹೊಯ್ದುಕೊಂಡವರಲ್ಲ, ಅಥವಾ ಕಾವ್ಯಪಥವೊಂದರ ಆತ್ಯಂತಿಕ ಸತ್ವ ಹೇರಿಕೊಂಡು ಅದರ ಪ್ರಾತಿನಿಧಿಕತ್ವದಲ್ಲಿ ಶಿಖರ ಪ್ರಾಯರಾದವರಲ್ಲ. ಆದ್ದರಿಂದ ಹಲವು ಸ್ಥಿತ್ಯಂತರಗಳನ್ನು ಹಾದು ಬಂದ ಕಾವ್ಯ ಪರಂಪರೆಯ ಯಾವ ಚಾರಿತ್ರಿಕ ನಿರ್ಣಾಯಕ ಘಟ್ಟದಲ್ಲೂ ಕಣವಿಯವರು ಗೊಂದಲಕ್ಕೊಳಗಾದವರಲ್ಲ. ಪ್ರತಿಕ್ರಿಯಾತ್ಮಕ ಅಪಾಯಕ್ಕೆ ಕಾವ್ಯಪ್ರಯೋಗದ ಸೋಲು ಗೆಲುವಿನ ರಿಸ್ಕಿಗೆ ಸಿಕ್ಕಿಹಾಕಿಕೊಂಡವರಲ್ಲ. ವಿನಯದಿಂದ ಪಡೆದುಕೊಂಡ ಸಮಭಾವದಿಂದಾಗಿ ಕಣವಿಯವರನ್ನು 'ಸಮನ್ವಯದ ಕವಿ' ಎನ್ನುವುದರ ಬದಲಾಗಿ ಕನ್ನಡದ ಸಂಶ್ಲೇಷಣಾತ್ಮಕ ಸಂವೇದನೆಯ ರೂಪಕ ಪ್ರತಿಭೆ ಎಂದು ಕರೆಯುವುದು ಹೆಚ್ಚು ಸೂಕ್ತವೆನ್ನಿಸುತ್ತದೆ. ಹಠವಿಲ್ಲದ ಮೃದುತನದಿಂದಾಗಿ ಋತುಬಂಧನವಿಲ್ಲದೆ ಸರ್ವಕಾಲದಲ್ಲೂ ಫಲ ನೀಡುವ ಬಾಳೆಮರದ ಗತವಿಶೇಷ ಅವರ ಕಾವ್ಯಕ್ಕಿದೆ. ಕಣವಿಯವರ ಕಾವ್ಯ ರಚನಾ ಬಂಧದಲ್ಲಿ ಮತ್ತು ಆಸ್ವಾದನೆಯಲ್ಲಿ ನವ್ಯ ಕಾಲದಲ್ಲಿ ಬಿಗಿದುಕೊಂಡ ಮನಸ್ಸನ್ನು ಸಡಿಲಗೊಳಿಸುವ ನಿರಾಯಾಸದಾಯಕವಾದ ಆಹ್ಲಾದಕರ ಅನುಭವ ನೀಡುವ ತಿಳಿತನವಿದೆ.

'ಒಂದು ಬೆಳಗು' ('ಶಿಶಿರದಲ್ಲಿ ಬಂದ ಸ್ನೇಹಿತ' ಸಂಗ್ರಹ) ಕಣವಿಯವರ ಅತ್ಯುತ್ತಮ ಪದ್ಯವಾಗಿರದಿದ್ದರೂ ಅದು ಅವರ ಕಾವ್ಯ ನಿಲುವನ್ನು, ಜೀವನದ ಒಲವನ್ನು ಪಾರದರ್ಶಗೊಳಿಸುತ್ತದೆ ಎಂಬ ಕಾರಣಕ್ಕಾಗಿ ನನಗೆ ಮಹತ್ವದ್ದು ಎಂದೆನಿಸಿದೆ. ನಾಲ್ಕು ಸ್ಟಾಂಜಾಗಳ ಈ ಪುಟ್ಟ ಪದ್ಯಕ್ಕೆ ಸರಳ ರೇಖಾತ್ಮಕ ಚಲನೆಯ ಗತಿಯಿಲ್ಲ. ಮತ್ತೆ ಮತ್ತೆ ಹಿಂದಿನ ಸಾಲುಗಳನ್ನು ಸ್ಮರಿಸಿಕೊಂಡು ಉದ್ದೀಪನಗೊಳ್ಳುತ್ತ ವೈದೃಶ್ಯಗಳ ಬೆಳಕು ಚೆಲ್ಲುತ್ತ ಸಂಯುಕ್ತ ಸ್ಪಂದನದಲ್ಲಿ ಬಹುವಚನೀಯ ಅನುಭವದ ಸಂಕೀರ್ಣ ಸಮುಚ್ಚಯವನ್ನು ಕಟ್ಟಿಕೊಡುವ ಸಂರಚನೆ ಅದಕ್ಕಿದೆ. ಕಾಲಕ್ಷಣದ ಸಾಮಾನ್ಯ ಅನುಭವ ಒಂದು ಚಿಂತನಾಕೃತಿಯಾಗಿ ರೂಪಾಂತರಗೊಳ್ಳುವ ಲೀಲೆ

ಇಲ್ಲಿ ಸಹಜವಾಗಿ ನಡೆದು ಹೋಗುತ್ತದೆ. ಮೊದಲ ಸ್ಟಾಂಜಾದಲ್ಲೇ ಕವಿ ಹೃದಯದ ನಿರೂಪಕ ದಿನಚರಿಯ ರೂಢಿಗತ ಅನುಭವದಿಂದ ಹೊರಳಿಕೊಂಡು ಅಚ್ಚರಿಯಿಂದ ಹೊಸನಸುಕಿಗೆ ಪ್ರವೇಶಿಸುವ ಚಿತ್ರವಿದೆ. ಎಂದಿನಂತೆ ಬೆಳಗಿನ ವಿಹಾರಕ್ಕೆ ಹೊರಟ ನಿರೂಪಕನಿಗೆ ಪ್ರಾತಃಕಾಲದ ಪ್ರಾರ್ಥನೆಯನ್ನು ಎಲ್ಲರಿಗಿಂತ ಮೊದಲೇ ನಸುಕಿನಲ್ಲಿ ಹಾಡಿದ್ದು ಕೋಗಿಲೆ ಎಂದು ಕವಿ ಗ್ರಹಿಸಿದರೂ ನಂಬಲು ಕಷ್ಟವಾಗಿದೆ. ಏಕೆಂದರೆ ಸಾಂಪ್ರದಾಯಿಕ ಗ್ರಾಮ್ಯ ಮನಸ್ಸಿಗೆ ಕೋಳಿ ಕೂಗಿನ ಮೂಲಕವೇ ನಸುಕಿನ ನಿವೇದನೆ ಆಗುತ್ತಿರುವುದು ಅಭ್ಯಾಸವಾಗಿದೆ. ಕವಿ ಆಲಿಸಿದ್ದನ್ನು ಹೃದಯ ಸತ್ಯವೆಂದು ಒಪ್ಪಿಕೊಳ್ಳಲು ಮನೆಯ ಪಕ್ಕದ ಹಕ್ಕಿಯ ಚಿಲಿಪಿಲಿ ಬೆಳಗಾಯಿತೆಂದು ಸಾಕ್ಷಿ ಹೇಳುವುದರ ಜೊತೆಗೆ ಕೋಗಿಲೆಯ ಕುಹೂ ನಾಭಿಮೂಲದಿಂದ ಹೊರಹೊಮ್ಮಿದೆ. ಕೋಗಿಲೆಯ ಕಹಳೆಯ ಮೂಲಕ ಹೊಸಕಲ್ಪನೆಯ ಹಗಲನ್ನು ಪ್ರವೇಶಿಸುವ ಸುಳಿವನ್ನು ನಿರೂಪಕ ಸೂಕ್ಷ್ಮವಾಗಿ ನೀಡುತ್ತಿದ್ದಾನೆ. ಭೌತಿಕ ವಾಸ್ತವದ ನೆಲೆಯಿಂದ ಪದ್ಯ ನಮ್ಮನ್ನು ಅಮೂರ್ತದತ್ತ ಸೆಳೆಯುತ್ತದೆ.

ಮುಂದಿನ ಸ್ಟಾಂಜಾದಲ್ಲಿ ಮಬ್ಬುಗತ್ತಲೆಯನ್ನು ಭೇದಿಸಿ ಆಕಾಶಕ್ಕೇರಿ ಇಳಿವ ನಮಾಜಿನ ಆವಾಜು ನಸುಕಿನ ಪರಿಸರದಲ್ಲಿ ಧಾರ್ಮಿಕ ಅಲೆಯನ್ನು ಸೃಷ್ಟಿಸುತ್ತದೆ. ನಮಾಜಿನ ಆವಾಜು ಆಕಾಶಕ್ಕೆ ಏರಿ ಇಳಿವ ಕ್ರಿಯೆಯನ್ನು ಪರಿಭಾವಿಸುವುದರಲ್ಲಿ ನೆಲಮುಗಿಲ ಸಂಬಂಧದಲ್ಲಿ ದೈವಿಕತೆಯನ್ನು ಕಾಣಿಸುವ ಯತ್ನವಿದೆ. ಅದೇ ಹೊತ್ತಿಗೆ ಸರಿಯಾಗಿ ದೂರದಿಂದ ಬರುತ್ತಿರುವ ರೈಲಿನ ಸಿಳ್ಳು ದಿಗಂತದ ನಸುಗೆಂಪನ್ನು ತಿದ್ದಿ ತೀಡುವ ದೀರ್ಘರೇಖೆಯಂತೆ ಭಾಸವಾಗುತ್ತದೆ. ಪ್ರಕೃತಿಯ ಸೌಂದರ್ಯವನ್ನು ವಿರೂಪಗೊಳಿಸುವ ನಗರದ ಪ್ರತಿಮೆಯಾಗಿ ರೈಲಿನ ಪ್ರವೇಶವನ್ನು ಚಿತ್ರಿಸಲಾಗಿದೆ. ಆಧುನಿಕ ನಾಗರಿಕತೆಯನ್ನು ವಿರೋಧಿಸುವಂತೆ ಕಾಣುವ ಈ ಸಾಲುಗಳು ನವ್ಯ ಕಾವ್ಯವನ್ನು ನೆನಪಿಸುತ್ತದಾದರೂ ಪದ್ಯದ ಕೊನೆಯ ಘಟ್ಟದಲ್ಲಿ ಅತ್ತ ಬೇರೊಂದು ನೆಲೆಗೆ ಹೊರಳುತ್ತದೆ. ಇಲ್ಲಿ ಉಲ್ಲೇಖಿಸಲಾದ ಎರಡು ಬಗೆಯ ಚಲನೆಗಳು ಸಂಧಿಕಾಲವನ್ನು ಸಮೀಪಿಸುತ್ತಿರುವ ಅಂದರೆ ಪರಸ್ಪರ ಕೂಡಲು ಹೊರಟ ಪ್ರಯಾಣವೆಂದು ಮೊದಲ ಓದಿಗೆ ಅನಿಸಿದರೂ ಆ ಮೇಲೆ ನಿಧಾನವಾಗಿ ನಿರೂಪಕ ಕೋಗಿಲೆಯ ಕುಹೂ, ನಮಾಜಿನ ಆವಾಜು ಮತ್ತು ರೈಲಿನ ಸಿಳ್ಳನ್ನು ತನ್ನ ವೃದ್ಧಾಪ್ಯದ ನಡಿಗೆಯಲ್ಲಿ ಸಮಾವೇಶಗೊಳಿಸುತ್ತಿದ್ದಾನೆಂದು ಹೊಳೆಯುತ್ತದೆ. ನಿರೂಪಕ ಶ್ರವಣಮಾಧ್ಯಮದಿಂದ ಶಬ್ದ ಜಗತ್ತನ್ನು ಕಟ್ಟಿಕೊಡುತ್ತಿರುವುದನ್ನು ಗಮನಿಸಬಹುದು. ಇಲ್ಲಿ ಓದುಗನಿಗೆ ಕೋಗಿಲೆ, ನಮಾಜಿನ ಆವಾಜು ಮತ್ತು ರೈಲಿನ ಸಿಳ್ಳು ಮಾತ್ರ ನಿರೂಪಕ ಕೇಳಿಸುತ್ತಾನೆ. ಈ ಮೂರು ದನಿಗಳು ತೋರಿಸುವ ಜಗತ್ತು ಬೇರೆ ಬೇರೆಯೇ. ಕೋಗಿಲೆ ಪ್ರಕೃತಿಯನ್ನು, ನಮಾಜು ಧಾರ್ಮಿಕ ಆಚರಣೆಯನ್ನು, ರೈಲಿನ ಸಿಳ್ಳು ಯಾಂತ್ರಿಕ ನಗರ ಜೀವನವನ್ನು ಸಂಕೇತಿಸುತ್ತದೆ. ಭೇದಿಸುವ ನಮಾಜಿನ ಆವಾಜು ಮತ್ತು ಧಾವಿಸುವ ರೈಲು ಪ್ರಶಾಂತ ನಸುಕನ್ನು ಕಲಕುತ್ತದೆ. 'ಭೇದಿಸು'.'ಧಾವಿಸು' ಈ ಶಬ್ದಗಳ ಮಹಾಪ್ರಾಣದ ಒತ್ತು ಸ್ವಚ್ಛಂದ ಪ್ರಕೃತಿಯ ಮೇಲೆ ನಡೆದ ಆಕ್ರಮಣವನ್ನು ಲಯದ ಗತಿಯಲ್ಲಿ ಅಭಿನಯಿಸಿ ಹೇಳುತ್ತದೆ.

ನಗರದ ಕೋಳಿಗಳಿಗೆ
ಬೀಸಾಗಿ ಪಟಪಟ ರೆಕ್ಕೆ ಬಡಿದು
ಕೊರಳೆತ್ತಿ ಕೂಗುವಭ್ಯಾಸ ಮರತೇ ಹೋಗಿದೆ.
ಎಡಬಿಡದೆ ತತ್ತಿ ಇಡುವುದೊಂದೇ ಅವಕ್ಕೆ
ಮನುಷ್ಯ ವಹಿಸಿಕೊಟ್ಟಿರುವ ಕುಟುಂಬ ಯೋಜನೆ,
ಅದಕ್ಕಾಗಿ ಪಂಜರದಲ್ಲಿ ಪೌಷ್ಟಿಕಾಹಾರ ಜೋಪಾಸನೆ

ಈ ಮೇಲಿನ ಸಾಲುಗಳು ಮನುಷ್ಯ ಪ್ರಕೃತಿಯನ್ನು ಪಳಗಿಸಿ ತನ್ನ ಉಪಯೋಗಕ್ಕೆ ಬಳಸಿಕೊಳ್ಳುವ ಕ್ರಮದಲ್ಲಿ ನಾಗರೀಕತೆಯ ಹಿಂಸೆಯನ್ನು ವ್ಯಂಗ್ಯವಾಗಿ ಹಿಡಿದಿಡುತ್ತವೆ. ಮೊದಲ ಸ್ಟಾಂಜಾದಲ್ಲಿ ಪ್ರಕಟವಾಗಿದ್ದ ದಿಗಿಲು ಈಗ ವಾಸ್ತವಿಕ ವಿವರಣೆಯಲ್ಲಿ ನಿಜಗೊಳ್ಳುತ್ತದೆ. ಮನುಷ್ಯನ ಆಕ್ರಮಣವನ್ನು ತಪ್ಪಿಸಿಕೊಂಡಿರುವ ಕೋಗಿಲೆಯ ಬಗ್ಗೆ ನಿರೂಪಕನಿಗೆ ಆಶ್ಚರ್ಯವಾಗಿದೆ. ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವ ಮನಸ್ಸಿಗೆ ಸ್ವಚ್ಛಂದ ಹಾಡುವ ಕೋಗಿಲೆ ಪ್ರತೀಕವಾಗಿದೆಯೇ? ಹೀಗೆ ಸೃಜನಶೀಲವಾದ ಮುಕ್ತ ಮನಸು ಮಾತ್ರ ಕೋಗಿಲೆ ಪ್ರತೀಕವಾಗಿದೆಯೆ? ಹೀಗೆ ಸೃಜನಶೀಲವಾದ ಮುಕ್ತ ಮನಸು ಮಾತ್ರ ಕೋಗಿಲೆ-ನಮಾಜು-ರೈಲು-ಕಲೆ-ಧರ್ಮ- ವಿಜ್ಞಾನ ಅನುದಿನವೂ ಸಂಧಿಸಿ, ಸ್ಪಂದಿಸಿ ಉಂಟಾಗುವ ಸಮರಸದ ಬೆಳಗನ್ನು ನಿರೀಕ್ಷಿಸಲು ಸಾಧ್ಯ. ಈ ಸಮಭಾವದ ಜೀವನದ ಬಗ್ಗೆ ನಿರೂಪಕ ಆಶಾವಾದಿಯಾಗಿದ್ದಾನೆ. ಈ ಸತ್ಯವನ್ನು ಲೋಕಕ್ಕೆ ಸಾರಲು ಥೇಟ್ ಮಾಸ್ತರ ಶೈಲಿಯಲ್ಲಿ ಊರುಗೋಲು ಬೆತ್ತವನ್ನು ಪ್ರಶ್ನೆಯಂತೆ ಹಿಡಿದು ನಿರೂಪಕ ಹೊರಟಿದ್ದಾನೆ.

ಶ್ರೀಧರ ಬಳಗಾರ

೨

ಆಧುನಿಕ ಮಾನವನ ಬಾಳನ್ನು ಆಳುತ್ತಿರುವ ಶಕ್ತಿಗಳು ಮೂರು: ಕಲೆ, ಧರ್ಮ ಮತ್ತು ವಿಜ್ಞಾನ. ಈ ಮೂರನ್ನೂ ಮಾನವ ತನ್ನ ಅನುಕೂಲಕ್ಕಾಗಿ ಆವಿಷ್ಕರಿಸಿಕೊಂಡು, ಅನುಕ್ರಮವಾಗಿ ಮಾನಸೋಲ್ಲಾಸ, ಆತ್ಮವಿಶ್ವಾಸ ಮತ್ತು ಲೌಕಿಕ ಪ್ರಗತಿಗಳನ್ನು ಸಾಧಿಸಿಕೊಂಡಿದ್ದಾನೆ. ಚಿತ್ರ, ಶಿಲ್ಪ, ನೃತ್ಯ, ಸಂಗೀತ ಮತ್ತು ಸಾಹಿತ್ಯ - ಈ ಐದೂ ಲಲಿತ ಕಲೆಗಳು (Fine Arts) ಮಾನವನ ಮನಸ್ಸನ್ನು ಅರಳಿಸುತ್ತವೆ, ಉಲ್ಲಾಸಭರಿತವಾಗಿಸುತ್ತವೆ. ಜೀವನೋತ್ಸಾಹವನ್ನು ತುಂಬಿಕೊಡುತ್ತವೆ. ಧರ್ಮ ಆತ್ಮೋನ್ನತಿಯ ಮೂಲಮಾತೃಕೆ. ಬದುಕಿಗೆ ಆತ್ಮಸಾಂತ್ವನ ನೀಡುವುದಲ್ಲದೆ, ಆತ್ಮವಿಶ್ವಾಸಕ್ಕೆ ಅನುಕೂಲಕರ ವಾತಾವರಣವನ್ನು ನಿರ್ಮಿಸುತ್ತದೆ. ಮೃಣ್ಮಯ ಜೀವನವನ್ನು ಚಿನ್ಮಯವನ್ನಾಗಿಸುತ್ತದೆ ಕೂಡ. ವಿಜ್ಞಾನ ಮಾನವನ ಲೋಕಜೀವನದ ಅಗತ್ಯಗಳನ್ನು ಪೂರೈಸುವ ಏಕೈಕ ಸಾಧನ. ಲೌಕಿಕಾನುಕೂಲಗಳನ್ನು ಒದಗಿಸುವಲ್ಲಿ ಅದು ಎತ್ತಿದ ಕೈ.

೨

ಕಣವಿ ಈ ಯುಗವು ಕಂಡ ಶ್ರೀಮಂತ ಕವಿ. ಅವರು ತಮ್ಮ 'ಒಂದು ಬೆಳಗು' ಪದ್ಯದಲ್ಲಿ ಕಲೆ-ಧರ್ಮ-ವಿಜ್ಞಾನ- ಈ ಮೂರರ ಮಹತ್ವವನ್ನು ಕೋಗಿಲೆ-ನಮಾಜು-ರೈಲುಗಳ ಮೂಲಕ ಸಾಂಕೇತಿಸಿ ಪ್ರದರ್ಶಿಸಿದ್ದಾರೆ. ಅಂತ್ಯದಲ್ಲಿ ಈ ಮೂರು ಶಕ್ತಿಗಳಲ್ಲಿ ಸಾಮರಸ್ಯ ಇದೆಯೆ ? ಇವು ಪರಸ್ಪರ ಸ್ಪಂದಿಸಿ ಸಹಕರಿಸುತ್ತವೆಯೆ? ಎಂಬ ಅಪರಿಹಾರ್ಯ ಪ್ರಶ್ನೆ ಅವರನ್ನು ಪ್ರಬಲವಾಗಿ ಕಾಡಿದೆ. ಆ ಹುಡುಕಾಟದಲ್ಲಿ ತೊಡಗಿದ ಕವಿಮನದಲ್ಲಿ ಅವು ಒಂದಾದರೆ, ಚೆಂದಾದರೆ ಬಾಳೆಂತಹ ಬಂಗಾರ ಎಂಬ ಹಂಬಲದ ಆಶಾವಾದವೂ ಅಡಗಿದೆ. ಆ ಕುರಿತು ಒಂದು ವಿಹಾರ.

'ಒಂದು ಬೆಳಗು' ಶೀರ್ಷಿಕೆ 'ಒಂದು ಮುಂಜಾವು' ಎಂದಷ್ಟೇ ಅರ್ಥವನ್ನೊಳಗೊಂಡಂತೆ ತೋರುವುದಿಲ್ಲ. ಅಷ್ಟೇ ಆಗಿದ್ದರೆ ಅದೊಂದು ಲೋಕವಾರ್ತೆಯಾಗುತ್ತಿತ್ತು. ಕಾವ್ಯಾರ್ಥ ವ್ಯಂಜನೆಯೆನಿಸುತ್ತಿರಲಿಲ್ಲ. ಆದರಿಲ್ಲಿ ಅದು ವಾಚ್ಯಾರ್ಥವನ್ನು ದಾಟಿ ಧ್ವನ್ಯಾರ್ಥದ ಕಡೆಗೆ ತನ್ನ ತೋರ್ ಬೆರಳು ಮಾಡಿ ನಿಂತಿದೆ. ಅದು ಲೋಕ ಲೋಕೋತ್ತರಗಳನ್ನು ಮೀರಿದ ತಾತ್ವಿಕಾರ್ಥವನ್ನು ಗರ್ಭೀಕರಿಸಿಕೊಂಡ ಕವಿಯ ಭಾವಕೋಶದಲ್ಲಿ ಬೆಳಗಿದ ಚೆಂಬೆಳಕಾಗಿದೆ! ಅದು ಅವನ ಪರಾಪ್ರತಿಭೆಯಿಂದ ಜ್ವಲಿಸಿದ ಪರಂಜ್ಯೋತಿ! ಅಲ್ಲಮನ ಅನುಭಾವದ ನುಡಿ ಸಾರಿದಂತೆ ಅದು 'ಕಂಗಳ ಮರೆಯಲಡಗಿದ ಬೆಳಕು!' ಆ ಬೆಳಕು ತಿರೆಯಲ್ಲಿ ತೊರೆಯಾಗಿ ಹರಿದಾಗ ದೈನಂದಿನ ಚಟುವಟಿಕೆಗಳು ಆರಂಭಗೊಳ್ಳುತ್ತವೆ. ಕವಿ ಕೋಗಿಲೆ 'ಕುಹೂ ಕುಹೂ' ಎಂಬ ಕೂಜನ ಹಾಯಿಸತೊಡಗುತ್ತದೆ. ಅರ್ಥಾತ್ ಸಂವೇದನಾಶೀಲನಾದ ಕವಿಯ ಮಾನಸದಲ್ಲಿ ಸ್ಪಂದನಗೊಂಡ ಭಾವ ಚಿಂತನ, ಕಲ್ಪನವೆಂದು ಪರಿಣಾಮಿಸಿ, ಕವನ ರೂಪುಧಾರಣ ಮಾಡಿಕೊಂಡು ಆಸ್ವಾದನಕ್ಕೆ ಆಹ್ವಾನ ಕೊಡುತ್ತದೆ. ಮೊದಮೊದಲು ಅಷ್ಟಾಗಿ ಸ್ಫುಟಗೊಳ್ಳದಿದ್ದ ಅಸ್ಪಷ್ಟಾಕೃತಿಯ ಆ ಭಾವ ಚಿಂತನ 'ನಾಭಿಮೂಲದಿಂದ ಕಹಳೆಯ ಪಾಂಗಿನಂತೆ' ಮೂಡಿ ಮೇಲೆದ್ದಾಗ ಆನಂದ ತುಂದಿಲನಾಗುತ್ತಾನೆ. ಮೊದಲು ಮೊಳಗಿದ ಕೋಗಿಲೆಯ ಕೂಗು ಅತೀತದ ಕಲೆಯಲ್ಲದೆ ಬೇರ ಅಲ್ಲ ಎಂಬುದು ಖಾತ್ರಿಯಾಗುತ್ತದೆ. ಅದು ಕವಿ ಸಿದ್ಧಿಸಿಕೊಂಡ ಕಾವ್ಯ; ಅರ್ಥಾತ್ ಕಲೆ, ಅದೂ ಭಾವಸ್ತರದಿಂದ ತಾತ್ವಿಕ ಸ್ತರಕ್ಕೇರಿ, ತಾತ್ವಿಕದಾಚೆಯ ಆನಂದದ ತುರೀಯ ಸ್ತರದಲ್ಲಿ ಪರಿಣಮಿಸಿದಾಗ ಕವಿ ಸ್ವಾಹಾರಾಧಕನಾಗುತ್ತಾನೆ.

ಕವಿ ಈ ಗುಂಗಿನಲ್ಲಿದ್ದಾಗಲೇ ಮತ್ತೆರಡು ಮೊಳಗುಗಳು ಮೊಳಗುತ್ತವೆ: ಒಂದು 'ನಮಾಜಿನ ಆವಾಜು' ಮತ್ತೊಂದು 'ದೂರದಿಂದ ಧಾವಿಸಿ ಬರುತ್ತಿದ್ದ ರೈಲಿನ ಸಿಳ್ಳು!' ಮೇಲಿನ ಕಾವ್ಯಖಂಡದ ಕೋಗಿಲೆ ಕಾವ್ಯಾಭಿವ್ಯಕ್ತಿಗೊಡ್ಡಿದ ಒಂದು ಮಧುರಭಾವದ ಪ್ರತಿಮೆಯಾದರೆ, ಅದರ ಅವ್ಯಕ್ತ, ಅಣೋರಣೀಯ ಮಂಜುಳಗಾನ ಕವಿಯ ಪ್ರಾತಿಭ ತೇಜಕ್ಕೊಡ್ಡಿದ ಪ್ರತಿಮೆಯಾಗಿ ಮೂಡಿದ್ದರೆ, ಇಲ್ಲಿ 'ನಮಾಜಿನ, ಆವಾಜು' ಧರ್ಮಕ್ಕೆತ್ತಿದ ತ್ಯಾಗಧ್ವಜವಾಗಿದೆ: 'ದಿಗಂತದ ನಸುಗೆಂಪನ್ನು ತಿದ್ದಿ ತೀಡಿ ದೀರ್ಘರೇಖೆಯನ್ನೆಳೆವ ರೈಲಿನ ಸಿಳ್ಳು' ವಿಜ್ಞಾನ ಪ್ರಗತಿಯ ದ್ಯೋತಕವಾಗಿದೆ. ಈ ಪ್ರತಿಮೆಗಳ ಮೂಲಕವೇ ಕವನ ಯಶಸ್ಸನ್ನು ಸಾಧಿಸಿಕೊಂಡಿದೆ.

ಮುಂದಿನ ಭಾಗ ಪ್ರಸ್ತುತದ ಪ್ರಾತಿಭತೇಜದ ನೈರಾಶ್ಯದಾಕಳಿಕೆ ಕುರಿತು ವಿಷಾದದ ದನಿ. ಪ್ರತಿಭಾಜನ್ಯವಿದ್ದರೂ ಇಂದು ನಮ್ಮ ಕಾವ್ಯ ಜೀವನಾನುಭವದ ಕೊರತೆಯಿಂದ ಸೊರಗಿದೆ. ಅರ್ಥಾತ್ ಅನುಭವ ಗಟ್ಟಿಗೊಳ್ಳದಿರುವ ಇಂದಿನ ಸಾಹಿತ್ಯ ಬಂಜೆನೋವಿನ ಕೆಚ್ಚಲಾಗಿದೆ. ಕಲೆಯಲ್ಲಿ ಸಹಜತೆಗಿಂತ ಕೃತಕತೆ ಹೆಚ್ಚಿದೆ. ಇಂದು 'ನಗರದ ಕೋಳಿಗಳಿಗೆ ಬೀಸಾಗಿ ಪಟಪಟ ರೆಕ್ಕೆ ಬಡಿದು ಕೊರಳೆತ್ತಿ ಕೂಗುವ ಅಭ್ಯಾಸ ಮರೆತೇ ಹೋಗಿದೆ'- ಎಂಬ ಉಕ್ತಿಗಳಲ್ಲಿ ಪ್ರತಿಮಿತವಾಗಿದೆ. ಸಂಸ್ಕೃತಿಯ ಸಂರಕ್ಷಕರಾದ ನಮ್ಮ ಇಂದಿನ ಕವಿ-ಕಲಾವಿದರು ತಮ್ಮ ಕರ್ತವ್ಯದಲ್ಲಿ ವಿಮುಖರಾಗಿದ್ದಾರೆ. ಅವರು ತಮ್ಮ ಪರಿಸರಕ್ಕೆ. ಪರಿಸ್ಥಿತಿಗೆ ಸರಿಯಾಗಿ ಸ್ಪಂದಿಸುತ್ತಿಲ್ಲ. ಸ್ಪಂದಿಸಿದರೂ ಜನಮನವನ್ನು ತಿದ್ದುವ, ಪ್ರಚೋದಿಸುವ ಶಕ್ತಿಶಾಲಿ ರಚನೆ ಮಾಡುತ್ತಿಲ್ಲ. 'ಕವಿಗಳು ಅಜ್ಞಾತ ಶಾಸಕರು' (poets are the un aknowledged legislators of the World) ಎಂಬ ಶೆಲ್ಲಿಯ ಸಂದೇಶ ಮರೆತೇ ಹೋಗಿದೆ! ಪ್ರತಿಭಾ ದಾರಿದ್ರ್ಯ ಮತ್ತು ಅನುಭವದ ಅಭಾವದಿಂದ ಸೊರಗುತ್ತಿರುವ ನಮ್ಮ ಹಲವು ಕವಿಗಳು ಡಜನ್‌ಗಟ್ಟಲೆ ಆಮ್ಲೆಟ್ ಮೊಟ್ಟೆಗಳನ್ನಿಡುವ ಫಾರಂ ಕೋಳಿಗಳಾಗಿದ್ದಾರೆ. ಇದಿಷ್ಟೆ ಸಾಲದೆಂಬಂತೆ ಇಂದು ದುಷ್ಟ ರಾಜಕಾರಣದ ಕೆಟ್ಟ ನೆರಳು ಪ್ರತಿಭೆಗಳನ್ನು ಬಾಸಣಿಸಿ, ಮಸಳಿಸಿಬಿಟ್ಟಿದೆ. ಅವುಗಳ ನೈಜತೇಜವೇ ಇಂದು ಕಾಣೆಯಾಗಿದೆ. ರಾಜಕಾರಣ ಪ್ರಶಸ್ತಿ, ಪ್ರಶಂಸೆ, ಪದವಿ ಮೊದಲಾದ ಆಮಿಷಗಳ ಹಣವನ್ನೀವ ಮೂಲಕ ಸೃಜನಶೀಲ ಶಕ್ತಿಗಳನ್ನು ಕೊಂಡುಕೊಂಡು, ಅವುಗಳ ಸ್ವಾತಂತ್ರ್ಯಾಪಹರಣಕ್ಕೆ ಕಾರಣವಾಗಿದೆ. ರಾಜಕಾರಿಣಿಗಳ ಮರ್ಜಿಯಲ್ಲಿ ತಮ್ಮ ಒರಿಜಿನ್ಯಾಲಿಟಿ ಮರೆತು, ಅವರು ನಿರ್ಮಿಸಿದ ಶರಪಂಜರದಲ್ಲಿ ಪ್ರತಿಭೆಗಳು ಪ್ರಶಸ್ತಿಯ 'ಪೌಷ್ಠಿಕಾಹಾರ' ಮೆಲ್ಲುತ್ತಾ 'ಜೋಪಾಸನಾ' ನಿರಂತರವಾಗಿಬಿಟ್ಟಿವೆ. ಅವಕ್ಕೆ ನೈಜ ಔಪಾಸನೆ ಮರೆತೇ ಹೋಗಿದೆ. ಇದು ನಿಜಕ್ಕೂ ವಿಪರ್ಯಾಸ, ವಿಷಾದನೀಯ ಕೂಡ, ಬಾಳನ್ನು ಸಹ್ಯವಾಗಿಸುವ ಕಲೆ ಸಂಜೀವಿನಿಯಾಗದೆ, ಅಸಹನೀಯ ವಿಷವಾಹಿನಿಯಾಗುತ್ತಿರುವುದು ಕವಿಯ ಕೊರಗು.

ಕವಿ ಕಣವಿ ವಸ್ತುಸ್ಥಿತಿಯನ್ನು ಸೂಕ್ಷ್ಮವಾಗಿ ಸ್ಪರ್ಶಿಸಿ ಮುಂದುವರಿಸಿದ್ದಾರೆ, ಇಷ್ಟಾದರೂ,

ಕೋಗಿಲೆಯೊಂದು ಮಾತ್ರ ಇದುವರೆಗೆ

ಯಾರ ಕೈಗೂ ಸಿಗದೆ
ಸ್ವಚ್ಛಂದ ಹಾಡಿ ಬದುಕುತ್ತಿರುವುದೇ ಆಶ್ಚರ್ಯ!

ಇಲ್ಲಿ ಪ್ರತಿಭೆ ಅವಿನಾಶಿ ಎಂಬ ಧ್ವನಿ ಇದೆ. ಅದು ಪರಶಿವನ ಹಣೆಗಣ್ಣಿನಲ್ಲಿರುವ ಪರಾಪ್ರಭೆ, ಅದು ಯಾವ ಕಾಲಕ್ಕೂ ಮಾಯವಾಗುವುದಿಲ್ಲ. ಸದಾ ಗುಪ್ತಗಾಮಿಯಾಗಿ ಕವಿಯ ಕೈ ಲೇಖನಿಯ ಮೂಲಕ, ಚಿತ್ರಕಾರನ ಕುಂಚದ ಮೂಲಕ, ಶಿಲ್ಪಿಯ ಉಳಿಯ ಮೊನೆಯ ಮೂಲಕ, ನೃತ್ಯಕಾರ್ತಿಯ ಹಾವಭಾವ ವಿನ್ಯಾಸದ ವಿವಿಧಾಭಿನಯದ ಮೂಲಕ, ಗಾಯಕನ ನಾದಮೋದದ ಮೂಲಕ, ತತ್ತ್ವಜ್ಞಾನಿಯ ಜೀವನ ದರ್ಶನದ ಮೂಲಕ, ಶ್ರೇಷ್ಠ ವಿಜ್ಞಾನಿಯ ವಿನೂತನ

ಆವಿಷ್ಕಾರದ ಮೂಲಕ, ಅದು ನಿರಂತರವಾಗಿ ಪ್ರವಹಿಸುತ್ತಲೇ ಇದೆ. ಆದರೆ ಯಾವ ವೈಯಕ್ತಿಕ ಸ್ವತ್ತೂ ಅಗದಿರುವುದು ಅದರ ವೈಶಿಷ್ಟ್ಯ. ಅದೇ ಅದರ ನಿತ್ಯನೂತನತೆಯ ರಹಸ್ಯ !

ಇಷ್ಟೂ ವಿಷಯ ವಿಶ್ಲೇಷಣೆಯನ್ನು ಹಾಡಾಗಿ ಹರಿಸಿದ ಕವಿ ಕಣವಿ ತಮ್ಮ ಕವನದ ಅಂತಿಮ ಘಟ್ಟದಲ್ಲಿ ವೈಚಾರಿಕತೆಯ ನೆಲೆಗೆ ಬಂದು ನಿಲ್ಲುತ್ತಾರೆ. ಆರಂಭದ ಕವನದ ಸಾಲುಗಳನ್ನು ಮತ್ತೆ ಮೆಲುಕು ಹಾಕುತ್ತಾ -

**ಕೋಗಿಲೆ - ನಮಾಜು- ರೈಲು**
**ಕಲೆ- ಧರ್ಮ - ವಿಜ್ಞಾನದ ಪೈಲು**
**ಪರಸ್ಪರ ಸಂಧಿಸಿ ಸ್ಪಂದಿಸಿ ದಿನವೂ**
**ಹೀಗೆ ಬೆಳಗಾದರೆ ?**

ಎಂಬ ತಮ್ಮ ಆಂತರಿಕ ಆಶಯವನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿದ್ದಾರೆ.

ಕೋಗಿಲೆ, ನಮಾಜು, ರೈಲುಗಳ ಮೂಲಕ ಸಾಂಕೇತಿಕತೆ ಪಡೆದ ಕಲೆ, ಧರ್ಮ, ವಿಜ್ಞಾನಗಳ ಹೊಂದಾಣಿಕೆಯ ಆಶಾವಾದಿತ್ವದ ನೆಲೆಗೆ ಬಂದ ಕವಿ ಈ ಮೂರೂ ಮುಪ್ಪುರಿಗೊಂಡರೆ ? ಎಂದು ಚಪ್ಪರಿಸುತ್ತಾ 'ರೆ' ಸಾಮ್ರಾಜ್ಯದ ಪ್ರಶ್ನಾರ್ಥಕ ಬೆತ್ತ ಹಿಡಿದು ಬೆಳಗಿನ ವಿಹಾರಕ್ಕೆ ಹೊರಡುತ್ತಾರೆ. ಈ ಗುಂಗಿನ 'ಗುಂಗೆ' (ಮರಕೊರೆಯುವ ಹುಳು) ಅರ್ಥಾತ್ ಸತ್‌ಚಿಂತನೆ ಅವರನ್ನು ಸುಮ್ಮನೆ ಬಿಡುವುದಿಲ್ಲ. ಹಾದಿಯುದ್ದಕ್ಕೂ ಕಾಡುತ್ತದೆ. ಅದು ಸಹಜವೆ. ಏಕೆಂದರೆ ಕಲೆ, ಧರ್ಮ ಮತ್ತು ವಿಜ್ಞಾನಗಳು ವಿಭಿನ್ನ ಸ್ತರಗಳಲ್ಲಿ ನೆಲೆಗೊಂಡು ಕಾರ್ಯ ನಿರತವಾಗಿದ್ದರೂ, ಸ್ಥೂಲ ದೃಷ್ಟಿಗೆ ಅವು ಭಿನ್ನ ಭಿನ್ನ ಶಕ್ತಿಗಳಾಗಿ ಕಂಡರೂ ಆಂತರ್ಯದಲ್ಲಿ ಅವು ಮೂರರ ಉದ್ದೇಶ ಒಂದೇ; ಅದು ಬದುಕಿನ ಒಳಿತು ಸಾಧಿಸುವುದು. ಹಿಂದೆಯೇ ಹೇಳಿದಂತೆ ಆತ್ಮಾನಂದವೀಯವುದು. ಕಲೆ; ಆತ್ಮಸಾಂತ್ವನಗೈದು, ಆತ್ಮಸಾಕ್ಷಾತ್ಕಾರಕ್ಕೆ ಅನುವು ಮಾಡುವುದು ಧರ್ಮ; ಲೌಕಿಕದ ಎಲ್ಲಾ ಪ್ರಗತಿಗೂ ಕಾರಣೀಭೂತವಾಗುವುದು ವಿಜ್ಞಾನ. ಇವು ಮೂರು ಸಾಪೇಕ್ಷ ಕ್ರಿಯಾಶೀಲ ಶಕ್ತಿಗಳು. ಕವಿ ಚೇತನ ಸೌಂದರ್ಯದ ಸೀಮೆಯಲ್ಲಿ ವಸಂತ ವಿಹಾರ ಕೈಗೊಂಡಂತೆ ಋಷಿ ಚೇತನ ಸತ್ಯ ಶಾಶ್ವತ ನಿತ್ಯ ಪರಿಪೂರ್ಣವಾದ ಆಧ್ಯಾತ್ಮವಲಯದಲ್ಲಿ ವಿಹರಿಸಿ ವಿಶ್ರಾಂತಿ ಪಡೆಯುತ್ತದೆ, ಅದು ಶಬ್ದಾರ್ಥ ಸಂಜನಿತ. ಇದು ನಾದ ಬಿಂದು ಕಳಾತೀತ, ಅದು ಸಹೃದಯ ಹೃದಯಾಹ್ಲಾದಕಾರಿಣಿ. ಇದು ಅಪರೋಕ್ಷ ಜ್ಞಾನಿಗಳ ಆತ್ಮಾನಂದಬೋಧಿನಿ. ಎರಡರ ಅಂತಿಮ ನೆಲೆ ಒಂದೇ ಅದು ಆತ್ಮಾನಂದದ ಮಹಾಮಜಲು! ಅವನು ಅವರಿಬ್ಬರಿಂದ ದೂರನಲ್ಲ, ಭಿನ್ನನಲ್ಲ. ವಿಶ್ವವಿಜ್ಞಾನಿ. ಐನ್‌ಸ್ಟೀನ್ ಹೇಳುವಂತೆ Science without Religion is blind, and Religion without sciecnce is lame! ಅವನದು ವಿಭಜನಾತ್ಮಕ ದೃಷ್ಟಿ (Analytic way) ಕವಿ - ದಾರ್ಶನಿಕರದು ಸಂಯೋಜನಾತ್ಮಕ ಸೃಷ್ಟಿ (Synthetic one) ವಿಜ್ಞಾನಿ ಅಣುವಿನಲ್ಲಿ ಅಣು ಪರಮಾಣು ಎಲೆಕ್ಟ್ರಾನ್, ನ್ಯೂಟ್ರಾನ್, ಪ್ರೋಟಾನ್, ಪಾಸಿಟ್ರಾನ್‌ಗಳವರೆಗೂ ವಸ್ತುವನ್ನು ವಿಭೇದಿಸಿ, ಅಲ್ಲಿನ ಸೂಕ್ಷ್ಮಾತ್‌ಸೂಕ್ಷ್ಮತರ ಕಣದಲ್ಲಿ ನಿಸರ್ಗ ಎಂತಹ ಪ್ರಚಂಡಶಕ್ತಿಯನ್ನು ಅಡಿಗಿಸಿಟ್ಟಿದೆ ಎಂಬುದನ್ನು ಒಂದು ಅಣುಬಾಂಬ್ ತಯಾರಿಸುವ ಮೂಲಕವೊ ಅಥವಾ ಅದನ್ನು ಎನರ್ಜಿಯಾಗಿ

ಪರಿವರ್ತಿಸಿದಾಗ ಆ ಅಟಾಮಿಕ್ ಎನರ್ಜಿಯಿಂದ ಇಂದಾಗುತ್ತಿರುವ ಪವಾಡ ಸದೃಶ ಅದ್ಭುತ ಸಾಹಸ ಕಾರ್ಯಗಳ ಮೂಲಕವೊ ಪ್ರತ್ಯಕ್ಷ ಪ್ರಯೋಗಿಸಿ ಅಭಿವ್ಯಕ್ತಿಸಿದರೆ, ಕಲಾವಿದ ಅಥವಾ ತತ್ವಜ್ಞಾನಿ ತನ್ನ ದಾರ್ಶನಿಕ ದೃಷ್ಟಿಯಲ್ಲಿ ಸಮಸ್ತ ವಿಶ್ವವ್ಯಾಪಾರವನ್ನು ದರ್ಶಿಸಿ, ಅಣುರೇಣು ತೃಣಕಾಷ್ಠದಲ್ಲೂ ನೂತನ ಚೇತನವಾಗಿ ಸ್ಪಂದಿಸುವ ಶಕ್ತಿ ಒಂದಿದೆ. ಅದು ವಿಶ್ವ ಜಗತ್ತಿನ ಮೂಲಶಕ್ತಿ, ಪರಾತ್ಪರ ಶಕ್ತಿ; ಅದು ತನ್ನ ಕರ್ತವ್ಯಕ್ಕೆ ಚ್ಯುತಿ ತಂದುಕೊಳ್ಳದೆ, ನಿಯತಿಯ ನಿಯೋಜಿತ ಕಾರ್ಯ ನಿರಂತರ ನಡೆಯುವಂತೆ ನಿರ್ದೇಶಿಸುವ ವಿಶ್ವಾಂತರಾಳದ ಕ್ರಿಯಾಶಕ್ತಿ ಎಂಬುದನ್ನು ವೇದ್ಯಗೊಳಿಸುತ್ತಾನೆ. ಹೃನ್ಮನಗಳು ಚೇತೋಹಾರಿಯಾಗುವಂತೆ ನಗುತ್ತಾನೆ. ವಿಜ್ಞಾನಿಯ ದೃಷ್ಟಿಯಲ್ಲಿ, ಪ್ರಕೃತಿಯ ಸಹಜ ಕ್ರಿಯೆ, ದಾರ್ಶನಿಕರ ಕಣ್ಣಿಗೆ ಅದೊಂದು ದೈವಲೀಲೆ! ಅಷ್ಟೇ ವ್ಯತ್ಯಾಸ.

ತಾತ್ವಿಕವಾಗಿ ಸೈದ್ಧಾಂತಿಕ ಸ್ತರದಲ್ಲಿ ಕಲೆ ಧರ್ಮ ವಿಜ್ಞಾನಗಳು ಸಮಾನಧ್ಯೇಯ ಉಳ್ಳವುಗಳು. ಬದುಕಿಗೆ ಪೂರಕಗಳೇ, ಮಾರಕಗಳಲ್ಲ. ಆದರೆ ಅನುಷ್ಠಾನಿಕ ನೆಲೆಯಲ್ಲಿ ಪರಸ್ಪರ ರಾಜೀಮನೋಭಾವ ದ್ರವ್ಯಗಳಲ್ಲ. ಇವುಗಳ ಬಾಂಧವ್ಯ ಆಶಾದಾಯಕವಾಗಿಲ್ಲ. ಇಂದು ನಾಗಾಲೋಟದಲ್ಲಿ ಓಡುತ್ತಿರುವ ವಿಜ್ಞಾನ ವಿಶ್ವನಾಶಕ ಶಕ್ತಿಯಾಗಿ ಪರಿಣಮಿಸಿದೆ. ಜಪಾನಿನ ಹಿರೋಷಿಮಾ ಮತ್ತು ನಾಗಾಸಾಕಿಗಳ ಮೇಲೆ ಬಾಂಬ್ ಬಿದ್ದಾಗ ಆದ ಅನಾಹುತ, ನ್ಯೂಯಾರ್ಕಿನ ವಿಶ್ವವಾಣಿಜ್ಯ ಸಂಕೀರ್ಣದ ಮೇಲೆ ನಡೆದ ಅಮಾನುಷ ವರ್ತನೆ, ಅದಕ್ಕೆ ಪ್ರತಿಯಾಗಿ ಅಮೆರಿಕಾ ನಡೆಸಿದ ಇರಾಕ್ ದಾಳಿ-ಒಂದೇ ಎರಡೇ ಲೆಕ್ಕಕ್ಕೆ ಸಂಖ್ಯೆ ಇಲ್ಲ. ವಿಜ್ಞಾನ ಮಾನವೀಯತೆಯನ್ನು ಮಣ್ಣುಪಾಲಾಗಿಸುವ ಸರ್ವನಾಶಕ ಶಕ್ತಿಯಾಗಿದೆ. 'ಧರ್ಮ' ಎಂಬುದು ತನ್ನ ನೈಜಾರ್ಥವನ್ನು ನೀಗಿಕೊಂಡು 'ಜಾತಿ' ಎಂಬ ಕೀಳು ಮಟ್ಟಕ್ಕಿಳಿದು ಮಾನವನ ಆತ್ಮಪತನ ಹೇತುವಾಗಿದೆ. ಧರ್ಮ ಇಂದು ದಾರಿ ತಪ್ಪಿದೆ. ಅದು ಜಾತಿ ರೂಪಧಾರಣ ಮಾಡಿಕೊಂಡ ಮೇಲಾದ ಅರ್ಥಗಳ ವಿವರ ಕೊಡುತ್ತಾ Join Bowker ಹೀಗೆ ಭಿಪ್ರಾಯ ಪಡುತ್ತಾನೆ. "Religions therefore have achived a great deal. That is why they are so dangerous. People will die (and kill) for their religion. That is why religions are involved in most of the bloody and intransient disputes arround us, for example, in Norhtern Ireland, Bosnia, Cyprus, The Middle East, Kashmir. The Sydan, Sri Lanka, -World Religions (1997) P.11

ಇವುಗಳ ಜೊತೆಯಲ್ಲಿ ಆಫ್ಘಾನಿಸ್ತಾನವನ್ನು ಸೇರಿಸಬಹುದು. ಧರ್ಮ ಇಂದು ಬಹು ದೊಡ್ಡ ಲಾಭದಾಯಕ ವ್ಯಾಪಾರೀ ಕೇಂದ್ರವಾಗಿದೆ. ಅಲ್ಲದೆ ರಕ್ತಪಾತವೇ ಮೊದಲಾದ ಹಲವು ಅವಾಹುತಗಳಿಗೆ ಅಡಿಗಲ್ಲು ಹಾಕಿದೆ.

ಕಡೆಯದಾಗಿ ಒಂದು ಮಾತು : 'ಒಂದು ಬೆಳಗು' ಕವನದ ಕಡೆಯ ಭಾಗದ

**ಕೋಗಿಲೆ- ನಮಾಜು- ರೈಲು**
**ಕಲೆ-ಧರ್ಮ -ವಿಜ್ಞಾನದ ಫೈಲು**

ಎಂಬ ಎರಡು ಪಾದಗಳತ್ತ ತಮ್ಮ ಗಮನ ಸೆಳೆಯಲ್ಲಿಚ್ಛಿಸುತ್ತೇನೆ. ಕೋಗಿಲೆ, ನಮಾಜು ಮತ್ತು ರೈಲು ಪ್ರತೀಯಮಾನವಾಗುವ 'ಧ್ವನಿ' ಅಲ್ಲ : ಒಂದು ಸಾಮಾನ್ಯ ಸಂಕೇತ. ಶ್ರೀಸಾಮಾನ್ಯನಿಗೂ ಅರ್ಥವಾಗುವ ಸಾಧಾರಣ ಸಂಕೇತ. ಅದನ್ನು ಕವಿಯೇ ತುಂಬು ಮುತುವರ್ಜಿ ವಹಿಸಿ ಕಲೆ-ಧರ್ಮ-ವಿಜ್ಞಾನ ಎಂದು ಸ್ಪಷ್ಟೀಕರಿಸುವ ಅಗತ್ಯ ಏನಿತ್ತು? ಅದರ ಔಚಿತ್ಯವಾದರು ಏನು ? ಒಂದು ವೇಳೆ ಗುಣೀಭೂತ ವ್ಯಂಗ್ಯವೇ ಆಗಿದ್ದರೂ ಅದು ಕವಿಯ ವ್ಯಾಖ್ಯಾನ ಬಯಸಿತ್ತೆ ? ಸಾಮಾನ್ಯವಾಗಿ ಕಾವ್ಯ ಸೂಚ್ಯ, ವಾಚ್ಯ ಅಲ್ಲ. ಅದು ಎಷ್ಟೆಷ್ಟು ಧ್ವನಿಪೂರ್ಣವಾಗುತ್ತೋ ಅಷ್ಟಷ್ಟು ಶ್ರೀಮಂತವಾಗುತ್ತಾ ಹೋಗುತ್ತದೆ. ವಾಚ್ಯಗೊಳಿಸುವ ಮೂಲತ ಕವನವನ್ನು ಅಪಮೌಲ್ಯಗೊಳಿಸಿದಂತಾಗಲಿಲ್ಲವೆ? ಇದನ್ನು ಒಪ್ಪುವುದಾದರೆ ಟಿ.ಎಸ್. ಎಲಿಯಟ್, ಜಾನ್ ಕೀಟ್ಸ್‌ನ 'Ode on a Gracian Urn ಪದ್ಯದ ಕಡೆಯ ಎರಡು ಸಾಲುಗಳನ್ನು ಹಿಡಿದು 'a serious blemish in a beautiful poem' ಎಂಬ remarkಗೆ ಕವನದ ವ್ಯಾಖ್ಯೆ ಪಕ್ಕಾಗುವುದಿಲ್ಲವೇ? ಎಂಬೆಲ್ಲ ಪ್ರಶ್ನೆಗಳು ಉದ್ಭವಿಸುತ್ತವೆ. ಇವುಗಳಿಗೆ ಕವಿಯೇ ಉತ್ತರವಾಗುತ್ತಾನೆ.

**ಸಾ.ಸಿ. ಮರುಳಯ್ಯ**

# ೭೨. ಶಬ್ದ -ನಿಶ್ಯಬ್ದ

'ನಾ' 'ನೀ' ಎಂದು ಹಿಗ್ಗಿ ನುಗ್ಗಿ ಬರುತ್ತಿದ್ದ
ನನ್ನ ಅಂತರಂಗದ ಮುಗ್ಧ
ಸ್ನಿಗ್ಧ ಶಬ್ದಗಳೆ, ಶೂನ್ಯಕ್ಕೆ
ಕೊಂಬು ಕೊಟ್ಟು ಜಗ್ಗಿ ಕೆಳಗಿಳಿಸಿದಿರಾ ?
ಮ 'ಮ' ಕಾರಕ್ಕೆ ಈಡಾಗಿ
ಕಲ್ಲು ಇಟ್ಟಿಗೆ ನಡುವೆ ಎದೆಯ ಸೊಲ್ಲಡಗಿ
ಕಣ್ಣುಪಟ್ಟಿಯ ಕಟ್ಟಿ ಓಡಿಸಿದ ರಥ-ಪಥದ
ಚಕ್ರಕ್ಕೆ ಸಿಕ್ಕು ಚೀತ್ಕರಿಸಿ
ನೋಡ ನೋಡುತ್ತ ಹಾಡೇ ಹಗಲು
ಕವಿದ ಕತ್ತಲು :
ಬೇತಾಳಗಳ ಪದಾಘಾತಕ್ಕೆ
ರಾಮಾರಗತವಾಗಿ ಹೋದಿರಾ ?
ಇಲ್ಲ -
        ಓಂಕಾರದ ಶಂಖದಿಂದ ನಾಭಿಮೂಲಕ್ಕಿರಿದು
        ಕರುಳು ಹೊರದೆಗೆದು, ಜೈಕಾರಗೈದ
        ಸಾಧು ಸತ್ಪುರುಷರ ಕಂಡು
        ಮರಾ ಮರಾ ಮರಾ ಮರುಗಿದಿರಾ ?

ಸೇಡಿನ ಹೋಮ ಹವನಕ್ಕೆ ಪ್ರೀತಿ, ಮೈತ್ರಿಯ ಕವನ
ಎಲ್ಲಾ ಆಹುತಿಯಾಗಿ ಹೋದ -
ವಲ್ಲಾ !
ತಿಳಿವಿನ ತುಪ್ಪ ಸುಟ್ಟ ಕಮಟು ವಾಸನೆಯಲ್ಲಿ
ಶ್ವಾಸೋಚ್ಛ್ವಾಸಕ್ಕೆ ಕೂಡ ದಾರಿಯಿಲ್ಲ.

ಗೂಢ ಗುಮ್ಮಟದೊಳಗೆ
ಗುಟುಕಿಟ್ಟು ಪಟಪಟ ರೆಕ್ಕೆ ಬಡಿವಾಗ
ಬಿಳಿ ಪಾರಿವಾಳ,
ಸುತ್ತಿಗೆ ಹಿಡಿದು ಬಡಿದು ಕತ್ತರಿಸಿ
ತಾಯ ಮೊಲೆತೊಟ್ಟು
(ಮಕ್ಕಳಿವರೇನಮ್ಮ ... ಮಕ್ಕಳಿವರೇನಮ್ಮ)
ಚರಿತ್ರೆಯ ಪುಟಪುಟದಲ್ಲಿ ಮತ್ತೆ ರಕ್ತ ತಟಗುಟ್ಟಿ
ಸರಯೂ ನದಿಯು ಮುಂದೆ ಹರಿಯಲಿಲ್ಲ.

ಚೂರಿ ಇರಿತಕ್ಕೆ ಕುಸಿದ ನಿಶ್ಯಬ್ದ ಶಬ್ದಗಳೆ
ಮೆಲ್ಲಗೆ ಎತ್ತಿ, ಗಲ್ಲಕ್ಕೆ ಒತ್ತಿಕೊಳ್ಳುತ್ತೇನೆ.
ಅಕ್ಷರಕ್ಷರದಲ್ಲಿ ಬೆಸೆದು, ಭಾಷೆ
ಕೊಟ್ಟದ್ದೀರಿ ಭಾವಕ್ಕೆ
ಹೃದಯ ಸಂವಾದಕ್ಕೆ, ಅನುಭಾವ ಗೀತಕ್ಕೆ
ಈಗ ಏತಕ್ಕೆ ಮೂಕವಾಗಿದ್ದೀರಿ ?
ಬೆಂಕಿಯಾರಿಸಿ, ಕಣ್ಣೀರನೊರೆಸಿ, ಅಕಲಂಕವಾಗಿ
ಬನ್ನಿ, ಬನ್ನಿ ಕನಸುಗಳೇ ಮರಳಿ ತಲೆಯ ಗುಮ್ಮಟಕೆ
ಕಾದಿರುವ ಹೃದಯ ಕಮ್ಮಟಕೆ:
ಸೌಹಾರ್ದದ ಮುದ್ರೆ ಪಡೆದು ಚಲಾವಣೆಯಾಗಿ
ದೇಶದುದ್ದಗಲಕ್ಕು ಸಂಚರಿಸಿ
ಸಮ-ರಸ-ಧ್ವನಿಯಾಗಿ.

ವಸಾಹೋತ್ತರ ಮತ್ತು ನವವಸಾಹತುಶಾಹಿ ಸಂದರ್ಭದ ಕನ್ನಡ ಕಾವ್ಯದ ಮುಖ್ಯ ಧ್ವನಿ ಕಣವಿ. ನವೋದಯ ಕಾವ್ಯದ ಏರು ಅದೇ ತಾನೆ ಇಳಿಮುಖವಾಗುತ್ತಿದ್ದ ಸಂಕ್ರಮಣ ಕಾಲದಲ್ಲಿ ಕಾವ್ಯಕರ್ಮಕ್ಕಿಳಿದವರು. 'ಆ ಗಿಡ ಈ ಗಿಡ ಒಂದೊಂದೂ ಜೇಂಗೊಡ' ಎಂಬ ವಾಸ್ತವಿಕ ಪ್ರಜ್ಞೆ ಅವರ ಕಾವ್ಯ ಮತ್ತು ಜೀವನದ ದೃಷ್ಟಿ. ಕನ್ನಡ ಸಾಹಿತ್ಯದಲ್ಲಿ ಹಲವು ಚಳುವಳಿಗಳು, ಧ್ಯೇಯ ಧೋರಣೆಗಳು ಆಗಿಹೋಗುತ್ತಿದ್ದ ಸಂದರ್ಭದಲ್ಲಿ ತಮ್ಮನ್ನು ಪಾರದರ್ಶಕ ಪ್ರಕ್ರಿಯೆಯಾಗಿಸಿಕೊಂಡು ನಿಂತರು. ತಮ್ಮ ಐಹಿಕ ಅನುಭವಗಳನ್ನು ಜೀವನ ಮೌಲ್ಯಗಳಿಗೆ ಬೆಸೆದು ಕವಿತೆ ರಚಿಸಿದರು. "ಬದುಕು ಸೋಲಾದರೂ ಕಾಡು ಪಾಲಾದರೂ ಹಾಡು ಬಿಟ್ಟುಳಿದವನ ಪಾಡು ಬೇಡ" ಎಂಬ ಜೀವನ ಮೀಮಾಂಸೆ ಅವರದು. ಇವರ ಕವಿತೆಗಳು ಸಮಕಾಲೀನ ಸಮಾಜದ ವೈಪರೀತ್ಯಗಳಿಗೆ ಸ್ಪಂದಿಸುತ್ತ ಬಂದಿವೆ. ಬದುಕಿನ ಒಳಿತನ್ನು ಕಾಣುವುದು ಮತ್ತು ಕಾಣಿಸುವುದು ಕೆಡುಕಿನ ವಿರುದ್ಧದ

ನೈತಿಕ ಸಮರ ಎಂಬ ತಿಳುವಳಿಕೆ ಇವರ ಕವಿತೆಗಳಲ್ಲಿದೆ. ಆದರೆ ಒಳಿತನ್ನು ಆಯ್ದುಕಟ್ಟುವ ಸ್ಥೈರ್ಯವೇ ಜರ್ಝರಿತವಾದಂತಹ ಸಾಮಾಜಿಕ ಉತ್ಪಾತಗಳು ೯೦ರ ದಶಕದಲ್ಲಿ ನಡೆದವು. ಇದಕ್ಕೆ ತೀವ್ರವಾಗಿ ಸ್ಪಂದಿಸಿದವರಲ್ಲಿ ಕಣವಿಯವರು ಮುಖ್ಯರು.

೧೯೯೬ರಲ್ಲಿ ಪ್ರಕಟಗೊಂಡ "ಶಿಶಿರದಲ್ಲಿ ಬಂದ ಸ್ನೇಹಿತ' ಎಂಬ ಸಂಕಲನದಿಂದ 'ಶಬ್ದ-ನಿಶ್ಯಬ್ದ' ಎಂಬ ಕವಿತೆಯನ್ನು ವಿಶ್ಲೇಷಣೆಗೆ ಆಯ್ದುಕೊಳ್ಳಲಾಗಿದೆ. ಇದು ಬಾಬರಿ ಮಸೀದಿ ಧ್ವಂಸದ ಕರಾಳ ವಾಸ್ತವಕ್ಕೆ ಮಿಡಿಯುವ ಕವಿತೆಯಾಗಿದೆ. ಉದಾರವಾದಿ ಮಾನವೀಯ ಧೋರಣೆಯ ನಿಶ್ಚಿತ ದೂರದಲ್ಲಿ ನಿಂತು ಪ್ರಜಾಪ್ರಭುತ್ವ ವ್ಯವಸ್ಥೆಯ ಸೋಲುಗಳನ್ನು ತೋರುತ್ತದೆ. ಯಾವುದೇ ಸಾಮಾಜಿಕ-ಸಾಹಿತ್ಯಕ ಸಿದ್ಧಾಂತಕ್ಕೆ ಬದ್ಧರಲ್ಲದ ಕಣವಿಯವರ ಕವಿತೆ, ಸಾಮಾಜಿಕ ವಿಶ್ಲೇಷಣೆಯ ಸಾಧನವಾಗಿ ಒದಗಿ ಬರುವುದಿಲ್ಲ, ತನ್ನದೇ ಆದ ತಾತ್ವಿಕೆಯಲ್ಲಿ ಸಾಮಾಜಿಕ -ರಾಜಕೀಯ ಸಂಗತಿಗಳನ್ನು ವಿಶ್ಲೇಷಿಸುತ್ತದೆ. ಆ ಮೂಲಕ ಯಾವುದೇ ಜೀವಪರ ಸಿದ್ಧಾಂತಗಳ ಜೊತೆಗೆ ಸಾಗುತ್ತದೆ.

**ಸಾಕ್ಷೀಪ್ರಜ್ಞೆಯ ಸಂಕಟ :** ಕವಿ ವರ್ತಮಾನವನ್ನು ದಾಖಲಿಸುವವನು ಎಂಬ ಹಮ್ಮಿನಿಂದ ಕವಿತೆ ಬರೆಯಲಾರ. ಆದರೆ ಪ್ರಜ್ಞೆಯ ತಳಾತಳವನ್ನು ಆವರಿಸಿಬಿಡುವ ವರ್ತಮಾನವನ್ನು ನಿರ್ಲಕ್ಷಿಸಲಾರ. ಈ ದ್ವಂದ್ವದಲ್ಲಿ ನಿಜವಾದ ಸೃಷ್ಟಿಶೀಲತೆ ಹುಟ್ಟುತ್ತದೆ. ಸೌಮ್ಯವಾದಿಯೆಂದು, ಅವಿರೋಧಿ ಪ್ರಜ್ಞೆಯ ಕವಿಯೆಂದು ಹೊಗಳಿಕೆ ತೆಗಳಿಕೆಯಲ್ಲಿ ಒಟ್ಟೊಟ್ಟಿಗೆ ಪಡೆಯುತ್ತ ಬಂದ ಕಣವಿಯವರ ಕಾವ್ಯಮಾರ್ಗದಲ್ಲಿ ಸಾಕ್ಷೀಪ್ರಜ್ಞೆಯ ಸಂಕಟದಂತಹ ಕೆಲವು ಕವಿತೆಗಳಿವೆ. ಅವುಗಳಲ್ಲಿ ಪ್ರಸ್ತುತ ತವಿಕೆಯೂ ಒಂದು.

ಹಿಟ್ಲರ್ ನಡೆಸಿದ ಜನಾಂಗೀಯ ಹತ್ಯಾಕಾಂಡದಷ್ಟೇ ನಡುಕ ಹುಟ್ಟಿಸುವುದು ಜರ್ಮನಿಯ ನಾಝಿ ಪ್ರಜೆಗಳ ಮೌನ. ಅವರೆಲ್ಲ ತಮ್ಮ ಮಕ್ಕಳಿಗೆ ಐಸಕ್ರೀಂ ಕೊಡಿಸಿ ಮುದ್ದಿಸುವ ಸಭ್ಯರೇ ಆಗಿದ್ದರು. ಬಿಜ್ಜಳನ ಸೈನಿಕರು ಬಸವಣ್ಣನೇ ಮೊದಲಾದ ಶರಣರನ್ನು ಬೆನ್ನಟ್ಟಿಕೊಂಡು ಬರುವಾಗ ಕಲ್ಯಾಣ ರಾಜ್ಯದ ಸತ್ಪ್ರಜೆಗಳು ಮೌನವಾಗಿಯೇ ಇದ್ದರು. ಇಂತಹ ಕಠೋರ ಮೌನದ ವಾರಸಾ ಆಗಲು ಕವಿತೆ ನಿರಾಕರಿಸುತ್ತದೆ. ಈ ನಿರಾಕರಣೆಯ ದರ್ದಿನಲ್ಲಿ ವರ್ತಮಾನದೊಂದಿಗಿನ ಸಂಬಂಧ ಹುಟ್ಟಿಕೊಳ್ಳುತ್ತದೆ.

ಸೆಕ್ಯುಲರ್ ತತ್ವವನ್ನು ಅಳವಡಿಸಿಕೊಂಡ ದೇಶದ ಸಂವಿಧಾನಿಕ ಕಾನೂನಾತ್ಮಕ ಬದ್ಧತೆಯನ್ನು ಮರೆತು, ಸಾಮಾನ್ಯರು ಊಹಿಸಲಾಗದ ರೀತಿಯಲ್ಲಿ ಕೋಮುವಾದಿ ಆಲೋಚನೆಯ ಸಂಘ ಪರಿವಾರ ಅಯೋಧ್ಯೆ ವಿವಾದವನ್ನು ಬೆಳೆಸಿತು. ಪರಿಹಾರದ ಹತ್ತಾರು ಪ್ರಜಾಪ್ರಭುತ್ವವಾದಿ ಮಾರ್ಗಗಳಿದ್ದವು. ಆದರದು ಕೋಮುವಾದಿಗಳಿಗೆ ಅಗತ್ಯವಾಗಿರಲಿಲ್ಲ. ಈ ದೇಶವನ್ನು ಸಭ್ಯ ಸುಸಂಸ್ಕೃತ ಬದುಕಿನ ನೆಲೆ ಅಂದುಕೊಂಡ, ಈ ದೇಶದ ದಿಗ್ಭ್ರಾಂತಿಯನ್ನುಂಟುಮಾಡಿತು. ಆವತ್ತಿನ ಘಟನೆಯನ್ನು 'ನೋಡುವ' ಶಾಪಕ್ಕವರು ಒಳಗಾದರು. ಇಂತಹ ಸ್ಥಿತಿ ಸಂವೇದನಾಶೀಲ ಮನಸ್ಸಿಗೆ ಮಾತು ಕಳೆದುಹೋದ, ಶಬ್ದ ನಿಶ್ಯಬ್ದವಾದ ಆಘಾತವಾಗಿತ್ತು. ಮುಗ್ಧ ಮಗು ತಬ್ಬಿಬ್ಬಾಗಿ ಪದಗಳನ್ನು ತಡಕಾಡುವಂತೆ ಕವಿಯ ಸಂವೇದನೆಯು ಪದಗಳನ್ನು ತಡಕಾಡುತ್ತದೆ. ಹಿಂಸೆಗೆ ಬೆಚ್ಚಿದ

ಮನಸ್ಸು ಮುಖಾಮುಖಿ ಮಾಡುವ ತ್ರಾಣ ಕಳೆದುಕೊಂಡಿದೆ. ಆ ಆಘಾತವನ್ನು ಪದಗಳು ಹೊಂದಿಸುತ್ತವೆ.

ಅಯೋಧ್ಯೆಯ ಬಾಬರಿ ಮಸೀದಿ ಪ್ರಕರಣ ದಿನಬೆಳಗಾಗುವುದರಲ್ಲಿ ನಡೆದ ಘಟನೆಯಲ್ಲ. ಹಿಂದುತ್ವವಾದಿಗಳು ಇಟ್ಟಿಗೆ ರಾಜಕಾರಣ, ರಥಯಾತ್ರೆಗಳನ್ನು ನಡೆಸಿದ್ದರು. ತೋಮುವಾದದ ಗಾಳಿಯನ್ನು ಊರೂರು ಕೇರಿ-ಕೇರಿಗಳಿಗೆ ಹಬ್ಬಿಸಿದ್ದರು. ಈ ಕಾರ್ಯಗಳ ಪರಿಣಾಮವೇ ಬಾಬರಿ ಮಸೀದಿಯ ಘಟನೆ. ಕವಿತೆ ಹಿಂದುತ್ವ ರಾಜಕಾರಣದ ಬಗ್ಗೆ, ಸಮಕಾಲೀನ ಅಧಿಕಾರ ರಾಜಕಾರಣದ ಬಗ್ಗೆ ಕಾರಣ ಮೀಮಾಂಸೆಯಲ್ಲಿ ತೊಡುಗುವುದಿಲ್ಲ. ಆದರೆ ಕೋಮುವಾದಿ ಹಿಂಸೆಯ ವಿರೋಧ, ಆ ಮೂಲಕ ಕೋಮುವಾದದ ತಾತ್ವಿಕತೆಯ ವಿರೋಧ ಮತ್ತು ಅಂತಿಮವಾಗಿ ಕೋಮುವಾದಿ ಅಧಿಕಾರ ರಾಜಕಾರಣದ ತಂತ್ರಗಾರಿಕೆಯನ್ನು ವಿರೋಧಿಸುವ ದೃಢತೆಯನ್ನು ಪ್ರಕಟಿಸುತ್ತದೆ. ಆ ಕಾರಣಕ್ಕಾಗಿ ಶಬ್ದಗಳು ರಥಪಥದ ಚಕ್ರಕ್ಕೆ ಸಿಕ್ಕಿ, ಬೇತಾಳಗಳ ಪದಾಘಾತಕ್ಕೆ ಸಿಕ್ಕಿ ರಾಮಾರಗತವಾಗಿ ಹೋದ ಅನುಭವ ಅತ್ಯಂತ ತೀವ್ರವಾದ ಸಾಕ್ಷೀಭಾವವಾಗಿದೆ. ಕವಿತೆಯು ಪ್ರಾಚೀನ ಧರ್ಮ ಸ್ವರೂಪವು ಹಲ್ಲೆಗೀಡಾದ ಸಂಗತಿಯನ್ನು ಹೇಳುತ್ತದೆ.

**ಓಂಕಾರದ ಶಂಖದಿಂದ ನಾಭಿಮೂಲಕ್ಕಿರಿದು**
**ಕರುಳು ಹೊರದೆಗೆದು, ಜೈಕಾರಗೈದ**
**ಸಾಧು ಸತ್ಪುರುಷರ ಕಂಡು**
**ಮರಾ ಮರಾ ಮರಾ ಮರುಗಿದಿರಾ ?**

ಆರ್ಷೇಯ ವೈದಿಕ ಧರ್ಮದ ಸಾಧು ಸತ್ಪುರುಷರಿಗೂ ಇಂದಿನವರಿಗೂ ಅಪಾರ ವ್ಯತ್ಯಾಸಗಳಿವೆ. ಬೇಡನೂ ಕಳ್ಳನೂ ಆದವನ ರಾಮಧ್ಯಾನ ವಾಲ್ಮೀಕಿಯ ಅರಿವಾಗಿ ಬೆಳೆಯಿತು. ಆದರೆ ಇಂದು ಸಾಧು ಸತ್ಪುರುಷರ ವೇಷ ತೊಟ್ಟವರ ಮತಾಂಧತೆಯು ಮರುಕ ಹುಟ್ಟಿಸುವಂತಿದೆ. ಕೊಲ್ಲುವವರನ್ನು ಕೊಲೆಗಡುಕ ಸಂಸ್ಕೃತಿಯನ್ನೂ ಕರುಣೆಯ ಕಣ್ಣುಗಳಿಂದ ನೋಡಿ ಅವುಗಳನ್ನು ನಿಕೃಷ್ಟಗೊಳಿಸಿಬಿಡುವ ದಾರ್ಶನಿಕತೆಯು ಮೌನವಾಗಿಯೇ ಹೆಚ್ಚು ಪರಿಣಾಮಕಾರಿಯಾಗಿದೆ. ನಿಶ್ಶಬ್ದದಲ್ಲಿಯೇ ಪ್ರತಿಭಟನೆಯ ಹೊಸ ಶಬ್ದ ಕೇಳಿಸುತ್ತದೆ. ಇನ್ನೊಂದು ಧರ್ಮದ ಮೇಲೆ ಹಲ್ಲೆ ಮಾಡುವವರು ಹಿಂಸೆಯ ವಿಕಾರತೆಯನ್ನು ಉದ್ದೀಪಿಸಿಕೊಳ್ಳುತ್ತ ತಮ್ಮ ಧರ್ಮವನ್ನೇ ತಾತ್ವಿಕವಾಗಿ ಧ್ವಂಸಗೊಳಿಸುತ್ತಾರೆ. ಅಯೋಧ್ಯಾ ಘಟನೆಯು ಮಸೀದಿ ಎಂಬ ಕಟ್ಟಡವನ್ನು ನಾಶ ಮಾಡಿದ್ದಲ್ಲ. ಹಿಂದೂ-ಮುಸ್ಲಿಂ ಭಾವೈಕ್ಯತೆಯ ಇತಿಹಾಸವನ್ನು ನಾಶಮಾಡಿತು. ಆಧ್ಯಾತ್ಮಿಕ ಸಾಧನೆಯ ಸಾಧನೆಗಳೇ ಹಿಂಸೆಯನ್ನು ಪ್ರೇರೇಪಿಸುವ ಅಸ್ತ್ರಗಳಾಗಿಬಿಟ್ಟು ಕೋಮುವಾದದ ದುರಂತವನ್ನು ಕವಿತೆ ಹೇಳುತ್ತದೆ. ಮನುಷ್ಯ ಮನುಷ್ಯನನ್ನು ಬೆಸೆಯುವ ತಿಳಿವು ಎನ್ನುವ ತುಪ್ಪ ಸುಟ್ಟು ಕಮಟು ವಾಸನೆಯಲ್ಲಿ ಉಸಿರಾಟವೂ ಸಾಧ್ಯವಾಗುತ್ತಿಲ್ಲ ಎನ್ನುವುದು ಹಿಂಸೆಯ ಪರಿಣಾಮ ಸಾಮಾಜಿಕ ಬದುಕನ್ನು ನಾಶಗೊಳಿಸಿರುವುದನ್ನು ಸೂಚಿಸುತ್ತದೆ.

**ಸೌಹಾರ್ದತೆಯ ಉಸಿರು**

"ಕೆಂಪು ಕೋಟೆಯ ಮೇಲೆ ನಿಂತು ಹಾರಿಸಿದ ಬಿಳಿ ಪಾರಿವಾಳ ಮರಳಿ ಗೂಡಿಗೆ ಬಂತೇ" ಎಂದು ಅವರ ಕವಿತೆಯೊಂದು ಪ್ರಶ್ನಿಸುತ್ತದೆ. ಅದು ಶಾಂತಿಯ ಸಹಬಾಳ್ವೆಯ ಪ್ರದರ್ಶನದೊಳಗಿನ

ಢೋಂಗಿತನದ ಕುರಿತ ಎಚ್ಚರ. ಈ ಕವಿತೆಯು ಹಿಂದೂ-ಮುಸ್ಲಿಂ ಜನಾಂಗಗಳು ಒಟ್ಟಾಗಿ ಬದುಕಿದ್ದ ಚರಿತ್ರೆಯ ನಾಶವನ್ನು ಹೇಳುತ್ತದೆ. ಸರಯೂ ನದಿ ನಿಂತುಬಿಟ್ಟ ಸ್ಥಿತಿ. ಕಾಲ ಮುಂದೆ ಚಲಿಸಲಾರದ ಸ್ತಂಭನ. ಇಂತಹ ಸ್ಥಿತಿಯಲ್ಲಿಯೂ ಮರಳಿ ಸಂವಹನ ಸಾಧ್ಯವೆನ್ನುವುದು ಈ ಕವಿತೆಯ ಪ್ರತಿಪಾದನೆ. ಸಾಮಾಜಿಕ ವಿಶ್ಲೇಷಣೆಯ ಸಿದ್ಧಾಂತಗಳು ನಿಲುಗಡೆಗೆ ತಲುಪಿ ಕೈಚೆಲ್ಲುವ ಸಂದರ್ಭದಲ್ಲಿಯೂ ಕಾವ್ಯದ ತತ್ವವು ತನ್ನದೇ ಕಾಲುದಾರಿಯನ್ನು ಶೋಧಿಸಿಕೊಳ್ಳುತ್ತದೆ. ಸುಡು ವಾಸ್ತವದಲ್ಲಿಯೂ ಮರುನಿರ್ಮಿತಿಯ ಆಶಾವಾದವನ್ನು ಮಿಡಿಯುತ್ತದೆ. ಜಿ.ಎಸ್.ಎಸ್. ಅವರ ಒಂದು ಕವಿತೆ 'ದೀಪವಿರದ ದಾರಿ'ಯಲ್ಲಿ ತಡವರಿಸುವ ಪದಗಳನ್ನು ತಮ್ಮ ಹೃದಯಕ್ಕೆ ಕರೆದು ಹೆಸರಿಡುವ ಉಸಿರಿಡುವ ಪ್ರೀತಿಯನ್ನು ವ್ಯಕ್ತಪಡಿಸುತ್ತದೆ. ಹಾಗೇ ಕಣವಿಯವರ ಈ ಕವಿತೆಯೂ ಹಿಂಸೆಯ ಗುರುತುಗಳನ್ನು ಅಳಿಸಿ, ಸೌಹಾರ್ದದ ಚಹರೆಯನ್ನು ಬಿತ್ತಲು, ತನ್ನ ಶಬ್ದಗಳು ಸಮರಸದ ಧ್ವನಿಯಾಗಲು ಬಯಸುತ್ತದೆ.

ವಾಸ್ತವವಾಗಿ ಕವಿತೆಯು ಘಟನೆಯನ್ನು ಸರಳವಾಗಿ ಮತ್ತು ಇಡಿಯಾಗಿ ಕೊಡಲಾರದು. ಅಯೋಧ್ಯೆಯ ವಿವಾದವು ಕಾನೂನು, ಸಂವಿಧಾನದ ನಿಯಂತ್ರಣಗಳ ಮೂಲಕ ಪರಿಹಾರಗೊಳ್ಳಬೇಕಾಗಿದೆ. ಆದರೆ ಕೋಮುವಾದಿಗಳ ಅಹಂಕಾರದಿಂದಾಗಿ ಎಂದೂ ಮುಗಿಯದ ಅಂತಃಕಲಹದ ಆಖಾಡವಾಗಿದೆ. ಪಕ್ಕದ ಪಾಕಿಸ್ತಾನದಲ್ಲಿ ಇಂತಹದೇ ಒಂದು ಸಮಸ್ಯೆ 'ಲಾಹೋರ್‌ನ ಶಹೀದ್ ಗಂಜ್ ಗುರುದ್ವಾರ ಮಸೀದಿ ವಿವಾದ'ವನ್ನು ಕಾನೂನು ರೀತಿಯಲ್ಲಿ ಬಗೆಹರಿಸಿಕೊಳ್ಳಲಾಗಿದೆ. ಭಾರತದಲ್ಲಿ ಇದುವರೆಗೂ ಸಾಧ್ಯವಾಗಿಲ್ಲ. ಭಾರತದಲ್ಲಿ ಮನುಸ್ಮೃತಿಗಳು ಶರಿಯತ್‌ಗಳು ಜೀವಂತವಾಗಿವೆ; ಸಂವಿಧಾನವಲ್ಲ ಎನ್ನುವ ವಾತಾವರಣ ನಿರ್ಮಾಣವಾಗಿದೆ. "ರಾಮಜನ್ಮಭೂಮಿ ಆಸುಪಾಸಿನ ಪ್ರದೇಶಕ್ಕೆ ಮಾನವ ನಿರ್ಮಿತ ಕಾನೂನುಗಳು ಒಳಪಡುವುದಿಲ್ಲ. ಇಲ್ಲಿ ರಾಮಲಲ್ಲಾನ ಕಾನೂನು ಮಾತ್ರ ನಡೆಯುತ್ತದೆ" ಎಂಬಂತಹ ಹೇಳಿಕೆಗಳ ಬಗ್ಗೆ, ರಾಜಕೀಯ ನೇತಾರರನ್ನೆಸಿಕೊಂಡವರ ನಡವಳಿಕೆಗಳ ಬಗ್ಗೆ ಕವಿತೆ ಪ್ರಸ್ತಾಪ ಮಾಡುವುದಿಲ್ಲ. ಕವಿತೆಯ ಘಟನೆಯನ್ನು ವಿವರಿಸುವ ಡಾಕ್ಯುಮೆಂಟರಿಯಾಗುವುದು ಸಾಧ್ಯವಿಲ್ಲ. ಅದು ವರದಿ ಒದಗಿಸಬೇಕಿಲ್ಲ. ಕಾಣುವ ಕಂಡುಕೊಳ್ಳುವ 'ಕಾಣ್ಕೆ'ಯನ್ನು ನೀಡುತ್ತದೆ. ಪ್ರಸ್ತುತ ಕವಿತೆ ಉದಾರವಾದಿ ಮಾನವೀಯ ದೃಷ್ಟಿಯಿಂದ ಬದುಕಿನ ಸತ್ವವನ್ನು ಎತ್ತಿಹಿಡಿಯುತ್ತದೆ.

**ಅಭಿವ್ಯಕ್ತಿ ವಿಧಾನ**

**ಸಮಚಿತ್ತತೆ :** ಭಾರತದಂತಹ ದೇಶದಲ್ಲಿ 'ಸದ್ಯದ ಸ್ಥಿತಿ' ಹಲವು ಗೋಜಲುಗಳಿಂದ ಸುತ್ತಿಕೊಂಡಿದೆ. ಇಂಥಲ್ಲಿ ಕಾವ್ಯದ ನಿರ್ಮಿತಿ, ಸೃಜನಶೀಲ ಜಾಗೃತಿ ಕಷ್ಟದ್ದು. ಸೃಜನಶೀಲತೆಗೆ ಪೂರಕವಲ್ಲದ ಪರಿಸ್ಥಿತಿಯಲ್ಲಿ "ಪೂರ್ಣ ಉದ್ವಿಗ್ನರಾಗದೆ, ಅತಿರೇಕದಲ್ಲಿ ಯಾವುದನ್ನೂ ಪರಿಭಾವಿಸದೆ ಇದ್ದಕ್ಕಿದ್ದ ಹಾಗೆ ಸ್ವೀಕರಿಸುವ ಸಮಚಿತ್ತ ಕಣವಿಯವರ ಕಾವ್ಯದ ಒಟ್ಟು ಲಕ್ಷಣ."೨ ಪ್ರಸ್ತುತ ಶಬ್ದ-ನಿಶ್ಯಬ್ದ ಕವಿತೆಯಲ್ಲಿ ಮೊಟ್ಟ ಮೊದಲು ಅರಿವಿಗೆ ಬರುವುದು ಈ ಸಮಚಿತ್ತ ಧ್ಯಾನ. ಬೆಟ್ಟದ ಮೇಲಿನ ಮಳೆನೀರು ರಭಸದಿಂದ ಕೊಚ್ಚಿ ಕೊರಕಲಾಗಿ ಹೋಗದೆ ಗಿಡಗಂಟಿಗಳ ಬೇರಿಗೆ ಉಣಿಸಾಗಲು ಅಲ್ಲಲ್ಲಿ ಸಣ್ಣ -ಸಣ್ಣ ತಡೆಗಳನ್ನು ನಿರ್ಮಿಸುತ್ತಾರೆ. ಹಾಗೆ ಈ ಕವಿತೆ

ಭಾವವನ್ನು ರಭಸವಾಗಿ ಹರಿಬಿಡದೆ ಸಾಲುಸಾಲುಗಳಲ್ಲಿ ಶಬ್ದಗಳನ್ನು ಮುರಿದಿಡುವ ತಡೆಯ ಮೂಲಕ ವಿಚಾರವನ್ನು ಒಳಹರಿವಾಗಿಸುತ್ತದೆ. ಕವಿತೆಯ ಮೆಲುದನಿ ಆತಂಕದ ಛಾಯೆಯನ್ನು, ಅದನ್ನು ಸಹಿಸಿಕೊಳ್ಳುವ ಗಟ್ಟಿತನವನ್ನೂ ಸೂಚಿಸುತ್ತದೆ. ಕವಿತೆಯ ಇಂತಹ ರಚನಾ ವಿನ್ಯಾಸವೂ ಕವಿತೆಯ ಆಶಯದ ಕಡೆಗೆ ವ್ಯವಧಾನದಿಂದ ಗಮನಿಸಲು ಒತ್ತಾಯಿಸುತ್ತದೆ.

ವ್ಯಾಕರಣದ ಭಾಷೆಯನ್ನು ಕವಿತೆ ಬಳಸಿಕೊಳ್ಳುತ್ತದೆ. ಸಮಾಜದ ರಚನೆಯು ವಾಕ್ಯದ ರಚನೆಯಿದ್ದ ಹಾಗೆ, ಹಲವು ಪದ, ಅರ್ಥ, ಉದ್ಗಾರ, ಕೊಂಬು, ದೀರ್ಘ, ಏನೆಲ್ಲ ಸೇರಿದ್ದು. ಯಾವುದೇ ಒಂದು ಜಗ್ಗಿದರೆ, ಇಳಿದರೆ, ಏರಿದರೆ ಅರ್ಥಭಂಗ. ಮುಗ್ಧ ಸ್ನಿಗ್ಧ ಶಬ್ದಗಳು ಎಲ್ಲೆಲ್ಲೋ ಸೇರಿಬಿಡುವ ಅರ್ಥಹೀನಗೊಳ್ಳುವ ಸ್ಥಿತಿಯನ್ನೂ ಸೂಚಿಸುತ್ತದೆ. ಕೋಮುವಾದಕ್ಕೆ ಇಟ್ಟಿಗೆ ಹೊತ್ತವರು, ರಥಚಕ್ರದ ಗಾಲಿಗುಂಟ ದೀಪಾರತಿ ಹಿಡಿದು ಓಡಿಯಾಡಿದವರು ಇಂತಹ ಮುಗ್ಧ ಸ್ನಿಗ್ಧ ಶಬ್ದಗಳಂತಹ ವ್ಯಕ್ತಿಗಳು, ಕೋಮುವಾದವನ್ನು ತಲೆಗೇರಿಸಿಕೊಂಡು ಭೂತಕಾಲದ ಪಳಿಯುಳಿಕೆಗಳಿಂದ ಎದ್ದು ಬಂದಂತಿರುವ ಬೇತಾಳಗಳ ಹಾರಾಟ ಸಮಾಜ ವ್ಯವಸ್ಥೆಯ ಗತಿಯನ್ನೇ ತಪ್ಪಿಸಿದೆ.

**ಪದ ಚರಿತ್ರೆ**

ಕವಿತೆಯಲ್ಲಿ ಶಬ್ದಗಳು ಚರಿತ್ರೆಯ ತೋರುಬೆರಳಿನಂತಿವೆ. 'ನಾ' 'ನೀ' ಎನ್ನುವುದು 'ನಾವು' 'ಅವರು' ಎನ್ನುವ ರಾಷ್ಟ್ರೀಯವಾದಿ ಬೇಧತತ್ವವನ್ನು ಸೂಚಿಸುತ್ತದೆ. ಅಂದಿನ ಬೇಧವು ಇಂದು 'ರಾಮಾರಗತ'ವಾಗಿ ಹೋದ ಬೆಳವಣಿಗೆಯನ್ನು ಸೂಚಿಸುತ್ತದೆ. 'ಶೂನ್ಯ' ಎನ್ನುವುದು ಅನುಭಾವಿಕ ನೆಲೆಯಲ್ಲಿ ಬಯಲು, ಎಲ್ಲವನ್ನೂ ಒಳಗೊಂಡು ಏನೂ ಇಲ್ಲದ್ದು ಎಂದಾಗುತ್ತದೆ. ಪ್ರಾಚೀನ ಧರ್ಮತತ್ವಕ್ಕೆ ಅಹಂಕಾರದ ಕೊಂಬು ಮೂಡಿದಾಗ ಅದು ತನ್ನ ಘನತೆಯಿಂದ ಕೆಳಗಿಳಿಯುತ್ತದೆ. ರಾಮನ ಘನತೆ ಕೂಡ ಕೋಮುವಾದಿ ರಾಜಕಾರಣದಲ್ಲಿ ಕೆಳಗಿಳಿಯಿತು. 'ಎದೆಯ ಸೊಲ್ಲು' ಎನ್ನುವಾಗ ಹೃದಯದ ದನಿಯೇ ಸಂವಹನಗೊಳ್ಳಲು ಆಗುತ್ತಿಲ್ಲದ ಅಬದ್ಧವನ್ನು ಸೂಚಿಸುತ್ತದೆ. 'ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು'? ಎಂದ ಕುವೆಂಪುವನ್ನು ನೆನಪಿಸುತ್ತದೆ.

**ನೋಡ ನೋಡುತ್ತ ಹಾಡೇ ಹಗಲು**
**ಕವಿದ ಕತ್ತಲು**
**ಬೇತಾಳಗಳ ಪದಾಘಾತಕ್ಕೆ**
**ರಾಮಾರಗತವಾಗಿ ಹೋದಿರಾ ?**

ಈ ಸಾಲುಗಳಲ್ಲಿ 'ಹಾಡೇ ಹಗಲು' 'ರಾಮಾರಗತ'ದಂತಹ ಪದಗಳು ಆಡುನುಡಿಯ ದಟ್ಟತೆಯಲ್ಲಿ ಹಿಂಸೆಯನ್ನು ವ್ಯಾಖ್ಯಾನಿಸುತ್ತದೆ. ಒಂದು ಘಟನೆಯನ್ನು ಕಾರಣವಾಗಿ ಹೊಂದಿಯೂ, ಯಾವುದೇ ಕೋಮುಹಿಂಸೆಯ ವಿಕಾರತೆಗೂ ದನಿಯಾಗುತ್ತದೆ. ಹೀಗೆ ಹಲವು ಸಂದರ್ಭಗಳಿಗೆ ಸಂವಹನಗೊಳ್ಳಬಲ್ಲ ಶಕ್ತಿ ಯಾವುದೇ ಉತ್ತಮ ಕವಿತೆಯ ಲಕ್ಷಣವಾಗಿದೆ.

ಇಲ್ಲಿಯ ಓಂಕಾರ, ಶಂಖ, ಜೈಕಾರ, ಹೋಮ-ಹವನ, ಸಾಧು ಸತ್ಪುರುಷ ಮೊದಲಾದ ಪದಗಳು ಪರಂಪರೆಯ ಚಹರೆಯೊಂದಿಗೆ ವರ್ತಮಾನದ ವಿಭಿನ್ನ ಸಂದರ್ಭದಲ್ಲಿ ಪ್ರಯೋಗಗೊಳ್ಳುತ್ತ ಹಿಂದುತ್ವದ ಕೋಮುವಾದಿ ಬೆಳವಣಿಗೆಯನ್ನು ಸೂಚಿಸುತ್ತದೆ.

ಕವಿತೆಯ ಭಾಷಾರಚನೆ ಮತ್ತು ಸಂವಿಧಾನವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಮಾತ್ರ ಅದು ಒಳಗೊಂಡಿರುವ ಆಲೋಚನಾ ಸ್ತರಗಳು ತೆರೆಯುತ್ತವೆ. ಭಾಷಿಕ ಅಧ್ಯಯನವು ಸಾಂಸ್ಕೃತಿಕ ಸೂಕ್ಷ್ಮಗಳನ್ನು ತಿಳಿಸುವ ಅಧ್ಯಯನವೂ ಆಗಿರುತ್ತದೆ. ಈ ಕವಿತೆ ಹಿಂಸೆಯನ್ನು ಹೇಳಲು ಅತ್ಯಂತ ಸೂಕ್ಷ್ಮವಾದ ರೂಪಕವನ್ನು ಅವಲಂಬಿಸುತ್ತದೆ. 'ಗೂಢ ಗುಮ್ಮಟ' ಬಾಹ್ಯ ಜಗತ್ತಿಗೆ ತೆರೆದುಕೊಳ್ಳದ ಮುಸ್ಲಿಂ ಸಂಸ್ಕೃತಿಯನ್ನು ಸೂಚಿಸುತ್ತದೆ. ಒಳಹೋದಾಗ ಮಾತ್ರ ಪ್ರೀತಿ-ಸೌಹಾರ್ದದ ಗುಟುಕು, ರೆಕ್ಕೆ ಬಡಿತದ ಅರಿವು. ಗುಮ್ಮಟವನ್ನು 'ತಾಯ ಮೊಲೆತೊಟ್ಟು' ಎಂದು ಕಾಣುವುದು 'ಅನ್ಯ' ಎಂಬ ಭಾವವನ್ನು ಪೂರ್ತಿ ನಿವಾರಿಸುವ ದರ್ಶನವಾಗಿದೆ. ಮಸೀದಿ ಗುಮ್ಮಟ ತನ್ನದೆಂದುಕೊಳ್ಳುವ ವಿಶಾಲತೆಗೆ ಮಾತ್ರ ಸಾಧ್ಯವಾಗುವ ಕಾಣ್ಕೆಯಿದು. ಒಂದು ಧರ್ಮ, ಸಂಸ್ಕೃತಿ, ಜನಾಂಗಗಳ ಮೇಲೆ ಹಲ್ಲೆ ಮಾಡುವುದೆಂದರೆ ತಾಯಿಯ ಮೇಲೆ ಹಲ್ಲೆ ಮಾಡಿದಂತೆ. ಈ ಹಿಂಸಾರತಿಯ ಯಾವ ಕ್ಷಣದಲ್ಲೂ ಎಚ್ಚರವಾಗದ ವಿಸ್ಮೃತಿಯ ಬಗ್ಗೆ ದುಃಖವಿದೆ. ಹಾಗಾಗಿ ಹಿಂಸೆಯ ವಿವರ 'ಸುತ್ತಿಗೆ ಹಿಡಿದು, ಬಡಿದು ಕತ್ತರಿಸಿ' ಎಂದು ವಿವರವಾಗಿ ಬರುತ್ತದೆ. ಇದು 'ಶೂರ್ಪನಖಿ ಪ್ರಸಂಗ'ವನ್ನೂ ನೆನಪಿಸಿ, 'ರಾಮಾರಗತ'ದ ಮತ್ತೊಂದು ಮಜಲನ್ನು ಸೂಚಿಸುತ್ತದೆ. ಕವಿತೆಯ ಭಾಷಾವಿನ್ಯಾಸವು ಕವಿತೆಯ ತಾತ್ವಿಕತೆಯನ್ನು ನಿರೂಪಿಸುವ ವಿಧಾನವಿದು. ಸಿದ್ಧಾಂತಕ್ಕೆ ಬದ್ಧವಾದ ಚಿಂತನೆಯು ಘಟನೆಯನ್ನು ಆವೇಶದಿಂದ ನೋಡುತ್ತದೆ. ಕಾರಣವಾದದ ರಾಜಕೀಯ ಪರಾಮರ್ಶೆ ಮಾಡುತ್ತದೆ. ಉದಾರವಾದಿ ಚಿಂತನೆಯು ಘಟನೆಯನ್ನು ಸಂವೇದನಾ ಸ್ತರದಲ್ಲಿ ಗ್ರಹಿಸುತ್ತದೆ. ಬದ್ಧತೆಯದು ಆಲೋಚನಾ ರೂಪದ ಪ್ರತಿಕ್ರಿಯೆಯಾದರೆ, ಉದಾರವಾದವು ಸಂವೇದನಾರೂಪದ ಪ್ರತಿಕ್ರಿಯೆಯನ್ನು ಮಾಡುತ್ತದೆ.

ತಾಯಿಯ ಮೇಲೆ ಹಲ್ಲೆ ಮಾಡುವ ಚಿತ್ರಣಕ್ಕೆ ಹಿನ್ನೆಲೆಯಾಗಿ ಕೇಳಿಬರುವ 'ಮಕ್ಕಳಿವರೇನಮ್ಮ ....' ಎಂಬ ಧ್ವನಿಯು ಬೇಂದ್ರೆ ಕವಿತೆಯ ಸಂದರ್ಭವನ್ನು ನೆನಪಿಸುತ್ತದೆ. ದೇಶಕಟ್ಟಲು ಹಿಂಜರಿಯುವ ಹೇಡಿತನಕ್ಕೆ ವ್ಯಂಗ್ಯ ವಿಷಾದದಲ್ಲಿ ಬಳಸಿದ ಮಾತು ಮನೆಮುರುಕರ ಅಮಾನವೀಯತೆಗೆ ವಿಷಾದದಿಂದ ಬಳಸಲ್ಪಡುತ್ತಿದೆ. ಕವಿತೆಯ ಕೊನೆಯಲ್ಲಿ ಬರುವ 'ಸಮ-ರಸ-ಧ್ವನಿ'ಯು 'ಸಮರಸವೇ ಜೀವನ' ಎಂಬ ಬೇಂದ್ರೆ ತತ್ವವನ್ನು ನೆನಪಿಸುತ್ತದೆ. ವರ್ತಮಾನದ ಸಂಕಟಕ್ಕೆ ಪರಿಹಾರವನ್ನೂ ಪರ್ಯಾಯವನ್ನೂ ಯೋಚಿಸಿದಾಗ ಕುವೆಂಪು ಹಾಗೂ ಬೇಂದ್ರೆಯವರ ಕವಿತೆಯ ಸಾಲುಗಳನ್ನು ಉದ್ಧರಿಸಿಕೊಳ್ಳುವುದು ಪರಂಪರೆಯ ಬೆಂಬಲವನ್ನು ಪಡೆದುಕೊಳ್ಳುವ ತಂತ್ರವೇ ಆಗಿದೆ. ಹೀಗೆ ಕವಿತೆಯ ಬಂಧದಲ್ಲಿಯೇ ಸಮಕಾಲೀನ ಜಿಜ್ಞಾಸೆಯರೂಪ ಪಡೆಯುತ್ತದೆ.

ಚರಿತ್ರೆಯು ಹಿಂಸೆಯ ದಾಖಲೆಯನ್ನು ಹೇಳಬಹುದು. ಆದರೆ ಕಾವ್ಯವು ಹಿಂಸೆಯನ್ನು ಪ್ರತಿರೋಧಿಸಿದ ಜೀವಪರ ಸಂವೇದನೆಯ ಚರಿತ್ರೆಯನ್ನು ಹೇಳುತ್ತದೆ. ಬದುಕು ಬಿಕ್ಕಟ್ಟಿಗೆ ಒಳಗಾದ ಸಂದರ್ಭದಲ್ಲಿ ಅದನ್ನು ಸಮುದಾಯದ ಮನಸ್ಸಿಗೆ ಮುಟ್ಟಿಸುವ ನೈತಿಕ ಜವಾಬ್ದಾರಿಯನ್ನು ಕಾವ್ಯ ನಿರ್ವಹಿಸುತ್ತದೆ. ಇದು ಕಾವ್ಯದ ಹೆಗಲಿನ ಹೊರೆಯಲ್ಲ. ಕಲೆ ಯಾವತ್ತಿಗೂ ಇದನ್ನು ಜೀವಧರ್ಮವಾಗಿ ಸ್ವೀಕರಿಸಿದೆ.

ಆಶ್ಚರ್ಯವೆಂದರೆ, ಕಣವಿಯವರ ಕವಿತೆಗಳನ್ನು ಭಾವೋಪಾಸಕ, ಇಹದ ಬದುಕಿನ ನಂಟು, ನಿಸರ್ಗಾರಾಧನೆ, ಸ್ವಾಭಿಮುಖತೆ ಇಂತಹ ಪದಗಳಲ್ಲಿಟ್ಟೇ ಕನ್ನಡ ವಿಮರ್ಶೆ ನೋಡಿದೆ. ಇನ್ನು ಕೆಲವೊಮ್ಮೆ ಇಂತಹ ಅಭಿಪ್ರಾಯಗಳ ನೇತ್ಯಾತ್ಮಕ ಪರಿಣಾಮಗಳಿಂದ ಉಳಿಸಲು ವಿಮರ್ಶೆ ಮತ್ತೊಂದೇ ತುದಿಯನ್ನು ತಲುಪುತ್ತದೆ. "ಕವಿಯಾದವನು ರಾಜಕೀಯ ಸಮಸ್ಯೆಗಳಿಗೆ ಉತ್ತರ ನೀಡಬೇಕು. ಸಮಾಜದಲ್ಲಿರುವ ಶೋಷಣೆಯನ್ನು ಪ್ರತಿಭಟಿಸಬೇಕು, ಮಾನವನ ಅಸ್ತಿತ್ವದ ಬಗ್ಗೆ ಗಾಢಚಿಂತನೆ ಮಾಡಬೇಕು. ಸಂಘರ್ಷವಿರಬೇಕು. ಇವೆಲ್ಲ ಕಾರ್ಯಗಳೊಡನೆ ಮನೋಲ್ಲಾಸವನ್ನೂ ನೀಡಬೇಕು. ಇಷ್ಟೆಲ್ಲ ಜವಾಬ್ದಾರಿಯನ್ನು ಕವಿಯೊಬ್ಬನೇ ಹೊರಲಾರ. ಸಂಗೀತ, ಚಿತ್ರಕಲೆ, ನೃತ್ಯ, ಶಿಲ್ಪ ಇತ್ಯಾದಿ ಇತರ ಯಾವುದೇ ಲಲಿತಕಲೆಗೂ ಇರದ ಜವಾಬ್ದಾರಿ ಸಾಹಿತಿಗೆ ಮಾತ್ರ ಏಕಿರಬೇಕು? ೩ ಮುಂದುವರಿದು ಕಣವಿಯವರ ಕಾವ್ಯದ ಮೌಲಿಕ ಗುಣ ಅದರ ಭೌತಿಕತೆ ಮತ್ತು ಇಹದ ನಂಟು ಎನ್ನಲಾಗಿದೆ. ಈ ಎರಡೂ ಅಂಶಗಳು ಸಮಕಾಲೀನತೆಗೆ ಅತೀತವೇ ? ಇತರ ಲಲಿತಕಲೆಗಳು ಸಾಂಸ್ಕೃತಿಕ ಜವಾಬ್ದಾರಿಯನ್ನು ನಿರ್ವಹಿಸುವುದಿಲ್ಲವೇ ? ಸಮಕಾಲೀನ ಸ್ಪರ್ಶವನ್ನು ಕಳೆದುಕೊಂಡ ಯಾವ ಲಲಿತಕಲೆ ಜೀವಂತವಾಗಿರುತ್ತದೆ? ಜರ್ಮನಿಯ ಹತ್ಯಾಕಾಂಡದ ಶಿಲ್ಪ ಏನನ್ನು ಹೇಳುತ್ತದೆ ? ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂಸಾವಿರೋಧಿಯಾದ ತಾತ್ವಿಕತೆಗಾಗಿ ಚಿತ್ರಕಲೆಯ ವಿನ್ಯಾಸವೇ ಬದಲಾಗಿದೆ. ೧೯೯೩ರಲ್ಲಿ (ಈ ಕವಿತೆಯ ಕಾಲ) ವಿವಾನ್ ಸುಂದರಮ್ ಮೆಮೋರಿಯಲ್ (ಹಿಂಸೆಯ ಚಿತ್ರಗಳು) ಹೆಸರಿನ ಚಿತ್ರಪ್ರದರ್ಶನ ನಡೆಸಿದಾಗ ಉಂಟಾದ ಪರಿಣಾಮ ಸಣ್ಣದಾಗಿರಲಿಲ್ಲ. ರಾಜಕೀಯ, ಸಾಮಾಜಿಕ, ಮಾನವಿಕ ಸಂಘರ್ಷಗಳಿಲ್ಲದ ಮನೋಲ್ಲಾಸ ಇದೆಯೇ ? ಕಣವಿಯವರ ಕವಿತೆಗಳನ್ನು ಒಂದು ರೀತಿ 'ಮಾಫಿ ಮಾಡುವ' ಧೋರಣೆಯಿಂದ ಓದಿಕೊಳ್ಳುವ ಅಗತ್ಯವಿಲ್ಲ. ಯಾವುದೇ ಸಶಕ್ತ ಕಾವ್ಯ ಈ ಎಲ್ಲವುಗಳನ್ನೂ ಒಳಗೊಂಡೇ ಇರುತ್ತದೆ.

ಕವಿತೆಯೊಂದರ ಓದು ಅದಾಗಲೇ ಸ್ಥಾಪಿತವಾದ ವಿಮರ್ಶಾ ಅಭಿಪ್ರಾಯದ ಮರುಪರಿಶೀಲನೆಗೆ ಒತ್ತಾಯಿಸಬಹುದಾಗಿದೆ. ಆಗ 'ನನ್ನ ಕವಿತೆಗೂ ನನಗೂ ಜೀವನಂಟು' ಎಂಬ ಕವಿಯ ಅಭಿಪ್ರಾಯ ಸಾರ್ಥಕವಾಗುತ್ತದೆ. ಕಣವಿಯವರ ಕಾವ್ಯ ಕೋಮಲತೆಗೆ ಸೂಕ್ಷ್ಮ ಅವಲೋಕನ ಶಕ್ತಿಗೆ, ಜೀವನ ಮೌಲ್ಯಗಳ ಶೋಧಕ್ಕೆ ನಿದರ್ಶನವಾದಂತೆ ಸಮಕಾಲೀನ ಬಿಕ್ಕಟ್ಟುಗಳೊಂದಿಗೂ ಸಾವಯವ ಸಂಬಂಧ ಹೊಂದಿದೆ. ಇದಕ್ಕೆ 'ಶಬ್ದ-ನಿಶ್ಶಬ್ದ' ಕವಿತೆ ಉತ್ತಮ ಉದಾಹರಣೆ.

ನವ ವಸಾಹತುಶಾಹಿ ಕಾಲದ ಉದಾರವಾದಿ ನಿಲುವು ಹೆಚ್ಚು ವಾಸ್ತವಮುಖಿಯಾಗಿದೆ. ಸೈದ್ಧಾಂತಿಕ ಬದ್ಧತೆಯಗುಂಟ ಚಲಿಸುವ ಕಾವ್ಯ ಸಾಮಾಜಿಕ ಪಲ್ಲಟಗಳಲ್ಲಿ ಸ್ಥಗಿತಗೊಂಡು ಬಿಡಬಹುದು. ಅಂಥಲ್ಲಿ ಉದಾರವಾದಿ ನಿಲುವು ಚಲನಶೀಲಗೊಳ್ಳಬಹುದು. ಉದಾರವಾದಿ ನಿಲುವು ಸಂದರ್ಭವನ್ನು ನಿರ್ದಿಷ್ಟ ಅಂತರದಲ್ಲಿಟ್ಟು ನೋಡುವುದರಿಂದ ಅದು ವಿಭಿನ್ನವೂ ಸೂಕ್ಷ್ಮವೂ ಆಗಬಹುದು. ಈ ಕವಿತೆಯ ಭಾಷಿಕ ಮತ್ತು ಸಂವಿಧಾನಿಕ ರಚನೆಯು ಅದರ ತಾತ್ವಿಕ ಜಿಜ್ಞಾಸೆಯನ್ನು ಒಳಗೊಂಡಿದೆ. ಕವಿತೆಯ ಸೂಕ್ಷ್ಮ ಅಧ್ಯಯನದಿಂದ ಮಾತ್ರ ಅದರ ಆಶಯ ಮತ್ತು ಆಲೋಚನೆಗಳು ವ್ಯಕ್ತವಾಗಲು ಸಾಧ್ಯ.

ಎಂ.ಡಿ. ಒಕ್ಕುಂದ

# ೭೩. ಗುಲ್‌ಮೊಹರ್

೧

ಗಿಡ ಬರಡಾಗಿ ಉಳಿದದ್ದು ಮೊಳದುದ್ದ ಕಾಯಿ -
ಹುಡುಗರಾಟದ ಕತ್ತಿ, ಕೊಂಬೆಗಳು ಜಡೆಗಟ್ಟಿ
ಮಿಸುಕಾಡದಿದ್ದ ಅಸ್ಥಿಪಂಜರದ ಹತಯೋಗಿ.
ವೈಶಾಖದೊಂದು ಉಷಃಕಾಲದಲಿ ದೃಷ್ಟಿಸಿ
ಅರಿವಿನಾಸ್ಫೋಟ: ತಲೆತುಂಬ ಕೆಚ್ಚನೆ ಮುಗುಳು,
ಹುಚ್ಚೆದ್ದು ಅರಳಿರುವ ನೂರು, ಸಾವಿರ ಗುಚ್ಛ.
ಉರಿವ ಸೂರ್ಯನಿಗೀಗ ಮೂಡು-ಮುಳುಗಿನ ಅಚ್ಚ
ಕೆಂಪು ನೆನಪಿನ ತಂಪು: ಹಗಲೆಲ್ಲ ಹೊಂಗನಸು.
ಆಮೇಲೆ ಚಿಗುರಿದೆಲೆ ಮುಂಗಾರು ಮಳೆಹನಿಗೆ
ತನಿಗೊಂಡ ಹಸಿರ ಚಾಮರ, ಗಾಳಿಗುದುರುದುರಿ
ಬಿದ್ದ ಹೂವಿನ ನೆರಳು: ಹರಡಿರುವ ನವಿಲುಗರಿ.
ಸಿಮೆಂಟು-ಡಾಂಬರಿನ ನಡುವೆ ಮಣ್ಣ ಮೆರವಣಿಗೆ,
ಆಗೀಗ ಫಲ-ಪುಷ್ಪ ಸಿದ್ಧಿ ಕಂಗೊಳಿಸಿದರು
ನಿಚ್ಚ ಉಸಿರಾಟಕ್ಕೆ ಸಾಧನೆ ಹಚ್ಚ ಹಸಿರು.

೨

ಈ ಗುಲ್‌ಮೊಹರ್ ಕಂಡ ಸಲಕೊಮ್ಮೆ ಎಲ್ಲೆಂದ-
ರಲ್ಲಿ ಚೆಲ್ಲಾಡಿರುವ ಮುಗ್ಧ ಜೀವಿಗಳ ನೆತ್ತರು
ಸಿಡಿದು ಕಣ್ಣೆ ಕತ್ತಲು, ದೇಶದುದ್ದಗಲಕ್ಕು
ಹರಿದು ತಿನ್ನುವ ಹದ್ದುಗಳ ಸದ್ದು ಮೇಲಿಂದ
ಕೆಳತನಕ, ಉಗಮದಲ್ಲಿಯೆ ನದಿಯು ಬತ್ತಿದರೆ
ಹರಿವ ಮಾತೆಲ್ಲಿ ? ಸಂಗಮಕಾವ ಪುರುಷಾರ್ಥ?

ನಡುವೆ ತೋಡಿದಂತಃಕರಣದೊರತೆ ವ್ಯರ್ಥ-
ವಾಗದ ಹಾಗೆ ಮಾನವೀಯತೆಗಿಲ್ಲ ಮೇರೆ.
ಕೊರಡು ಕೊನರುವದು ಆಳದ ಬೇರಿನೊಲವಿಂದ
ಮೋಡಗಳ ಮನಸು ಹೇಗೋ : ಓಡುವವು ಬೇಕು-
ಬೇಡಗಳ ಗಮನಿಸದೆ, ಮಿಂಚಿ ಬಂದರೆ ಸಾಕು
ಸಾಕೆನಿಸಿ ಕರುಣಾವೃಷ್ಟಿ ; ಪ್ರಕೃತಿ ಸ್ವಚ್ಛಂದ,
ಲಯ ತಪ್ಪಿದರೆ ಹಿಂಸೆ, ಆಘಾತ, ಸಮತೋಲ-
ಕ್ಕಿ ಬೇಕು, ತಾಳ್ಮೆ, ನಿಗ್ರಹ ಬದುಕಿನಾದ್ಯಂತ.

ಚೆನ್ನವೀರ ಕಣವಿ ಅವರ 'ಗುಲ್‌ಮೊಹರ್' (ಶಿಶಿರದಲ್ಲಿ ಬಂದ ಸ್ನೇಹಿತ' ಸಂಗ್ರಹ) ಕವಿತೆಯು ವಿಶೇಷಾಕರ್ಷಕವಾಗಿದೆ, ಸಂಕೀರ್ಣವೂ ಆಗಿದೆ. ಕವಿತೆಯಲ್ಲಿ ಎರಡು ಮೂರು ಸ್ತರಗಳಿವೆ. ಅವುಗಳನ್ನು ಬಿಡಿಸಿ ನೋಡಬೇಕು ಅಷ್ಟೆ. ಮೊದಲನೆಯ ಸ್ತರವು ಗುಲ್ ಮೊಹರ್ ಹೂ ಗಿಡದ ವರ್ಣನೆ ಋತುಗಳ ಹಿನ್ನೆಲೆಯಲ್ಲಿ ರೂಪುಗೊಂಡಿದ್ದರೆ ಎರಡನೆಯ ಸ್ತರವು ಮೂಡಣ-ಪಡುವಣ ಸಂಸ್ಕೃತಿಗಳ ಸಂಘರ್ಷದ ನೆಲೆಯನ್ನು ಕುರಿತಿದೆ. ಮೂರನೆಯದು ಚರಿತ್ರೆ ಮತ್ತು ವಾಸ್ತವದ ನಿಲುವುಗಳನ್ನು ಸ್ಪರ್ಶಿಸಲು ನೋಡುತ್ತದೆ.

ಮೊದಲನೆಯ ಸ್ತರವನ್ನು ಕುರಿತು ಈಗ ವಿವರಿಸಿಕೊಳ್ಳೋಣ: ಗುಲ್‌ಮೊಹರ್ ಬೇಸಗೆಯ ಹೊತ್ತಿಗೆ ಬರಡಾಗಿರುತ್ತದೆ. ಆ ಗಿಡದ ಮೊಳದುದ್ದದ ಕಾಯನ್ನು ಹುಡುಗರು ಆಟದ ಕತ್ತಿಯಾಗಿ ಉಪಯೋಗಿಸುತ್ತಾರೆ. ಮೊದಲೆ ಬರಡಾದ ಗಿಡ. ಇನ್ನು ಕಾಯಿಗಳನ್ನು ಕಿತ್ತ ಮೇಲೆ ಕೊಂಬೆ ರೆಂಬೆಗಳು ಉಳಿದು ಅಸ್ಥಿಪಂಜರದ ಹಠಯೋಗಿಯಂತೆ ಅದು ಕಾಣುತ್ತದೆ. ಒಂದು ಬೇಸಗೆಯ ಬೆಳಿಗ್ಗೆ ಆ ಗಿಡದ ಮೈತುಂಬ ಕೆಂಪನೆ ಮುಗುಳು ಕಾಣಿಸಿಕೊಳ್ಳುತ್ತದೆ. ಸಾವಿರಾರು ಹೂಗುಚ್ಛಗಳು ಬೆಳಗುತ್ತವೆ. ಮೂಡು-ಮುಳುಗು ಸೂರ್ಯನ ಎದುರು ಇದು ಸೆಣಸುತ್ತದೆ. ಬೇಸಗೆ ಇಳಿದು ಮುಂಗಾರು ಬಂದಾಗ ಮಳೆಹನಿ ಬಿದ್ದು ಬರಡು ಗಿಡದಲ್ಲಿ ಚಿಗುರಿದೆಲೆಗಳು ಕಾಣಿಸಿಕೊಳ್ಳುತ್ತವೆ. ಆಗ ಗುಲ್ಮೊಹರ್ ತನಿಗೊಂಡ ಹಸಿರು ಚಾಮರವೇ. ಅದು ಹಸಿರು ಗಿಡದ ಶೋಭೆಯನ್ನು ಹೆಚ್ಚಿಸುತ್ತದೆ. ಆದರೆ, ಋತುಮಾನ ಕಳೆದಂತೆ ಹಸಿರು ಕಳೆದು ಬರಡು ಗಿಡವಾಗುವುದು ಇದ್ದೇ ಇದೆ.

ಇನ್ನು ಕವಿತೆಯ ಎರಡನೆಯ ಸ್ತರಕ್ಕೆ ಹೋಗೋಣ. ಇಲ್ಲಿ ಕವಿತೆ ಎರಡು ಸಂಸ್ಕೃತಿಗಳ ಸಂಘರ್ಷದ ಫಲವನ್ನು ಅದಕ್ಕೂ ಮೊದಲಿನ ಕ್ರಿಯೆಗಳನ್ನು ಹೇಳುತ್ತಿದೆ. ಪೂರ್ವವು ಪಶ್ಚಿಮವನ್ನು ನೋಡಿದ್ದು ಹೇಗೆ? ಅಥವಾ ಪಶ್ಚಿಮವು ಹರಡಿದ ಸಂಸ್ಕೃತಿ ಜಾಲದಲ್ಲಿ ಬೀಳದ ಹಾಗೆ ರಕ್ಷಿಸಿಕೊಂಡ ತಾತ್ವಿಕ ಉಪಾಯಗಳು ಯಾವುವು ? ಎಂಬ ಪ್ರಶ್ನೆ ಕವಿತೆಯೊಳಗೆ ಮುಖ್ಯ ಧ್ವನಿಯಾಗಿದೆ.

ಅದಕ್ಕಾಗಿಯೇ ಕವಿ ಮೊದಲು "ಗಿಡ ಬರಡಾಗಿ ಉಳಿದು, ಅದರ ಕಾಯನ್ನು ಹುಡುಗರಾಟದ ಕತ್ತಿ"ಯಾಗಿ ಬಳಸಿಕೊಂಡ ನೆಲೆಯನ್ನು ಹೇಳುತ್ತಿದ್ದಾನೆ. ಪೂರ್ವದ ಸಂಸ್ಕೃತಿಯು ಪಶ್ಚಿಮ ಸಂಸ್ಕೃತಿಯ ತೀವ್ರ ಘರ್ಷಣೆಯಲ್ಲಿ ಬರಡಾಗಿ ಉಳಿದದ್ದು ಮೊದಲು ಸತ್ಯವೇಸೋ ಹೌದು. ಆದರೆ "ಬರಡುಗೊಂಡ ಗಿಡದಲ್ಲಿ ಕೊಂಬೆಗಳು ಮುರಿಯದೆ ಜಡೆಗಟ್ಟಿ ಮಿಸುಕಾಡಿದ್ದ ಹಠಯೋಗಿ"ಯ ಹಾಗೆ ನೆಲೆನಿಂತದ್ದೂ ಸುಳ್ಳಲ್ಲ. ಆದರೆ, ಮೇಲಿನಿಂದ ತುಯ್ದ ಈ ಬಗೆಯ ಇಕ್ಕಟ್ಟುಗಳನ್ನು ಎದುರಿಸಲು ಪೂರ್ವಸಂಸ್ಕೃತಿಯು ಹುಡುಕಿಕೊಂಡ ಅನೇಕ ಉಪಾಯಗಳಲ್ಲಿ 'ಅರಿವಿನಾಸ್ಫೋಟ' ದ ಹಾದಿಯೂ ಒಂದು. ರೂಪಕದ ಮಾತಿನಲ್ಲಿ ಕವಿ ಇದನ್ನು 'ತಲೆತುಂಬ ಕೆಚ್ಚನೆ ಮುಗುಳು'ಎಂದು ವಿವರಿಸಿದ್ದಾರೆ. ಈ ನೆಲದಲ್ಲಿ ಅನೇಕ ತಾತ್ವಿಕವಾದ ಉಪಾಯಗಳು ಇದ್ದುವು. ಅವುಗಳ ಫಲವಾಗಿ ಕ್ರಿಯೆ -ಪ್ರತಿಕ್ರಿಯೆಗಳು ನಡೆದುವು; ಇದು ವೈಶಾಖದ ಹಾಗೆ, ಈ ಬಗೆಯ ಕ್ರಿಯೆ-ಪ್ರತಿಕ್ರಿಯೆಗಳು ಮುಂದೆ ಮುಂಗಾರು ಮಳೆಯ ಹಾಗೆ ಸಮಾಧಾನವನ್ನೇ ತಂದಿತು. ಸಿಮೆಂಟು -ಡಾಂಬರು ಪಶ್ಚಿಮದ್ದಾದರೂ ನಡುವೆ ಇರುವ ಮಣ್ಣು ಇಲ್ಲಿಯದು ತಾನೆ? ತಾತ್ವಿಕವಾಗಿ ಹೇಳುವುದಾದರೆ : ನಾವೀಗ ಸಿಮೆಂಟು-ಡಾಂಬರು ಬಿಡಲಾರೆವು . ಅತ್ತ ಮಣ್ಣನ್ನು ಕಳಚಿಕೊಳ್ಳಲಾರೆವು. ಅವೆರಡನ್ನು ಒಕ್ಕೈಸಿಕೊಳ್ಳಬೇಕಿದೆ. ಏಕೆಂದರೆ, ನಿತ್ಯ ಉಸಿರಾಟಕ್ಕೆ ಹಚ್ಚ ಹಸಿರು ಅಗತ್ಯ. ಈ ಹಚ್ಚಹಸುರು ಮಣ್ಣಿನಿಂದಲೇ. ಅದೇ ಸಾಧನೆ, ಕೊನೆ, ಹೀಗೆಂದ ಮಾತ್ರಕ್ಕೆ ಸಂಸ್ಕೃತಿಯ ಪ್ರತಿರೋಧಗಳನ್ನು ತಳ್ಳಿಹಾಕಲಾರೆವು. ಆ ಬಗೆಯ ವಿವರಣೆಯನ್ನು ಎರಡನೇ ಭಾಗದ 'ಸಾನೆಟ್ ಪರಿಶೀಲಿಸುತ್ತದೆ.

ಈಗ ಕವಿತೆಯ ಮೂರನೆಯ ಸ್ತರದತ್ತ ಗಮನಹರಿಸೋಣ. ಕವಿತೆಯು ಚರಿತ್ರೆ ಮತ್ತು ವಾಸ್ತವದ ನೆಲೆಯನ್ನು ಶೋಧಿಸುತ್ತದೆ. ಚರಿತ್ರೆ ಕೇವಲ ಭೂತವಲ್ಲ. ಅದು ವರ್ತಮಾನ, ಭವಿಷ್ಯ ಕೂಡಾ. ಈಗ ಚರಿತ್ರೆಯನ್ನು ಕೇವಲ ನಿನ್ನೆಯದೆಂದು ಮಾತ್ರ ತಿಳಿಯಲಾಗುತ್ತಿದೆ. ಆದರೆ, ಇವತ್ತು ಎಂಬುದು ಒಂದು ಕ್ಷಣಕ್ಕೆ ನಿನ್ನೆಯ ಬೆಳಕಿಗೆ ಸರಿದು ಹೋಗುತ್ತದೆ. ಅದೇ ಹೊತ್ತಿಗೆ ನಾಳೆಯೂ ಇಂದಿನದೆಯೂ ಆಗುತ್ತದೆ. ಕವಿತೆಯು ಈ ಮೂರು ಕಾಲಗಳ ಸ್ವರೂಪವನ್ನು 'ಚಕ್ರೀಯ ಗತಿ' ಯ ನೆಲೆಯಲ್ಲಿ ಹುಡುಕಲು ತೊಡಗುತ್ತದೆ. ಕವಿತೆಯು ಭೂತಕಾಲದ ನೆಲೆಗಳನ್ನು ಬಳಸಿಕೊಂಡ ಚರಿತ್ರೆಯನ್ನು ವ್ಯಾಖ್ಯಾನಿಸುತ್ತದೆ. ಅದೇ ಹೊತ್ತಿಗೆ ವರ್ತಮಾನಕ್ಕೂ ಮುನ್ನಡೆಯುತ್ತದೆ. ವಾಸ್ತವ ಎಂಬುದು ವರ್ತಮಾನ ತಾನೆ? "ವೈಶಾಖದೊಂದು ಉಷಃಕಾಲದಲ್ಲಿ ಸೃಷ್ಟಿಸಿ ಅರಿವಿನಾಸ್ಫೋಟ' ಎಂದು ಕಳೆದ ಕಾಲವನ್ನು ಹೇಳುತ್ತಲೇ "ತಲೆತುಂಬ ಕೆಚ್ಚನೆ ಮುಗುಳು" ಎಂದು ವರ್ತಮಾನವನ್ನು ಜತೆಗೆ ತರುತ್ತಾರೆ. ಬೇಸಗೆ ಮತ್ತು ಮಳೆಗಾಲಗಳು ಕವಿತೆಯ ಮಟ್ಟಿಗಾದರೂ ಕಾಲದ ಎರಡು ಘಟಕಗಳಷ್ಟೇ. ಕವಿತೆಯು ಬೇಸಗೆಯನ್ನು ಹೇಳುತ್ತಲೇ ಮಳೆಗಾಲದ ಕಡೆಗೆ ತಲುಪುತ್ತದೆ. ಕೆಂಪು ಹೂವು ಬೇಸಗೆಯಲ್ಲಿ ಸಾವಿರಾರು ಗುಚ್ಛಗಳನ್ನು ಗಿಡದ ತುಂಬ ಹೊದ್ದುಕೊಂಡಿರುತ್ತದೆ. ಮಳೆಗಾಲ ಬಂದೊಡನೆ ಕೆಂಪು ಹೂವು ಮರೆಯಾಗಿ ಹಸುರು ದಟ್ಟೈಸುತ್ತದೆ. ಇಲ್ಲಿ ಕೆಂಪು ಮತ್ತು ಹಸಿರು ಕೂಡ ಚರಿತ್ರೆಯ ಎರಡು ಗತಿಗಳನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಎಷ್ಟಿದ್ದರೂ ಹಸಿರು

ವಾಸ್ತವವೇ. ಹಾಗೆಂದ ಮಾತ್ರಕ್ಕೆ ಕೆಂಪನ್ನು ಮರೆಯಲಾಗದು. ಕವಿತೆಯಲ್ಲಿ ಕೆಂಪು ಕೆಚ್ಚನೆ ಮುಗುಳು, ಅಚ್ಚ ಕೆಂಪು ಎಂಬಂತಹ ಪದಗಳು ಪದೇ ಪದೇ ಬಂದಿವೆ. ಇವೆಲ್ಲ ಹಲವು ಬಗೆಯ ಅರ್ಥರೂಪಗಳನ್ನು ಹೊತ್ತಿರುವಂತಿವೆ. ಇದರಂತೆ ಹಸಿರು ಚಾಮರ, ಹಚ್ಚ ಹಸಿರು, ಚಿಗುರಿದೆಲೆ ಎಂಬ ಅರ್ಥರೂಪಗಳೂ ಕೂಡ ವಾಸ್ತವದ ಭವಿಷ್ಯತ್ತಿನ ಸಂಭ್ರಮದ ಸ್ಥಿತಿಯನ್ನು ಸಂಕೇತಿಸುತ್ತವೆ. ಈ ಕವಿತೆಯ ಎರಡನೇ ಭಾಗದ 'ಸಾನೆಟ್', ಈ ಸಂಭ್ರಮ ಸ್ಥಿತಿಯ ಚರಿತ್ರೆಯ ಪುಟಗಳನ್ನು ಮಾರ್ಮಿಕವಾಗಿ ಹೇಳುತ್ತದೆ. ಕೊನೆಗೂ ಹೇಳಬಹುದಾದ ಮಾತೆಂದರೆ : ಈ ಬಗೆಯ ವಸ್ತುರೂಪಗಳನ್ನು ಇಷ್ಟು ಸಂಕೀರ್ಣ ನೆಲೆಯಲ್ಲಿ ವ್ಯಂಜಿಸುವ ಸಾನೆಟ್‌ಗಳು ಕನ್ನಡ ಕವಿತೆಯಲ್ಲಿ ಸಿಗುವುದು ಕಷ್ಟ. ಈ ದೃಷ್ಟಿಯಿಂದಲೂ ಈ ಕವಿತೆ ಮುಖ್ಯವೆಂದು ಅನಿಸುತ್ತದೆ.

ಮಲ್ಲೇಪುರಂ ಜಿ. ವೆಂಕಟೇಶ್.

# ೭೪. ಅರುವತ್ತರಾಚೆ

೧

ಅರುವತ್ತರಾಚೆ ನಡೆದಂತೆ ಎಡವದ ಹಾಗೆ
ನಿದಾನ ನೆನಪಾಗುವರು: ನಮ್ಮ ಹಾಗೇ ಇರುವ
ಎದುರಿಗೇ ಬರುವ ನಿಮ್ಮಂಥವರು. ಸೊರಗಿರುವ
ಮುಖದಲ್ಲು ಹಗುರಾಗಿ ತೇಲಿಬಿಟ್ಟಿರುವ ನಗೆ,
ದುಡಿಮೆಯ ಹಡಗದಿಂದಿಳಿದು ಬಂದರದೆಡೆಗೆ
ಮರಳ ದಂಡೆಯಲಿ ಹೆಜ್ಜೆ ಹಾಕುತ್ತ, ಹೊರಳಿ
ದೂರದ ತೆರೆಗಳಲ್ಲಿ ದೃಷ್ಟಿ ಹಾಯಿಸಿ, ಮರಳಿ
ಗೂಡಿಗೆ, ಕಿವಿ ತೆರೆಯುವರು ತಮ್ಮದೇ ಹಾಡಿಗೆ.
ಒಳದಾರಿಯಿಂದ ಹೊರಗೆ ಅಡ್ಡರಸ್ತೆಗೆ ನಿಂತು
ವರ್ತುಲಗಳಲಿ ತಿರುಗಿ, ಸಭೆ ಸಮಾರಂಭಕ್ಕೆ
ಶೋಭೆ: ವಿಡುವಿಲ್ಲದೋಡಾಡಿ ದಣಿಯದ ರೆಕ್ಕೆ -
ಮನೆ ಹಿಡಿದು ಕೂಡುವುದೆ ? ಮೌನದಲಿ ಏನಾದರು
ಒಂದು ಸೃಷ್ಟಿಸಬೇಕು ನೆಲ ಅಗೆದು ಬೀಜ ಹಾಕಿ,
ಮಾತುಗಳ ಬಿತ್ತಿ ಬೆಳೆಸಿದ ಕವಿತೆ ಮೂಕ ಸಾಕ್ಷಿ.

೨

ಸಂಜೆಯ ವಿಹಾರಕ್ಕೆ ಜೀರ್ಣವಾಗಲು ಬಹುದು
ಆಹಾರದೊಡನೆ ಮಿಕ್ಕ ವಿಚಾರ, ಏಕಾಕಿ
ಛತ್ರಿ ಬಿಚ್ಚಿದರೆ ಆಗ ಅಂತರ್-ಬಹಿರ್‌ಮುಖಿ.
ಏಕಕಾಲಕ್ಕೆ, ಎದುರು ವಾಹನದ ಹೆಡ್‌ಲೈಟು;
ಬದಿಗೆ ಸರಿದರೂ ಒಂದು ಕ್ಷಣ ಕಣ್ಣು ಕತ್ತಲೆ,
ಮೊದಲೇ ಮಂಕು ಕವಿದಿರುವ ಬೀದಿ ದೀಪಕ್ಕೆ

ಜೇಡಬಲೆ; ಅಡ್ಡಡ್ಡ ನೆರಳು ದಾಟುವದಕ್ಕೆ
ಉದ್ದಕ್ಕು ಉರುಳಿಸಿದಂತೆ ಗಾಲಿ -ಮೈಮೇಲೆ,
ಇವುಗಳ ಮಧ್ಯೆ ಆಕಸ್ಮಾತ್ತಾಗಿ ಭೆಟ್ಟಿಯಾಗು-
ತ್ತಾರೆ ನಿಜಕು ಯೋಗಕ್ಷೇಮದಾಕಾಂಕ್ಷಿಗಳು.
ಬೆಳಗಿನ ಪರಿಶುದ್ಧ ಹವೆಯಂತೆ ಒಳಮನಸು
ತೆರೆದು, ಹೊಂಬಿಸಿಲ ಪರಿಮಳ ಸೂಸಿ, ಸಂತುಷ್ಟಿ
ಯಿಂದ ಮರೆಯಾಗುವರು, ಕಾಯಬೇಕೆನಿಸುವದು
ಮತ್ತೆ ಕತ್ತಲೆಯಲ್ಲು ನೆನಪಿನ ದೀಪ ಹಿಡಿದು.

'ಅರುವತ್ತರಾಚೆ' - ಇದೊಂದು ಕವಿ ಕಣವಿಯವರ ಜೋಡಿ ಸಾನೆಟ್. ಮೊದಲ ಬಾರಿಗೆ 'ಶಿಶಿರದಲ್ಲಿ ಬಂದ ಸ್ನೇಹಿತ' (೧೯೯೪) ಸಂಗ್ರಹದಲ್ಲಿ ಪ್ರಕಟವಾಗಿ ನಂತರ 'ಕಣವಿ ಸಮಗ್ರ ಕಾವ್ಯ' (೨೦೦೩)ದಲ್ಲಿ ಸಮಾವೇಶಗೊಂಡಿದೆ.

ಮೊದಲು ಕಾವ್ಯವಸ್ತುವಿನ ಬಗ್ಗೆ ನಾಲ್ಕು ಮಾತುಗಳು. ಕವಿ-ನಿರೂಪಕ ಅರುವತ್ತರಾಚೆ ದಾಟುವ ಸಮಯ, ಸಂದರ್ಭ ಹಾಗೂ ಹೀಗೂ ಎಡಬಲಗಳನ್ನು ಕಾಯ್ದುಕೊಂಡು, ತೂಕ ತಪ್ಪದೆ ಅವರೀಗ ಸಂಜೆಯ ವಿಹಾರದಲ್ಲಿದ್ದಾರೆ. ಅವರಿಗೆ ನಿಧಾನವಾಗಿ ಸಮವಯಸ್ಕರಾದ (ಸಮಾನ ಮನಸ್ಕರೂ ಆಗಿರಬಹುದಾದ) ಸಂಗಾತಿಗಳ ನೆನಪಾಗುತ್ತದೆ. ಸಂಗಾತಿಗಳೆಲ್ಲ ಬಂದರಕ್ಕೆ ಬಂದು, ದುಡಿಮೆಯ ಹಡಗದಿಂದ ಇಳಿದು (ನಿವೃತ್ತಿ ಹೊಂದಿ) ಕವಿಗಳಂತೆಯೇ ಮರಳ ದಂಡೆಯಲ್ಲಿ ಹೆಜ್ಜೆ ಹಾಕುತ್ತಿರುವ ದೃಶ್ಯ ಗೋಚರವಾಗುತ್ತದೆ. ಕವಿಗಳಂತೆ ಅವರೂ ತಾವೂ ದಾಟಿಬಂದ ದೂರದ ತೆರೆಗಳಲ್ಲಿ ದೃಷ್ಟಿಹಾಯಿಸಿ ತಂತಮ್ಮ ಗೂಡುಗಳಿಗೆ ಮರಳುತ್ತಿದ್ದಾರೆ. ತಮ್ಮ ಹಾಡು-ಪಾಡಿಗೆ ಕಿವಿ ತೆರೆದುಕೊಂಡಿದ್ದಾರೆ. ಯಥೇಷ್ಟ ವಿರಾಮವಿರುವುದರಿಂದ ಅಡ್ಡರಸ್ತೆಯಲ್ಲಿ ಒಂದಿಷ್ಟು ನಿಂತು, ವರ್ತುಲಗಳಲ್ಲಿ ತಿರುಗಿ, ಸಭೆ ಸಮಾರಂಭಗಳಿಗೆ ಹೋಗಿ ಅವುಗಳಿಗೆ (ಸಂಘಟಕರೂ ಮಾಧ್ಯಮದವರೂ ಹೇಳುವಂತೆ) 'ಶೋಭೆ' ತರುತ್ತಾರೆ. ಎಲ್ಲರೂ ಏನಾದರೊಂದು ಕೆಲಸದಲ್ಲಿ ತೊಡಗಿಸಿಕೊಳ್ಳಬೇಕಲ್ಲ, ಅದಕ್ಕಾಗಿ ಈ ಎಲ್ಲ ಚಟುವಟಿಕೆಗಳು!

ಕವಿ - ನಿರೂಪಕರಿಗೂ ಈ ಅನಿವಾರ್ಯತೆ ಇದೆ. ಬಿಡುವಿಲ್ಲದೆ ಎಷ್ಟೇ ಓಡಾಡಿದರು ಅವರು ದಣಿಯದೆ ಎಡೆಬಿಡದೆ ಹಾರುತ್ತಲೇ ಇರುವ ಪಕ್ಷಿಯಂತಿದ್ದಾರೆ. ಇಂಥವರು ಮನೆಹಿಡಿದು ಕೂಡುವುದು ಸಾಧ್ಯವೆ? ಸದ್ದುಗದ್ದಲವಿಲ್ಲದೆ ಏನಾದರೊಂದು ಸೃಷ್ಟಿಸುತ್ತಲೇ ಇರುವ ಜಾಯಮಾನ ಅವರದು. ಹುಟ್ಟು ಕೃಷಿಕನೊಬ್ಬನು ಸತತವಾಗಿ ಆಗೆದು ಬೀಜಹಾಕಿ ಸದಾಕಾಲ ಕೃಷಿ ಕಾಯಕದಲ್ಲಿ ತೊಡಗಿಕೊಂಡಿರುವಂತೆ ಕವಿಯು ಮಾತುಗಳನ್ನು ಬಿತ್ತಿ ಕಾವ್ಯಸೃಷ್ಟಿಯಲ್ಲಿ ತೊಡಗಿರುತ್ತಾನೆ. ಆತ ಸೃಷ್ಟಿಸಿದ ಕವಿತೆಯೇ ಇದಕ್ಕೆ ಮೂಕಸಾಕ್ಷಿ.

ಈ ಜೋಡಿ-ಸಾನೆಟ್ಟಿನ ಉತ್ತರಾರ್ಧದಲ್ಲಿ ಅರುವತ್ತರಾಚೆಯ ಮುಸ್ಸಂಜೆಯಲ್ಲಿ ಅಸ್ಪಷ್ಟವಾಗಿ ಕಂಡುಬರುವ ವಿದ್ಯಮಾನಗಳು ನಿರೂಪಿತವಾಗಿವೆ. ಸಂಜೆಯ ವಿಹಾರದಲ್ಲಿ ಅನೇಕರು

ತೊಡಗಿಕೊಂಡಿದ್ದಾರೆ. ಆದರೆ ಇವರೆಲ್ಲ ಕವಿಗಳಲ್ಲ. ತಿಂದ ಆಹಾರ ಜೀರ್ಣವಾಗಲು ಸಂಜೆಯ ವಿಹಾರ ಮದ್ದೆಂದು ವೈದ್ಯರು ಸತತವಾಗಿ ಹೇಳುತ್ತ ಬಂದುದನ್ನು ನಂಬಿ ಬಂದವರು ಕೆಲವರು. ಇನ್ನು ಕೆಲವರಿಗೆ ಈ ವರೆಗೆ ಆ ಕೆಲಸ, ಈ ಕೆಲಸ ಎಂದು ವಿಹಾರಕ್ಕೆ ಸಮಯ ಸಿಗದೇ ಹೋಗಿ ತಿಂದ ಆಹಾರ ಜೀರ್ಣವಾಗುವುದು ಕಷ್ಟವಾಗುತ್ತಿತ್ತು. ಹಾಗೆಯೇ ಕೆಲವರಿಗೆ ಎಷ್ಟೋ ವಿಚಾರಗಳು ಅರ್ಥವಾಗದೇ ಜೀರ್ಣಿಸಿಕೊಳ್ಳುವುದು ಆಗುತ್ತಿರಲಿಲ್ಲ. ಅರುವತ್ತರಾಚೆಯ ನಿವೃತ್ತಿಯಲ್ಲೀಗ ವಿಹಾರದಿಂದಾಗಿ ಅದು ಸಾಧ್ಯವಾಗುತ್ತಿದೆ. ದಾರಿಸಾಗುವಾಗ ಕೆಲವೊಮ್ಮೆ ಒಮ್ಮಿಂದೊಮ್ಮೆಗೆ ಜೋರಾಗಿ ಗಾಳಿ ತಿರುಗಿ ಬೀಸಿದಾಗ ಅವರು ಹಿಡಿದುಕೊಂಡ ಛತ್ರಿ 'ಅಂದರ್-ಬಾಹರ್' ಆಗುವಂತೆ, ಸಂಜೆಯ ವಿಹಾರದಲ್ಲಿ ವಿಚಾರಗಳ ಒಳಮೈ ಹೊರಗಾಗುವ ಸಾಧ್ಯತೆಯೂ ಉಂಟು. ಸಂಜೆಯ ವಿಹಾರದಂತೆಯೇ ಅರುವತ್ತರಾಚೆಯ ಬದುಕು ಕೂಡ ತಲ್ಲಣಗೊಳಿಸುವ ಗುಣವುಳ್ಳದ್ದು. ದಾರಿ ನಡೆಯುವಾಗ ಎದುರು ಹಾಯುವ ಹೆಡ್‌ಲೈಟು ನಾವು ಬದಿಗೆ ಸರಿದರೂ ಕ್ಷಣಮಾತ್ರವಾದರೂ ಕಣ್ಣುಕತ್ತಲೆಯನ್ನು ಸೃಷ್ಟಿಸುವುದಂತೂ ಸುಳ್ಳಲ್ಲ. ಅರುವತ್ತರಾಚೆಯ ಸಂಜೆಯ ಮಬ್ಬು ಬೆಳಕಿನಲ್ಲಿ ಬೀದಿ ದೀಪಗಳಿಗೆ ಮೊದಲೇ ಜೇಡರಬಲೆ ಹೆಣೆದು ಕೊಂಡಿರುತ್ತದೆ. ಸಾಲದ್ದಕ್ಕೆ ಉದ್ದುದ್ದವಾಗಿ ಬೆಳೆದ ನೆರಳುಗಳ ಉದ್ದಕ್ಕು ವಿಹಾರಿಗಳ ಮೈಮೇಲೆ ಗಾಲಿಯನ್ನು ಉರುಳಿಸಿದಂಥ ಭ್ರಮೆಯನ್ನು ಸೃಷ್ಟಿಸುತ್ತವೆ; ಇವು ಅವರನ್ನು ಹೆದರಿಸಿಬಿಡುತ್ತವೆ.

ಅರುವತ್ತರಾಚೆ ಇಷ್ಟೆಲ್ಲ ತಲ್ಲಣಗಳಿದ್ದರೂ ಅವುಗಳ ಮಧ್ಯೆಯೇ ಆಕಸ್ಮಿಕವಾಗಿ ಒದಗಿಬರುವ ಶುಭಯೋಗಗಳೂ ಇವೆ. ಸಜ್ಜನ ಸಂಗಾತಿಗಳ ಭೆಟ್ಟಿ ಇವುಗಳಲ್ಲಿ ಒಂದು. 'ಎಲ್ಲ ಆರಾಮಾ' ಎಂಬ ಒಣ ಉಪಚಾರದ ಮಾತು ಹೇಳಿ ದೇಶಾವರಿ ನಗೆ ನಕ್ಕು, ಹಾಗೆಯೇ ಮುಂದೆ ಹೋಗುವವರು ಇರುವಂತೆಯೇ ನಿಜಕ್ಕೂ ನಿಮ್ಮ ಯೋಗಕ್ಷೇಮವನ್ನು ಬಯಸುವ ಜನರು ವಿಹಾರದ ವೇಳೆ ಆಕಸ್ಮಾತ್ತಾಗಿ ನಿಮಗೆ ಭೆಟ್ಟಿಯಾಗಬಹುದು. ಅಂಥವರು ಸಿಕ್ಕಾಗ, ನಿಮಗೆ ಬೆಳಗಿನ ಪರಿಶುದ್ಧ ಹವೆ ನಿಮ್ಮ ಒಳ ಮನಸ್ಸನ್ನು ತೆರೆದಂತೆ ಭಾಸವಾಗುತ್ತದೆ. ಆಗ ಹೊಂಬಿಸಿಲಿನ ಪರಿಮಳ ಸೂಸಿ ಬರುವುದು; ಅವರು ಮರೆಯಾಗುತ್ತಿರುವಂತೆ ನಿಮ್ಮಲ್ಲಿ ಸಂತುಷ್ಟಿಯ ಭಾವ ತುಂಬಿಕೊಳ್ಳುವುದು; ಈ ಸಂಜೆ ಸಾರ್ಥಕವಾಯಿತು ಎನ್ನಿಸುವುದು. ಇಂಥ ಹಿತೈಷಿಗಳಿಗಾಗಿ ಕತ್ತಲೆಯಲ್ಲಿ ನೆನಪಿನ ದೀಪಹಿಡಿದು ಎಷ್ಟು ಹೊತ್ತು ಕಾದರೂ ನಿರರ್ಥಕವಲ್ಲ ಎನ್ನಿಸುವುದು. ಅರುವತ್ತರಾಚೆಯ ಮಬ್ಬು ಸರಿದು, ಕಳವಳ ಕಳೆದು, ಮನಸ್ಸು ನಿರಾಳವಾಗುವುದು.

ಕಾವ್ಯಾಭ್ಯಾಸಿಗಳಿಗೆ ತಿಳಿದಿರುವಂತೆ ಕವಿ ಕಣವಿಯವರು ಸಾನೆಟ್ ಕಾವ್ಯಪ್ರಕಾರವನ್ನು ಇತರ ಕವಿಗಳಿಗಿಂತ ವ್ಯಾಪಕವಾಗಿಯೂ ಸತ್ವಯುತವಾಗಿಯೂ ದುಡಿಸಿಕೊಂಡವರು. ಅವರ ಸಾನೆಟ್ಟುಗಳಲ್ಲಿ ಗಹನವಾದ, ಗೂಢಾತಿಗೂಢವಾದ ಆಧ್ಯಾತ್ಮಿಕ ವಿಷಯಗಳು ಇಲ್ಲವೇ ಇಲ್ಲ ಎಂಬಷ್ಟು ವಿರಳ. ಅವರು ವರ್ಣಿಸುವ ಜಗತ್ತಿನಲ್ಲಿ ಸಾಧು-ಸಜ್ಜನರು, ದೀರ್ಘಕಾಲದ ಸಂಗಾತಿಗಳು, ಲೋಕೋಪಕಾರಿ ಸಾರ್ವಜನಿಕರು, ಕವಿಕಲಾವಿದರು ದಂಡಿಯಾಗಿ ಸಿಗುತ್ತಾರೆ. ಹಾಗೆಯೇ

ಹಲ್ಲಿಗಳಂತೆ ಗೋಡೆಯ ಮೇಲ್ ಮೈಗೆ ಅವುಚಿಕೊಂಡು, ಹೊಟ್ಟೆಯನ್ನೇ ಕಾಲು ಮಾಡಿಕೊಂಡು, ಜೋತಾಡುತ್ತ ಸರ್ಕಸ್ ಮಾಡುವ ಹಲ್ಲಿ-ಮನುಷ್ಯರು ಇದ್ದಾರೆ. ಸುಂದರ ತಾಣಗಳು, ಮನಸೆಳೆವ ಗ್ರಂಥಗಳು, ಕಣ್ ಸೆಳೆವ ಕಲಾಕೃತಿಗಳು - ಹೀಗೆ ಅವರ ಚಿತ್ರಶಾಲೆಯಲ್ಲಿ ಲೆಕ್ಕವಿಲ್ಲದಷ್ಟು ಆಕರ್ಷಣೆಗಳಿವೆ. ಅವು ಸೃಷ್ಟಿಸುವ ಸಂಭ್ರಮ ಅಪೂರ್ವವಾದುದು. ಆದರೆ ಇಂಥ ಸಂಭ್ರಮ ಭ್ರಮೆಯನ್ನು ಹುಟ್ಟಿಸುವಂಥದ್ದಲ್ಲ. ಆಧ್ಯಾತ್ಮಿಕದ, ಅದ್ಭುತದ ಪ್ರದರ್ಶನವಿಲ್ಲ.

ಈ ಕಾವ್ಯ ಧೋರಣೆಗೆ ಅವರ ಕಾವ್ಯಶೈಲಿ ಅನುಗುಣವಾಗಿದೆ. ಬೇರೆಡೆ ಕಾಣುವಂತೆಯೇ ಈ ಕವಿತೆಯಲ್ಲೂ ಸರಳತೆ, ತಿಳುಮೈ ನಡೆತ, ನಿಖರತೆ ಹಾಗೂ ಲಯಬದ್ಧ ಓಟ ಕಂಡುಬರುತ್ತದೆ. ಇಂಥ ನಿಖರತೆ, ಇಂಥ ಓಟ, ಇಂಥ ಸರಳತೆಗಳನ್ನು ನಾವು ಕಲಾವಿದ ಕೆ. ಕೆ. ಹೆಬ್ಬಾರರ ರೇಖಾಚಿತ್ರಗಳಲ್ಲಿ ಮಾತ್ರ ಕಾಣಬಹುದೇನೋ! ಇನ್ನೊಂದು ವೈಶಿಷ್ಟ್ಯವನ್ನು ಇಲ್ಲಿ ಗುರುತಿಸಬಹುದು. ಸಾನೆಟ್ಟಿನ ಸಾಲುಗಳಲ್ಲಿರುವ ಪದಗಳನ್ನು ಅಲ್ಲಲ್ಲೇ ಸ್ವಲ್ಪ ಹಿಂದು ಮುಂದು ಮಾಡಿದರೆ ಇಲ್ಲಿಯ ಕಾವ್ಯದ ಆಶಯ ಯಾವ ಅಸ್ಪಷ್ಟನೆಯೂ ಇಲ್ಲದೆ ಸರಳಾತಿಸರಳ ಗದ್ಯದಲ್ಲಿ ಅನಾವರಣಗೊಳ್ಳುತ್ತದೆ. ಪದ್ಯದ ಸಾಲುಗಳು ಗದ್ಯದ ಸಾಲುಗಳಾಗುವ ಮೋಡಿಯನ್ನು ನೋಡಬಹುದು. ಹಾಗೆಯೇ ಕೆಲವು ಪದಪ್ರಯೋಗದ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಉದಾಹರಣೆಗೆ, ಹಾರು ಹಕ್ಕಿಯ ಬದಲಿಗೆ ಹಕ್ಕಿಯ ಒಂದು ವಿಶಿಷ್ಟ ಅಂಗವಾದ 'ರೆಕ್ಕೆ' ಪದವನ್ನು ಕವಿ ಬಳಸಿದ್ದಾರೆ, ಹಾಗೆಯೇ 'ಶೋಭೆ' ಎಂಬ ಪದ ಇಲ್ಲಿ ಶೋಭೆ ತರುವ ಪ್ರಕ್ರಿಯೆಯನ್ನು ಪ್ರತಿನಿಧಿಸುವ ಪದವಾಗಿದೆ. ವಾಹನದ 'ಹೆಡ್‌ಲೈಟ್' ಇಲ್ಲಿ ಕನ್ನಡದ ಪದವೆಂಬಂತೆ ಕವಿತೆಯ ಸಾಲಿನಲ್ಲಿ ನಿರಾಯಾಸ ಬೆರೆತುಹೋಗಿದೆ.

ಸಾನೆಟ್ಟಿನ ಶೀರ್ಷಿಕೆ 'ಅರುವತ್ತರಾಚೆ' ಅರುವತ್ತು ಸಂವತ್ಸರಗಳ ಒಂದು ನಿರ್ದಿಷ್ಟ ಕಾಲಮಾನವನ್ನು ಸೂಚಿಸುತ್ತದೆ. ಇಲ್ಲಿಯ 'ಕಾಲ' ಆಧ್ಯಾತ್ಮಿಕದ ಅಥವಾ ಅದ್ಭುತದ ಯಾವ ಹೊರೆಯನ್ನು ಹೊತ್ತಿಲ್ಲ. ಕುವೆಂಪು ಅಥವಾ ಬೇಂದ್ರೆಯವರು ಬಳಸಿದಂಥ ಮಹೋಪಮೆಯನ್ನು ಅದು ಹೊತ್ತಿಲ್ಲ. ಇಲ್ಲಿ ಒಂದು ಹಕ್ಕಿಯ ಪ್ರಸ್ತಾಪವಿದ್ದರೂ (ಬಿಡುವಿಲ್ಲದೋಡಾಡಿ ದಣಿಯದ 'ರೆಕ್ಕೆ') ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ ?' ಕವಿತೆಯಲ್ಲಿಯ ಯುಗಯುಗಗಳನ್ನು ದಾಟಿ ಹಾರುವ ಹಕ್ಕಿಯಲ್ಲ. ಇದೊಂದು ನಮಗೆಲ್ಲರಿಗೂ ಪರಿಚಿತವಾದ ಸಣ್ಣ ಹಕ್ಕಿ. ಇಲ್ಲಿಯ ಕಾಲದ ಹಕ್ಕಿಗೆ ಯುಗಯುಗಗಳ ವಿಸ್ತಾರವಿಲ್ಲ. 'ಕಾಲನಿಲ್ಲುವುದಿಲ್ಲ' ಎಂಬಂಥ ಸೋಜಿಗವಿಲ್ಲ. ಗಡಿಯಾರದಂಗಡಿಯ ಮುಂದಿನ ಚೋದ್ಯವೂ ಇಲ್ಲ. ಇಲ್ಲಿಯ ಅರವತ್ತು ಎಂದರೆ ಪ್ರಭವ - ವಿಭವಗಳಿಂದ ಹಿಡಿದು ವ್ಯಯದ ವರೆಗಿನ ಅರವತ್ತು ವರ್ಷಗಳು ಮಾತ್ರ. ಅದೀಗ ನೌಕರರ ಖಚಿತ ನಿವೃತ್ತಿ ವಯಸ್ಸು : ನಾಗರೀಕನೊಬ್ಬನು 'ಹಿರಿಯ ನಾಗರೀಕ'ನಾಗುವ ವಯಸ್ಸು. ಇಲ್ಲಿ ಅರುವತ್ತರಾಚೆ ದಾಟಿದವರು ಹೆಚ್ಚಾಗಿ ವಿಶ್ರಾಂತಿ ಬಯಸುವವರು. ಕವಿಯಂತೆ ಅಲ್ಲೊಬ್ಬರು ಇಲ್ಲೊಬ್ಬರು ಮಾತ್ರ 'ಏನಾದರೂ ಒಂದು ಸೃಷ್ಟಿಸಬೇಕು' ಎಂಬ ತೀವ್ರ ತುಡಿತವನ್ನು ಹೊಂದಿದವರು. ಒಟ್ಟಿನಲ್ಲಿ ಕಣವಿಯವರ ಪ್ರತಿಮೆಗಳು ಮಿಂಚು ಹುಳಗಳಂತೆ ಸಣ್ಣಗೆ ಮಿಂಚುವ ಗುಣವುಳ್ಳವುಗಳು. ಅವು ಸಿಡಿಲನ್ನು ಹಿಂಬಾಲಿಸಿ ಬರುವ ಮಿಂಚುಗಳಂತೆ ಭಯಭೀತಿಯನ್ನು ಹುಟ್ಟಿಸುವುದಿಲ್ಲ.

ಈ ಸಾನೆಟ್ ಜೋಡಿಯಲ್ಲಿ ನಮ್ಮನ್ನು ತುಂಬ ಪ್ರಭಾವಿಸುವ - ಹಾಗೂ ಯಾರನ್ನೂ ಆಕರ್ಷಿಸಬಹುದಾದ - ಮೂರು ಸಾಲುಗಳೆಂದರೆ -

ಬಿಡುವಿಲ್ಲದೋಡಾಡಿ ದಣಿಯುದ ರೆಕ್ಕೆ
ಮನೆಹಿಡಿದು ಕೂಡುವುದೆ ? ಮೌನದಲಿ ಏನಾದರು
ಒಂದು ಸೃಷ್ಟಿಸಬೇಕು ನೆಲ ಅಗೆದು ಬೀಜ ಹಾಕಿ.

ಇದು ಕವಿಯ ವ್ಯಕ್ತಿತ್ವದ ವೈಶಿಷ್ಟ್ಯವಷ್ಟೇ ಅಲ್ಲ. ನಮ್ಮಲ್ಲಿ ಕೆಲಕೆಲವರ ವ್ಯಕ್ತಿತ್ವದ ಗುಣಲಕ್ಷಣವೂ ಹೌದು, ಬಹುತೇಕ ಸೃಷ್ಟಿಗಳು ಇಂಥ ವೈಶಿಷ್ಟ್ಯಗಳಿಂದಲೇ ಹುಟ್ಟುತ್ತವೆ ಎಂದರೆ ಉತ್ಪ್ರೇಕ್ಷೆಯಾಗದು. ಈ ಕವಿತೆಯೂ ಅಂಥ ಒಂದು ಸೃಷ್ಟಿ.

ಹಾ.ವೆಂ. ನಾಗೇಶ್

# ೭೫. ಸ್ವಂತ ಮನೆ

ಸಿಮೆಂಟು ಬೇಡ, ಇಟ್ಟಿಗೆ ಬೇಡ:
ನಾವೇ ಮನೆಯನು ಕಟ್ಟುವೆವು;
ಋಣ ಋಣ ರೊಕ್ಕವು ಸಿಕ್ಕರು ಬೇಡ
ಮಣ್ಣೂ ಉಸುಕೂ ಒಟ್ಟುವೆವು.

ಕಟ್ಟಿಗೆ ಬೇಡ, ಕಬ್ಬಿಣ ಬೇಡ
ಆಳುಗಳೊಬ್ಬರು ಬೇಡಣ್ಣ.
ಕಣ್ಣು ಮುಚ್ಚಿ ಕಣ್ ತೆರೆದರೆ ಸಾಕು
ತಯಾರಾಗುವುದು ನೋಡಣ್ಣ.

ಬಡಿಗರು ಕಮ್ಮಾರುಪ್ಪಾರೇತಕೆ ?
ಬಡ ಬಡ ನಾವೇ ಒಟ್ಟುವೆವು ;
ಎಲ್ಲಿ ಹುಡುಕಿದರು ಸಿಗಲಾರದ ಮನೆ
ಒಂದೇ ಚಣದಲಿ ಕಟ್ಟುವೆವು.

ಕಪಾಟು, ಕಿಡಕಿಯು ಕಿಂಡಿಗಳಿಲ್ಲ
ಸುಣ್ಣ ಬಣ್ಣಗಳ ಬಳಿದಿಲ್ಲ;
ಕಳ್ಳರು-ಗಿಳ್ಳರು ನುಗ್ಗಲು ಸಾಧ್ಯವೆ ?
ಯಾರೂ ಚಿಂತಿಸಬೇಕಿಲ್ಲ.

ಚಿಲಕವು, ಕೊಂಡಿಯು, ಕೀಲಿಗಳೇತಕೆ ?
ಅಗಳಿಯು ರಗಳೆಯ ಹಚ್ಚಿಲ್ಲ;

**ಖರ್ಚಿನ ಮಾತೇ ಬಾರದು ಇಲ್ಲಿ**
**ನಗರಸಭೆಯು ಕರ ಹೇರಿಲ್ಲ.**

**ಸಾಲದ ಚಿಂತೆಯು, ಆಳಿನ ಗೋಳು-**
**ಒಂದೇ ? ಎರಡೆ? ಎಲ್ಲಿ ಕೊನೆ ?**
**ಅಪ್ಪಟ ಮಳಲಲಿ ಕಟ್ಟಿದೆವಿದನು**
**ಗುಬ್ಬಿಯ ಗೂಡಿದು, ಸ್ವಂತ ಮನೆ.**

ಕಣವಿಯವರ ಮಕ್ಕಳ ಕವಿತಾ ಸಂಕಲನ 'ಹಕ್ಕಿ ಪುಚ್ಚ' (೧೯೮೫)ದಲ್ಲಿ ಮೊದಲಿಗೆ ಕಾಣಿಸಿಕೊಂಡ 'ಸ್ವಂತ ಮನೆ' ಕವಿತೆ ಏಕಕಾಲಕ್ಕೆ ಮಕ್ಕಳನ್ನೂ ಹಿರಿಯರನ್ನೂ ಕಾವ್ಯದ ವಿಸ್ಮಯಕ್ಕೆ ದೂಡುತ್ತದೆ. ಆಟವಾಡುತ್ತ ಮಕ್ಕಳು ಕಟ್ಟಿಕೊಳ್ಳುವ ಮರಳಿನ ಮನೆಯು ಸಾಲ-ಸೋಲಿನ ಹಿರಿಯರ ಮನೆಯಂತಲ್ಲ. ಗಾಳಿಗೋಪುರವೂ ಅಲ್ಲ. ಮರಳ ಮನೆ ಕ್ಷಣಮಾತ್ರವೆ ಇರಬಹುದಾದರೂ ಮಕ್ಕಳ ಮನಸ್ಸಿನಲ್ಲಿ ಅಷ್ಟೇ ಏಕೆ ದೊಡ್ಡವರ ಮನಸ್ಸಿನಲ್ಲಿ ಕೂಡ ಕಾಲಾತೀತವಾಗಿ ನಿಲ್ಲಬಲ್ಲದು. ಕಾಲಾತೀತವಾಗಿ ನೆನಪುಗಳನ್ನು ಚೆಲ್ಲಬಲ್ಲುದು. ಭಿನ್ನ-ವಿಭಿನ್ನ ಭಾವನೆಗಳನ್ನು ಪುಟ್ಟಗೂಡಿನಲ್ಲಿ ಇರಿಸಿಕೊಳ್ಳಬಲ್ಲದು.

ಚಿಂತೆಯಿಲ್ಲದೆ ಕಟ್ಟಿದ ಮನೆಯನ್ನು ನಾವು ಕಾಣುವುದು ಸಾಧ್ಯವಿಲ್ಲ. ಅಂತಹ ಮನೆ ಎಲ್ಲಾದರೂ, ಎಂದಾದರು ಇದ್ದರೆ ಅದು ಇದು ಮಾತ್ರ ಎನ್ನುವಂತೆ ಮಕ್ಕಳು ಕಟ್ಟಿಕೊಂಡಿರುವ 'ಸ್ವಂತ ಮನೆ' ಗೋಚರಿಸುತ್ತದೆ. ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು ಎಂದು ಹಿರಿಯರು ಒದ್ದಾಡುತ್ತಿರಬೇಕಾದರೆ ಬರೀ ಮರಳಲ್ಲಿ ಮಕ್ಕಳು ಅದೆಷ್ಟು ಸುಲಭವಾಗಿ, ಸರಳವಾಗಿ ಮನೆಯನ್ನು ಕಟ್ಟಿಬಿಡುತ್ತಾರೆ. ಅವರಿಗೆ ಮನೆ ಕಟ್ಟಲು ಕಲ್ಲು-ಇಟ್ಟಿಗೆ ಬೇಕಾಗಿಲ್ಲ. ಝಣ ಝಣ ರೊಕ್ಕವೂ ಕೂಡ ಅವರಿಗೆ ಬೇಡ. ಬಂಗಾರದ ಹುಡಿಯಂತೆ ಕಂಗೊಳಿಸುತ್ತಿರುವ ಮರಳು ಮಾತ್ರ ಸಾಕು ಅವರಿಗೆ :

**ಸಿಮೆಂಟು ಬೇಡ, ಇಟ್ಟಿಗೆ ಬೇಡ;**
**ನಾವೇ ಮನೆಯನು ಕಟ್ಟುವೆವು**
**ಝಣ ಝಣ ರೊಕ್ಕವು ಸಿಕ್ಕರು ಬೇಡ**

ಸ್ವಂತ ಮನೆ ಕಟ್ಟಬೇಕಾದಲ್ಲಿ ಪಾಯ ಹಾಕುವುದರಿಂದ ಹಿಡಿದು ಬಾಗಿಲು ಚೌಕಟ್ಟು ಇಡುವಾಗ, ಬಾರ್ ಬಗ್ಗಿಸುವಾಗ, ಪ್ಲಾಸ್ಟರ್ ಮಾಡುವಾಗ, ಬಣ್ಣ ಬಳಿಯುವಾಗ ಮನೆಯ ಮಾಲಿಕ ಎದುರಿಸುವಂತಹ ಹತ್ತು - ಹಲವು ತಾಪತ್ರಯಗಳು ಮಕ್ಕಳ ಮಾತುಗಳಲ್ಲಿಯೇ ಅನಾವರಣಗೊಳ್ಳುತ್ತವೆ. ನಿಶ್ಚಿಂತೆಯಿಂದ ಇರುವ ಸಲುವಾಗಿ ಕಟ್ಟಿಕೊಳ್ಳಬೇಕೆನ್ನುವ ಮನೆ ಹೇಗೆ ಚಿಂತೆಯ ಕೊಂಡಿಯಾಗುತ್ತ ಒಂದಕ್ಕೊಂದು ಕೂಡುತ್ತ ಉದ್ದ ಸರಪಳಿಯಾಗುತ್ತ ಮನುಷ್ಯನನ್ನು

ಬಂಧಿಸಿರುವ ಕ್ರಿಯೆಯಾಗಿ ರೂಪಾಂತರವಾಗುತ್ತದೆ ಎಂದು ಕವಿತೆ ಅರ್ಥಪೂರ್ಣವಾಗಿ ಹೇಳುತ್ತದೆ. ಮುಗಿಯಲಾರದ ಖರ್ಚಿನ ಬಾಬತ್ತುಗಳಿಗೆ ಮನೆ ಎಡವುತ್ತದೆ. ನಗರಸಭೆಯ ಕರಭಾರಕ್ಕೆ ಕಟ್ಟಿದ ಮನೆ ನಲುಗುತ್ತದೆ. ಹೀಗಾಗಿ ಬ್ಯಾಂಕ್ ಸಾಲ, ನಗರಸಭೆಯ ಟ್ಯಾಕ್ಸ್, ಬಂಧು-ಬಾಂಧವರಿಂದ ಪಡೆದಿರುವ ಕೈಗಡ ಮುಂತಾದ 'ಹಂಗು'ಗಳಿಗೆ ಒಳಗಾಗಿ ಕಟ್ಟಿರುವ ಮನೆ ಹೇಗೆ ' ಸ್ವಂತ ಮನೆ' ಯಾದೀತು ಎನ್ನುವ ವ್ಯಂಗ್ಯಕೂಡ ಕವಿತೆಯಲ್ಲಿ ಕಾಣಿಸಿಕೊಳ್ಳುತ್ತದೆ. ದೊಡ್ಡವರ 'ಸ್ವಂತಮನೆ' ತರುವ ಚಿಂತೆಗಿಂತ ಮಕ್ಕಳ ಮರಳಿನ ಮನೆ ತರುವ ಸಂತೃಪ್ತಿ ಮಿಗಿಲೆಂಬುದನ್ನು ಕವಿ ಸೂಕ್ಷ್ಮವಾಗಿ ಈ ಕವಿತೆಯಲ್ಲಿ ಅವಲೋಕಿಸಿದ್ದಾರೆ.

ಅಗಳಿ ಹಾಕದ, ಚಿಲಕ ಕೊಂಡಿಯಿರದ ಮನೆಗೆ ಮಕ್ಕಳು ಯಾವಾಗ ಬೇಕಾದರೂ ಬರಬಹುದು, ಯಾವಾಗ ಬೇಕಾದರೂ ಹೋಗಬಹುದು. ಅದು ಯಾವ ಮಕ್ಕಳಾದರೂ ಆಗಿರಬಹುದು. ಎಲ್ಲಿಯವರೇ ಆಗಿರಬಹುದು. ಎಲ್ಲರಿಗೂ ತಮ್ಮ 'ಸ್ವಂತ ಮನೆ'ಗೆ ಬರಲು ಮಕ್ಕಳು ಆಹ್ವಾನ ಕೊಡುತ್ತಾರೆ. ಮಕ್ಕಳ 'ಗುಬ್ಬಿಯ ಗೂಡು' ಪುಟ್ಟದಾಗಿದ್ದರೂ ಕ್ಷಣಮಾತ್ರದಲ್ಲಿ ಅದು ಬೀಳಬಹುದಾಗಿದ್ದರೂ ನಮ್ಮ ಮನಸ್ಸಿನೊಳಗೆ ಉಂಟು ಮಾಡಬಹುದಾದ ಸಂತಸ ವರ್ಣನಾತೀತವಾದದ್ದು. ಹಿರಿಯರ ಮನೆ ಕಟ್ಟಿದ ನೋವನ್ನು ಮರೆಸುವಂತಹದ್ದು.

**ಸಾಲದ ಚಿಂತೆಯು, ಆಳಿನ ಗೋಳು**
**ಒಂದೆ ? ಎರಡೆ? ಎಲ್ಲಿ ಕೊನೆ ?**
**ಅಪ್ಪಟ ಮಳಲಲಿ ಕಟ್ಟಿದೆವಿದನು**
**ಗುಬ್ಬಿಯ ಗೂಡಿದು ಸ್ವಂತ ಮನೆ**

ತಾವು ಕೂಡ ಮನೆ ಕಟ್ಟಬಲ್ಲೆವು, ತಮ್ಮದೇ ಗೂಡನ್ನೇ ಸೃಷ್ಟಿಸಿಕೊಳ್ಳಬಲ್ಲೆವು ಎನ್ನುವಂತಿದೆ. ಮಕ್ಕಳ 'ಸ್ವಂತ ಮನೆ'. ಅದು ಗುಬ್ಬಚ್ಚಿಗೂಡು ನಾಗರಿಕ ಮನುಷ್ಯನಿಗೆ ಅರ್ಥಹೀನ, ಕ್ಷುಲ್ಲಕವೆನಿಸಿದರೂ ಅದರಲ್ಲಿ ಅಡಗಿರುವ ಸತ್ಯಗಳನ್ನು ತಳ್ಳಿ ಹಾಕಲಾಗುವುದಿಲ್ಲ. ನಿರಾಡಂಬರವಾದ ಪುಟ್ಟ ಮನೆ ಇರಬೇಕೆಂದೂ ಸೂಚನೆ ಅಲ್ಲಿ ಸಿಗುತ್ತದೆ.

ಸಂತೃಪ್ತಿ ಹಾಗೂ ಸುಖ ಅಡಗಿರುವ ವೈಚಾರಿಕ ತಾಣಗಳನ್ನು 'ಸ್ವಂತ ಮನೆ' ಶೋಧಿಸಿಯೂ ಮಕ್ಕಳನ್ನು ರಂಜಿಸುವ ಒಂದು ಒಳ್ಳೆಯ ಪದ್ಯವಾಗಿ ಉಳಿಯುವುದು ಅದರ ಹೆಚ್ಚುಗಾರಿಕೆ. ಮಕ್ಕಳು ಕಟ್ಟುವ ಮನೆಯಂತೆಯೇ ಪದ್ಯವು ಕೂಡ ಸರಳವಾಗಿ ಕಟ್ಟಲ್ಪಟ್ಟಿದೆ. ಯಾವ ವೈಚಾರಿಕ ಭಾರವೂ ಕವಿತೆ ಕುಸಿಯುವಂತೆ ಮಾಡುವುದಿಲ್ಲ. ಆಳ ಪ್ರತಿಮೆ - ಉಪಮೆಗಳ ಕೀಲಿ ಕೊಂಡಿಗಳಿಲ್ಲ. ಮಕ್ಕಳು ಸುಲಭವಾಗಿ ಗ್ರಹಿಸಬಹುದಾದ ಅವರು ಅರ್ಥೈಸಿಕೊಳ್ಳಬಹುದಾದ ಸಂಗತಿಗಳ ಮೂಲಕ ಕವಿತೆ ಮೂಡಿಬಂದಿದೆ. ಮಕ್ಕಳ ಲೋಕವನ್ನು ಗ್ರಹಿಸಿ ಕಣವಿಯವರು ಮಕ್ಕಳಿಗೆ 'ಸ್ವಂತ ಮನೆ' ಕಟ್ಟಿಕೊಟ್ಟಿದ್ದಾರೆ. ಬಾಲ್ಯವನ್ನು ನೆನಪಿಟ್ಟವರು, ಆ ಸಂವೇದನೆಗಳು ಸಾಯಲಾರದಂತೆ ನೋಡಿಕೊಂಡವರು ಮಾತ್ರ ಅಂತಹ ಕವಿತೆ, ಕತೆಗಳ ಮನೆಗಳನ್ನು ಮಕ್ಕಳಿಗಾಗಿ ಕಟ್ಟಿಕೊಡಬಲ್ಲರು.

ಬಸು ಬೇವಿನ ಗಿಡದ.

# ೭೬. ನನ್ನವೇ ನಾಲ್ಕು ಶಬ್ದ

ಇಷ್ಟೊಂದು ಸದ್ದುಗದ್ದಲದಲ್ಲಿ ಒದ್ದಾಡು-
ತಿರುವಾಗ ಎಲ್ಲಡಗಿ ಮುದ್ದೆಯಾಗಿರಬಹುದು
ನನ್ನವೇ ನಾಲ್ಕು ಶಬ್ದಗಳು? ಕೋಶಗಳನೊಡೆದು
ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು
ಹೊರಟ ಸ್ಥಾಯಿ - ಸಂಚಾರಿಗಳು ? ಎಲ್ಲ ಬಗೆ
ಹೂವುಗಳ ಸಖ್ಯದಲಿ ನೋವು -ನಲಿವಿನ ಗಾಳಿ-
ಹಾವು ಹರಿದಾಡದಿಹ ಜಾಗವೆಲ್ಲಿದೆ ಹೇಳಿ.
ಬೀಸಿ ಪರಿಶುದ್ಧಗೊಳಿಸುವ ಪರಿಮಳದ ಪರಿಗೆ.

ರಸ್ತೆ ಹಿಡಿಸಲಾರದೆ ಬಿಡುವಿಲ್ಲದೋಡಾಡು-
ತಿರುವ ಕುರುಡು ಚಕ್ರದ ನಡುವೆ ಸಿಕ್ಕ ಬೆಕ್ಕಿನ
ಮರಿಯನೆತ್ತಿ ತರಹೋದ ಕವನವೆ ಜೋಪಾನ :
ಹದ್ದು ಹಾರಾಡುವಾಕಾಶದೆಡೆಗೂ ನೋಡು.

ಮೋಡ ಮಳೆಗರೆಯಲಿ, ಆಮೇಲೆ ಬರಲಿ ಸೂರ್ಯ
ಈಗ ಪದಪಂಕ್ತಿಯಲಿ ಬೀಜ ಬಿತ್ತುವ ಕಾರ್ಯ.

೧) 'ನನ್ನವೇ ನಾಲ್ಕು ಶಬ್ದ ('ಬರೆದು ತೀರದ ಬದುಕು' ಸಂಗ್ರಹ -೨೦೦೦) -ಚೆನ್ನವೀರ ಕಣವಿಯವರು ಇದುವರೆಗೆ ಬರೆದ ಇನ್ನೂರಕ್ಕಿಂತಲೂ ಹೆಚ್ಚಿನ (ಸಾನೆಟ್) ಸುನೀತಗಳಲ್ಲೊಂದು. 'ಅಮರ ತೇಜಃಪುಂಜಿ' ಎಂಬುದು ೧೯೪೪ರಲ್ಲಿ ಬಂದ ಅವರ ಮೊದಲ ಸುನೀತ.

ಇವುಗಳಲ್ಲಿ ಬಹುಸಂಖ್ಯೆಯ ವ್ಯಕ್ತಿಚಿತ್ರಗಳೆ ಇದ್ದರೂ, ಒಟ್ಟಾರೆ ಕಣವಿಯವರ ಸುನೀತಗಳು ೧) ವ್ಯಕ್ತಿ-ವ್ಯಕ್ತಿತ್ವ, ೨) ನಿಸರ್ಗ ಸ್ಪಂದನ, ೩) ಕೃತಿ - ಆಕೃತಿ, ೪)ನಿವೇದನೆ, ೫) ಜಿಜ್ಞಾಸೆ - ಹೀಗೆ ಐದು ಸ್ತರಗಳಲ್ಲಿ ವಿಂಗಡಿಸಿಕೊಳ್ಳುವ ವೈವಿಧ್ಯ ಹೊಂದಿದ್ದುದು ಅವುಗಳ ವೈಶಿಷ್ಟ್ಯ.

೨) ಕಣವಿಯವರ ಸಾನೆಟ್ಟುಗಳ ಸಂಖ್ಯಾ ವಿಪುಲತೆಯನ್ನು ನಾನಿಲ್ಲಿ ಉದ್ದೇಶಪೂರ್ವಕವಾಗಿಯೇ ಸೂಚಿಸುತ್ತಿದ್ದೇನೆ. ಯಾಕೆಂದರೆ, 'ನನ್ನವೇ ನಾಲ್ಕು ಶಬ್ದ' ಎಂಬ ಕವಿತೆಗೆ 'ಕವಿ ಸಮಯ'ದ ಹೃತ್ಪೂರ್ವಕ ಸ್ಫೂರ್ತ ಗಳಿಗೆಯ ಪ್ರೇರಣಾ ಹಾರೈಕೆ ಸಹಜ ಸಾಧ್ಯವಾಗಿದ್ದರೂ, ಕವಿಗೆ ಈಗಲೂ ಆ ತನ್ನವೇ ನಾಲ್ಕು ಶಬ್ದಗಳ ಕೊರತೆ ಕಾಡುತ್ತಿದೆ. ಹಾಗಾಗಿ ಹಳಹಳಿಯಲ್ಲೇ ಕವಿ -

**ಇಷ್ಟೊಂದು ಸದ್ದು ಗದ್ದಲದಲ್ಲಿ ಒದ್ದಾಡು-**
**ತಿರುವಾಗ ಎಲ್ಲಡಗಿ ಮುದ್ದೆಯಾಗಿರಬಹುದು**
**ನನ್ನವೇ ನಾಲ್ಕು ಶಬ್ದಗಳು ? ಕೋಶಗಳನೊಡೆದು**
**ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು**
**ಹೊರಟಿದ್ದ ಸ್ಥಾಯಿ - ಸಂಚಾರಿಗಳು ?**

ಎಂದೆನ್ನುವಂತಾಗಿದೆ.

ಶಬ್ದ ಮಾಲಿನ್ಯ, ರಕ್ಕಸ ವಾಹನಗಳ ಆರ್ಭಟ ಅದೆಷ್ಟೋ ಭಯಾನಕ - ಭಯಂಕರವಾಗಿದ್ದರೂ, ಅದರಲ್ಲೇ ರಸಕ್ಷಣದ ಪರಿಭಾವನಾ ಧ್ಯಾನಸ್ಥನಾಗಿ, ವೀರ ಏಕಾಂಗಿಯಾಗಿ ಮುನ್ನುಗ್ಗುತ್ತಿರುವಾಗ, ನಿಘಂಟುಗಳ ಹಂಗುತೊರೆದು, ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು, ಜೀವ ಭಯದಿಂದಾಗಿ ನಡುಮಧ್ಯ ಅತ್ತ-ಇತ್ತ ನೋಡುತ್ತ, ನಿಲ್ಲುತ್ತ, ಹೊರಟಿದ್ದ ನನ್ನವೇ ನಾಲ್ಕು ಶಬ್ದಗಳು ಇದ್ದಕ್ಕಿದ್ದಂತೆ ಅದೆಲ್ಲಿ ಅಡಗಿಕೊಂಡವೋ ಎಂಬ ಹತಾಶೆ ಕವಿಯನ್ನು ಆವರಿಸಿದೆ. ಮಂಕಾದ ಮನದ ಲಹರಿಯಲ್ಲಿಯೂ ಮಾಸದ ಜೀವನ ಜಿಜ್ಞಾಸೆ, ಮೊಳೆತು ಕವಿ ಹೇಳುತ್ತಾನೆ :

**....... ಎಲ್ಲ ಬಗೆ**
**ಹೂವುಗಳ ಸಖ್ಯದಲಿ ನೋವು- ನಲಿವಿನ ಗಾಳಿ**
**ಹಾವು ಹರಿದಾಡದಿಹ ಜಾಗವೆಲ್ಲಿದೆ ಹೇಳಿ -**
**ಬೀಸಿ ಪರಿಶುದ್ಧಗೊಳಿಸುವ ಪರಿಮಳದ ಪರಿಗೆ ;**

ಯಾವ ಹೂವಾದರೇನು, ಅರಳುವುದು ಬಾಡುವುದು ಅದರ ಧರ್ಮ. ಇದರರ್ಥ ಅದೂ ಕೂಡ ನೋವು ನಲಿವಿನಿಂದ ಬಾಹಿರವಾಗಿಲ್ಲ. ಮನುಷ್ಯ ಪಾಲಿನ ಸುಖ-ದುಃಖಗಳು ಹೇಗೋ ಹಾಗೆ. ಹಾವಿನ ಹರಿದಾಟಕ್ಕೆ ಇವಿಷ್ಟೆ ಜಾಗವೆಂದು ಕಲ್ಪಿಸುವಂತಿಲ್ಲವಲ್ಲ. ಅದಕ್ಕೆ ಕಾಡಾದರೇನು ನಾಡಾದರೇನು ? ಅದರ ಭಯದ ಶಂಕೆ ಎಲ್ಲೆಲ್ಲ. ಹುತ್ತ ಬಿಟ್ಟರೆ ಕೇದಿಗೆಯಷ್ಟೇ ಅದರ ತಾಣವಲ್ಲ. ಹೆಜ್ಜೆ ಹೆಜ್ಜೆಗೆ ಹೆದರಿಕೆಯೆಂದುಕೊಂಡು ಜೀವನ ವಿಮುಖಿಯಾಗುವುದು ಅದೆಂಥ ಪುರುಷಾರ್ಥ? ನೀರಿಗೆ ಇಳಿದ ಮೇಲೆ ಈಜಿ ದಡ ಕಂಡುಕೊಳ್ಳುವುದು ಅವನ ಸಂಕಲ್ಪವಾಗಬೇಕು. ನೋವು - ನಲಿವಿನ ಗಾಳಿ ಇರುವುದಾದರೂ ಏತಕ್ಕೆ ? ಬೀಸಿ ಪರಿಶುದ್ಧಗೊಳಿಸುವ ಪರಿಮಳದ ಪರಿಗೇ

ಅಲ್ಲವೇ? ಬದುಕಿನಲಿ ಎಷ್ಟೇ ನೊಂದು ಬೆಂದರೂ ಧೈರ್ಯಗೆಡಬಾರದೆಂದು ಜೀವಪರ ನಿಲುವನ್ನು ಕವಿ ಎತ್ತಿ ಹಿಡಿದಿದ್ದಾನೆ ಇಲ್ಲಿ.

೩) ಪ್ರಸ್ತುತ ಸುನೀತದ ಈ ಮೊದಲೆಂಟು ಸಾಲುಗಳ ಪೈಕಿ .... ಕೋಶಗಳನೊಡೆದು / ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು/ ಹೊರಟಿದ್ದ ಸ್ಥಾಯಿ- ಸಂಚಾರಿಗಳು ಎಂಬ ಸಾಲು ಕಣವಿಯವರು ಜಾಗತೀಕರಣದ ಹೆಮ್ಮಾರಿಗೆ ತಕ್ಕ ಉತ್ತರವನ್ನು ಧ್ವನಿಸುವಂತಿದೆ.

ಜಾಗತೀಕರಣದ ಅಪಾಯದ ಬಗ್ಗೆ ಅತಿ ಸ್ಪಷ್ಟ ದರ್ಶನವನ್ನು ಕಂಡು ಕೊಂಡಿರುವ ಕಣವಿಯವರು ದೇಶೀಯತೆ ಕುರಿತಾದ ಎಚ್ಚರವನ್ನು ಒಳಗೊಳ್ಳುವ ಮೂಲಕ ಭಾಷೆ, ಸಂಸ್ಕೃತಿಯ ಅಭಿವೃದ್ಧಿಯ ಕಾಳಜಿಯನ್ನು ಹೊಂದಿದವರಾಗಿದ್ದಾರೆ.

ಪ್ರಸ್ತುತ ಅಷ್ಟಷಟ್ಪದಿ 'ನನ್ನವೇ ನಾಲ್ಕು ಶಬ್ದ'ದ ಮೊದಲೆಂಟು ಸಾಲಿನ ನಡುವೆ ಬಂದ 'ಕೋಶಗಳನ್ನೊಡೆದು / ಹೊಸ ದೇಸಿಯಲಿ ಬಣ್ಣ ಬಣ್ಣದ ರೆಕ್ಕೆ ಪಡೆದು/ ಹೊರಟಿದ್ದ ಸ್ಥಾಯಿ ಸಂಚಾರಿಗಳು', ಎಂಬೆರಡೇ ಎರಡು ಸಾಲು ಇಷ್ಟೆಲ್ಲ ವಾಸ್ತವ ಜಗತ್ತಿನ ತಲ್ಲಣಗಳ ಅನಾವರಣಕ್ಕೆ ನಾಂದಿಯಾಗುತ್ತವೆ ಎಂದರೆ ಆಶ್ಚರ್ಯವೇ ಅಲ್ಲವೇ? ಇನ್ನು ಅಲ್ಲೇ ಮುಂದೆ ಬರುವ' ಹಾವು ಹರಿದಾಡದಿಹ ಜಾಗವೆಲ್ಲಿದೆ ಹೇಳಿ' ಎಂಬಲ್ಲಿ 'ಬುಷ್' ನನ್ನು ಮುಂಚಿತವಾಗಿಯೇ ಸಂಕೇತಿಸಿದಂತಿದೆ. ೧೯೬೦ಳರಲ್ಲೇ ಬರೆದ ಈ ಸುನೀತ ಈಗಂತು ಅತ್ಯಂತ ಪ್ರಸ್ತುತ.

೪) ಈಗ ಸುನೀತದ ಎರಡನೇ ಭಾಗದ ನಾಲ್ಕು ಸಾಲುಗಳನ್ನು ನೋಡೋಣ ಅವಿರುವುದು ಹೀಗೆ.

**ರಸ್ತೆ ಹಿಡಿಸಲಾರದೆ ಬಿಡುವಿಲ್ಲದೋಡಾಡು**
**ತಿರುವ ಕುರುಡು ಚಕ್ರದ ನಡುವೆ ಸಿಕ್ಕ ಬೆಕ್ಕಿನ**
**ಮರಿಯನೆತ್ತಿ ತರಹೋದ ಕವನವೇ ಜೋಪಾನ :**
**ಹದ್ದು ಹಾರಾಡುವಾಕಾಶದೆಡೆಗೂ ನೋಡು-**

ಕಾವ್ಯಕ್ಕಿರುವ ಅನುಕಂಪ, ಕಾಳಜಿ ಅಷ್ಟಿಷ್ಟಲ್ಲ. ಅದು ತನ್ನ ಸಾಮಾಜಿಕ ಪ್ರಜ್ಞೆಗೆ ಬದ್ಧವಾಗಿರುವ ಸಾವಿನಂಜಿಕೆಯನ್ನು ಮೀರಿ, ಗಿಜಿ ಗಿಜಿ ವಾಹನಗಳ ಮಧ್ಯವೇ ಓಡೋಡಿ ಹೋಗಿ, ವಾಹನವೊಂದರ ಕುರುಡು ಚಕ್ರಕ್ಕೆ ಸಿಕ್ಕ ಬೆಕ್ಕಿನ ಮರಿಯನ್ನು ತರಹೋಗುತ್ತಿದ್ದಂತೆ, ಕವಿಗೆ ತನ್ನ ಕವಿತೆಯ ಬಗ್ಗೆ ಎಲ್ಲಿಲ್ಲದ ಆತಂಕ, ದುಗುಡ ಶುರುವಾಗಿ ಜೋಪಾನ ಜೋಪಾನ ಎಂದೇನೋ ಅನ್ನುತ್ತಾನೆ. ಇದೇ ಕ್ಷಣದಲ್ಲಿ ಅದನ್ನು ಆಕಾಶದಲ್ಲಿ ಆಗಲೇ ತನ್ನ ಆಹಾರಕ್ಕಾಗಿ ಹಾರಾಡುತ್ತಿರುವ ಹದ್ದಿನ ಬಗ್ಗೆಯೂ ಎಚ್ಚರಿಸುತ್ತಾನೆ. ಇಲ್ಲಿ ಕವಿ, ತನ್ನ ಸಮಯಪ್ರಜ್ಞೆಯ ಅಪ್ರಯೋಜಕತೆಯ ಬಗ್ಗೆ ವಿಷಾದ ಪಡುತ್ತಿದ್ದರೆ, ಅಲ್ಲಿ ಆಗಸದಲ್ಲಿ ಹಾರಾಡುವ ಹದ್ದು ನಿರ್ವಾಹನಗಳ ನಿರೀಕ್ಷೆಯಲ್ಲಿ ಮತ್ತು ಕವಿತೆಯ ಕೈಗೆ ಸತ್ತ ಬೆಕ್ಕಿನ ಮರಿ ಸಿಗಬಾರದೆನ್ನುವ ಪ್ರಾರ್ಥನೆಯಲ್ಲಿ ಇದ್ದಂತಿದೆ.

ಈ ಸುನೀತದ ಅಂತ್ಯದ ಚರಣಗಳಾದ -

**ಮೋಡ ಮಳೆಗರೆಯಲಿ, ಆಮೇಲೆ ಬರಲಿ ಸೂರ್ಯ**
**ಈಗ ಪದಪಂಕ್ತಿಯಲಿ ಬೀಜ ಬಿತ್ತುವ ಕಾರ್ಯ**

ಎಂಬಲ್ಲಿ, ಕವಿ ಅಪೇಕ್ಷಿಸುತ್ತಿರುವುದು ನಿರ್ಜನ ನೀರವತೆಯ ರಸ್ತೆಯನ್ನು, ಯಾವ ಅನಾಹುತಕ್ಕೂ ಎಡೆಗೊಡದ, ತೆಪ್ಪಗೆ ಬಿದ್ದುಕೊಂಡಿರುವ ರಸ್ತೆಯನ್ನು. ಅವ್ಯಕ್ತವಾಗಿಯಾದರೂ ಕವಿಗೆ ಶೋಷಿತ ರಸ್ತೆಯ ಬಗ್ಗೆಯೂ ವ್ಯಸನವಿಲ್ಲದಿಲ್ಲ. ಈ ಕಾರಣಕ್ಕೆಂದೇ ಆತ ತೀರಾ ಸಹಜವಾಗಿ 'ಮೋಡ ಮಳೆಗರೆಯಲಿ ಆ ಮೇಲೆ ಬರಲಿ ಸೂರ್ಯ' ಎನ್ನುವುದು. ಮಳೆ ಬಂದುಬಿಟ್ಟರೆ ಕವಿತೆಗೂ ಅಂಜಿಕೆಯಿಲ್ಲ. ಹದ್ದಿಗೂ ಎದೆಗುದಿಯಿಲ್ಲ. ಅದರಲ್ಲೂ ರಸ್ತೆಗಂತೂ ನಿಟ್ಟುಸಿರಿನ ನಿರಾಳತೆ ಸಿಗುತ್ತದೆ, ಇದೇ ಹೊತ್ತಿಗೆ ನಿರಭ್ರ ಆಕಾಶದಲ್ಲಿಯ ಸೂರ್ಯನಿಗೂ ತನ್ನ ಗುರುತರ ಹೊಣೆಯಾದ ಜೀವದಾಯಿತ್ವವನ್ನು ಮುಂದುವರೆಸಲು ಅನುವಾಗುತ್ತದೆ. ಇದಕ್ಕೂ ಹೆಚ್ಚಾಗಿ ಮುಂಗಾರು ಮಳೆಯ ಸಂತಸದಲ್ಲಿ ಹದಗೊಂಡ ಭೂಮಿಯಲ್ಲಿ ಬಿತ್ತನೆ ಕಾರ್ಯ ಹೇಗೆ ಚುರುಕುಗೊಳ್ಳುತ್ತದೋ ಹಾಗೆ, ಕವಿಗೆ ತನ್ನ ಕಾವ್ಯಕೃತಿಗೆ ಬೇಕಾಗುವ ಬಿತ್ತನೆ ಕಾರ್ಯದಲ್ಲಿ ಮಗ್ನಗೊಳ್ಳುವುದಕ್ಕೆ ಸಕಾಲದ ಅವಕಾಶವಾಗುತ್ತದೆ. ಕವಿ ಕೊನೆಗೂ ಒಬ್ಬ ರೈತ ಎಂಬ ಸತ್ಯ ಸುಳ್ಳಲ್ಲ.

೫) ಒಟ್ಟಾರೆ, ಕಣವಿಯವರ ಈ ಅಷ್ಟಷಟ್ಪದಿಯಲ್ಲಿ ಮೂರ್ತರೂಪ ಪಡೆದದ್ದು, ಕೆಟ್ಟ ಜಾಗತೀಕರಣಕ್ಕೆ ದಿಟ್ಟ ಮುಖಾಮುಖಿಯಾಗುವ ಸಾಧ್ಯತೆಯನ್ನು ದೇಸೀ ಪ್ರಜ್ಞೆಯೊಂದೇ ನಿಭಾಯಿಸಬಲ್ಲದೆಂಬ ಅರಿವಿನೊಂದಿಗೆ ಅವರು ತಾವು ಅದೆಷ್ಟೇ ಅನುಭವ ಪಡೆದುಕೊಂಡಿದ್ದರೂ, ಪರಿಣತಿ ವಿಷಯದಲ್ಲಿ ಇನ್ನೂ ವಿದ್ಯಾರ್ಥಿಯೇ ಎಂಬ ಸ್ವಭಾವ ಜನ್ಯವನ್ನು ತೋರ್ಪಡಿಸಿದ್ದು, ಅವರ ಪಕ್ವ ಮನದ ಸೌಜನ್ಯವೆಂದೇ ಹೇಳಬೇಕು. ಹಾಗಾಗಿಯೇ ಅವರು ಈಗಲೂ ತಮ್ಮದೇ ಆದ ನಾಲ್ಕು ಶಬ್ದಗಳಿಗಾಗಿ ಕಾಯುತ್ತಲಿದ್ದಾರೆ. ಅವೇ ಶಬ್ದಗಳಿಗಾಗಿ ಯಾಕಿಷ್ಟೊಂದು ಪ್ರತೀಕ್ಷೆಯೆಂದರೆ, ಶಬ್ದಸ್ಥಾನ ಔಚಿತ್ಯ (Placement of word ) ಮತ್ತು ಅರ್ಥಬಾಹುಳ್ಯ (Abundance of meaning) ಗಳ ಮಹತ್ವ ಎಷ್ಟೆಂಬುದನ್ನು ಅವರು ಬಹಳ ಚೆನ್ನಾಗಿ ಬಲ್ಲವರಾಗಿದ್ದಾರೆ.

ಕೊನೆಯದಾಗಿ ಹೇಳುವುದಾದರೆ, "ಕಣವಿಯವರು ತಮ್ಮ ಮೆಲುದನಿಯ ಸಾವಧಾನದ ನಿರುದ್ವಿಗ್ನ ಚಿಂತನಪರತೆಗೆ ಸಹಜವಾದ ಕಾವ್ಯಭಾಷೆಯನ್ನು ನಿರ್ಮಿಸಿಕೊಂಡಿದ್ದು ಅವರ ಸ್ವಂತಿಕೆಯ ನಿದರ್ಶನವಾಗಿದೆ" ಎಂದು ರಾಜೇಂದ್ರ ಚೆನ್ನಿಯವರು ಅಭಿಪ್ರಾಯ ಪಟ್ಟದ್ದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ.

ಅತ್ಯಂತ ಸೂಕ್ಷ್ಮ ಕುಸುರಿ ಕಲೆಗಾರಿಕೆಯಲ್ಲಿ ತೋರುತ್ತಿರುವ ಎಚ್ಚರಿಕೆ ಹಾಗೂ ತಾದಾತ್ಮ್ಯಗಳು ಕಣವಿಯವರ ಕಾವ್ಯದ ಅವಿಭಾಜ್ಯ ಅಂಗಗಳಾಗಿವೆ.

ರವಿ ಉಪಾಧ್ಯ

# ೨೭. ಡಾ. ಅಂಬೇಡಕರ್ ಕುರಿತು

೧

ಎಷ್ಟೊಂದು ಕರುಳು ಹಿಂಡುವ ಇರುಳು
ಯುಗ ಯುಗಗಳಿಂದ !
ಹಗಲನ್ನೇ ಕಾಣದ
ಕರಾಳ ಕತ್ತಲೆಯ ಲೋಕದಲಿ
ತಳಮಳಗೊಂಡ ದನಿಯಿರದ ಕೊರಳು.
ಹೇಗೋ ಕೆಸರಿಂದ ಕೊಸರಿ, ಉಸಿರು ಬಿಗಿ ಹಿಡಿದು
ಬಸಿರು ಹೊಸೆಯುತ್ತ ಕೈ ಚಾಚಿದರೂ
ದೊರೆಯಲಾರದ ಸ್ಪರ್ಶ.
ನಡು ಬಾಗಿ, ಕೊಳಚೆಗುಡಿಸಿ ದೂರ
ಮೂಲೆಯಲಿ ಕುಕ್ಕರು ಕೂತು
ಕೈಯೊಡ್ಡಿ, ಕಣ್ಣು ಪಿಳುಕಿಸುವ
ಧೂಮ, ಧೂಳ, ಕಾಳ, ದುರಗ, ಕೊರಗ....

ಕೆರವು ಹೊಲಿದು ಕಾಲಿಗೆ ತೊಡಿಸಿ
ಬರಿಗಾಲಿನಲ್ಲಿ ನೆಲ ತುಳಿದು
ತಲೆ ಮೇಲೆ
ಹೊರಬಾರದುದ ಹೊತ್ತು
ಮೇಲಿನವರ ಕರ್ಮದ ಭಾರ,
ಎಲ್ಲು ನೆಲೆಗಾಣದೆಯೆ, ಕಣ್‌ಕಪ್ಪಡಿಯಂತೆ
ಗೋಡೆ ಗೋಡೆಗೆ ಹಾಯ್ದು, ನೆತ್ತರು ಬಸಿಯುವಾಗ
ಸನಾತನ ಧರ್ಮ ಧಿಕ್ಕರಿಸಿ ಚಿಮ್ಮಿತು

ವಿನೂತನ ಕಿರಣ.
ಕೇರಿ ಕೇರಿಯ ಕಪ್ಪು ಹಣತೆಗಳಲ್ಲಿ
ಸ್ವಾಭಿಮಾನವು ಹೊಸೆದ ಬತ್ತಿಯಾಗಿ
ಕಣ್ಣು ಕಿಡಿಸೂಸಿ, ಮಾರಿಮಸಣಗಳು ಕೂಡ
ಮೆರವಣಿಗೆಯಲಿ ಘೋಷಣೆ ಕೂಗು :
ಹುಟ್ಟಿದವರೆಲ್ಲರೂ ಸಮಾನ ಹಕ್ಕುಳ್ಳವರು
ಬಾಳಿ ಬದುಕತಕ್ಕವರು.

೨

ಹುಟ್ಟಿದಾಗಲೆ ಮುತ್ತಿ ಮುಗಿಬಿದ್ದ ಮೋಡಗಳ
ತೂರಿ ಚೆಂಡಾಡಿ, ಹೊರಬಂದೆ ನಿಗಿನಿಗಿ ಕೆಂಡವಾಗಿ;
ಧರ್ಮ ಕರ್ಮದ ಹೆಸರಿನಲಿ ಅಧರ್ಮವನು ಬಿತ್ತಿ ಬೆಳೆದವರ
ನೆತ್ತಿಯ ಮೇಲೆ ತೂಗು - ಖಡ್ಗವಾಗಿ,
ಬಿದ್ದವರನೆದ್ದು ನಿಲ್ಲಿಸಿ, ಹದ್ದು ಮೀರಿದ ಶೋಷಣೆಗೆ
ಅರೆದ ಮದ್ದಾಗಿ, ಖುದ್ದಾಗಿ ನಡೆದೆ
ರಾಜಬೀದಿಯಲಿ ಮದ್ದಾನೆಯಾಗಿ.
ಭರತಖಂಡದ ಖಂಡ, ಮಾಂಸ, ಗುಂಡಿಗೆಯ
ಬಿಸಿರಕ್ತ ಒಂದೆ: ಆದರೂ ಹಿಂದೂ ಮುಂದೆ
'ವರ್ಣ'ಗಳ ವ್ರಣಕ್ಕೆ ಶಸ್ತ್ರಚಿಕಿತ್ಸೆಯ ಮಾಡಿ
ಇಡಿಯ ಚರ್ಮಕ್ಕೆ ಹಾಕಿದೆ ತಕ್ಕ ಹೊಲಿಗೆ,
ಮುಟ್ಟಿಸಿಕೊಳ್ಳದವರ ಮುಟ್ಟಿ ಮೈದಡವಿ
ಹೃದಯ ದೇಗುಲದ ಮೆಟ್ಟಿಲು ದಾಟಿ
ದೇವರಿಗೆ ಭೆಟ್ಟಿ ಮಾಡಿಸಿದೆ.
ಅವಕಾಶ ಒದಗಿಸದೆ, ಬರಿಯ ಆಕಾಶ ತೋರುತ ಬಂದ
ಆಷಾಢಭೂತಿಗಳನೆತ್ತಿ ಬೀಸಾಡಿದೆ.
'ದಲಿತ ಜನತೆಗೆ ಮಾತೃಭೂಮಿ ಎಲ್ಲಿದೆ?' ಎಂಬ
ಆರ್ತ ಭಾವದ ಪ್ರಶ್ನೆ ಗಾಂಧಿಯಂಥ ಮಾನವ ಸಂತ
ನೆದುರು ಹಾಕಿಕೊಂಡಾಗಲೂ
ಹೃದಯದೌದಾರ್ಯಕೆ ಮಾರುವೋದೆ .
ಆದಿಗ್ರಂಥಗಳ, ಮತ -ಪಂಥಗಳ ಧೂಳು ಕೊಡವಿ
ಅಕ್ಷರಸ್ಥರ ಆತ್ಮ ವಂಚನೆಯ ಸಂಚು

ಬಯಲಿಗೆಳೆದೆ.
ಬಲಗೈಯ ತೋರು ಬೆರಳೆತ್ತಿ ಭವಿಷ್ಯದ
ತಾರೆ ತೋರಿಸಿ, ಹಣೆ ಬರೆಹ ತಿದ್ದಿ ಬರೆದೆ-
ಸಮಾನತೆಯ ಸಂವಿಧಾನ, ಕರುಣೆ ಕಂಡರಿಸಿರುವ ಬುದ್ಧಸ್ಮಿತಕೆ ಬಾಗಿ
ಬೆಳಗಿದೆ ಮಾನವೀಯತೆಗೊಂದು ಜ್ಯೋತಿಯಾಗಿ.

ಬಾಬಾ, ಬಂದು ನಿಂತಿದ್ದಾರೆ ಇವರು
ನಿನ್ನ ಹೆಸರನು ಹೊತ್ತ ಬೀದಿ, ವರ್ತುಲಗಳಲ್ಲಿ
ಎತ್ತರದ ಪ್ರತಿಮೆಗಳ ನೆರಳಿನಲ್ಲಿ-
ಹತ್ತಾರು ಬಣಗಳಲಿ ಸಿಡಿದು, ಸಿಡಿಮಿಡಿಗೊಂಡು
ಕುಳಿತ ಬಂಡಿಯ ಕೀಲು ಕಳಚದಂತೆ
ಒಟ್ಟಾಗಿ ಬಂದು ತಳಿರು ತೋರಣ ಕಟ್ಟಿ
ನಡೆಯಬೇಕಿದೆ ಮುಂದೆ -
ತಮ್ಮ ಕಾಲಮೇಲೆಯೆ ತಾವು ನಿಂತು, ಸೋಲರಿಯದ
ನಿನ್ನ ಹಾದಿಯಲ್ಲಿ.

ಚೆನ್ನವೀರ ಕಣವಿ ಅವರ ಕಾವ್ಯದ ಹರಹು ತುಂಬಾ ವಿಸ್ತಾರವಾದದ್ದು. ಪ್ರಕೃತಿ ಮತ್ತು ಸಮಾಜಗಳನ್ನು ಒಳಗೊಂಡಂತೆ ಸ್ನೇಹ, ಪ್ರೀತಿ, ಪ್ರೇಮ ಮತ್ತು ವಾತ್ಸಲ್ಯಗಳ ಸುತ್ತ ಅವರು ಕವಿತೆಗಳನ್ನು ರಚಿಸಿದ್ದಾರೆ. ಇವುಗಳ ಜೊತೆ ಹಲವು ವ್ಯಕ್ತಿಗಳನ್ನು ಕುರಿತ ರಚನೆಗಳೂ ಇವೆ. ಪ್ರಸ್ತುತದಲ್ಲಿ 'ಡಾ. ಅಂಬೇಡ್ಕರ ಕುರಿತು' ಎಂಬ ಕವಿತೆಯ ಬಗೆಗೆ ವಿಚಾರ ಮಾಡಲಾಗಿದೆ. ('ಬರೆದು ತೀರದ ಬದುಕು' ಸಂಗ್ರಹ)

ಅಂಬೇಡ್ಕರ್ ಅವರ ಚಿಂತನೆ ಮತ್ತು ಅವರು ನಡೆಸಿದ ಹೋರಾಟವನ್ನು ಒಂದು ಕವಿತೆಯಲ್ಲಿ ಹಿಡಿದಿಡುವುದು ತುಂಬಾ ಕಷ್ಟ. ಆದರೆ ಕಣವಿಯವರ ಎರಡು ಪುಟಗಳ ಈ ಕವಿತೆಯಲ್ಲಿ ಯುಗಾಂತರಗಳಿಂದ ಹರಿದು ಬಂದ ದಲಿತರ ನೋವು ಮತ್ತು ಯಾತನೆಗಳನ್ನು ದಾಖಲಿಸುವುದರೊಂದಿಗೆ ಅಂಬೇಡ್ಕರ್ ದಲಿತರ ವಿಮೋಚನೆಗಾಗಿ ನಡೆಸಿದ ಚಿಂತನೆ ಮತ್ತು ಹೋರಾಟಗಳನ್ನು ಕವಿತೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಕಣವಿಯವರು ಅಂಬೇಡ್ಕರ್ ಅವರನ್ನು ನೆನಪಿಸಿಕೊಳ್ಳುವುದು ದಲಿತರ ಪರಿಸ್ಥಿತಿಗಳ ಹಿನ್ನೆಲೆಯಲ್ಲಿಯೇ. ಈ ಕವಿತೆಯಲ್ಲಿ ದಲಿತರ ಪೂರ್ವದ ಪರಿಸ್ಥಿತಿ, ಅಂಬೇಡ್ಕರ್ ಹೋರಾಟದಿಂದ ಉಂಟಾದ ಸುಧಾರಣೆ ಮತ್ತು ದಲಿತರ ಈಗಿನ ವಾಸ್ತವ ಸ್ಥಿತಿಗಳು ಕೂಡಿಯೇ ದಾಖಲಾಗಿರುವುದನ್ನು ನೋಡಿದರೆ ಕಣವಿಯವರಿಗೆ ದಲಿತರ ಸುಧಾರಣೆಯೇ ಮುಖ್ಯವಾಗಿರುವುದು ಕಾಣುತ್ತದೆ. ಈ

ಕವಿತೆ ಆರಂಭವಾಗುವುದೇ ಅಂಬೇಡ್ಕರ್ ಹುಟ್ಟುವುದಕ್ಕೆ ಪೂರ್ವದಲ್ಲಿ ದಲಿತರ ಸ್ಥಿತಿಗತಿಗಳು ಹೇಗಿದ್ದವು- ಎಂಬುದನ್ನು ವಿವರಿಸುವ ಮೂಲಕ. ಆ ಸಾಲುಗಳು ಹೀಗಿವೆ:

**ಎಷ್ಟೊಂದು ಕರುಳು ಹಿಂಡುವ ಇರುಳು**
**ಯುಗ ಯುಗಗಳಿಂದ !**
**ಹಗಲನೇ ಕಾಣದ**
**ಕರಾಳ ಕತ್ತಲೆಯ ಲೋಕದಲಿ**
**ತಳಮಳಗೊಂಡ ದನಿಯಿರದ ಕೊರಳು.**

ದಲಿತರು ಅನುಭವಿಸುತ್ತಿರುವ ಯಾತನೆ ಇಂದು ನಿನ್ನೆಯದಲ್ಲ. ಅದು ಯುಗ ಯುಗಗಳಿಂದ ಅವ್ಯಾಹತವಾಗಿ ಸಾಗಿ ಬಂದುದಾಗಿದೆ. ಬೆಳಕನ್ನೇ ಕಾಣದ ಕರಾಳ ಕತ್ತಲೆಯ ಬದುಕು ಅವರದು. ಅದರ 'ನೆನಪೇ ಕರುಳು ಹಿಂಡು'ವಂತಹದು ಎಂಬಲ್ಲಿ ದಲಿತರನ್ನು ಕುರಿತ ಕವಿಯ ಸಂವೇದನೆಯನ್ನು ಗುರುತಿಸಬಹುದು. ಇಷ್ಟೆಲ್ಲ ಸಂಕಟಗಳ ಮಧ್ಯೆ ಕೆಸರಲ್ಲಿ ಹೂತು ಹೋದ ಜನ ಮೇಲೆ ಬರಲು ಪ್ರಯತ್ನಿಸಿ ಸಹಾಯಕ್ಕೆ ಕೈ ಚಾಚಿದರೆ ಅವರಿಗೆ ಯಾರಿಂದಲೂ ಸಹಾಯ ಹಸ್ತ ದೊರಕಲಿಲ್ಲವೆಂಬುದು ವಾಸ್ತವವೇ. ಇಡೀ ಊರ ಕೊಳಚೆಯನ್ನೆಲ್ಲ ಗುಡಿಸಿ ಹಸನುಗೊಳಿಸಿದರೂ, ನಡುಬಾಗಿ ದೂರ ಮೂಲೆಯಲಿ ಕುಕ್ಕರು ಕೂತು ಕೈಯೊಡ್ಡಿ ನಿಲ್ಲುವ ದೈನ್ಯ ಸ್ಥಿತಿ ಅವರದು. ಅಂಥವರು ಒಬ್ಬರಲ್ಲ, ಇಬ್ಬರಲ್ಲ ಅವರಲ್ಲಿ ಕಾಳ, ದುರುಗ, ಕೊರಗ.... ಎಂಬ ಜನಸಮೂಹವೇ ಇದೆ.

ದಲಿತರೇನು ಸೋಮಾರಿಗಳಲ್ಲ, ಬದುಕಲು ಅವರೇ ಹುಡುಕಿಕೊಂಡ ಅಥವಾ ಮೇಲಿನವರು ವಿಧಿಸಿದ ಕೆಲವು ಕೈ ಕಸುಬುಗಳಿವೆ. 'ಕೆರವು ಹೊಲಿದು ಕಾಲಿಗೆ ಜೋಡಿಸಿ ಬರಿಗಾಲಲ್ಲಿ ನಡೆಯಬೇಕಾದ ಸ್ಥಿತಿ ಅವರದು! ಅಷ್ಟೇ ಅಲ್ಲ' 'ತಲೆ ಮೇಲೆ ಹೊರಬಾರದುದ ಹೊತ್ತು' ನಡೆದವರಿಗೆ ಎಂತಹ ಸ್ಥಿತಿಯೆಂದರೆ ಅವರಿಗೆ ಎಲ್ಲಿಯೂ ನೆಲೆ ಇಲ್ಲ. ಕಣ್‌ಕಪ್ಪಡಿಯಂತೆ ದಿಕ್ಕು ದೆಸೆಗಾಣದೆ ಗೋಡೆ ಗೋಡೆಗೆ ಹಾದು ನೆತ್ತರು ಬಸಿಯುವಾಗ 'ಸಾನಾತನ ಧರ್ಮ ಧಿಕ್ಕರಿಸಿ ಚಿಮ್ಮಿತು ವಿನೂತನ ಕಿರಣ' ಎಂದು ಅಂಬೇಡ್ಕರ್ ಜನನದ ಮಹತ್ವವನ್ನು ಕವಿ ದಾಖಲಿಸುತ್ತಾರೆ. ಕತ್ತಲೆ ತುಂಬಿದ ದಲಿತರ ಬದುಕಿಗೆ ಬೆಳಕನ್ನು ಕೊಡುವ ವಿನೂತನ ಕಿರಣವಾಗಿ ಅಂಬೇಡ್ಕರ್ ಕವಿ ಕಣವಿಯವರಿಗೆ ಕಂಡಿದ್ದಾರೆ.

ಅಂಬೇಡ್ಕರ್ ಹುಟ್ಟಿದ್ದೇ ದಲಿತರ ಸ್ವಾಭಿಮಾನದ ಸಂಕೇತವಾಗಿ ಎಂಬುದು 'ಕೇರಿ ಕೇರಿಯ ಕಪ್ಪು ಹಣತೆಗಳಲ್ಲಿ ಸ್ವಾಭಿಮಾನ ಹೊಸೆದ ಬತ್ತಿಯಾಗಿ' ಎಂಬ ಮಾತುಗಳಲ್ಲಿ ಸೂಚಿತವಾಗಿದೆ. ದಲಿತರು ತಮ್ಮ ಹಕ್ಕುಗಳಿಗಾಗಿ ಬೀದಿಗೆ ಇಳಿದು ಹೋರಾಟ ಮಾಡುವ ರೀತಿ ಅಂಬೇಡ್ಕರ್ ಮೂಲಕವೇ ಚಾಲ್ತಿಗೆ ಬಂದಿತೆಂಬ ಸೂಚನೆ ಇಲ್ಲಿದೆ.

ಕವಿತೆಯ ಎರಡನೇ ಭಾಗ ಅಂಬೇಡ್ಕರ್ ಅವರ ಜೀವನ ಮತ್ತು ಹೋರಾಟಗಳ ಮೇಲೆ ಬೆಳಕು ಚೆಲ್ಲುತ್ತದೆ. ಬಾಲ್ಯದಲ್ಲಿರುವಾಗಲೇ ಅವರ ಮೇಲೆ ಹಲವಾರು ಸಮಸ್ಯೆಗಳು ಮುಗಿಬಿದ್ದರೂ,

ಅವೆಲ್ಲವನ್ನು ಎದುರಿಸುತ್ತಲೇ 'ನಿಗಿ ನಿಗಿ ಕೆಂಡವಾಗಿ ಹೊರಬಂದ'ರೆಂಬುದು ಅಂಬೇಡ್ಕರ್ ಅವರ ಪ್ರಖರ ವ್ಯಕ್ತಿತ್ವವನ್ನು ಕಾಣಿಸುತ್ತದೆ. ಅಂಬೇಡ್ಕರ್ ಮೂಲತಃ ಒಬ್ಬ ವಿಚಾರವಾದಿಯಾಗಿದ್ದುದರಿಂದ ಮೇಲ್ವರ್ಗದ ಜನರು ಧರ್ಮವನ್ನೇ ಅಸ್ತ್ರವಾಗಿ ಬಳಸಿ ದಲಿತರನ್ನು ಹೇಗೆ ಶೋಷಿಸುತ್ತಿದ್ದರೆಂಬುದನ್ನು ಪತ್ತೆ ಹಚ್ಚಿದರು. ಅವರು ಎಂತಹ ವಿದ್ವತ್ತನ್ನೂ ಗಳಿಸಿದರೆಂದರೆ ಅವರ ದೃಷ್ಟಿಯಲ್ಲಿ ಶೋಷಕರ ಪಾಲಿಗೆ 'ನೆತ್ತಿಯ ಮೇಲೆ ತೂಗು ಕತ್ತಿಯಾಗಿ' ನಿಂತರು. ಅವರ ಹೋರಾಟ 'ಬಿದ್ದವರನ್ನೆಲ್ಲ ಎದ್ದು ನಿಲ್ಲಿಸುವ' ಗುರಿಯನ್ನು ಹೊಂದಿತ್ತು. ಈ ಕಾರಣದಿಂದ ಹದ್ದು ಮೀರಿದ ಶೋಷಣೆಗೆ ಅರೆದ ಮದ್ದಾಗಿ ಗುಡುಗಿದರೆಂಬುದು ಕವಿಯ ಭಾವನೆ.

ಭರತ ಖಂಡದ ಎಲ್ಲಾ ಜನಗಳಲ್ಲಿ ಹರಿವ ರಕ್ತ ಒಂದೇ ಆದರೂ 'ಹಿಂದೂ' ಮುಂದೆ ಎಂಬ ಅಸಮಾನತೆಯ ವರ್ಣ ವ್ಯವಸ್ಥೆಯ ಹುಣ್ಣಿಗೆ ಶಸ್ತ್ರಚಿಕಿತ್ಸೆ ಮಾಡಿ, ಅದಕ್ಕೆ ತಕ್ಕ ಹೊಲಿಗೆ ಹಾಕಿದರೆಂಬುದನ್ನು ಕವಿ ಸರಿಯಾಗಿಯೇ ಗುರುತಿಸಿದ್ದಾರೆ. ಅಂಬೇಡ್ಕರ್ ಅವರ ಹೋರಾಟ ಒಂದೆಡೆ ಮೇಲ್ವರ್ಗದವರು ನಡೆಸಿದ ಅನ್ಯಾಯ, ದೌರ್ಜನ್ಯಗಳಿಗೆ ಪ್ರತಿಭಟನಾತ್ಮಕವಾಗಿದ್ದರೆ, ಮತ್ತೊಂದೆಡೆ ಶೋಷಣೆಗೆ ಒಳಗಾದವರನ್ನು ಸಂತೈಸುವ, ಸಹಾನುಭೂತಿ ಸೂಚಿಸುವ ಮಾನವಾನುಕಂಪದಿಂದ ಕೂಡಿತ್ತು. ಈ ಎರಡೂ ಅಂಶಗಳನ್ನು ಕಣವಿಯವರು ಒಂದೇ ಕವಿತೆಯಲ್ಲಿ ಹಿಡಿದಿಟ್ಟಿರುವುದು ಅವರ ಸೂಕ್ಷ್ಮಗ್ರಹಿಕೆ ಮತ್ತು ಸಂವೇದನಾಶೀಲತೆಗೆ ನಿದರ್ಶನವಾಗಿದೆ. ಈ ಸಂದರ್ಭದ ಸಾಲುಗಳು ಹೀಗಿವೆ :

**ಮುಟ್ಟಿಸಿಕೊಳ್ಳದವರ ಮುಟ್ಟಿ ಮೈದಡವಿ**
**ಹೃದಯ ದೇಗುಲದ ಮೆಟ್ಟಿಲು ದಾಟಿ**
**ದೇವರಿಗೆ ಭೆಟ್ಟಿ ಮಾಡಿಸಿದೆ.**

ದಲಿತರು ಮುಟ್ಟಿಸಿಕೊಳ್ಳಲು ಅನರ್ಹರೆಂಬ ನಿಷೇಧವನ್ನು ಹೇರಿ ದೇವಸ್ಥಾನಗಳಲ್ಲಿ ಅವರಿಗೆ ಪ್ರವೇಶವನ್ನು ನಿರಾಕರಿಸಲಾಗಿತ್ತು. ಅಂಬೇಡ್ಕರ್ ಎಷ್ಟೊಂದು ಮಾನವೀಯ ಕಾಳಜಿ ಹೊಂದಿದ್ದರೆಂದರೆ ನೊಂದವರ ಪಾಲಿಗೆ ಅವರೊಬ್ಬ ಧೀಮಂತ ನಾಯಕರಾಗಿದ್ದರು. ಈ ನಿಟ್ಟಿನಲ್ಲಿ ದಲಿತರಿಗೆ ನಿಷೇಧವಾಗಿದ್ದ ದೇವಸ್ಥಾನಗಳಲ್ಲಿ ಪ್ರವೇಶ ದೊರಕಿಸಲು ಅವರು ಪ್ರಯತ್ನಿಸಿಸಿದರು. ತಮ್ಮ ಜೀವನದುದ್ದಕ್ಕೂ ದಲಿತರಿಗೆ ಸಮಾನ ಹಕ್ಕು, ಗೌರವಗಳನ್ನು ದೊರಕಿಸಿಕೊಡಲು ಅವಿರತವಾಗಿ ಶ್ರಮಿಸಿದರು. ದಲಿತರಿಗೆ ಬಾಯಿ ಮಾತಿನ ಸಾಂತ್ವನ ಹೇಳಿ ಮರುಳುಗೊಳಿಸುತ್ತಿದ್ದ ಆಷಾಢಭೂತಿಗಳ ಬಣ್ಣ ಬಯಲು ಮಾಡಿದರು.

ಅಂಬೇಡ್ಕರ್ ದಲಿತರ ಸಲುವಾಗಿ ಕೈಗೆತ್ತಿಕೊಂಡ ಮತ್ತೊಂದು ಮಹತ್ವದ ವಿಷಯವೆಂದರೆ ದಲಿತರಿಗಾಗಿ ಪ್ರತ್ಯೇಕ ರಾಜ್ಯ ಬೇಕು ಮತ್ತು ದಲಿತರು ತನ್ನ ನಾಯಕರನ್ನು ತಾನೇ ಚುನಾಯಿಸಿ ತರಲು ಪ್ರತ್ಯೇಕ ಚುನಾವಣಾ ಪದ್ಧತಿ ಜಾರಿಯಲ್ಲಿ ಬರಬೇಕೆಂದು ಒತ್ತಾಯಿಸಿದರು. ಈ ವಿಷಯಗಳಿಗೆ ಗಾಂಧೀಜಿಯವರ ಅಭಿಪ್ರಾಯ ಬೇರೆಯಾಗಿತ್ತು. ಅವರ ಪ್ರಕಾರ ಇದು ದಲಿತರನ್ನು

ಮುಖ್ಯವಾಹಿನಿಯಿಂದ ಪ್ರತ್ಯೇಕವಾಗಿಸಬಹುದು ಮತ್ತು ಆದರಿಂದ ದಲಿತರು ಇನ್ನಷ್ಟು ಸಮಸ್ಯೆಗಳನ್ನು ಎದುರಿಸುವಂತಾಗಬಹುದೆಂದು ಭಾವಿಸಿದರು. ಹೀಗಾಗಿ ಅಂಬೇಡ್ಕರ್ ಅಭಿಪ್ರಾಯಕ್ಕೆ ಒಪ್ಪದೇ ಗಾಂಧಿಯವರು ಅವರ ವಿರುದ್ಧ ಉಪವಾಸ ಸತ್ಯಾಗ್ರಹ ನಡೆಸಿದರು. ಇದರಿಂದ ಗಾಂಧೀಜಿಯವರ ಆರೋಗ್ಯ ಚಿಂತಾಜನಕ ಸ್ಥಿತಿ ತಲುಪಿ, ಆತಂಕದ ವಾತಾವರಣ ನಿರ್ಮಾಣವಾಗಿತ್ತು. ಆಗ ಅಂಬೇಡ್ಕರ್ ತಮ್ಮ ವಾದಕ್ಕೆ ಕಟ್ಟು ಬೀಳದೇ ಔದಾರ್ಯ ತೋರಿ ಗಾಂಧೀಜಿ ಪ್ರಾಣ ಉಳಿಸಿದರು. ಈ ಅಂಶ ಕವಿತೆಯಲ್ಲಿ ಮೂರೇ ಸಾಲಿನಲ್ಲಿ ಅಡಕವಾಗಿ ರೂಪುಗೊಂಡಿರುವುದು ಕಣವಿಯವರ ಕಾವ್ಯ ನೈಪುಣ್ಯಕ್ಕೆ ಸಾಕ್ಷಿಯಾಗಿದೆ.

ಅಂಬೇಡ್ಕರ್ ಎಂದರೇ 'ವಿದ್ವತ್ತು' ಎಂಬಷ್ಟರ ಮಟ್ಟಿಗೆ ಬೌದ್ಧಿಕ ಜ್ಞಾನವನ್ನು ಅವರು ಹೊಂದಿದ್ದರು. ದಲಿತರ ಶೋಷಣೆಗೆ ಮೂಲ ಬೇರು ಎಲ್ಲಿದೆ ? ಎಂಬುದನ್ನು ಪತ್ತೆಹಚ್ಚಲು ಆದಿ ಗ್ರಂಥಗಳು, ಮತ-ಪಂಥಗಳ ಸಿದ್ಧಾಂತ, ಸೂತ್ರಗಳನ್ನೆಲ್ಲ ಜಾಲಾಡಿದರು. ಅವರು ಮಾನವ ಪರವಾದದ್ದು ಯಾವುದು? ಮಾನವ ವಿರೋಧಿಯಾದದ್ದು ಯಾವುದು ? ಎಂಬುದನ್ನು ಆಧಾರಸಮೇತ ಎತ್ತಿತೋರಿಸಿದರು. ಅವರ ವಿಚಾರ ಸರಣಿ ಹೇಗಿತ್ತೆಂದರೆ ಅದು ಕೇವಲ ದಲಿತರ ಹಿತವನ್ನು ಮಾತ್ರ ಲಕ್ಷಿಸುವಂತಿರಲಿಲ್ಲ. ಬದಲಿಗೆ ಆ ಮೂಲಕ ಇಡೀ ಮನುಕುಲದ ಏಳ್ಗೆಯನ್ನೇ ಉದ್ದೇಶವಾಗಿರಿಸಿಕೊಂಡಿತ್ತು. ದೇಶದ ನಾಯಕರು ಅಂಬೇಡ್ಕರ್ ಅವರ ವಿದ್ವತ್ತು ಮತ್ತು ಕಾಳಜಿಗಳನ್ನು ತಿಳಿದು, ಸಂವಿಧಾನದ ಕರಡು ಸಿದ್ಧಪಡಿಸುವ ಗುರುತರ ಜವಾಬ್ದಾರಿಯನ್ನೇ ಅವರಿಗೆ ವಹಿಸಿದರು. ದೇಶದ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಸಮಾನತೆಯ ಸಂವಿಧಾನ ಬರಲು ಅಂಬೇಡ್ಕರ್ ಕಾರಣರಾದರೆಂಬುದನ್ನು ಕವಿತೆಯಲ್ಲಿ ಕಂಡರಿಸಲಾಗಿದೆ. ಅಂಬೇಡ್ಕರ್ ಕೊನೆಯಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡ ವಿಷಯವೂ ಸೂಚ್ಯವಾಗಿ ಬಂದಿದೆ.

ಕವಿತೆಯ ಆರಂಭದಲ್ಲಿ ಶತಶತಮಾನಗಳಿಂದ ದಲಿತರ ಪರಿಸ್ಥಿತಿ ಏನಿತ್ತು ? ಎಂಬುದರ ಚಿತ್ರಣವಿದ್ದು ಮಧ್ಯಭಾಗದಲ್ಲಿ ಅಂಬೇಡ್ಕರ್ ನಡೆಸಿದ ಹೋರಾಟ, ಅನುಷ್ಠಾನಕ್ಕೆ ತಂದ ಕಾರ್ಯಕ್ರಮಗಳು ಅದರ ಪರಿಣಾಮಗಳು ಸೂಚ್ಯವಾಗಿ, ಪರಿಣಾಮಕಾರಿಯಾಗಿ ಕವಿತೆಯಲ್ಲಿ ಒಡಮೂಡಿವೆ. ಕೊನೆಯ ಭಾಗದಲ್ಲಿ ದಲಿತರು ಈ ಹೊತ್ತಿನ ಸಂದರ್ಭದಲ್ಲಿ ತಲುಪಿರುವ ವಾಸ್ತವಗಳ ಕಡೆಗೆ ಗಮನವಿದೆ.

ಅಂಬೇಡ್ಕರ್ ಅವರನ್ನು ಕವಿ 'ಬಾಬಾ' ಎಂತಲೇ ಸಂಬೋಧಿಸಿದ್ದಾರೆ. ದಲಿತರಲ್ಲಿ ಕೆಲಮಟ್ಟಿಗೆ ಜಾಗೃತಿ ಮತ್ತು ಹೋರಾಟದ ಕಲ್ಪನೆ ಬಂದಿದ್ದರೆ ಅದಕ್ಕೆ ಅಂಬೇಡ್ಕರ್ ಮೂಲಪ್ರೇರಣೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ಕಾರಣದಿಂದಲೇ ಅಂಬೇಡ್ಕರ್ ಒಂದು ನೆನಪಾಗಿ ಸಾರ್ವಜನಿಕ ಬೀದಿ, ವರ್ತುಲಗಳು ಅವರ ಹೆಸರು ಹೊತ್ತಿವೆ. ಎತ್ತರದ ಪ್ರತಿಮೆಗಳೂ ದೇಶದಾದ್ಯಂತ ನಿಲ್ಲಿಸಲ್ಪಟ್ಟಿವೆ. 'ಅಂಬೇಡ್ಕರ್' ಹೆಸರೇ ದಲಿತರಿಗೆ ಸ್ವಾಭಿಮಾನದ ಸಂಕೇತವಾಗಿ ಕಂಡಿದೆ. ಹೀಗಾಗಿ ಅವರೆಲ್ಲ ಅಂಬೇಡ್ಕರ್ ಹೆಸರಿನ ಬೀದಿ ವರ್ತುಲ ಪ್ರತಿಮೆಗಳ ಬಳಿ ಬಂದು ನಿಂತಿದ್ದಾರೆ. ಆದರೆ ಆತಂಕದ ವಿಷಯವೆಂದರೆ ದಲಿತರು ಹತ್ತಾರು ಬಣಗಳಲ್ಲಿ ಸಿಡಿದು

ಸಿಡಿಮಿಡಿಗೊಂಡಿದ್ದಾರೆಂಬುದು. ಇದಕ್ಕೆ ಯಾರನ್ನು ದೂರುವುದು? ಅಧಿಕಾರ ನಡೆಸುವ ಮೇಲ್ವರ್ಗದ ಜನ ದಲಿತರನ್ನು ಹೀಗೆ ಛಿದ್ರ ಛಿದ್ರಗೊಳಿಸಿದ್ದಾರೆಯೇ ? ಅಥವಾ ಅಧಿಕಾರದ ಆಸೆ ಹೊತ್ತು ದಲಿತರೇ ತಮ್ಮನ್ನು ತಾವು ಪ್ರತ್ಯೇಕವಾಗಿಸಿಕೊಂಡರೇ? ಎಂಬುದು ಮಾನವ ಕಾಳಜಿಯ ಜನರ ಮುಂದೆ ಸವಾಲಾಗಿ ನಿಂತಿದೆ. ಇಂತಹ ಇಕ್ಕಟ್ಟಿನ ಸಂದರ್ಭದಲ್ಲಿ ಕವಿಯ ಮನಸ್ಸು ಏನನ್ನು ಬಯಸಿದೆ? ಕವಿತೆ ಹೀಗೆ ಕೊನೆಗೊಳ್ಳುತ್ತದೆ :

**ಕುಳಿತ ಬಂಡಿಯ ಕೀಲು ಕಳಚದಂತೆ**
**ಒಟ್ಟಾಗಿ ಬಂದು ತಳಿರು ತೋರಣ ಕಟ್ಟಿ**
**ನಡೆಯಬೇಕಿದೆ ಮುಂದೆ**
**ತಮ್ಮ ಕಾಲ ಮೇಲೆಯೆ ತಾವು ನಿಂತು ಸೋಲರಿಯದ**
**ನಿನ್ನ ಹಾದಿಯಲ್ಲಿ.**

ನಿಜ, ದಲಿತರ ಒಗ್ಗಟ್ಟಿನಲ್ಲಿಯೇ ಬಲವಿದೆ. ಅವರು ಭಿನ್ನ ಬಣಗಳಾಗಿ ಛಿದ್ರವಾದರೆ ಅವರನ್ನು ಕೇಳುವವರಾರು? ಅಂಬೇಡ್ಕರ್ ಜಾತಿ ವ್ಯವಸ್ಥೆಯ ವಿರುದ್ಧ ಹೋರಾಡಿದರೆ, ಇಂದು ಜಾತಿಯನ್ನೇ ಬಲಪಡಿಸುವ ನಿಟ್ಟಿನಲ್ಲಿ ದಲಿತರು ಹೆಜ್ಜೆ ಇಡುತ್ತಿದ್ದಾರೆ. ಬಲಿಷ್ಠ ಜಾತಿಗಳಿಗೆ 'ಜಾತಿ' ಒಂದು 'ಬಲ'ವಾಗಿ ಕಾಣಬಹುದು. ಆದರೆ ಕೆಳಜಾತಿಗಳು ಒಂದುಗೂಡದಿದ್ದರೆ ಅವು ಇನ್ನಷ್ಟು ದುರ್ಬಲವಾಗುತ್ತವೆ. ಅಷ್ಟೇ ಅಲ್ಲ ದಲಿತರ ಪಾಲಿಗೆ ಮೇಲ್ ವರ್ಗದವರ ಕೃಪೆಯ ಮೇಲೆ ಬದುಕುವ ಪರಾವಲಂಬಿ ಸ್ಥಿತಿಗೆ ವಿದಾಯ ಹೇಳಿ ದಲಿತರು ತಮ್ಮ ಕಾಲ ಮೇಲೆಯೇ ತಾವು ನಿಂತು ಸೋಲರಿಯದ ಅಂಬೇಡ್ಕರ್ ಹಾದಿಯಲ್ಲಿ ಮುನ್ನಡೆಯಬೇಕು'.

**ಕೆ.ಆರ್. ದುರ್ಗಾದಾಸ್**

# ೭೮. ಬರೆದು ತೀರದ ಬದುಕು

ಬದುಕು ಕೊಡುವುದಕ್ಕೆ ಕೊನೆಯಿಲ್ಲ,. ಕೊಟ್ಟಷ್ಟು ಪಡೆ-
ದು ಅಟ್ಟುಣುವ ಬಗೆ ಬೇರೆ, ಇಷ್ಟಾನಿಷ್ಟಗಳ
ಕಷ್ಟಸುಖದಲಿ ಕುದಿಸಿ, ಸ್ಥಾಯಿ-ಸಂಚಾರಿಗಳ
ತಾಯಾಗಿ, ಅನುಭವಕೆ ಬಾಗಿ, ನಿಂತ ಕಡೆ
ನೆರಳು ಹರಡುವ ಗಿಡದ ಚಿಗುರು -ಹೂ-ಕಾಯಾಗಿ
ಸಂಪ್ರದಾಯವ ಮೀರಿ ಮಾಗಿದ ಹೆಮ್ಮಿ(ಮ್ಮೆ)ಗೆ ನಗೆ,
ನಡುಗುವ ಬೆರಳ ನಡುವಿನಲಿ ತುಡಿವ ಲೇಖನಿಗೆ
ಮಿಡಿದ ಹೃದಯದ ಸೂಕ್ಷ್ಮ ಸಹಜಾತ್ಮ ಕಥೆ. ತಿರುಗಿ
ಮಕ್ಕಳಿಗೆ ಬೀಸಿ 'ಮಾಯದ ಕೋಲು' ನಕ್ಕುನಲಿ-
ದಾಡಿಸಿತು ಬಣ್ಣದ ಚಿಟ್ಟೆ ಹೂವಿಂದ ಹಾರಿ,
ಅರಳು ಮರಳಿಗು ಹೊಗರು ಹೊಮ್ಮಿದ ಸ್ವಗತಲಹರಿ !
ಮತ್ತೇನು ಹುದುಗಿತ್ತೊ ನೆನಪಿನ ಹಗೇವಿನಲಿ,
ಎಷ್ಟೋ ರಾತ್ರಿಗಳ ದಾಟಿ ಬೆಳಗು ನಿರೀಕ್ಷಿಸಲು
ಬರೆದು ಮುಗಿಸಿದ ಹಾಗೆ ಸ್ವಚ್ಛವಾಯಿತು ಮುಗಿಲು.

'ಸುನೀತ ಸಾಮ್ರಾಟ' ರೆನಿಸಿದ ಕವಿ, ತಮ್ಮ ಸುನೀತ ರಚನಯಲ್ಲಿ ನಾನಾ ಪ್ರಯೋಗ ಮಾಡಿದ್ದಾರೆ. ಇಟ್ಯಾಲಿಯನ್ ಮತ್ತು ಷೇಕ್ಸ್‌ಪಿಯರಿಯನ್ ಮಾದರಿಗಳನ್ನು ಬಳಸಿದ್ದಿದೆ. ಪ್ರಾಸವನ್ನು ಉಳಿಸಿಕೊಂಡದ್ದೂ ಪ್ರಾಸವನ್ನು ತೊರೆದದ್ದೂ ಇದೆ. ಆ ರೀತಿಯಿಂದ 'ಮಿಲ್ಟನ್' ಹಾದಿಯನ್ನು ಬಳಸಿದ್ದಾರೆ. ಪ್ರಸ್ತುತ ಸುನೀತ 'ಬರೆದು ತೀರದ ಬದುಕು'ವಿನಲ್ಲಿ ತಲಾ ಆರು ಸಾಲುಗಳ ಎರಡು ಹಾಗೂ, ಕವಿ ಮೆಚ್ಚುಗೆಗೆ ಪಕ್ಕಾದ ಕಡೆಯ ಎರಡು ಸಾಲುಗಳಿದ್ದು ಬರಹ ಮತ್ತು ಬದುಕುಗಳಿಗಿರುವ ಅನ್ಯೋನ್ಯವನ್ನು ಕುರಿತು ಜಿಜ್ಞಾಸೆ ಇದೆ. ತಾವು ಗೌರವಿಸುವ ವ್ಯಕ್ತಿ ಕವಿ, ಕಲಾವಿದ, ಅನುಭಾವಿಗಳ ಕುರಿತ 'ಸುನೀತ'ಗಳನ್ನು ರಚಿಸುವ ಕಣವಿಯವರು ತಮ್ಮ ಮೆಚ್ಚುಗೆ

ವಂದನೆಗಳನ್ನು ಸೂಕ್ಷ್ಮ ಕೆತ್ತನೆಯ ಮೂಲಕ ಚಿತ್ರಿಸುತ್ತಾರೆ. ಹಾಗೇ ಮೆಚ್ಚುಗೆಯಾದ ಕೃತಿಗಳ ಕುರಿತ 'ಸ್ಪಂದನ' ವನ್ನು ಕಾಣುತ್ತೇವೆ.

ನಾ. ದಿಸೋಜಾರವರ 'ಕುಂಜಾಲು ಕಣಿವೆಯ ಕೆಂಪು ಹೂ' ಅವುಗಳಲ್ಲೊಂದು. ಪ್ರಸ್ತುತ 'ಬರೆದು ತೀರದ ಬದುಕು' ದಿ. ಶಾರದಾ ಹೆಮ್ಮಿಗೆಯವರ 'ಬದುಕು ಕೊಟ್ಟಿದ್ದು, ಕಲಿಸಿದ್ದು' ಆತ್ಮಕಥಾನಕಕ್ಕೆ ಪ್ರತಿಕ್ರಿಯಾತ್ಮಕವಾಗಿ ಬರೆದ ಸುನೀತ. ಈ ಮೊದಲ 'ನೀಲಾಂಬಿಕೆ', 'ಅಕ್ಕಮಹಾದೇವಿ', 'ಶರಣಮ್ಮ' ಈ ಮೂರು ಕವಿತೆಗಳಲ್ಲಿ ಕಣವಿಯವರ ಸ್ತ್ರೀ ಪರ ಕಾಳಜಿ ವ್ಯಕ್ತವಾಗಿದೆ. (ಅವರ ಬದುಕಿನ ಸಾಧನೆ, ಮಹತಿಗಳನ್ನು ತುಂಬ ಉತ್ಕಟವಾಗಿ ಚಿತ್ರಿಸಿದ್ದಾರೆ.)

ಲೇಖಕಿ ಶಾರದಾ ಹೆಮ್ಮಿಗೆಯವರ 'ಬದುಕು ಕೊಟ್ಟಿದ್ದು ಕಲಿಸಿದ್ದು' ತನ್ನ ಬಿಚ್ಚುಮನದ ಅಭಿವ್ಯಕ್ತಿಗಾಗಿ ಹೆಸರಾದ ಕೃತಿ. ಅದನ್ನು ಬದುಕಿನ ಸಂಧ್ಯಾಕಾಲದಲ್ಲಿ ಬರೆದದ್ದು, ಬರಹ, ಹೃದ್ರೋಗಿಯಾಗಿದ್ದ ಅವರಿಗೆ ರೋಗನಿದಾನವಾಗಿದ್ದಿರಬಹುದು. 'ನಾ ಬದುಕೀನಿ ಅಂತ ಬರೀಲಿಕ್ಕತ್ತೀನಿ' ಎನ್ನುತ್ತಿದ್ದ ಧಾರವಾಡದ ನಾನೀ ಕಾಕಾ (ಎನ್ಕೆ) ಅವರಂತೆ ಆಕೆಯ ಧೋರಣೆ ಇರಬಹುದು. ಬರೆಹ, ಮಾಯದ ಕಂಬಳಿಯಂತೆ ಬೇರೆಯೇ ಜಗತ್ತಿಗೆ ಬಯ್ಯುತ್ತಿದ್ದುದು ನಿಜ. ಇಂಥ ಹಿರಿಯ ಹೆಣ್ಣುಮಗಳೊಬ್ಬರ ಕೃತಿಯೋದಿ ಬದುಕು ದೊಡ್ಡದೋ, ಕೃತಿ ದೊಡ್ಡದೋ - ಎಂಬ ಪ್ರಶ್ನೆಯನ್ನೆತ್ತುತ್ತಾರೆ ಕವಿ. ಬದುಕನ್ನು ಸಮಗ್ರವಾಗಿ ಹಿಡಿದಿಡಲು ಅಕ್ಷರಗಳು ಸಾಲವು ಎಂಬ ಭಾವವೂ ಇದೆ. ಮೊದಲ ಸಾಲಿನಲ್ಲಿ ಬದುಕು ಇಷ್ಟಾನಿಷ್ಟಗಳನ್ನು ಪ್ರದಾನ ಮಾಡುತ್ತದೆ ಎಂಬ ಹೇಳಿಕೆ ಸಿಗುತ್ತದೆ.

**ಬದುಕು ಕೊಡುವುದಕ್ಕೆ ಕೊನೆಯಿಲ್ಲ**

ಮುಂದಿನ ಐದು ಸಾಲುಗಳು ಲೇಖಕಿಯ ಪ್ರಶ್ನಿಸುವ ಗುಣ, ವಿನಯ, ಸಂಪ್ರದಾಯ ಮೀರಿದ ನಿಲುವುಗಳನ್ನು ಕಟ್ಟಿಕೊಡುತ್ತವೆ.

**ಸ್ಥಾಯಿ ಸಂಚಾರಿಗಳ ತಾಯಾಗಿ ಅನುಭವಕ್ಕೆ ಬಾಗಿ**
**ನಿಂತಕಡೆ ನೆರಳು ಹರಡುವ ಗಿಡದ ಚಿಗುರು - ಹೂ-ಕಾಯಾಗಿ**

ಎರಡನೇ ಭಾಗದಲ್ಲಿ ಬರುವ 'ನಡಗುವ ಬೆರಳ ನಡುವಿನಲಿ ತುಡಿವ ಲೇಖನಿ', ಎಂಬ ಮಾತು ಲೇಖಕಿಯ ವಾರ್ಧಕ್ಯ, ದುರ್ಬಲ ಶರೀರ,. ಆದರೂ ಬರೆವ ಅದಮ್ಯ ಉತ್ಸಾಹ ಇವನ್ನು ಸಶಕ್ತವಾಗಿ ಕಂಡರಿಸುತ್ತದೆ, ಲೇಖಕಿಯ ವಿವಿಧ ಕೃತಿಗಳ ಉಲ್ಲೇಖ ('ಬಣ್ಣದ ಚಿಟ್ಟೆ', 'ಮಾಯದ ಕೋಲು') ಗುಣವಾಚಕಗಳಾಗಿಯೂ ಗಮನ ಸೆಳೆಯುವಂತಿದೆ. ಕಡೆಯ ಎರಡು ಸಾಲುಗಳಲ್ಲಿ ಲೇಖಕಿ, ತಮ್ಮೆಲ್ಲ ಕಷ್ಟಗಳನ್ನು ಬರೆದು ನೀಗಿಕೊಂಡರು ಎಂಬರ್ಥ ಸ್ಫುರಿಸುತ್ತದೆ.

**ಎಷ್ಟೋ ರಾತ್ರಿಗಳ ದಾಟಿ ಬೆಳಗು ನಿರೀಕ್ಷಿಸಲು**
**ಬರೆದು ಮುಗಿಸಿದ ಹಾಗೆ ಸ್ವಚ್ಛವಾಯಿತು ಮುಗಿಲು**

ಬದುಕು ಕೊಡಲಿರುವ ಮರಣವನ್ನು ಕೈಯೊಡ್ಡಿ ಸ್ವೀಕರಿಸಿದ, ಮತ್ತು ಆ ಮರಣ ಬರೀ ಗೋಳಾಗದ ಒಂದು ಚಿತ್ರ ಕಣ್ಮುಂದೆ ತಂದಿದ್ದಾರೆ. ಮೋಡ ಇತ್ಯಾದಿಗಳಿಲ್ಲದ ಶುಭ್ರ ಆಕಾಶವೊಂದೇ ಕೊನೆಗುಳಿದ ಪ್ರಸ್ತಾಪ, ಯಾರಿದ್ದರೂ ಬಿಟ್ಟರೂ ಒಟ್ಟು 'ಬದುಕು' ಸಾಗೇ ಇರುತ್ತದೆ ಎಂಬ ಇಂಗಿತ ಪ್ರಕಟಿಸುವಂತಿದೆ. ಮುಗಿಲು, ಬರಹಗಾರನ 'ಕೆನ್ವಾಸ್' ಆಗಿಯೂ ಭಾಸವಾಗುತ್ತದೆ.

ಷೆಯಜಾದೆಯ ಕತೆ, ನಮಗೆಲ್ಲಾ ಗೊತ್ತಿದೆ. ಕತೆ ಹೇಳ ಹೇಳುತ್ತಾ ಆಕೆ ಸಾವನ್ನು ಗೆದ್ದಳು. ಕತೆ ಹೇಳುವುದು ನಿಂತ ತಕ್ಷಣ ಸಾವು ಆಲಿಂಗಿಸಿತು. ಕಾಲ, ನಮ್ಮನ್ನು ಕಳೆಯುವ ಬದಲು, ಕಾಲವನ್ನು ಸದುಪಯೋಗಿಸುತ್ತೇವೆ ಎಂಬ ನಿರ್ಧಾರ, ಆರೋಗ್ಯಕರ, ಸ್ಥಾವರ ಬದುಕಿಗೆ ಚೈತನ್ಯ ಬರಲು ಬರೆಹ, ಕಾರಣವಾಗುತ್ತದೆ. ವೈಎನ್ಕೆಯವರು ಒಂದೆಡೆ, 'ಬರೆವಣಿಗೆ ಈ ಮುಪ್ಪನ್ನು ದೂರವಿರಿಸುವ ಮದ್ದು' ಎಂದಿದ್ದಾರೆ. ಅದು ನಿಜ. ಇಂದ್ರಿಯಗಳಿಗೆ ಸುಕ್ಕು, ಪೊರೆ ಬಂದಂತೆ ಅಂತಃಕರಣಕ್ಕೂ ಮುಪ್ಪು ಅಡರಿರುತ್ತದೆ. ಕಲೆ, ಮಾತ್ರ ಇದನ್ನು ದೂರವಿರಿಸಬಲ್ಲದು. (ಕವಿ ವಾಣಿಯಂತೆ,

'ಅರಳು ಮರಳಿಗು ಹೊಗರು ಹೊಮ್ಮಿದ ಸ್ವಗತಲಹರಿ')

ಬದುಕು, ಸಮುದ್ರವಿದ್ದಂತೆ ನಮ್ಮ ನಮ್ಮ ಸಾಮರ್ಥ್ಯಕ್ಕೆ ತಕ್ಕಂತೆ, ಅದರಿಂದ ನೀರು ಮೊಗೆಯಬಹುದು.

ಬದುಕು-ಬರೆಹಗಳು ಬೀಜವೃಕ್ಷಗಳಿದ್ದಂತೆ, ಕನ್ನಡಿ ನೋಡುವಾಗ ಕಾಣುವ ಬಿಂಬ ಸತ್ಯವೋ, ನಿಂತ ವ್ಯಕ್ತಿ ಸತ್ಯವೋ ಎಂದರೆ ಏನು ಹೇಳಬಹುದು ? ಎರಡೂ ತಂತಮ್ಮ ನೆಲೆಯಲ್ಲಿ ಸತ್ಯವೇ !

ಒಟ್ಟಾರೆ ಈ ಕವನವನ್ನು ಹೊಕ್ಕು ನೋಡಿದಾಗ ಬದುಕನ್ನು ಕುರಿತ ತಾತ್ವಿಕ ವಿವೇಚನೆಯನ್ನು ಕಾಣಬಹುದು. ಓರ್ವ ಗೃಹಿಣಿ, ಸ್ವತಂತ್ರವಾಗಿ ವಿಚಾರಮಾಡುವ ಮಟ್ಟವನ್ನು ತನ್ನ ಜೀವನಾನುಭವ ಹಾಗೂ ವ್ಯಾಸಂಗದಿಂದ -ತಲುಪಿದಾಗ ಕವಿ ಅದನ್ನು ಗೌರವದಿಂದ ಅಂತಃ ಕರಣಪೂರ್ವಕವಾಗಿ ಕಾಣುವುದು ಮಹತ್ವದ್ದು.

'ಇಷ್ಟಾನಿಷ್ಟಗಳ ಕಷ್ಟ ಸುಖದಲಿ ಕುದಿಸಿ
ಸ್ಥಾಯಿ ಸಂಚಾರಿಗಳ ತಾಯಾಗಿ...!

ಎಂಬ ಮಾತುಗಳು ಇದನ್ನು ವ್ಯಕ್ತಪಡಿಸಿವೆ. ಇಲ್ಲೂ 'ನಿಂತಕಡೆಗೆ ನೆರಳು ಹರಡುವ' ಗಿಡದ ರೂಪಕ ಬರುತ್ತದೆ. (ಕಣವಿಯವರ ಕಾವ್ಯದಲ್ಲಿ ಮೇಲಿಂದ ಮೇಲೆ ಸಿಗುವ ರೂಪಕವಿದು) ಪ್ರತಿಯೊಬ್ಬರ ಬರೆಹವೂ ಅಷ್ಟೇ. ಅನುಭವವನ್ನು ಹಂಚುವ ಪ್ರಕ್ರಿಯೆ. ಅದು ಕೃತಕ ವ್ಯಾಯಾಮದಲ್ಲಿ ಉಸಿರಾಡುವಷ್ಟೇ ಸಹಜವಾದದ್ದು.

**ಕಮಲಾ ಹೆಮ್ಮಿಗೆ.**

# ೭೯. ಹಂಗರಹಳ್ಳಿ

ಹಂಗರಹಳ್ಳಿ ! ಹ್ಯಾಂಗ ತಡಕೊಂಡೆ ಕರುಳಿನಲಿ
ಉರಿಸಿದ ಕೊಳ್ಳಿ? ಕಲ್ಲೆದೆಗಳೇ ಜಲ್ಲಿ ತುಂಬಿ
ಉರುಳಿಸಿದ ಕುರುಡು ಚಕ್ರದ ಲಾರಿ ಮೈದುಂಬಿ
ಹಸಿರು ಬೆಟ್ಟದ ನಡುವೆ ಕೋರೆಹಲ್ಲಿನ ಕ್ವಾರಿ.
ಸುತ್ತಸುತ್ತಿಗೆ ಪೆಟ್ಟು, ಕುತ್ತುಸಿರು, ಕಬ್ಬಿಣದ
ಸರಪಳಿ ಬಿಗಿದ ಕಾಲು, ಹುರುಪಳಿಸಿ ಹೋದ ಕೈ,
ತೆರಪಿರದೆ ಬೆವರಿಳಿದು ಹಿಪ್ಪೆಯಾಗಿರುವ ಮೈ
ನೆನಪು ಕುಟುಕಿದೆ ಸ್ವಾತಂತ್ರ್ಯ ಸುವರ್ಣೋತ್ಸವ -
ನೃತ್ಯ ಸಂಗೀತ, ಬಾಣ -ಬಿರುಸು ಮೆರವಣಿಗೆ -
ಇಲ್ಲಿ ಕತ್ತಲೆ ಕೂಪ, ಸದ್ದಿರದ ಹಿಡಿಮದ್ದು.
ಬತ್ತಲೆಯಾಗಿ ಬಾಳು ಒಳಗೊಳಗೆ ಬಿಕ್ಕಿದ್ದು
ಕೇಳಿಯೂ ಕೇಳಿಸದ, ಕಂಡರೂ ಕಾಣಿಸದೆ.
ದಾಟಿ ಹೋಗಿದೆ ನೂರು ಕೋಟಿಯಲಿ ಜನಸಂಖ್ಯೆ
ಉಳಿದದ್ದು : ಮನುಷ್ಯರೆಲ್ಲಿದ್ದಾರೆನುವ ಶಂಕೆ.

ನಿಜವಾದ ಕವಿ ಸಮಕಾಲೀನತೆಯಿಂದ ಎಂದಿಗೂ ತಪ್ಪಿಸಿಕೊಳ್ಳಲಾರ. ವರ್ತಮಾನದ ನೋವು, ಆತಂಕ, ತಲ್ಲಣ, ಬೇಗುದಿ. ಪ್ರೀತಿ, ಭೀತಿ, ಕ್ರೌರ್ಯ, ದಯೆ ಇವೆಲ್ಲವೂ ಅವನನ್ನು ಅಲೆಗಳಂತೆ ತಟ್ಟುತ್ತಾ ಇರುತ್ತದೆ. ಕವಿಯೂ ಒಬ್ಬ ಮನುಷ್ಯನಾದ ಕಾರಣ ಆತ ಇದಕ್ಕೆ ಯಾವುದೋ ಒಂದು ಬಗೆಯಲ್ಲಿ ತನಗೆ ತಿಳಿದೋ ತಿಳಿಯದೆಯೋ ಸ್ಪಂದಿಸುತ್ತಾ ಪ್ರತಿಕ್ರಿಯಿಸುತ್ತಾ ಇರುತ್ತಾನೆ. ಇಂಥ ಪ್ರತಿಕ್ರಿಯೆ ಕಾವ್ಯವೇ ಆಗಬೇಕೆಂದಿಲ್ಲ. ಅದು ಒಂದು ಮಾತು, ನಿಟ್ಟುಸಿರು, ತುಟಿಯಂಚಿನ ನಗು. ಗಂಟಿಕ್ಕಿದ ಮೋರೆ, ಮೌನ, ಸಿಡುಕು, ಯಾವುದೋ ಆದೀತು. ಕೆಲವರ ಪ್ರತಿಕ್ರಿಯೆ ತತ್ಕಾಲೀನವಾಗಿ ಒಂದು ಅಬ್ಬರದ ಮಾತಿನಲ್ಲಿ, ಬೊಬ್ಬಿರುವ ರಾಡಿನಲ್ಲಿ ಮುಗಿದು ಹೋಗಬಹುದು.

ಆದರೆ ಸಂವೇದನಾಶೀಲನಾದ ಕವಿಯೊಬ್ಬ ಹೀಗೆ ಕಾಲಿಕವಾಗಿ ವ್ಯವಹರಿಸದೆ ಆ ಬಗ್ಗೆ ತನ್ನ ಪ್ರಜ್ಞೆಯ ಪ್ರಭಾವವನ್ನು ಹರಿಯಬಿಡುತ್ತಾನೆ. ಎಲ್ಲರಿಗೂ ಮಾಮೂಲಿಯಾಗಿ ಬಿಡುವ, ಓದಿ ಎಸೆವ ಪತ್ರಿಕೆಯ ಸುದ್ದಿಯಾಗುವ ಸಂಗತಿ ಸೂಕ್ಷ್ಮಜ್ಞನಾದ ಕವಿಗೆ ಅದು ಉಂಟು ಮಾಡಿದ ವೇದನೆ ಸಂವೇದನೆಯಾಗಿ ಆ ಸಂವೇದನೆ ಸೃಜನಶೀಲವಾಗಿ ಆ ಸೃಜನಶೀಲತೆಯು, ಕತೆ, ಕಾವ್ಯ ಕಾದಂಬರಿ, ಚಿತ್ರಕಲೆ, ನಾಟಕ ನೃತ್ಯವಾಗಿ ಹೊಸ ಹುಟ್ಟನ್ನು ಪಡೆಯುತ್ತಾ ನಮ್ಮ ಅಂತರಂಗದ ಭಾವತರಂಗಗಳ ಮೇಲೆ ಹುಟ್ಟು ಹಾಕುತ್ತ ಸಾಗುವ ಪುಟ್ಟ ದೋಣಿಯಾಗಿ ಬಿಡುತ್ತದೆ. ದೋಣಿಯಲ್ಲಿ ತೇಲುವವರ ಆನಂದ, ಆತಂಕ ಅನುಭವ ವೇದ್ಯ. ತೇಲುವ ದೋಣಿ ಉಂಟು ಮಾಡುವ ಕಂಪನ ಕಚಗುಳಿ ನೀರಿಗೆ ಮಾತ್ರ ಗೊತ್ತು. ಆ ಅನುಭವ ನಮಗೆ ದಕ್ಕಲಾರದು. ಆದರೆ ಕವಿಯೊಬ್ಬ ಈ ನೀರಿನ ತವಕ, ತಲ್ಲಣ ಧಾವಂತವನ್ನು ತನ್ನ ಕಾಣ್ಕೆಯ ಕನ್ನಡಿಯಲ್ಲಿ ಕಾಣುವ ತನ್ನ ಸಹ ಪಯಣಿಗರಿಗು ತೋರುವ ಜಾಣ್ಮೆ ಅಥವಾ ಪರಿಣತಿ ಕಾವ್ಯದಂತಹ ಶಕ್ತ ಮಾಧ್ಯಮದಿಂದ ಮಾತ್ರ ಸಾಧ್ಯ. ಆ ಕಾರಣಕ್ಕಾಗಿಯೇ ಚಿಲಿಯಂಥ ಪುಟ್ಟ ದೇಶದ ಮಹಾನ್ ಕವಿ ಪ್ಲಾಬೋ ನೆರೂದ ಜನಮಾನಸದಲ್ಲಿ ಇಂದಿಗೂ ಜೀವಂತವಾಗಿ ಉಳಿದಿದ್ದಾನೆ.

ಮಂಡ್ಯ ಜಿಲ್ಲೆಯ ಹಂಗರವಳ್ಳಿ, ಭಾರತ ಸರ್ಕಾರ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುವ ಶುಭ ಸಂದರ್ಭದಲ್ಲಿಯೆ ಸುದ್ದಿಯಾಯಿತು. ಅದು ಶುಭ ಸುದ್ದಿಯಲ್ಲ. ಇಂದು ಸುದ್ದಿ ಎಂದರೆ ಕೇವಲ ಕೇಳುವುದಲ್ಲ, ನೋಡುವುದು ಹೌದು. ಈ ಸುದ್ದಿ ಕಂಡವರ ಕಂಗಳಿಗೆ, ಕೇಳಿದವರ ಕಿವಿಗಳಿಗೆ, ವಿಚಿತ್ರವಾದ ಯಾತನೆಯನ್ನುಂಟು ಮಾಡಿದ್ದು ಸತ್ಯ. ಉಳ್ಳವರು ಭೂಮಾಲಿಕರು ಒಡೆತನವನ್ನು ಆಜನ್ಮಸಿದ್ಧ ಹಕ್ಕು ಎಂದು ಅನುಭವಿಸುತ್ತ ಬಂದವರು, ಗಣಿಗಾರಿಕೆಯನ್ನು ನಡೆಸುತ್ತ ಧನಮದದಿಂದ ಕೊಬ್ಬಿದ ಗೂಳಿಯಂತಾಗಿದ್ದವರು ಕೆಲಸ ಮಾಡುವ ಆಳುಗಳ ಕಾಲಿಗೆ ಸರಪಳಿ ಹಾಕಿ ಅವರ ಚಲನೆಗೆ ದಿಗ್ಬಂಧನವೊಡ್ಡಿ ಪ್ರಾಣಿಗಳಂತೆ ಅವರನ್ನು ದುಡಿಸಿಕೊಳ್ಳುತ್ತಿದ್ದರು.

**ಸುತ್ತ ಸುತ್ತಿಗೆ ಪೆಟ್ಟು ಕುತ್ತುಸಿರು, ಕಬ್ಬಿಣದ**
**ಸರಪಳಿ ಬಿಗಿದ ಕಾಲು, ಹುರುಪಳಿಸಿ ಹೋದ ಕೈ**
**ತೆರಪಿರದೆ ಬೆವರಿಳಿದು ಹಿಪ್ಪೆಯಾಗಿರುವ ಮೈ**

ಇಕ್ಕಿದ್ದನ್ನೇ ಉಂಡು ಕೊಟ್ಟಿದ್ದನ್ನೇ ಉಟ್ಟು ಪ್ರಾಣಿಯಂತೆ ಬದುಕುವ ಆ ಜೀತದ ಜನ ಅವರ ಪಾಡು ಶೋಚನೀಯ ಸ್ಥಿತಿ. ಮಾಧ್ಯಮದ ಮೂಲಕ ದೇಶದೆಲ್ಲೆಡೆ ಬಿತ್ತರಗೊಂಡಾಗ ಹಲವಾರು ಜನ ಮರುಗಿದ್ದಾರೆ, ದುಃಖದಿಂದ ಕೊರಗಿದ್ದಾರೆ, ಕರುಣೆಯಿಂದ ಕರಗಿದ್ದಾರೆ. ಅಂಥವರಲ್ಲಿ ಕವಿ ಕಣವಿಯವರು ಒಬ್ಬರು. ಜೀವನ ಕಣಿವೆಯಲ್ಲಿ ಸದಾ ಚೆಂಬೆಳಕನ್ನು ಕಾಣಬಯಸುವ ಚೆನ್ನವೀರ ಕಣವಿಯವರಿಗೆ ಹಂಗರವಳ್ಳಿಯ ಜೀತದಾಳುಗಳ ದಯನೀಯ ಬದುಕಿನ ಕತ್ತಲೆ ಏನನ್ನೂ ಮಾಡಲಾಗದ ಎಲ್ಲದರ ಅರಿವಿದ್ದು ಪ್ರತಿಭಟಿಸಲಾರದ ಆ ಜೀತದಾಳುಗಳು ಸದ್ದಿರದ ಸಿಡಿಮದ್ದಾಗಿ

ಕವಿಗೆ ಕಂಡಿದ್ದು ವಿಶೇಷ. ಮೌನದ ಒಡಲಲ್ಲಿಯೂ ಪ್ರತಿಭಟನೆಯ ಮದ್ದುಗುಂಡುಗಳಿಗೆ ಇರಿವ ಚಾಕುಗಳಿವೆ. ಅದನ್ನು ಸಮಾಜ ಮುಖಿಯಾದ ಇಡಿ ಸಮುದಾಯದ ಹಿತಾಕಾಂಕ್ಷಿಯಾದ ಕವಿ ಮಾತ್ರ ಕಾಣಬಲ್ಲ ಈ ಸಿಡಿಮದ್ದು.

ಇಲ್ಲಿ ಕತ್ತಲೆ, ಸದ್ದಿರದ ಸಿಡಿಮದ್ದು
ಬತ್ತಲೆಯಾಗಿ ಬಾಳು, ಒಳಗೊಳಗೆ ಬಿಕ್ಕಿದ್ದು

ಯಾಕೆಂದರೆ ಗಣಿಮಾಲೀಕರು ದಣಿಗಳು ಇದರ ಸದ್ದಡಗಿಸಿದ್ದಾರೆ. ಅಂದ ಮಾತ್ರಕ್ಕೆ ಸದ್ದಿಲ್ಲವೆಂದು ಈ ಮದ್ದು ನಿಷ್ಪ್ರಯೋಜಕವೆಂದು ಅನ್ನುವಂತಿಲ್ಲ. ಈ ಸದ್ದಿರದ ಸಿಡಿಮದ್ದು ಒಂದಲ್ಲಾ ಒಂದು ದಿನ ಸದ್ದಿರದೆ ಸಿಡಿದರೆ ಅಥವಾ ಸ್ಫೋಟಗೊಂಡರೆ ಅಚ್ಚರಿ ಪಡಬೇಕಾಗಿಲ್ಲ.

ಕರುಳು ಚುರ್ ಎನ್ನುವ ಅಂತರಂಗದ ಭಾವತರಂಗಗಳನ್ನು ಕಲಸಿ ಬಿಡುವ ಹಂಗರ ಹಳ್ಳಿಯೊಂದಿಗೆ ಕವಿ ಮಾತಿಗಿಳಿಯುತ್ತಾನೆ ಭಾವುಕನಾಗಿ. ಇಂಥ ಕಡೆ ಭಾವನೆಗಳು ಬತ್ತಿ ಹೋದರೆ ಕಾವ್ಯ ನವ್ಯವಾಗಿ ರೈಲು ನೇರವಾಗಿ ನಕ್ಷತ್ರಲೋಕದ ದಾರಿ ಹಿಡಿದು ಬಿಡುತ್ತದೆ. ಅರ್ಥಪೂರ್ಣವಾದ ಶಬ್ದಗಳನ್ನು ಹಿಡಿದು ಕಸರತ್ತು ಮಾಡಿ ಪತ್ರಿಕೆಯಲ್ಲಿ ಪ್ರಕಟಿಸುವ ವಾರ ಪತ್ರಿಕೆಯ ಕವಿಗಳ ಒಂದು ಪಂಗಡವೇ ಇದೆ. ನವ್ಯ ಹಾಗೂ ನವೋದಯದ ಜೊತೆ ಅನುಸಂಧಾನ ನಡೆಸಿದ ಕಣವಿ - ಮಾನವೀಯ ನೆಲೆಯಲ್ಲಿ ಮನುಕುಲದ ಸಂಕಷ್ಟಕ್ಕೆ ಮರುಕ ಪಡುವ, ಆಕ್ರೋಶಕ್ಕೊಳಗಾಗುವ, ವಿಷಾದ ಪಡುವ ಬಗೆ ಅವರನ್ನು ಸಾಮಾಜಿಕ ಕಳಕಳಿಯ ಜೀವಪರ ಚಿಂತನೆಯ, ಜನಪದ ಧೋರಣೆಯ ಕವಿಯನ್ನಾಗಿಸಿದೆ. 'ಕರುಳಿನಲಿ ಉರಿಸಿದ ಕೊಳ್ಳಿ ಹ್ಯಾಂಗ ತಡಕೊಂಡೆ ಹಂಗರಹಳ್ಳಿ' ಎಂದು ಪ್ರಶ್ನಿಸುವ ಸಾಲು ಎದೆಯ ಕದವನ್ನು ತಟ್ಟುತ್ತದೆ. ಆ ಜೀತದಾಳುಗಳು ಕರುಳಿನಲ್ಲಿ ಉರಿವ ಕೊಳ್ಳಿಯನ್ನು ತಡೆದುಕೊಂಡ ಆ ತಾಳ್ಮೆ ಭಯಾನಕ, ಸ್ವಲ್ಪ ಖಾರ ತಿಂದು ಎಸಿಡಿಟಿ (ಆಮ್ಲೀಯತೆ) ಕೆರಳಿದಾಗ ಹೊಟ್ಟೆ ಉರಿ ಉಂಡು ಹೊರಳಾಡುವ, ದುಡಿಯದೆ ತಿನ್ನುವ ಸಿರಿವಂತರು, ದುಡಿಯುತ್ತಲೇ ಕರುಳಿನಲ್ಲಿ ಉರಿವ ಯಜಮಾನಿಕೆಯ ದೌರ್ಜನ್ಯದ ಕೊಳ್ಳಿಯನ್ನು ತುಟಿ ಬಿಚ್ಚದೆ ತಡೆದುಕೊಳ್ಳುವ ಜೀತದಾಳುಗಳು ಹಂಗರಹಳ್ಳಿ ಊರಿನಲ್ಲಿ ಸುದ್ದಿಯಾದರು. ಈ ಹಂಗರ ಹಳ್ಳಿಯೂ ಸುವರ್ಣೋತ್ಸವ ಭಾರತದ ಒಂದು ಹಳ್ಳಿ. ಈ ಜೀತದಾಳುಗಳು ದಾರುಣ ಬದುಕಿನ ಕರುಣಾಮಯ ಯಾತನೆಗೆ ಇಡಿ ಹಂಗರವಳ್ಳಿ ಒಂದು ವಸ್ತು ಪ್ರತಿರೂಪ ಆಗಿಬಿಡುತ್ತದೆ. ಕಲ್ಲೆದೆಗಳು ಕಲ್ಲು ಒಡೆಯುವ ಜೀತದಾಳುಗಳ ಮೇಲೆ ಒಡೆದ ಶಿಲೆಯ ಕಲ್ಲಿನ ಜಲ್ಲಿ ತುಂಬಿ ಉರುಳಿಸಿದ ಕುರುಡು ಚಕ್ರದ ಲಾರಿ. ಲಾರಿಗೆ ಕಣ್ಣಿದ್ದರೂ ಉರುಳುವ ಚಕ್ರಕ್ಕೆ ಕಣ್ಣಿಲ್ಲ, ಅದು ಕುರುಡು. ಸಮಾಜದ ವ್ಯವಸ್ಥೆಗೆ ಕಾನೂನಿನ ಚೌಕಟ್ಟಿದ್ದರೂ ಸ್ಥಾಪಿತ ಹಿತಾಸಕ್ತಿಗಳು ನಿರ್ಮಿಸಿಕೊಂಡ ವ್ಯವಸ್ಥೆ ಕುರುಡು ಚಕ್ರದಂತೆ ಅದು ಹಸಿರು ಹುಲ್ಲಿನ ಮಧ್ಯೆ ಹರಿಯುತ್ತದೆ. ಅಲ್ಲಿ ರಕ್ಕಸರಂತೆ ಕೋರೆ ಹಲ್ಲುಳ್ಳ ಕ್ವಾರಿ-ಕಲ್ಲುಗಣಿ-ಸಿರಿವಂತರಿಗೆ, ರಾಜಕಾರಣಿಗಳಿಗೆ ಹಣದ ಗಣಿ. ಜೀತದಾಳುಗಳಿಗೆ ಉಸಿರಾಡಲಾಗದ ಸ್ಥಿತಿ. ಕಟ್ಟು ಕಟ್ಟಿ ಬರುವ ಕುತ್ತುಸಿರು, ಆಡುವ ಉಸಿರಿಗೂ ಕುತ್ತು. ಉಸಿರೇ ಇಲ್ಲದವರ ಉಸಿರು ಕಟ್ಟಿದರೆ ಕೇಳುವವರ್‍ಯಾರು. ಒಂದು ಕಡೆ ಮೇರಾ ಭಾರತ ಮಹಾನ್ ಎಂಬ ಉದ್ಘೋಷ.

ಬಿಡುಗಡೆಗೊಂಡ ಭಾರತಕ್ಕೆ ಸ್ವಾತಂತ್ರ್ಯದ ಚಿನ್ನದ ಹಬ್ಬದ ಸಂಭ್ರಮ, ಹಂಗರವಳ್ಳಿಯ ಜೀತದಾಳುಗಳ ಕಾಲಿಗೆ ಬಿಗಿದ ಸರಪಳಿ ಎಂಥ ವಿಪರ್ಯಾಸ! ಒಂದೆಡೆ ಬಿಡುಗಡೆಯ ಉತ್ಸವ. ಇನ್ನೊಂದೆಡೆ ಬಂಧನದ ನೀರವ, ಸರಪಳಿ ಬಿಗಿಸಿಕೊಂಡವರು ಹುರುಪಳಿದು ಕೈಗೆ ಬಿಡುವಿರದ ಕೆಲಸ. ಮೈ ಬೆವರು ಸೋರಿ ಹಿಂಡಿ-ಹಿಪ್ಪೆಯಾದ ಮೈ ಇಲ್ಲಿ. ಅಲ್ಲಿ ಸ್ವಾತಂತ್ರ್ಯೋತ್ಸವದ ನೃತ್ಯ ಸಂಗೀತ, ಬಾಣ ಬಿರುಸು. ಇಲ್ಲಿ ಶತಮಾನೋತ್ಸವದ ನಿಟ್ಟುಸಿರು. ಅಲ್ಲಿ ಮೆರವಣಿಗೆ, ಇಲ್ಲಿ ಹೊಟ್ಟೆಯಲ್ಲಿ ಉರಿವ ಕೊಳ್ಳಿ ಅರ್ಥಾತ್- ಪಂಜಿನ ಮೆರವಣಿಗೆ, ಇದು ಪ್ರದರ್ಶನಕ್ಕಲ್ಲ.

ಹಂಗರ ಹಳ್ಳಿಯ ಜೀತಗಾರರು ಇದರ ಅರಿವಿದ್ದು ಸಿಡಿಯಲಿರುವ ಸಿಡಿಮದ್ದಿನಂತೆ ಅಸಹಾಯಕರು, ಬಾಳು ಬೆತ್ತಲೆಯಾದ ಅರಿವಿದ್ದು ನಿಸ್ಸಹಾಯಕರು. ಒಳಗೊಳಗೆ ಬಿಕ್ಕುತ್ತ ಬತ್ತಲೆಯ ಬಾಳಿನ ಕತ್ತಲೆಯ ಜನಗಳು. ಸ್ವಾತಂತ್ರ್ಯಕ್ಕೆ ಐವತ್ತರ ಸಂಭ್ರಮ. ಜನಸಂಖ್ಯೆಗೆ ನೂರು ಕೋಟಿ ದಾಟಿದ ವಿಕ್ರಮ. ಜನಸಂಖ್ಯೆ ಕುರಿತ ಮಾಲ್ಥಸ್‌ನ ಸಿದ್ಧಾಂತಕ್ಕೆ ಏನು ಅರ್ಥ? ದುಡಿವ ಎರಡು, ಉಣ್ಣುವ ಬಾಯಿ ಹತ್ತು ಹಲವು. ಕಣ್ಮುಂದೆ ಇಂಥ ಹಂಗರಹಳ್ಳಿಯ ಜೀತದಾಳುಗಳು ಶೋಚನೀಯ ಸ್ಥಿತಿಯಲ್ಲಿ ನೂರು ಕೋಟಿ ಜನರಲ್ಲಿ ಮನುಷ್ಯರು ಎಲ್ಲಿದ್ದಾರೆ ಎನ್ನುವ ಶಂಕೆ ಕವಿಯದು. ಮನುಷ್ಯ ಮಾನವೀಯತೆಯನ್ನೇ ಮರೆತು ದರ್ಪ, ಅಧಿಕಾರ, ಸ್ವಾರ್ಥದಿಂದ ಕಲ್ಲಾಗಿ ಬಿಡುವ ಕಲ್ಲು ಒಡೆಯ. ಮಿದು ಮಾತಿನ ಬಡ ಜೀತಗಾರರು ಕಲ್ಲನ್ನು ಒಡೆದು ಜಲ್ಲಿ ಮಾಡುತ್ತಾ ತಾವು ಈ ವ್ಯವಸ್ಥೆ ಕಾಲಿಗೆ ಹಾಕಿದ ಸರಪಳಿಯ ಬಿಗಿತದಲ್ಲಿ ಗಣಿ ಮಾಲಿಕರ ಹೊಡೆತದಲ್ಲಿ ಜಲ್ಲಿಗಳಂತೆ ಚೆಲ್ಲಿ ಹೋಗುವ ಚಿತ್ರಣ ಇಲ್ಲಿದೆ.

ಹಂಗರಹಳ್ಳಿಯ ಬಡಜನರನ್ನು ಹೊತ್ತ ಸಿರಿವಂತ ದೇಶ ಭಾರತದಲ್ಲಿ ಜೀವಂತವಾಗಿರುವ ಜೀತ ವ್ಯವಸ್ಥೆಯನ್ನು ಕಣ್ಮುಂದೆ ಕಟ್ಟುವಂತೆ ನಿಲ್ಲಿಸಿ ಬಿಡುವ, ನಮ್ಮ ಸಂವೇದನೆಗೆ ವೇದನೆಯ ಪೆಟ್ಟು ಕೊಡುವ ಮಾನವ್ಯದ ತುಡಿತವುಳ್ಳ ಒಂದು ಸಾರ್ಥಕ ಕವಿತೆ 'ಹಂಗರಹಳ್ಳಿ'.

ಶ್ರೀಪಾದ ಶೆಟ್ಟಿ

## ೮೦. ತಕ್ಕಡಿ

ಒಂದು ಪರಡಿಯಲಿ ಬದುಕು, ಇನ್ನೊಂದರಲಿ ಭಗ-
ವಂತ; ತೂಗಿ ನೋಡಲು ಯಾವುದು ಮೇಲೆ ಕೆಳಗೆ ?
ಅನುಭವದ ಇತಿಮಿತಿಗೆ ಎಟುಕಲಾರದ ಹಾಗೆ
ಮುಳ್ಳು ಹೊಯ್ದಾಡುತಿರೆ ನೆನಪುಗಳ ಸಹಯೋಗ;
ಬಿಂಬದಲಿ ತುಂಬಿ, ಶಬ್ದದಂಚಿನಲಿ ತುಳುಕಾಡಿ
ಗಂಧ ಪೂಸಿದ ನಾದ-ಸ್ಪರ್ಶ ರೋಮಾಂಚನದಿ
ಹೃದಯದೊರತೆಗೆ ಚಿಮ್ಮಿ ಹರಿದಂಥ ಪ್ರೀತಿ-ನದಿ
ಕಡಲ ಕೂಡಲಿ, ಬಿಡಲಿ, ತಣಿದವರೆಡೂ ತಡಿ.
ನಿನ್ನ ರೂಪಾನುಭವ ಕಡೆದ ದೇವರು; ಪಾಪ,
ಜೀವನವೆಷ್ಟು ಹಿರಿದೊ ಭಾವನೆಯಲೂ ಅನಿತು
ದೊಡ್ಡವನೆ, ಊಹೆ ವಿಸ್ತರಿಸಿದನಿತೂ ಒಳಿತು
ಜೀವಕ್ಕೆ, ನಿರಾಕರಣೆ ಏಕೆ? ಇರು ಸಮೀಪ
ಪುಟಗೊಳ್ಳುತಿರಲಿ ಪಂಚೇಂದ್ರಿಯದ ಪರುಟವಣೆ
ಪ್ರವಾಹದಲ್ಲಿಳಿದು ಬಾಳುವ ಶಕ್ತಿಗಾವುದೆಣೆ ?

ಕಣವಿಯವರು ತಮಗೆ ಅತ್ಯಂತ ಆಪ್ತವಾದ ಸುನೀತದ ಅಭಿವ್ಯಕ್ತಿಯಲ್ಲಿ ಇಹ-ಪರದ ತಾತ್ವಿಕ ಚಿಂತನೆ ಮಾಡಿರುವ ವಿಶಿಷ್ಟ ಕವಿತೆ 'ತಕ್ಕಡಿ'. ತಕ್ಕಡಿಯ ರೂಪಾತ್ಮಕವಾದ ಕಾಣ್ಕೆಯನ್ನು ಒಂದು ಅನುಭವಜನ್ಯವಾದ ಬದುಕಿನ ನೆಲೆಯಲ್ಲಿ ಇನ್ನೊಂದು ಅನುಭವಾತೀತವಾದ ಅನುಭಾವಿಕ ನೆಲೆಯಲ್ಲಿ ಗ್ರಹಿಕೆಗೆ ತಂದುಕೊಳ್ಳುವ ಪರಿಕ್ರಮವಿಲ್ಲಿ ಎದುರಾಗುತ್ತದೆ.

ಒಂದು ಪರಡಿಯಲಿ ಬದುಕು, ಇನ್ನೊಂದರಲಿ ಭಗ
ವಂತ; ತೂಗಿ ನೋಡಲು ಯಾವುದು ಮೇಲೆ ಕೆಳಗೆ ?

ಒಂದು ಪರಡಿಯಲ್ಲಿ ಬದುಕನ್ನಿಟ್ಟು ಇನ್ನೊಂದರಲ್ಲಿ ಭಗವಂತನನ್ನಿಟ್ಟು ತೂಗಿ ನೋಡುವ ಕವಿ ಯಾವುದು ಮೇಲೆ ಯಾವುದು ಕೆಳಗೆ ಎಂದು ಪ್ರಶ್ನಿಸುತ್ತ ತಾತ್ವಿಕ ಚಿಂತನೆಗೆ ತೊಡಗುತ್ತಾನೆ. ಹಾಗೆ ನೋಡಿದರೆ ಇದು ಪ್ರಶ್ನೆಯಲ್ಲವೆಂದು ಕವಿಗೂ ಗೊತ್ತು. ನಮ್ಮ ಬದುಕಿನ ಸಾಧ್ಯಾಸಾಧ್ಯತೆಗಳು ಮತ್ತು ಬದುಕಿನಾಚೆಯ ಜಗತ್ತು ಧ್ಯಾನಶೀಲ ಯೋಗಿಯನ್ನು, ಸೃಜನಶೀಲ ಕವಿಯನ್ನು ತುಂಬ ಕಾಡಿವೆ. ಹೀಗಾಗಿ ಅನುಭವದ ಇತಿಮಿತಿಯಲ್ಲಿ ಇದಕ್ಕೊಂದು ಸಮರ್ಪಕ ಉತ್ತರವನ್ನಾಗಲಿ ಪರಿಹಾರವನ್ನಾಗಲಿ ಎಂದಿಗೂ ಕಾಣಲಾಗದು, ಅಂತೆಯೇ ಕವಿ:

**ಅನುಭವದ ಇತಿಮಿತಿಗೆ ಎಟುಕಲಾರದ ಹಾಗೆ**
**ಮುಳ್ಳು ಹೊಯ್ದಾಡುತಿರೆ ನೆನಪುಗಳ ಸಹಯೋಗ**

ಎನ್ನುತ್ತಾನೆ. ಶಬ್ದ ಮತ್ತು ಬಿಂಬಗಳು ಈ ಎರಡೂ ಪರಡಿಗಳ ವಿನ್ಯಾಸ ಅರಿಯಲು ಬಹುಕಾಲದಿಂದ ಯತ್ನಿಸಿವೆ.

**ಬಿಂಬದಲಿ ತುಂಬಿ, ಶಬ್ದದಂಚಿನಲಿ ತುಳುಕಾಡಿ**
**ಗಂಧಪೂಸಿದ ನಾದ-ಸ್ಪರ್ಶ ರೋಮಾಂಚನದಿ**

ಇಲ್ಲಿ ಕವಿ ನಮ್ಮ ಪರಂಪರಾಗತ ಮೌಲ್ಯಮಾಪನ ದೃಷ್ಟಿಯನ್ನು ಪ್ರಶ್ನಿಸುವಂತಿದೆ. ಭೌತವಾದಿಗಳು ಅನುಭವ ಪ್ರಾಮಾಣ್ಯವೇ ಮುಖ್ಯವೆನ್ನುತ್ತಾರೆ. ಇದಕ್ಕೆ ವಿಜ್ಞಾನದ ಅಂಗೀಕಾರವೂ ಇದೆ. ಆದರೆ ಕವನದ ಮುಖ್ಯ ಪ್ರಶ್ನೆ ಅನುಭವ ಪ್ರಾಮಾಣ್ಯವೇ ಎಲ್ಲ ಹಂತಗಳಲ್ಲೂ ಅಂತಿಮವಾಗಿ ಗೆಲ್ಲಬಲ್ಲುದೆ ? ಎಂಬುದು. ಯಾವುದೇ ಅಲೌಕಿಕ ಆಚರಣೆ ಮತ್ತು ಆರಾಧನೆ ಇವುಗಳ ಮೂಲ ಇರುವುದು ಬಿಂಬದಲ್ಲಿ. ನಂತರ ಅವು ಶಬ್ದ ರೂಪಕ್ಕಿಳಿದು ಕೊನೆಗೆ ಆರಾಧನೆಗೆ ತಿರುಗಿಕೊಳ್ಳುತ್ತವೆ. ಇವುಗಳ ಮೂಲಕ ಬದುಕಿಗೆ ಒಂದು ಹೊಸ ನೆಲೆ, ದೃಷ್ಟಿಕೋನ ಸಿಕ್ಕುತ್ತದೆ. ಹೀಗಾಗಿ ಕವಿಗೆ ಬರಿ ಇದೊಂದೇ ತಾತ್ವಿಕ ಪ್ರಶ್ನೆಯಾಗುವುದಿಲ್ಲ. ಇಲ್ಲಿ ಎರಡು ಪರಡಿಗಳ ನಡುವೆ ತುಂಬ ವಿಸ್ತಾರವಾದದ್ದೊಂದು ಜೀವನದಿಯಿದೆ.

**ಹೃದಯದೊರತೆಗೆ ಚಿಮ್ಮಿ ಹರಿದಂಥ ಪ್ರೀತಿ-ನದಿ**
**ಕಡಲ ಕೂಡಲಿ, ಬಿಡಲಿ, ತಣದವೆರಡೂ ತಡಿ.**

ಅದು ಭಗವಂತನನ್ನು ಸೇರದಿದ್ದರೂ ಚಿಂತೆಯಿಲ್ಲ. ಅದರ ಎರಡೂ ತಡಿಗಳನ್ನು ತಾಗಬಲ್ಲ, ಸಂಪನ್ನಗೊಳಿಸಬಲ್ಲ ಶಕ್ತಿ ಪ್ರೀತಿನದಿಗೆ ಮಾತ್ರ ಸಾಧ್ಯ!

ಕಣವಿಯವರ ಕವಿತೆಯ ಶೋಧದಲ್ಲಿ ಪಾರಲೋಕದ ಶಬ್ದಾತೀತ ಅನುಭವಗಳ ವಿಸ್ತಾರವಾದ ವಿವೇಚನೆಯಾಗಲಿ, ವಿಶ್ಲೇಷಣೆಯಾಗಲಿ ಮುಖ್ಯವಾಗದೆ ಬದುಕು ಕೇಂದ್ರಿತ ವಿವೇಚನೆ ಹಿರಿದಾಗುತ್ತದೆ. ಎಲ್ಲ ಸೃಷ್ಟಿಸಿದ ದೇವರು ಮನುಷ್ಯನ ಶಾಪಾನುಭವಕ್ಕೂ ಕಾರಣನಾಗಿದ್ದಾನೆ. 'ಜೀವನವೆಷ್ಟು ಹಿರಿದೊ ಭಾವನೆಯಲೂ ಅನಿತು ದೊಡ್ಡವನೆ' ಆತ. ಇಲ್ಲಿ ಕವಿ ಜೀವನದ

ವಿಸ್ತಾರಕ್ಕೂ ಭಗವಂತನ ವಿಸ್ತಾರಕ್ಕೂ ತಳುಕು ಹಾಕುತ್ತಾನೆ. 'ನಿರಾಕರಣೆ ಏಕೆ ಇರು ಸಮೀಪ' ಎಂದು ಬದುಕಿನ ಊರ್ಧ್ವಗತಿಯನ್ನು ಸೂಚಿಸುವ ಕವಿ ಊಹೆ ವಿಸ್ತರಿಸಿದನಿತು ಒಳಿತು ಜೀವಕೆ ಎನ್ನುತ್ತಾನೆ. ಇದು ಕವಿಯ ಆಶಯ. ಇಲ್ಲಿ ಬದುಕು ಮತ್ತು ಬದುಕಿನಾಚೆಯ ಊಹೆಯ ವಿಸ್ತರವೇ ಒಂದು ಸಂತೋಷವಾಗುತ್ತದೆ, ಒಂದು ತತ್ವವಾಗುತ್ತದೆ. ಬದುಕಿನ ಪ್ರೀತಿ ಮತ್ತು ಬದುಕಿನ ಗ್ರಹಿಕೆಯ ತಕ್ಕಡಿಯನ್ನು ಹಿಡಿದಿರುವ ಮನೋಭಾವವೇ ಆಗಿರುವುದರಿಂದ ಕಣವಿಯವರ ಜೀವನ ಪ್ರೀತಿ ಮತ್ತು ಬದುಕಿನ ಬಗೆಗಿರುವ ಅವರ ಸಕಾರಾತ್ಮಕ ಗ್ರಹಿಕೆ ಇಲ್ಲಿ ಸೆಲೆಯೊಡೆಯುತ್ತದೆ. ಕೊನೆಯಲ್ಲಿ ಕವಿತೆ ಅದ್ಭುತವಾದ ಸಂದೇಶವನ್ನೇ ಸಾರುತ್ತದೆ.

**ಪುಟಗೊಳ್ಳುತಿರಲಿ ಪಂಚೇಂದ್ರಿಯದ ಪರುಟವಣೆ**
**ಪ್ರವಾಹದಲ್ಲಿಳಿದು ಬಾಳುವ ಶಕ್ತಿಗಾವುದೆಣೆ ?**

ಎಂಬುದು ಚಿಂತನೀಯವಾಗಿದೆ. ಇಲ್ಲಿ ಯಾವ ಪರಡಿ ಮೇಲು -ಕೀಳು ಎಂಬುದಕ್ಕಿಂತ ಎಂತಹ ಸಂದರ್ಭದಲ್ಲಿಯೂ ಬಾಳಿ-ಬದುಕಬೇಕೆಂಬ ಶಕ್ತಿ ಅಸಾಮಾನ್ಯವಾದುದು, ಅಸಾಧಾರಣವಾದುದು. ಕವಿ ಎರಡೂ ಪರಡಿಗಳನ್ನು ಎದುರಿಗಿಟ್ಟು ಯಾವುದನ್ನು ನಿರಾಕರಿಸದೇ ಬದುಕನ್ನು ಸ್ವೀಕರಿಸುವ ಸೂಚನೆಯಲ್ಲಿಯೂ ತಮ್ಮ ಆಯ್ಕೆ ಬಿಂಬಿಸುವ ಪರಿ ಅನನ್ಯವಾಗಿದೆ. ಒಂದು ತೆರನಲ್ಲಿ 'ತಕ್ಕಡಿ' ಕವಿತೆ ಭಾಷಾವಾದದ ವಿಕಾಸವನ್ನು ವಿಶಾಲ ಆಧ್ಯಾತ್ಮವಾದವನ್ನು ಕೂಡಿ ಬೆಸೆಯುತ್ತ ಬಾಳುವ ಶಕ್ತಿಗೆ ಅಗ್ರಪಂಕ್ತಿ ನೀಡುವಲ್ಲಿ ಅನೇಕ ಪ್ರಶ್ನೆ ಸಮಸ್ಯೆಗಳಿಗೆ ಪರಿಹಾರವನ್ನೂ ಒದಗಿಸುತ್ತದೆ.

ಇಡೀ ಕವಿತೆಯಲ್ಲಿ ತಕ್ಕಡಿ ಒಂದು ರೂಪಕವಾಗಿ ವಿಭಿನ್ನ ಸ್ತರದಲ್ಲಿ ಚಿತ್ರಣಗೊಂಡಿದೆ. ಸನಾತನ ಆಸ್ತಿಕವಾದ-ನಾಸ್ತಿಕವಾದ, ರೂಪವಾದ-ನಿರೂಪವಾದಗಳ ಚರ್ಚೆ ಇಲ್ಲಿ ನೆನಪಾಗಿ ಅಲ್ಲಲ್ಲಿ ತುಂಬಿಕೊಂಡರೂ ಅವುಗಳ ಎದುರಲ್ಲಿಯೇ ಕಾವ್ಯ ಇತ್ಯಾತ್ಮಕ ಪರಿಹಾರ ಸೂಚಿಸಿ, ಸಕಾರಾತ್ಮಕ ಮುಕ್ತಾಯ ಕಾಣುತ್ತದೆ.

ಎಸ್.ಕೆ. ಕೊಪ್ಪಾ

# ಲೇಖಕರ ವಿಳಾಸ

- **ಡಾ. ವಿನಯಾ ಒಕ್ಕುಂದ**
  'ನೆಮ್ಮದಿ' ಸಿ.ಐ.ಟಿ.ಬಿ. ಕಾಲೋನಿ
  ಶ್ರೀನಗರ, ಧಾರವಾಡ -೫೮೦೦೦೩.

- **ಕೆ.ಜಿ. ನಾಗರಾಜಪ್ಪ**
  ನಂ. ೭೩, 'ಅಪೂರ್ವ'೫ನೆಯ ಮುಖ್ಯ ರಸ್ತೆ,
  ಮಾರುತಿ, ಎಚ್.ಬಿ.ಸಿ.ಎಸ್. ಮೊದಲನೆಯ ಹಂತ,
  ಬೆಂಗಳೂರು - ೫೬೦೦೮೫.

- **ಡಾ. ಎಚ್.ಎಸ್. ವೆಂಕಟೇಶಮೂರ್ತಿ**
  ನಂ. ೯೭, 'ಸಖಿ', ಪುಷ್ಪಗಿರಿ ನಗರ, ಬನಶಂಕರಿ ಮೂರನೆಯ ಘಟ್ಟ,
  ಬೆಂಗಳೂರು- ೫೬೦೦೮೫

- **ಪ್ರೊ. ಎಂ. ರಾಮಚಂದ್ರ**
  ೧೨ನೆಯ ಕ್ರಾಸ್, ತೆಳ್ಳಾರ ರಸ್ತೆ, ಕಾರ್ಕಳ - ೫೭೪೧೦೪

- **ಜಗದೀಶ ಮಂಗಳೂರುಮಠ**
  ನಂ. ೧೦೩, 'ಮಮತಾ' , ಮಾನಸಗಿರಿ ಬಡಾವಣೆ
  ಗೋಕುಲ ರಸ್ತೆ, ಹುಬ್ಬಳ್ಳಿ.

- **ಚ.ಹ. ರಘುನಾಥ**
  ಉಪಸಂಪಾದಕರು, ಪ್ರಜಾವಾಣಿ ಕಾರ್ಯಾಲಯ
  ನಂ. ೭೫, ಮಹಾತ್ಮಾ ಗಾಂಧಿ ರಸ್ತೆ, ಬೆಂಗಳೂರು - ೫೬೦೦೦೧.

- **ಡಾ. ಮನೋನ್ಮನಿ ಉದಯಕುಮಾರ**
  ನಂ. ೫೨ ಚೌಳುಬೀದಿ, ಕಬ್ಬನ್ ಪೇಟೆ, ಬೆಂಗಳೂರು -೫೬೦೦೦೨.

- **ಡಾ. ರಾಜು ಹೆಗಡೆ**
  ಮುಖ್ಯಸ್ಥರು, ಕನ್ನಡ ವಿಭಾಗ, ಎಂ.ಎಂ. ಕಲಾವಿಜ್ಞಾನ ಕಾಲೇಜು,
  ಶಿರಸಿ (ಉತ್ತರ ಕನ್ನಡ ಜಿಲ್ಲೆ)

- **ಎಲ್.ಜಿ. ಮೀರಾ**
  ನಂ. ೧೪೯, ೭ನೆಯ ಅಡ್ಡ ರಸ್ತೆ,
  ೫ನೆಯ ಮುಖ್ಯರಸ್ತೆ, ವಿಜಯನಗರ, ೨ನೆಯ ಹಂತ
  ಹಂಪಿನಗರ, ಬೆಂಗಳೂರು -೫೬೦೦೪೦

- **ಡಾ. ವಿಜಯಾ ಸುಬ್ಬರಾಜ್**
  'ಹಂಸಿ' ೧೧'ಎ' ೩೫ನೆಯ ಕ್ರಾಸ್ ಮೇನ್
  ಬನಗಿರಿ ನಗರ, ಭವಾನಿ ಲೇ ಔಟ, ಅತ್ತಿಮಬ್ಬೆ ರಸ್ತೆ,
  ಬನಶಂಕರಿ ೩ನೆಯ ಹಂತ ಬೆಂಗಳೂರು - ೫೬೦೦೭೮

- **ಮಲ್ಲಿಕಾರ್ಜುನ ಹಿರೇಮಠ**
  'ಚೈತನ್ಯ' ನಂ. ೨೮, ೧ನೆಯ ಮುಖ್ಯ ರಸ್ತೆ, ಚೆನ್ನಬಸವೇಶ್ವರ ನಗರ,
  ಧಾರವಾಡ - ೫೮೦೦೦೭

- **ಮಹಾಬಲಮೂರ್ತಿ ಕೊಡ್ಲೆಕೆರೆ**
  ೧೭೮, ೧೧ನೆಯ ಮುಖ್ಯ ರಸ್ತೆ, ೭ನೆಯ ಕ್ರಾಸ್,
  ಡಾ.ವಿ. ಕೃ. ಗೋಕಾಕ ರಸ್ತೆ, ಹನುಮಂತ ನಗರ,
  ಬೆಂಗಳೂರು - ೫೬೦೦೧೯

- **ಎಚ್.ಎನ್. ಮುರಳೀಧರ**
  ೯೯೬, 'ಶ್ರೀಪದ', ೧೫ನೆಯ ಕ್ರಾಸ್, ಕುಮಾರಸ್ವಾಮಿ ಲೇ ಔಟ,
  ೧ನೆಯ ಸ್ಟೇಜ್, ಬೆಂಗಳೂರು -೫೬೦೦೭೮

- **ಡಾ. ಕುಮಾರ ಚಲ್ಯ**
  ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ
  ಶಂಕರ ಘಟ್ಟ, ಶಿವಮೊಗ್ಗ.

- **ಡಾ. ಎಸ್.ವಿ. ಪ್ರಭಾವತಿ**
  ೩೦೧, ಪಲ್ಲವ ಟಾಕೀಸ್, ೭ನೆಯ ಬ್ಲಾಕ್
  ಜಯನಗರ, ಬೆಂಗಳೂರು -೫೬೦೦೮೨

- **ಡಾ. ಜಿ.ಎಸ್. ಆಮೂರ**
  'ಜಾನಕಿ' ನವೋದಯ ನಗರ, ಧಾರವಾಡ-೫೮೦೦೦೩

- **ವಿಷ್ಣು ನಾಯಕ**
  'ಪರಿಮಳ' ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲು
  ಅಂಕೋಲಾ, ಉತ್ತರಕನ್ನಡ ಜಿಲ್ಲೆ.

- **ಡಾ. ಯು. ಮಹೇಶ್ವರಿ**
  ಮುಖ್ಯಸ್ಥರು ಕನ್ನಡ ವಿಭಾಗ,
  ಸರಕಾರಿ ಕಾಲೇಜು,
  ಕಾಸರಗೋಡು-೬೭೧೧೨೩

- **ಡಿ. ಆರ್. ನಾಗರಾಜ**

- **ಅ. ರಾ. ಮಿತ್ರ**
  ಬಿ-೬ ಕೆಎಚ್.ಬಿ ಕಾಲೋನಿ ಪುಟ್ಟೇನಹಳ್ಳಿ
  ಯಲಹಂಕ, ಬೆಂಗಳೂರು -೫೬೦೦೬೪

- **ಡಾ. ಸರಜೂ ಕಾಟಕರ**
  'ಕಾವ್ಯ' ಮಹಾಂತೇಶನಗರ,
  ಬೆಳಗಾವಿ -೫೯೦೦೧೬

- **ಡಾ. ಸುಮತೀಂದ್ರ ನಾಡಿಗ**
  ೩೮, 'ಅಪೂರ್ವ' ೧ನೆಯ ಮೇನ್,
  ಬಿ.ಎಸ್.ಕೆ. ೩ನೆಯ ಹಂತ, ೬ನೆಯ ಬ್ಲಾಕ್
  ಬೆಂಗಳೂರು-೫೬೦೦೮೫

- **ಸತೀಶ ಕುಲಕರ್ಣಿ**
  ೨೪೨, ಬಸವೇಶ್ವರ ನಗರ, ಹಾವೇರಿ

- **ಡಾ. ಆರ್. ಲಕ್ಷ್ಮೀನಾರಾಯಣ**
  ೧೨ ಶ್ರೀನಿಕೇತನ, ೨ನೆಯ ಕ್ರಾಸ್,
  ಶಿವಾನಂದ ನಗರ, ಮೂಡಲಪಾಳ್ಯ. ಬೆಂಗಳೂರು-೫೬೦೦೭೨

- **ಡಾ. ಸಿ.ವಿ. ವೇಣಗೋಪಾಲ**
  ಪ್ಲಾಟ ನಂ. ೧೦೭, ೩ನೆಯ ಕ್ರಾಸ್, ಮಹಾಂತನಗರ, ಧಾರವಾಡ.

- **ವೇಣುಗೋಪಾಲ ಸೊರಬ**

- **ಕೆ.ಎಲ್. ಗೋಪಾಲಕೃಷ್ಣಯ್ಯ**
  ೨೨೭೩, ೨೨ನೆಯ ತಿರುವು, ಕೆ.ಆರ್.ರಸ್ತೆ,
  ಬನಶಂಕರಿ, ೨ನೆಯ ಹಂತ, ಬೆಂಗಳೂರು-೫೬೦೦೭೦

- **ವಿಕ್ರಮ ವಿಸಾಜಿ**
  ಕನ್ನಡ ಪ್ರಾಧ್ಯಾಪಕರು, ಕೇಂದ್ರೀಯ ವಿಶ್ವವಿದ್ಯಾಲಯ,
  ಗುಲಬರ್ಗಾ.

- **ಮಲ್ಲೇಪುರಂ ಜಿ. ವೆಂಕಟೇಶ**
  ಕುಲಪತಿಗಳು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ
  ಪಂಪ ಮಹಾಕವಿ ರಸ್ತೆ, ಬೆಂಗಳೂರು -೫೬೦೦೧೮

- **ಡಾ. ಗೀತಾ ವಸಂತ**
  ಕನ್ನಡ ಪ್ರಾಧ್ಯಾಪಕರು
  ತುಮಕೂರು ವಿಶ್ವವಿದ್ಯಾಲಯ,
  ತುಮಕೂರು.

- **ಡಾ. ಮೃತ್ಯುಂಜಯ ರುಮಾಲೆ**
  'ಪ್ರಣವ' ಬಸವೇಶ್ವರ ಬಡಾವಣೆ
  ಹೊಸಪೇಟೆ, ಬಳ್ಳಾರಿ ಜಿಲ್ಲೆ-೫೮೩೨೦೧

- **ಡಾ. ಎಂ.ಎಂ. ಕಲಬುರ್ಗಿ**
  'ಸೌಜನ್ಯ' ೯ನೆಯ ಕ್ರಾಸ್, ಕಲ್ಯಾಣ ನಗರ
  ಧಾರವಾಡ-೫೮೦೦೦೭

- **ಡಾ. ಜಿ.ಎಂ. ಹೆಗಡೆ**
  ೭ನೆಯ ಕ್ರಾಸ್ ಕಲ್ಯಾಣನಗರ, ಧಾರವಾಡ-೫೮೦೦೦೭

- **ಡಾ. ಪಿ.ಪಿ. ಕೃಷ್ಣಕುಮಾರ**
  ನಂ. ೨೨೬೫/೧೯ "ಭಾರತಿ"೭ನೆಯ ಕ್ರಾಸ್
  ಮೈಸೂರು -೫೭೦೦೧೨.

- **ಡಾ. ಜಿ.ಎನ್. ಉಪಾಧ್ಯ**
  ಮುಖ್ಯಸ್ಥರು, ಕನ್ನಡವಿಭಾಗ. ಮುಂಬಯಿ ವಿಶ್ವವಿದ್ಯಾಲಯ,
  ವಿದ್ಯಾನಗರಿ, ಸಾಂತಾಕ್ರೂಜ್ ಈಸ್ಟ್, ಮುಂಬಯಿ-೪೦೦೦೯೮

- **ಡಾ. ಗುರುಲಿಂಗ ಕಾಪಸೆ**
  'ನೋಂಪಿ' ದುರ್ಗಾದೇವಿ ಕಾಲೋನಿ
  ಸಪ್ತಾಪುರ, ಧಾರವಾಡ -೫೮೦೦೦೧

- **ಡಾ. ರಹಮತ್ ತರೀಕೆರೆ**
  ಪ್ರಾಧ್ಯಾಪಕರು ಕನ್ನಡ ಸಾಹಿತ್ಯ ವಿಭಾಗ,
  ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೭೬

- **'ಆರ್ಯ' ಆಚಾರ್ಯ**
  ೯ನೆಯ ಕ್ರಾಸ್, ಕಲ್ಯಾಣನಗರ, ಧಾರವಾಡ-೫೮೦೦೦೭

- **ಡಾ. ಶಾಂತಾ ಇಮ್ರಾಪುರ**
  ಚಿತ್ತಾರ, ೧೨ನೆಯ ಕ್ರಾಸ್, ನಿರ್ಮಲನಗರ, ಧಾರವಾಡ-೫೮೦೦೦೩

- **ಡಾ. ವೀರಣ್ಣ ರಾಜೂರ**
  'ಅರಿವು' ಡಾ. ವಿ.ಕೃ. ಗೋಕಾಕ ರಸ್ತೆ,
  ಬಾರಾಕೊಟ್ರಿ, ಶಿವಗಿರಿ, ಧಾರವಾಡ-೫೮೦೦೦೭

- **ಶಾಂತರಸ**

- **ಡಾ. ವಿ.ಎಸ್. ಮಾಳಿ**
  ಕನ್ನಡ ಪ್ರಾಧ್ಯಾಪಕರು, ವೃಷಭೇಂದ್ರ ಕಲಾ ವಾಣಿಜ್ಯ ಕಾಲೇಜು
  ಹಾರೂಗೇರಿ, ರಾಯಭಾಗ ತಾಲೂಕು, ಬೆಳಗಾವಿ ಜಿಲ್ಲೆ.

- **ಎಂ.ವಿ. ಸೀತಾರಾಮಯ್ಯ**

- **ಎಲ್.ಎಸ್. ಶೇಷಗಿರಿರಾವ್**
  ನಂ. ೨೬೭, ಜ್ಯೋತಿ, '೯'ನೆ ಎ ಮೇನ್, ಜಯನಗರ,
  ೯ನೆಯ ಬ್ಲಾಕ್, ಬೆಂಗಳೂರು-೫೬೦೦೧೧

- **ಡಾ. ಗೋವಿಂದ ಜಾಲಿಹಾಳ (ಜಾಗೋ)**
  ೪೯೫/೧ ನೆಲಮಹಡಿ, ಬಲಬದಿ, ೯ನೆಯ ಮುಖ್ಯರಸ್ತೆ,
  ಹನುಮಂತ ನಗರ, ಬೆಂಗಳೂರು-೫೬೦೦೧೯

- **ಡಾ. ಶ್ರೀರಾಮ ಇಟ್ಟಣ್ಣವರ**
  'ಪಾರಿಜಾತ' ಗಾಂಧಿನಗರ, ಬೀಳಗಿ, ಬಾಗಲಕೋಟೆ ಜಿಲ್ಲೆ.

- **ಕೀರ್ತಿನಾಥ ಕುರ್ತಕೋಟಿ**

• **ಎಚ್. ದುಂಡಿರಾಜ**
೩ಎ ಪ್ರಶಾಂತ ಅಪಾರ್ಟಮೆಂಟ್, ಕೆ.ಆರ್.ಲೇಔಟ್
ಜೆ.ಪಿ. ನಗರ, ೬ನೆಯ ಹಂತ, ಬೆಂಗಳೂರು -೫೬೦೦೭೮

• **ಡಾ. ಬಿ.ಜೆ. ಚೆನ್ನೇರು ಹೊನ್ನಾಳಿ**
ಕನ್ನಡ ಪ್ರಾಧ್ಯಾಪಕರು, ಸರಕಾರಿ ಪ್ರಥಮದರ್ಜೆ ಕಾಲೇಜು,
ಹಿರೇಕೆರೂರು -೫೮೧೧೧೧ (ಹಾವೇರಿ ಜಿಲ್ಲೆ)

• **ಡಾ. ಸಬೀಹ ಭೂಮಿಗೌಡ**
ಕನ್ನಡ ಪ್ರಾಧ್ಯಾಪಕರು, ಮಂಗಳ ಗಂಗೋತ್ರಿ
ಮಂಗಳೂರು ವಿಶ್ವವಿದ್ಯಾಲಯ, ಕೊಣಾಜೆ, ಮಂಗಳೂರು.

• **ಶಶಿಧರ ತೋಡಕರ**
ಪ್ರಾಚಾರ್ಯರು, ಹಿರೇಮಲ್ಲೂರ ಈಶ್ವರನ್
ಪದವಿಪೂರ್ವ ವಿಜ್ಞಾನ ಮಹಾವಿದ್ಯಾಲಯ
೯ನೆಯ ಕ್ರಾಸ್, ಕಲ್ಯಾಣನಗರ, ಧಾರವಾಡ -೫೮೦೦೦೭.

• **ಡಾ. ಬಾಳಣ್ಣ ಸೀಗಿಹಳ್ಳಿ**
'ಉತ್ಕರ್ಷ', ೧ನೆಯ ಕ್ರಾಸ್, ಶ್ರೀನಗರ, ಧಾರವಾಡ -೫೮೦೦೦೩.

• **ಡಾ. ಗುರುದೇವಿ ಹುಲಿಯಪ್ಪನವರಮಠ**
ಪ್ರಾಧ್ಯಾಪಕರು, ಇಂಗ್ಲೀಷ್ ವಿಭಾಗ,
ಲಿಂಗರಾಜ ಕಲಾ ಮಹಾವಿದ್ಯಾಲಯ
ಬೆಳಗಾವಿ - ೫೯೦೦೦೬.

• **ಗೌರೀಶ ಕಾಯ್ಕಿಣಿ**

• **ಡಾ. ಚಂದ್ರಶೇಖರ ನಂಗಲಿ**
ನಂ.೧೬, ಶ್ರೀಗೌರಿ, ೪ನೆಯ ಕ್ರಾಸು, ಕನಕನೂರ,
ಹೊಸಕೋಟೆ-೫೬೨೧೧೪, ಬೆಂಗಳೂರು ಗ್ರಾಮಾಂತರ ಜಿಲ್ಲೆ.

• **ಎನ್. ಶ್ರೀನಿವಾಸ ಉಡುಪ 'ವಿಹಾರಿ'**
೮೩/೧, ೧೦೧, ಮೊದಲ ಮಹಡಿ, ಕೃಷ್ಣಾಚಾರ
ಸುಂದರ ರೆಸಿಡೆನ್ಸಿ, ರಾಮರಾವ್ ಲೇ ಔಟ್,
ಕತ್ತರಿಗುಪ್ಪೆ, ಬನಶಂಕರಿ ೩ನೆಯ ಹಂತ,
ಬೆಂಗಳೂರು-೫೬೦೦೩೨.

- **ಕೆ.ಎಸ್. ನಿಸ್ಸಾರ್ ಅಹಮ್ಮದ್**
  ನಂ. ೩೪೧, ಹಮೀಜಾ ಹೈದರ್, ಪದ್ಮನಾಭ ನಗರ,
  ಬನಶಂಕರಿ ೨ನೆಯ ಹಂತ, ಬೆಂಗಳೂರು-೫೬೦೦೦೩೨.

- **ಡಾ. ಗುರುಪಾದ ಮರಿಗುದ್ದಿ**
  'ಕವಿಶೈಲ' ನಮಾಜಮಾಳ, ಸಂಕೇಶ್ವರ, ಬೆಳಗಾವಿ ಜಿಲ್ಲೆ.

- **ಡಾ. ಪ್ರಹ್ಲಾದ ಅಗಸನಕಟ್ಟೆ**
  ನಂ.೬, ಬ್ಲಾಕ್ ನಂ. ೨, ಕಿಮ್ಸ್ ಕ್ವಾರ್ಟರ್ಸ
  ಹುಬ್ಬಳ್ಳಿ-೫೮೦೦೦೨.

- **ಡಾ. ಸಿ.ವಿ. ಪ್ರಭುಸ್ವಾಮಿಮಠ**
  ೪೬, 'ಬೆಳಗು', ಗಾಂಧಿನಗರ, ಧಾರವಾಡ-೫೮೦೦೦೪.

- **ಬಿ.ವಿ. ಕೆದಿಲಾಯ**
  ೭೦೭, ೩ನೆಯ ಬ್ಲಾಕ್ ೩ನೆಯ ಮೇನ್
  ಎಚ್‌ಎಂಟಿ ಲೇ ಔಟ್, ನಾಗಸಂದ್ರ,
  ಬೆಂಗಳೂರು-೫೬೦೦೭೩.

- **ಆನಂದ ಝುಂಜರವಾಡ**
  ಆನಂದ ನಗರ, ಮುಧೋಳ -೫೮೭೩೧೩.
  ಬಾಗಲಕೋಟ ಜಿಲ್ಲೆ.

- **ಡಾ. ಎಂ.ಡಿ. ಒಕ್ಕುಂದ**
  'ನೆಮ್ಮದಿ', ಸಿಆಯ್‌ಟಿಬಿ ಕಾಲೋನಿ
  ಶ್ರೀನಗರ, ಧಾರವಾಡ -೫೮೦೦೦೩.

- **ಡಾ. ರಾಮಕೃಷ್ಣ ಮರಾಠೆ**
  ಕನ್ನಡ ಪ್ರಾಧ್ಯಾಪಕರು ಬಿ.ಕೆ. ಕಾಲೇಜು,
  ಕ್ಲಬ್ ರೋಡ. ಬೆಳಗಾವಿ.

- **ಬಸವರಾಜ ಒಕ್ಕುಂದ**
  ಕನ್ನಡ ಅಧ್ಯಾಪಕರು, ಮಂಜುನಾಥೇಶ್ವರ ಪದವಿಪೂರ್ವ
  ವಿಜ್ಞಾನ ಮಹಾವಿದ್ಯಾಲಯ, ವಿದ್ಯಾಗಿರಿ, ಧಾರವಾಡ -೫೮೦೦೦೪

